ಆಧುನಿಕ ದಲಿತ ವಚನಕಾರ

# ಕುಮಾರ ಕಕ್ಕಯ್ಯ ಪೋಳ

## ಕುಮಾರ ಕಕ್ಕಯ್ಯನ ವಚನಗಳು : ಒಂದು ಅಧ್ಯಯನ









ಡಾ. (ಶ್ರೀಮತಿ) ಎಸ್.ಎಸ್. ಲಂಗೋಟಿ

ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ, ವಿಜಾಪುರ

ಆಧುನಿಕ ದಲಿತ ವಚನಕಾರ

# ಕುಮಾರ ಕಕ್ಕಯ್ಯ ಪೋಳ

## ಕುಮಾರ ಕಕ್ಕಯ್ಯನ ವಚನಗಳು : ಒಂದು ಅಧ್ಯಯನ

[ಸಂಶೋಧನ ಮಹಾಪ್ರಬಂಧ]


ಡಾ॥ (ಶ್ರೀಮತಿ) ಎಸ್.ಎಸ್. ಲಂಗೋಟಿ ಎಂ.ಎ.ಪಿಎಚ್.ಡಿ

[ಕಾವ್ಯನಾಮ : ಕಲ್ಯಾಣಮ್ಮ ಲಂಗೋಟಿ]



೨೦೧೧

ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ

ನಂ.೭೯, ಕಕ್ಕಯ್ಯ ನಿವಾಸ

ಕೆ.ಎಚ್.ಬಿ. ಕಾಲನಿ, ವಿಜಾಪುರ-೩

# KUMAR KAKKAYYANA VACHANAGALU : ONDU ADHYAYANA

[Life and Achievements of B.S.Pol "Kumar Kakkayya"]

Doctoral Thesis Submitted to Karnatak University, Dharwad-3

**Dr. Smt. S.S. Langoti** M.A.Ph.D.
Professor in Kannada
Vidya Prasaraka Samiti's
C.S.Bembalagi Arts, Shah M.R.Palaresha Science and G.L. Rathi Commerce college, Ramdurgr-591123 Dist:Belgaum - Karnataka

© **Dr. Smt. S.S.Langoti**

Publisher. Kumar Kakkayya Pol Foundation,
No. 79, Kakkayya Nivas, K.H.B. Colony Bijapur-3
First Edition : 2011 Pages : 364+XII
Paper used : Maplitho and Art cover 300gsm Copies : 1000
**Price : Rs. 300 Three hundred Rupes only**
Printer : Rajashree Printing Press, Dharwad-1

## ಕುಮಾರ ಕಕ್ಕಯ್ಯನ ವಚನಗಳು : ಒಂದು ಅಧ್ಯಯನ

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ ಮಹಾಪ್ರಬಂಧ

**ಸಂಶೋಧಕರು : ಡಾ॥ ಶ್ರೀಮತಿ ಎಸ್.ಎಸ್. ಲಂಗೋಟಿ ಎಂ.ಎ.ಪಿಎಚ್.ಡಿ**
ಕನ್ನಡ ಪ್ರಾಧ್ಯಾಪಕರು
ವಿದ್ಯಾ ಪ್ರಸಾರಕ ಸಮಿತಿಯ ಸಿ.ಎಸ್. ಬೆಂಬಳಗಿ ಕಲಾ, ಶಾ ಎಂ.ಆರ್.ಪಾಲರೇಶಾ ವಿಜ್ಞಾನ ಹಾಗೂ ಜಿ.ಎಲ್.ರಾಠಿ ವಾಣಿಜ್ಯ ಮಹಾವಿದ್ಯಾಲಯ ರಾಮದುರ್ಗ-೫೯೧೧೨೩ ಜಿ॥ಬೆಳಗಾವಿ -ಕರ್ನಾಟಕ

© ಲೇಖಕರವು.

ಪ್ರಕಾಶಕರು : ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ
ನಂ. ೭೯ ಕಕ್ಕಯ್ಯ ನಿವಾಸ ವಿಜಾಪೂರ-೩
ಪ್ರಥಮ ಮುದ್ರಣ : ೨೦೧೧ ಪುಟಗಳು : ೩೬೪+XII
ಪ್ರತಿಗಳು : ೧೦೦೦
**ಬೆಲೆ : ೩೦೦ ರೂ. (ಮೂರುನೂರು ರೂಪಾಯಿಗಳು ಮಾತ್ರ)**
ಮುದ್ರಕರು : ಶ್ರೀಮತಿ ಎಸ್.ವಿ. ತಡಕೋಡ, ರಾಜಶ್ರೀ ಪ್ರಿಂಟಿಂಗ್ ಪ್ರೆಸ್, ಧಾರವಾಡ.
9741270385, 0836-2442918. email : veereshtadakod@yahoo.com



ಮಾನವಕುಲವೆಲ್ಲವೂ ಒಂದೇ ಎಂದ ಬಸವಣ್ಣನ ಧರ್ಮವು
ವಿಶ್ವಧರ್ಮವೇ ಹೊರತು ಜಾತಿಯಲ್ಲೆಂದ ಕುಮಾರ ಕಕ್ಕಯ್ಯ

ಶರಣ ದಂಪತಿಗಳಾದ



ಲಿಂ. ಶ್ರೀ ಕುಮಾರ ಕಕ್ಕಯ್ಯ (ಭೀಮರಾವ) – ಲಿಂ. ಶ್ರೀಮತಿ ಸುಂದರಾಬಾಯಿ ಪೋಳ

## ವಿಜಾಪುರದಲ್ಲಿ ಮೂಕನ ಭಾಷಣ ಗ್ರಂಥ ಬಿಡುಗಡೆ (೧೯೭೯)



ಮಾನ್ಯ ಶ್ರೀ ಬಿ. ಬಸವಲಿಂಗಪ್ಪನವರಿಂದ ಕುಮಾರ ಕಕ್ಕಯ್ಯ ಪೋಳ
ಅವರಿಗೆ ಗೌರವ ಸತ್ಕಾರ

## ಕೂಡಲಸಂಗಮದಲ್ಲಿ ಬಸವಭೂಮಿಯ ಶರಣ ಸಮ್ಮೇಳನ (೧೯೮೮)



ಕಲ್ಯಾಣಮ್ಮ ಲಂಗೋಟಿ, ಸಿದ್ದಣ್ಣ ಲಂಗೋಟಿ, ಬಾಳನಗೌಡ ಪಾಟೀಲ,
ಡಾ.ವಾಯ್.ಬಿ. ಕುಲಗೋಡ, ಎಸ್.ಎಂ. ಅಂಗಡಿ (ಸಮ್ಮೇಳನಾಧ್ಯಕ್ಷರು), ವಿ. ಸಿದ್ಧರಾಮಣ್ಣ,
ಕುಮಾರ ಕಕ್ಕಯ್ಯಾ, ಪಿ.ಎಂ. ಗಿರಿರಾಜು, ತಾತಾಸಾಹೇಬ ಬಾಂಗಿ ಮುಂತಾದವರು

## ಅಂತರಾಷ್ಟ್ರ ಖ್ಯಾತಿಯ ಸಮಾಜವಿಜ್ಞಾನಿಗೆ ಕಕ್ಕಯ್ಯ ಪ್ರಶಸ್ತಿ



ಡಾ. ಹಿರೇಮಲ್ಲೂರ ಈಶ್ವರನ್ (ಕೆನಡಾ) ಇವರಿಗೆ ಪೂಜ್ಯ ಶ್ರೀ ಮಹಾಂತಪ್ಪಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಇವರ ಲಿಂಗಹಸ್ತದಿಂದ

## ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ ವಿಜಾಪುರ



ಪೂಜ್ಯ ಶ್ರೀ ಸಿದ್ಧರಾಮಶರಣರು ಬೆಲ್ದಾಳ, ಬಸವಯೋಗಾಶ್ರಮ ಕೌಠಾ (ಬಿ) ಇವರಿಗೆ ಕಕ್ಕಯ್ಯ ಪ್ರಶಸ್ತಿ ಗದಗ ಹಾಗೂ ಇಳಕಲ್ಲ ಶ್ರೀಗಳವರ ಲಿಂಗಹಸ್ತದಿಂದ

ವಿಜಾಪುರದ 'ಕಕ್ಕಯ್ಯನಿವಾಸ' ಮನೆಯಲ್ಲಿ : ೧೯೮೮



ಡಾ. ಶಿವಶಂಕರ ಮೋಳ, ಶ್ರೀ ಬಿ.ಡಿ. ಜತ್ತಿ, ಶ್ರೀ ಕುಮಾರ ಕಕ್ಕಯ್ಯ
ಡಾ. ಬಿದರಿ ಹಾಗೂ ಶ್ರೀ ಎನ್.ಜಿ. ಕರೂರ

ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ ವಿಜಾಪುರ




ಪೂಜ್ಯ ವಿ. ಸಿದ್ಧರಾಮಣ್ಣ ಶರಣರು, ಸಂಚಾಲಕರು ಅನುಭವಮಂಟಪ
ಬಸವಕಲ್ಯಾಣ ಇವರಿಗೆ ಕಕ್ಕಯ್ಯ ಪ್ರಶಸ್ತಿ ಗದಗ ಜಗದ್ಗುರುಗಳ ಲಿಂಗಹಸ್ತದಿಂದ

# ನಿವೇದನೆ

ಕಲ್ಯಾಣನಾಡು, ಕಲ್ಯಾಣ ಕರ್ನಾಟಕ, ಹೈದರಾಬಾದ ಕರ್ನಾಟಕ ಎಂದೇ ಕರೆಯಲ್ಪಡುತ್ತಿರುವ ಕರ್ನಾಟಕ ರಾಜ್ಯದ ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನ ಬೀರಗಿ(ಬಿ) ಎಂಬ ಒಂದು ಸಣ್ಣ ಹಳ್ಳಿಯಲ್ಲಿ ೧೯೫೬ ಫೆಬ್ರುವರಿ ೫ ರಂದು ಜನಿಸಿದ ನನಗೆ ತುಂಬಾ ಪ್ರೀತಿಯಿಂದ ಕನ್ನಡ ಶಾಲೆಗೆ ಹೆಸರು ಹಚ್ಚಿ, ಕನ್ನಡ ಓದು–ಬರಹ ಕಲಿಸಿದವರು ನನ್ನ ತಂದೆ ಹಾವಪ್ಪ ಮಾಸ್ತರ ಹಾಗೂ ತಾಯಿ ಅನ್ನಪೂರ್ಣಮ್ಮ. ನಾನು ಜನಿಸುವ ಪೂರ್ವದಲ್ಲಿ ಹೈದರಾಬಾದ ನಿಜಾಮರ ಆಳ್ವಿಕೆಗೆ ಒಳಪಟ್ಟಿದ್ದ ಆ ನಾಡಿನಲ್ಲಿ ಉರ್ದು, ಮರಾಠಿ, ತೆಲಗು ಭಾಷೆಗಳದೇ ಪ್ರಾಬಲ್ಯವಿತ್ತು. ಅಂತಹ ಪರಿಸ್ಥಿತಿಯಲ್ಲಿ ತಮ್ಮ ಹಿರೇಮಠದಲ್ಲಿ ಹಾಗೂ ಶಾಖಾಮಠಗಳಲ್ಲಿ ಕನ್ನಡ ಶಾಲೆಗಳನ್ನು ಪ್ರಾರಂಭಿಸಿ ಕನ್ನಡ ಬಳಸಿ, ಕನ್ನಡ ಬೆಳೆಸಿ, ಕನ್ನಡ ಉಳಿಸಿದವರು ಭಾಲ್ಕಿಯ ಹಿರೇಮಠ ಸಂಸ್ಥಾನದ ಪೂಜ್ಯ ಗುರುಗಳಾದ ಶತಾಯುಷಿ ಶ್ರೀ ಮ.ಘ.ಚ. ಡಾ॥ಚೆನ್ನಬಸವ ಪಟ್ಟದ್ದೇವರು. ಶಾಂತಿ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ ಪ್ರಾರಂಭಿಸಿ, ಶ್ರೀ ಭೀಮಣ್ಣ ಖಂಡ್ರೆಯವರ ನೇತೃತ್ವದಲ್ಲಿ ಶೈಕ್ಷಣಿಕ ಕ್ರಾಂತಿಗೈದವರು ಪೂಜ್ಯ ಶ್ರೀಗಳವರು.

ಭಾಲ್ಕಿ ಹಿರೇಮಠದ ಮಹಾದ್ವಾರದಲ್ಲಿ ಉರ್ದುವಿನಲ್ಲಿ ಶಾಲೆಯ ಬೋರ್ಡ ಬರೆಯಿಸಿ ಹಾಕಿ, ಮಠದೊಳಗಡೆ ಕನ್ನಡ ಕಲಿಸಿದ ಗುರುಗಳವರು. ಪೂಜ್ಯರ ಶ್ರೀಮಠದ ಶಾಲೆಯಲ್ಲಿ ಕನ್ನಡ ಓದಿ ಮುಲ್ಕಿ ಪರೀಕ್ಷೆ ಪಾಸಾಗಿ ಕನ್ನಡ ಶಾಲಾ ಮಾಸ್ತರ ಆದವರು ನನ್ನ ತಂದೆಯವರು. ನಾನು ಹುಟ್ಟಿದ ವರ್ಷವೇ ೧೯೫೬ ನವೆಂಬರ ೧ ರಂದು ಕರ್ನಾಟಕ ಏಕೀಕರಣವಾಗಿ ವಿಶಾಲ ಮೈಸೂರು ರಾಜ್ಯ (ಇಂದಿನ ಕರ್ನಾಟಕ) ಉದಯವಾಯಿತು. ೧೬ ತಾಲೂಕಗಳ ಕನ್ನಡ ಭಾಷಿಕರ ಜಿಲ್ಲೆಯಾಗಿದ್ದ ಬೀದರ ಜಿಲ್ಲೆಯು ಮಹಾರಾಷ್ಟ್ರ ಆಂಧ್ರಗಳಿಗೆ ಹರಿದು ಹಂಚಿಹೋಗಿ, ಕೊನೆಗೆ ಬಸವಕಲ್ಯಾಣ, ಭಾಲ್ಕಿ, ಔರಾದ, ಹುಮನಾಬಾದ ತಾಲೂಕುಗಳು ಬೀದರ ಜಿಲ್ಲೆಯಲ್ಲಿ ಉಳಿದುಕೊಂಡವು. ನನ್ನ ತಂದೆಯವರು ಉರ್ದು, ಮರಾಠಿ, ಹಿಂದಿ, ಇಂಗ್ಲೀಷ ಬಲ್ಲವರಾಗಿದ್ದರೂ ಅವರಲ್ಲಿ ಕನ್ನಡ ಪ್ರೇಮ ಅಪ್ಪಟವಾಗಿತ್ತು. ಹೀಗಾಗಿ ನಾನು, ಅವರು ಪ್ರತಿ ವರುಷ ವರ್ಗವಾಗಿ ಹೋದಲ್ಲೆಲ್ಲ ಅಂದರೆ ಬೀರಗಿ(ಬಿ) ಕೊಳಾರ(ಬಿ) ಹೆಡಗಾಪೂರ, ವಡಗಾಂವ ಗಳಲ್ಲಿ ಪ್ರಾಥಮಿಕ ೭ನೇ ವರ್ಗದವರೆಗೆ ಓದಿ, ಬೀದರ ನ್ಯೂ ಗರ್ಲ್ಸ ಹೈಸ್ಕೂಲಿನಲ್ಲಿ ೮ನೇ ವರ್ಗ, ಅನಂತರ ಧಾರವಾಡಕ್ಕೆ ಬಂದು ಜಯದೇವಿತಾಯಿ ಲಿಗಾಡ ಹೈಸ್ಕೂಲಿನಲ್ಲಿ ೯ನೇ ವರ್ಗ, ಬಾಸೆಲ್‌ಮಿಷನ್ ನ್ಯೂ ಗರ್ಲ್ಸ ಹೈಸ್ಕೂಲಿನಲ್ಲಿ ೧೦ನೇ ವರ್ಗ ಓದಿ ಎಸ್.ಎಸ್. ಎಲ್.ಸಿ ಪಾಸಾದೆ (೧೯೭೨)

ಧಾರವಾಡದಲ್ಲಿ ಪ್ರಸಿದ್ಧವಾಗಿರುವ ಕರ್ನಾಟಕ ಕಾಲೇಜಿನಲ್ಲಿ ಪಿಯುಸಿ, ಅಲ್ಲಿಯೇ ಕನ್ನಡ ಮೇಜರ ವಿಷಯ ತೆಗೆದುಕೊಂಡು ಬಿ.ಎ. ಪದವಿ, (೧೯೭೭) ಅನಂತರ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಓದಿ

ಎಂ.ಎ. ಕನ್ನಡ ಸ್ನಾತಕೋತ್ತರ ಪದವಿ ಪಡೆದೆ. (೧೯೭೯) ಕನ್ನಡದ ಹಿರಿಯ ವಿದ್ವಾಂಸರೂ, ನನ್ನ ವಿದ್ಯಾಗುರುಗಳೂ ಆಗಿದ್ದ ಡಾ॥ ಎಸ್.ಎಂ. ವೃಷಭೇಂದ್ರ ಸ್ವಾಮಿಗಳ ಮಾರ್ಗದರ್ಶನದಲ್ಲಿ– ತೋಂಟದ ಸಿದ್ಧಲಿಂಗೇಶ್ವರರು ಹಾಗೂ ಶ್ರೀ ಷಣ್ಮುಖ ಶಿವಯೋಗಿಗಳ ಕುರಿತು ಪಿಎಚ್.ಡಿ ಪದವಿಗಾಗಿ ನೋಂದಣಿ ಸಹ ಮಾಡಿಸಿದ್ದೆ. ಕೌಟುಂಬಿಕ ಅನಿವಾರ್ಯತೆಯಿಂದಾಗಿ ಅದನ್ನು ಅರ್ಧಕ್ಕೆ ನಿಲ್ಲಿಸಿ, ೧೯೮೦ರಲ್ಲಿ ಬೆಳಗಾವಿ ಜಿಲ್ಲೆಯ ರಾಮದುರ್ಗ ವಿದ್ಯಾಪ್ರಸಾರಕ ಸಮಿತಿಯ ಬೆಂಬಳಗಿ ಕಲಾ, ವಿಜ್ಞಾನ, ಹಾಗೂ ವಾಣಿಜ್ಯ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕಳಾಗಿ ಸೇವೆಗೆ ಸೇರಿಕೊಳ್ಳಬೇಕಾಯಿತು. ಪಿಎಚ್.ಡಿ ಮಾಡುವ ಬಯಕೆಯು ಹಾಗೆಯೇ ಉಳಿದು ಹೋಯಿತು.

ಕನ್ನಡ ಸಾಹಿತ್ಯದ ಜೀವಾಳವೆನಿಸಿದ ವಚನಸಾಹಿತ್ಯ ಬಾಲ್ಯದಿಂದಲೂ ನನ್ನ ಉಸಿರಾಗಿತ್ತು. ೧೯೮೦ ರಿಂದ ಈ ಆಸಕ್ತಿಯೇ ನಾಡಿನಾದ್ಯಂತ ಬಿಡುವಿನ ವೇಳೆಯಲ್ಲಿ ಶರಣ ಸಮ್ಮೇಳನ, ಶಿಬಿರ, ಕಮ್ಮಟಗಳಲ್ಲಿ ಪಾಲ್ಗೊಂಡು ಉಪನ್ಯಾಸ, ಅನುಭಾವ ನೀಡಲು ಪ್ರೇರಣೆಯಾಗಿತ್ತು. ೧೯೮೨ರಲ್ಲಿ ಕಲ್ಯಾಣನಾಡಿನ ಶರಣಸಮ್ಮೇಳನದಲ್ಲಿ ಆಧುನಿಕ ವಚನಕಾರ ಶ್ರೀ ಕುಮಾರ ಕಕ್ಕಯ್ಯನವರ ಪರಿಚಯವಾಯ್ತು. ಶ್ರೀಯುತರ ನ್ಯಾಯ–ನಿಷ್ಠುರತೆ, ವಿಚಾರದ ವೈಖರಿ, ವೈಜ್ಞಾನಿಕ ದೃಷ್ಟಿಕೋನ, ಬಸವತತ್ವದ ಆಳವಾದ ಅಧ್ಯಯನ – ಚಿಂತನ ನನ್ನನ್ನು ಮುಗ್ಧಗೊಳಿಸಿದವು. ಅವರ ಎಲ್ಲ ಕೃತಿಗಳನ್ನು ಓದುವ ಅವಕಾಶ ದೊರೆಯಿತು. ಅವರನ್ನು 'ಶರಣ ತಂದೆ' ಎಂದು ಭಕ್ತಿ – ಗೌರವದಿಂದ ಮನಸಾರೆ ಗೌರವಿಸಿದೆ.

ಕುಮಾರ ಕಕ್ಕಯ್ಯನವರ ವಚನಗಳ ಕುರಿತು ಪಿಎಚ್.ಡಿ ಮಾಡಬೇಕೆಂಬ ಹಂಬಲ ಹೆಚ್ಚತೊಡಗಿದಂತೆ ಅದನ್ನು ನನ್ನ ಪತಿ ಶ್ರೀ ಸಿದ್ದಣ್ಣ ಲಂಗೋಟಿ ಅವರ ಮುಂದೆ ವ್ಯಕ್ತಪಡಿಸಿದೆ. ಅವರು ಸಂತೋಷದಿಂದ ಪ್ರೋತ್ಸಾಹ ನೀಡಿದರು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದ ಡಾ॥ ಸುಲೋಚನಾ ಸಂಗನಬಸವ ಮಟ್ಟಿ ಅವರನ್ನು ಭೆಟ್ಟಿಯಾದಾಗ, ತುಂಬಾ ಸಂತೋಷದಿಂದ ಮಾರ್ಗದರ್ಶಕರಾಗಲು ಒಪ್ಪಿಕೊಂಡರು. 'ಕುಮಾರ ಕಕ್ಕಯ್ಯನ ವಚನಗಳು– ಒಂದು ಅಧ್ಯಯನ' ಎಂಬ ವಿಷಯದ ಮೇಲೆ ಪಿಎಚ್.ಡಿ ಗೆ ನೋಂದಣಿ ಮಾಡಿಸಿದೆ. ಆತ್ಮೀಯ ಸರಳ ಸಜ್ಜನಿಕೆಯ, ನೇರ ನಡೆನುಡಿಯ ಡಾ॥ ಸುಲೋಚನಾ ಮಟ್ಟಿ ಮೇಡಂ ಅವರು ಮೇಲಿಂದ ಮೇಲೆ ಭೆಟ್ಟಿಯಾದಾಗ, ಫೋನ್ ಮೂಲಕ ಸಲಹೆ– ಸೂಚನೆಗಳನ್ನೀಯುತ್ತಾ, ತಿದ್ದುತ್ತಾ ಬೇಗನೇ ಮಹಾಪ್ರಬಂಧ ಪೂರ್ಣಗೊಳಿಸಲು ಒತ್ತಾಯ ಮಾಡುತ್ತಲೇ ಸಂಪೂರ್ಣ ಮಾರ್ಗದರ್ಶನ ಮಾಡಿದರು. ಅವರ ಸಹಾಯ –ಸಹಕಾರ –ಮಾರ್ಗದರ್ಶನಕ್ಕೆ ಅನಂತ ಶರಣುಗಳನ್ನು ಅರ್ಪಿಸುವೆ.

ಕನ್ನಡ ಅಧ್ಯಯನ ಪೀಠದ ಕನ್ನಡ ಪ್ರಾಧ್ಯಾಪಕರೂ ಹಾಗೂ ಮುಖ್ಯಸ್ಥರೂ ಆಗಿರುವ ಡಾ॥ ಕೆ.ಆರ್. ದುರ್ಗಾದಾಸ ಅವರಿಗೂ, ಅಧ್ಯಯನ ಪೀಠದ ಪ್ರಾಧ್ಯಾಪಕ ವರ್ಗದವರಿಗೂ, ಕಾರ್ಯಾಲಯದ ಸಿಬ್ಬಂದಿ ವರ್ಗದವರಿಗೂ, ನನ್ನ ಅನಂತ ಶರಣುಗಳನ್ನು ಅರ್ಪಿಸುವೆ.

ನನ್ನ ಪತಿಯ ಊರಿನವರೇ ಆಗಿದ್ದ ಕುಮಾರ ಕಕ್ಕಯ್ಯ ಪೋಳ ಅವರು (ವಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಿನ ಚಾಂದಕವಠೆ ಗ್ರಾಮ) ನನ್ನ ಪತಿಯ ಮನೆಯ ಬಳಗಕ್ಕೆಲ್ಲ ಚಿರಪರಿಚಿತರೇ ಆಗಿದ್ದರು. ಶ್ರೀಯುತರು ತಹಸೀಲ್ದಾರ ಹುದ್ದೆಯಿಂದ ನಿವೃತ್ತರಾಗಿ ವಿಜಾಪುರದಲ್ಲಿ ನೆಲೆಸಿದ್ದರು. ಕುಮಾರ ಕಕ್ಕಯ್ಯನವರ ವಚನಗಳ ಕುರಿತ ನನ್ನ ಈ ಅಧ್ಯಯನಕ್ಕೆ ಪ್ರಕಟಿತ ಹಾಗೂ ಅಪ್ರಕಟಿತ ಎಲ್ಲಾ ಗ್ರಂಥಗಳನ್ನು, ಕೆಲವು ಕೈಬರಹದ ಪ್ರತಿಗಳನ್ನು ಒದಗಿಸಿಕೊಟ್ಟ ಕುಮಾರ ಕಕ್ಕಯ್ಯನವರ ಮಕ್ಕಳಾದ ಡಾ॥ಶಿವಶಂಕರ, ಡಾ॥ಸುಶೀಲಾ, ಶ್ರೀ ಶಿವಪುತ್ರ, ಶ್ರೀ ಶ್ರೀಕಾಂತ ಶ್ರೀ ಚಿದಾನಂದ, ಶ್ರೀಮತಿ ಪ್ರಮೀಳಾ ಇವರಿಗೂ, ಅವರ ಅಳಿಯಂದಿರಾದ ಶ್ರೀ ಪ್ರಕಾಶ ಗರಗ ಇಂಜಿನೀಯರ ಶ್ರೀ ನಾರಾಯಣ ಗಜಾಕೋಶ ಇಂಜನಿಯರ ಅವರಿಗೂ ನನ್ನ ಅನಂತ ಶರಣುಗಳು.

ನನ್ನ ಪಿಎಚ್.ಡಿ. ಅಧ್ಯಯನ ಕಾರ್ಯಕ್ಕೆ ಪ್ರೋತ್ಸಾಹವಿತ್ತ ನಮ್ಮ ವಿದ್ಯಾಪ್ರಸಾರಕ ಸಮಿತಿಯ ಅಧ್ಯಕ್ಷರಾದ ಡಾ॥ವಾಯ್.ಬಿ.ಕುಲಗೋಡ ಹಾಗೂ ಸಮಿತಿಯ ಎಲ್ಲ ಹಿರಿಯ ಸದಸ್ಯರಿಗೂ ಆಡಳಿತ ಮಂಡಳಿಯವರಿಗೂ ನನ್ನ ಗೌರವಪೂರ್ವಕ ಶರಣುಗಳನ್ನು ಅರ್ಪಿಸುವೆ.

ನಮ್ಮ ಮಹಾವಿದ್ಯಾಲಯದ ಪ್ರಾಚಾರ್ಯರಾಗಿರುವ ಪ್ರೊ. ಎಸ್. ಜಿ. ಚಿಕ್ಕನರಗುಂದ ಸರ್ ಅವರು ಮೇಲಿಂದ ಮೇಲೆ ಪಿಎಚ್.ಡಿ. ಬರವಣಿಗೆಯ ಬಗ್ಗೆ ವಿಚಾರಿಸುತ್ತಾ, ಪ್ರೋತ್ಸಾಹನೀಡುತ್ತಾ ಬಂದವರು, ಅದೇ ರೀತಿ ಆಯ್.ಕ್ಯೂ.ಎ.ಸಿ. ಸಂಯೋಜನಾಧಿಕಾರಿಗಳಾದ ಪ್ರೊ. ಕೆ.ವ್ಹಿ. ಪಾಟೀಲ ಅವರಿಗೂ ಹಾಗೂ ನ್ಯಾಕ್ ಸಂಯೋಜನಾಧಿಕಾರಿಗಳಾದ ಪ್ರೊ. ಬಿ.ಬಿ. ವಂದಾಲ ಅವರಿಗೂ ನನ್ನ ಶರಣುಗಳು.

ನಮ್ಮ ಮಹಾವಿದ್ಯಾಲಯದ ಎಲ್ಲ ಹಿರಿಯ, ಕಿರಿಯ ಸಹೋದ್ಯೋಗಿ ಸಹೋದರ, ಸಹೋದರಿಯರ ಆತ್ಮೀಯತೆ, ಸಹಕಾರ, ವಿಶ್ವಾಸಕ್ಕೆ ಅನಂತ ಶರಣುಗಳನ್ನು ಅರ್ಪಿಸುವೆ. ನನ್ನ ಕಾಯಕದಲ್ಲಿ ಸಹಕಾರ ನೀಡುತ್ತಿರುವ ಮಹಾವಿದ್ಯಾಲಯದ ಕಾರ್ಯಾಲಯ ಅಧೀಕ್ಷಕರಾದ ಶ್ರೀ ಆಯ್.ಎಸ್. ನಿಜಗುಲಿ ಹಾಗೂ ಎಲ್ಲ ಸಿಬ್ಬಂದಿ ವರ್ಗದವರಿಗೂ ಹೃತ್ಪೂರ್ವಕ ಶರಣುಗಳು.

ನನ್ನ ಸಂಶೋಧನ ಕಾರ್ಯಕ್ಕೆ ಪೂರಕ ಗ್ರಂಥಗಳನ್ನು ಒದಗಿಸುವ ಮೂಲಕ ಸಹಕಾರ ನೀಡಿದ ನಮ್ಮ ಮಹಾವಿದ್ಯಾಲಯದ ಸಹಾಯಕ ಗ್ರಂಥಪಾಲಕರಾದ ಶ್ರೀಮತಿ ದಾಕ್ಷಾಯಣಿ ನರಗುಂದ ಅವರಿಗೂ ಹಾಗೂ ಗ್ರಂಥಾಲಯದ ಸಿಬ್ಬಂದಿಯವರಿಗೂ ನನ್ನ ಅನಂತ ಕೃತಜ್ಞತಾಪೂರ್ವಕ ಶರಣುಗಳು.

ನನ್ನ ಪಿಎಚ್.ಡಿ ಮಹಾಪ್ರಬಂಧದ ಪ್ರಾರಂಭದಿಂದ –ಕೊನೆಯವರೆಗೂ ಬರವಣಿಗೆ ಓದಿ, ಚರ್ಚಿಸಿ, ತಿದ್ದುಪಡಿ, ಸೂಚನೆ ನೀಡುತ್ತಾ ಈ ಡಿ.ಟಿ.ಪಿ ಮಾಡಿಸುವುದು, ಅದರ ಪ್ರೂಫ್ ತಿದ್ದಿ ಸೂಕ್ತ ಸಲಹೆ ನೀಡುತ್ತಾ, ಈ ಕಾರ್ಯಪೂರ್ಣಗೊಳ್ಳಲು ಶ್ರಮವಹಿಸಿದ ನನ್ನ ಪತಿ ಶ್ರೀ ಸಿದ್ದಣ್ಣ ಲಂಗೋಟಿ ಅವರಿಗೆ ಗೌರವ ಪೂರ್ವಕ ಶರಣುಗಳು.

ನನ್ನ ಸಾಹಿತ್ಯ ಸಾಧನೆಗೆ, ಆಧ್ಯಯನಕ್ಕೆ ಪ್ರೇರಕ ಶಕ್ತಿ ಲಿಂ. ಪೂಜ್ಯ ಭಾಲ್ಕಿಯ ಪಟ್ಟದ್ದೇವರು ಅಪ್ಪಗಳ ಚೇತನಕ್ಕೆ, ಇಳಕಲ್ಲದ ಪೂಜ್ಯ ಶ್ರೀ ಮಹಾಂತ ಅಪ್ಪಗಳಿಗೆ, ನನ್ನ ಲಿಂ. ತಂದೆಯವರಿಗೆ, ವಯೋವೃದ್ಧ ತಾಯಿಯವರಿಗೆ ಶರಣಗಳು.

ಧಾರವಾಡ, ಬೆಂಗಳೂರ, ಮೈಸೂರುಗಳಿಂದ ನನ್ನ ಸಂಶೋಧನಾ ಕಾರ್ಯಕ್ಕೆ ಸಾಂದರ್ಭಿಕ ಗ್ರಂಥಗಳನ್ನು ಹುಡುಕಿ ಕಳಿಸಿಕೊಟ್ಟು ಸಹಕರಿಸಿದ ಹಿರಿಯ ಮಗಳು ಡಾ॥ (ಶ್ರೀಮತಿ) ನೀಲಾಂಬಿಕೆ ಪಾಟೀಲ, ಮಗ ಶ್ರೀ ಚೆನ್ನಬಸವಣ್ಣ ಹಾಗೂ ಸೊಸೆ ಶ್ರೀಮತಿ ರಾಜೇಶ್ವರಿಯವರನ್ನು: ತನ್ನ ಬಿಎಸ್.ಸಿ. ಅಭ್ಯಾಸದೊಂದಿಗೆ ಮನೆಯ ಕೆಲಸ- ಕಾರ್ಯಗಳಲ್ಲಿ ಸಹಾಯಮಾಡಿ, ನನ್ನ ಅಧ್ಯಯನ-ಬರವಣಿಗೆಗೆ ಅವಕಾಶ ಮಾಡಿಕೊಟ್ಟ ತಂಗಿಯ ಮಗಳು ಚಿ॥ ಮಾಣಿಕ್ಯಳನ್ನು ನೆನೆಯುವೆ. ಅಧ್ಯಯನ ಬರವಣಿಗೆಯ ಒತ್ತಡದಿಂದ ಭಾರಗೊಂಡ ಮನಸ್ಸಿಗೆ ತನ್ನ ತುಂಟತನದಿಂದ ನಲ್ಮೆಯ ಮಾತುಗಳಿಂದ ಮನಕ್ಕೆ ಮುದ ನೀಡಿದ ಮುದ್ದು ಮೊಮ್ಮಗಳು ಚಿ॥ ಭಕ್ತಿ (ಅನಿಶಾ)ಯನ್ನೂ ನೆನೆಯದಿರಲಾರೆ.

ಈ ಮಹಾಪ್ರಬಂಧದ ಡಿ.ಟಿ.ಪಿ ಕಾರ್ಯವನ್ನು (ತಮ್ಮ ಪತ್ನಿಯು ಆಕಸ್ಮಿಕ ಅಪಘಾತದಲ್ಲಿ ಅಗಲಿಹೋದ ದುಃಖವನ್ನು ನುಂಗಿಕೊಂಡು ) ಕಾಯಕ ನಿಷ್ಠೆಯಿಂದ ಪೂರೈಸಿಕೊಟ್ಟಿರುವ ವೀರೇಶ ಡಿ.ಟಿ.ಪಿ. ಸೆಂಟರದ ಶ್ರೀ ರಮೇಶ ರೊಳ್ಳಿ(ಕುಂಬಾರ) ಅವರಿಗೂ ಹಾಗೂ ಡಿ.ಟಿ.ಪಿ. ಕಾರ್ಯನಿರ್ವಹಿಸಿದ ಕು॥ ವಂದನಾ ಕುಲಕರ್ಣಿ. ಚಿ॥ಸಂಜಯಕುಮಾರ ಹಳೇಮನಿ. ಚಿ॥ಬಸವರಾಜ ಕುಂಬಾರ ಚಿ॥ ಪ್ರಸನ್ನ ಕುಲಕರ್ಣಿ ಇವರಿಗೂ, ಬೈಂಡ ಮಾಡಿಸಲು ನೆರವಾದ ಧಾರವಾಡದ ಶ್ರೀ ವೀರೇಶ ತಡಕೋಡ ವಕೀಲರಿಗೂ, ಬೈಂಡ ಮಾಡಿಕೊಟ್ಟ ಶ್ರೀ ಮಹಾಂತೇಶ ಬೈಂಡಿಂಗ್ ವರ್ಕ್ಸನ ಶ್ರೀ ಪಾಟೀಲ, ಶ್ರೀ ಕುಂಬಾರ, ಶ್ರೀ ಶಾಸ್ತ್ರಿ ಅವರಿಗೂ ನನ್ನ ಶರಣು – ಶರಣಾರ್ಥಿಗಳು.

ಮಹಾಪ್ರಬಂಧದ ಬರವಣಿಗೆ ಪೂರ್ಣಗೊಳಿಸಿ, ೨೦೧೦ ಫೆಬ್ರುವರಿ ೬ ರಂದು ಕ.ವಿ.ವಿ.ಗೆ ಮಾಹಾಪ್ರಬಂಧವನ್ನು ಸಲ್ಲಿಸಿದೆ. ಮುಂದೆ ೨೦೧೧ ಎಪ್ರಿಲ್ ೫ ರಂದು ಪಿಎಚ್.ಡಿ ಪದವಿ ದೊರೆಯಿತು. ಮೌಲಿಕವಾದ ವರದಿಗಳನ್ನು ಬರೆದ ಮೈಸೂರು ವಿ.ವಿ.ಯ ಡಾ.ಕೃಷ್ಣಮೂರ್ತಿ ಹನೂರ ಹಾಗೂ ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಡಾ. ಕೆ. ರವೀಂದ್ರನಾಥ ಅವರಿಗೂ ನನ್ನ ಹೃತ್ಪೂರ್ವಕ ಶರಣುಗಳು.

ಈ ಮಹಾಪ್ರಬಂಧವು ಗ್ರಂಥ ರೂಪದಲ್ಲಿ ಪ್ರಕಟವಾಗಲು ಕಾರಣೀಕರ್ತರಾಗಿರುವ ಗ್ರಂಥದಾಸೋಹಿಗಳಾದ ವಿಜಾಪುರದ 'ಕುಮಾರ ಕಕ್ಕಯ್ಯ' ಶರಣರ ಮಕ್ಕಳು, ಸೊಸೆಯಂದಿರು, ಅಳಿಯಂದಿರಿಗೆ ಶರಣುಗಳು.

ಈ ಗ್ರಂಥಕ್ಕೆ ಸುಂದರ ಮುಖಪುಟ ರಚಿಸಿದ ಕಲಾವಿದರಾದ ಶ್ರೀ ರವೀಂದ್ರ ವಿಶ್ವಜ್ಞ ಧಾರವಾಡ, ೧/೮ ಡೆಮ್ಮಿ ಆಕಾರದಲ್ಲಿ ಅಕ್ಷರ ಸಂಯೋಜಿಸಿದ ವಚನ ಗ್ರಾಫಿಕ್ಸ್‌ನ ಶ್ರೀ ದೇವರಾಜ, ಶ್ರೀಮತಿ ಅಕ್ಕಮ್ಮ ಅಂಗಡಿ, ಅಂದವಾಗಿ ಮುದ್ರಿಸಿದ ಧಾರವಾಡದ ರಾಜಶ್ರೀ ಪ್ರಿಂಟಿಂಗ್ ಪ್ರೆಸ್‌ನ ಶ್ರೀಮತಿ ಸರ್ವಮಂಗಳಾ, ಶ್ರೀ ವೀರೇಶ ತಡಕೋಡ ಅವರಿಗೂ ಅನಂತ ಶರಣು – ಶರಣಾರ್ಥಿಗಳು.

ರಾಮದುರ್ಗ.

ದಿನಾಂಕ: ೦೫-೦೯-೨೦೧೧ **ಡಾ. (ಶ್ರೀಮತಿ) ಎಸ್.ಎಸ್. ಲಂಗೋಟಿ**

(ಕಾವ್ಯನಾಮ- ಕಲ್ಯಾಣಮ್ಮ ಲಂಗೋಟಿ)

# ಕುಮಾರ ಕಕ್ಕಯ್ಯನ ವಚನಗಳು–ಒಂದು ಅಧ್ಯಯನ : ಕುರಿತು ಅಭಿಪ್ರಾಯಗಳು

–೧–

ಪ್ರೊ. ಶ್ರೀಮತಿ ಎಸ್. ಎಸ್. ಲಂಗೋಟಿ ಕನ್ನಡ ಪ್ರಾಧ್ಯಾಪಕಿ, ಬೆಂಬಳಗಿ ಡಿಗ್ರಿ ಕಾಲೇಜು ರಾಮದುರ್ಗ, ಇವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ ಸಂಶೋಧನೆಗಾಗಿ ನೋಂದಣಿ ಮಾಡಿಸಿದ್ದರು. ಡಿಗ್ರಿ ಕಾಲೇಜಿನ ಬೋಧನೆ ಕಾಯಕದೊಂದಿಗೆ ತುಂಬಾ ಶ್ರದ್ಧೆಯಿಂದ ಸಂಶೋಧನ ಕಾರ್ಯ ಕೈಕೊಂಡು 'ಕುಮಾರ ಕಕ್ಕಯ್ಯನ ವಚನಗಳು ಒಂದು ಅಧ್ಯಯನ' ಎಂಬ ವಿಷಯದ ಮೇಲೆ ಮಹಾಪ್ರಬಂಧ ರಚಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪದವಿಯನ್ನು ಪಡೆದಿದ್ದಾರೆ.

ಶ್ರೀಮತಿ ಲಂಗೋಟಿಯವರು ಸ್ವತ: ಲೇಖಕಿಯಾಗಿ ಈಗಾಗಲೇ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪರಿಚಿತರಾಗಿದ್ದಾರೆ. ಈ ಮಹಾ ಪ್ರಬಂಧದಲ್ಲಿ ಅವರ ಕಠಿಣ ಪರಿಶ್ರಮ, ತೀಕ್ಷ್ಣ ವಿಮರ್ಶಾ ಶಕ್ತಿ, ಸತ್ವಪೂರ್ಣ ಬರವಣಿಗೆ ಎದ್ದು ಕಾಣುತ್ತದೆ. ದಲಿತ ವಚನಕಾರ ಕುಮಾರ ಕಕ್ಕಯ್ಯನವರ ಸಮಗ್ರ ವ್ಯಕ್ತಿತ್ವ ದರ್ಶನ, ಹೋರಾಟ, ಅವರ ವಚನಗಳ ಹಿರಿಮೆ ಗರಿಮೆ ಇಲ್ಲಿ ವ್ಯಕ್ತವಾಗಿದೆ. ಇದೊಂದು ಅಪೂರ್ವವಾದ ಸಂಶೋಧನಾ ಕೃತಿಯಾಗಿದೆ.

**–ಡಾ. ಶ್ರೀಮತಿ ಸುಲೋಚನಾ ಸಂ. ಮಟ್ಟಿ**
ಕನ್ನಡ ಪ್ರಾಧ್ಯಾಪಕಿ (ವಿಶ್ರಾಂತ)
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೩

– ೨ –

"ಸಂಶೋಧಕಿಯರಾದ **ಶ್ರೀಮತಿ. ಎಸ್.ಎಸ್.ಲಂಗೋಟಿ** ಅವರ 'ಕುಮಾರ ಕಕ್ಕಯ್ಯನ ವಚನಗಳು–ಒಂದು ಅಧ್ಯಯನ' ಎಂಬ ಪಿಎಚ್.ಡಿ ಮಹಾಪ್ರಬಂಧವು ಒಬ್ಬ ಆಧುನಿಕ ವೈಚಾರಿಕ ಹಾಗೂ ಸೃಜನ ಶೀಲ ಲೇಖಕರನ್ನು ಕುರಿತ ಸಾದ್ಯಂತ ಸಂಶೋಧನ ಗ್ರಂಥವೆನಿಸುತ್ತದೆ.

ದಲಿತ ಲೋಕದ ಎಲ್ಲ ಮಕ್ಕಳಿಗೆ ಎದುರಾಗಬಹುದಾದ ಎಲ್ಲ ಸಂಕಷ್ಟದ ಅಲೆಗಳನ್ನು ಹಾಯ್ದು ಸದೃಢವಾಗಿ ನಿಲ್ಲುವ ಕುಮಾರ ಕಕ್ಕಯ್ಯ ಅವರಿಗೆ, ಅವರು ಹಾಗೆ ಬಲಗೊಳ್ಳಲು ನೆರವಾದದ್ದು ವಚನಸಾಹಿತ್ಯ ಎಂಬುದನ್ನು ಸಂಶೋಧಕಿಯರು ಮಹಾಪ್ರಬಂಧದ ಅಧ್ಯಾಯಗಳಲ್ಲಿ ಕಾಣಿಸುತ್ತಾ ಹೋಗಿದ್ದಾರೆ. ಹನ್ನೆರಡನೆಯ ಶತಮಾನದ ಕ್ರಾಂತಿಯ ನೇತಾರರಾದ ಬಸವಣ್ಣನವರ ವಚನಗಳ ಅಧ್ಯಯನದಿಂದ ಆತ್ಮಶಕ್ತಿಯನ್ನು ತುಂಬಿಕೊಳ್ಳುವ ಕುಮಾರ ಕಕ್ಕಯ್ಯ ಪೋಳ ಅವರು ತಾವು ಸ್ವತಃ ವಚನರಚನೆ ಮಾಡುತ್ತಲೇ ವಚನಕಾರರ ಕ್ರಾಂತಿಗೆ ಸ್ಪಂದಿಸುತ್ತಲೇ, ಆಧುನಿಕ

ಜಗತ್ತಿನಲ್ಲಿ ತಮ್ಮೆದುರೆಲ್ಲ ಕಾಣುವ ಅಸಮಾನತೆಗೆ ಅಸಾಧಾರಣ ರೀತಿಯಲ್ಲಿ ಮುಖಾಮುಖಿಯಾಗಿ ನಿಲ್ಲುತ್ತ ಹೋಗುವುದನ್ನು ಸಂಶೋಧಕಿಯರು ಪರಿಣಾಮಕಾರಿಯಾಗಿಯೇ ಓದುಗರ ಮನಮುಟ್ಟುವಂತೆ ವಿವರಿಸಿರುತ್ತಾರೆ.

ಕುಮಾರ ಕಕ್ಕಯ್ಯ ಅವರ ಅಧ್ಯಯನ ಕಾಲಯಾಪನೆಯದಲ್ಲ ಎಂಬುದನ್ನು ಸಂಶೋದಕಿಯರು ಓದುಗರಿಗೆ ಸ್ಪಷ್ಟವಾಗಿ ಮನಗಾಣಿಸುತ್ತಾರೆ. ಈ ದೃಷ್ಟಿಯಿಂದ ವಚನಕ್ರಾಂತಿಯು ಕರ್ನಾಟಕದ ಚರಿತ್ರೆಯಲ್ಲಿ ಎಬ್ಬಿಸಿದ ಆಂದೋಲನವೇ ಗಮನಾರ್ಹವಾದುದು. ವಚನಕಾರರ ಚಳವಳಿ ಕೇವಲ ಹತ್ತು ಹದಿನೈದು ವರ್ಷಗಳದಾದರೂ ಅದು ಮುಂದಿನ ಶತಮಾನಗಳಲ್ಲಿ ಹಚ್ಚಿದ ಕಿಡಿ ಮಾತ್ರ ನಿರಂತರವಾಗಿಬಿಟ್ಟಿತು. ಆ ಕಿಡಿಯ ಬೆಳಕು ಕುಮಾರ ಕಕ್ಕಯ್ಯ ಪೋಳ ಅವರಿಗೂ ದಾರಿಯನ್ನು ತೋರಿತು.

ವಚನಕಾರರ ಮುಖ್ಯ ಧ್ಯೇಯ ಸಮಾಜದ ಒಳಿತು. ಶತಮಾನಗಳ ಕಿಲ್ಬಿಷವನ್ನು ತೊಳೆಯುವುದು. ಆ ತೊಳೆಯುವಿಕೆಯ ಸಂಬಂಧದ ಹೇಳಿಕೆಗಳೇ ವಚನಗಳು. ಇಂಥದೊಂದು ಧ್ಯೇಯ ಇಡೀ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಎಲ್ಲಿಯೂ ಕಾಣಿಸುವುದಿಲ್ಲ.

ಸಮಾಜದಲ್ಲಿ ಜರುಗುತ್ತಿರುವ ಶೋಷಣೆ, ಅಸ್ಪೃಶ್ಯತೆಯ ಆಳ್ವಿಕೆ, ಅಜ್ಞಾನದತ್ತ ದಾರಿತೋರುವ ನಂಬಿಕೆ ಆಚರಣೆಗಳು ಇದನ್ನೆಲ್ಲ ಜಾರಿಗೆ ತರಲೆಂದೇ ನೂರು ದೇವರುಗಳನ್ನು ಸೃಷ್ಟಿಸಿ ನಿಂತ ದಲ್ಲಾಳಿಗಳು, ಇದರ ವಿರುದ್ಧ ಹೋರಾಡಿದ ವಚನಕಾರರು ಕುಮಾರ ಕಕ್ಕಯ್ಯನವರಿಗೆ ಯಾವೊತ್ತಿನ ಆದರ್ಶವೆನಿಸಿದರು. ಆ ಸಂಬಂಧ ಕಕ್ಕಯ್ಯನವರು ಹೇಳಿಕೊಳ್ಳುವುದೇನೆಂದರೆ– 'ವರ್ಣಾಶ್ರಮ ಅಸ್ಪೃಶ್ಯರನ್ನು ಮೆಟ್ಟಿ ಆಳುತ್ತಿದೆ. ಅಂಥ ದುಃಖಮಯ ವಾತಾವರಣದಿಂದ ಮುಕ್ತರಾಗಬೇಕೆಂಬುದೇ ನನ್ನ ಅಂತರಾಳದ ಕೂಗಾಗಿದೆಯೇ ಹೊರತು ನಾನೊಬ್ಬ ಸಾಹಿತಿ ಎನಿಸಬೇಕೆಂಬ ಇಚ್ಛೆ ನನಗಿಲ್ಲ. ಭಾರತದ ಹಿಂದುಗಳ ಸಂಪತ್ತು ಭೂಮಿಯಲ್ಲಿಲ್ಲ, ಗಣಿಗಳಲ್ಲಿಲ್ಲ, ಖಜಾನೆಗಳಲ್ಲಿಲ್ಲ, ಅದು ಇರುವುದು ಅವರ ಧರ್ಮಗ್ರಂಥಗಳಲ್ಲಿ, ಅವರ ಚಾತುರ್ವರ್ಣ ಪದ್ಧತಿಯಲ್ಲಿ. ಇವೆಲ್ಲವುಗಳನ್ನು ನನ್ನ ಜನಗಳಿಗೆ ಆಯಾ ಧರ್ಮಗ್ರಂಥಗಳ ಆಧಾರದಿಂದಲೇ ತಿಳಿಹೇಳಬೇಕಾಗಿದೆ....' ಎನ್ನುತ್ತಾರೆ.

ಕುಮಾರ ಕಕ್ಕಯ್ಯನವರು ಜೀವನದ ಉದ್ದಕ್ಕೂ ಕಂಡದ್ದು ಸಮಾಜ ಮತ್ತು ಜಾತಿಯ ಅಸಮಾನತೆ ಎನ್ನುವುದಾದರೆ, ಸಂಶೋಧಕರ ಮನಸ್ಸನ್ನೂ ಅದೇ ಸಂಗತಿ ತೀವ್ರವಾಗಿ ಕಾಡಿದಂತಿದ್ದು, ವಚನಕಾರರ ಚಳವಳಿ, ಕಕ್ಕಯ್ಯನವರು ಅದನ್ನು ತೀವ್ರತರದಲ್ಲಿ ಗ್ರಹಿಸಿ ತಾವೇ ಸ್ವತಃ ಹೋರಾಟಕ್ಕಿಳಿದದ್ದು, ಇದನ್ನೆಲ್ಲ ಸಂಶೋಧಕಿಯರು ಆರ್ಧ್ರ ಮನಸ್ಸಿನಿಂದ ಮಹಾಪ್ರಬಂಧದುದ್ದಕ್ಕೂ ಗ್ರಹಿಸುತ್ತಲೇ ಹೋಗುವುದು, ಈ ಸಂಬಂಧದ ಹೊಂದಾಣಿಕೆ ಆಶ್ಚರ್ಯಕರವೆಂಬಂತೆ ಎದ್ದುಕಾಣಿಸುತ್ತದೆ.

ಕಳೆದ ಶತಮಾನದ ಆರಂಭದಲ್ಲಿ ಅಷ್ಟೆಲ್ಲ ಹೋರಾಟ ನಡೆಸಿದರೂ, ದಕ್ಷಿಣ ಕರ್ನಾಟಕದ ಭಾಗಕ್ಕೆ ಬೆಳಕಿಗೇ ಬರದೇಹೋದ ಒಬ್ಬ ಬಂಡಾಯಗಾರ ಲೇಖಕ ಕುಮಾರ ಕಕ್ಕಯ್ಯ ಪೋಳ ಅವರನ್ನು ತಮ್ಮ ಈ ಅಧ್ಯಯನದ ಮೂಲಕ ಮತ್ತೆ ಓದುಗರಿಗೆ ನೆನಪಿಸಿಕೊಡುವ ಉಪಕಾರವನ್ನು ಸಂಶೋಧಕಿ ಶ್ರೀಮತಿ ಎಸ್.ಎಸ್. ಲಂಗೋಟಿ ನೆರವೇರಿಸಿರುತ್ತಾರೆ. ಈ ಮಹಾಪ್ರಬಂಧವು ಕನ್ನಡ ಸಾಂಸ್ಕೃತಿಕ ಪರಂಪರೆಯಲ್ಲಿ ತಮ್ಮ ಅಸ್ಮಿತೆಯನ್ನು ಕಂಡುಕೊಳ್ಳಲು ಹೋರಾಟ ನಡೆಸುತ್ತಿರುವ ಇನ್ನಷ್ಟು ದುರ್ಬಲವರ್ಗದವರಿಗೆ ಒಂದು ಕೊಡುಗೆಯಾಗಿ ಪರಿಣಮಿಸಬಹುದು. (ಮೌಲ್ಯ ಮಾಪನ ವರದಿಯಿಂದ)

**– ಡಾ. ಕೃಷ್ಣಮೂರ್ತಿ ಹನೂರು**
ಕನ್ನಡ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು–೬

–೩–

ಆಧುನಿಕ ದಲಿತ ವಚನಕಾರರಲ್ಲಿ ವೈಚಾರಿಕತೆಗೆ ಇನ್ನೊಂದು ಹೆಸರು ಕುಮಾರ ಕಕ್ಕಯ್ಯ. ಶ್ರೀಯುತರ ಜೀವನ ಸಾಧನೆ, ಕುಮಾರ ಕಕ್ಕಯ್ಯನ ವಚನಗಳ ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ವೈಚಾರಿಕ, ಕೌಟುಂಬಿಕ, ಜಾನಪದ ಅಂಶಗಳು ಹಾಗೂ ಅವರ ವಚನಗಳ ಭಾಷೆ, ಶೈಲಿ, ಛಂದಸ್ಸು, ವಚನಕಾರರ ಪ್ರಭಾವ–ಪ್ರೇರಣೆ ಕುರಿತು ಗಂಭೀರವಾಗಿ ಚರ್ಚಿಸಲಾಗಿದೆ.

ವಚನ ಸಾಹಿತ್ಯದ ಆಶಯ ಸಮಗ್ರ ಸಮಾಜ ಪರಿವರ್ತನೆ. ಈ ಪರಿವರ್ತನೆಯು ಕೌಟುಂಬಿಕದಿಂದ ಹಿಡಿದು ಸಮಾಜದ ಪ್ರತಿಯೊಂದು ನೆಲೆಯಲ್ಲಿ ಗೋಚರಿಸುವಂತಹದ್ದು. ಈ ಆಶಯವನ್ನು ಅಧ್ಯಯನದ ಅನುಕೂಲಕ್ಕಾಗಿ ಕುಮಾರ ಕಕ್ಕಯ್ಯನ ವಚನಗಳನ್ನು ವರ್ಗೀಕರಿಸಿಕೊಂಡಿರುವುದು ಈ ಪ್ರಬಂಧದ ಹಿರಿಮೆಯೆನಿಸಿದೆ.

ಶ್ರೀ ಹರ್ಡೇಕರ ಮಂಜಪ್ಪ, ಶ್ರೀ ಎಸ್.ವ್ಹಿ. ರಂಗಣ್ಣ, ಶ್ರೀ ಎಸ್.ವ್ಹಿ. ಪರಮೇಶ್ವರ ಭಟ್ಟ, ಡಾ. ಸಿದ್ದಯ್ಯ ಪುರಾಣಿಕ, ಡಾ. ಮಹಾದೇವ ಬಣಕಾರ ಮುಂತಾದ ಆಧುನಿಕ ವಚನಕಾರರ ಸರಿದೊರೆಯಾಗಿ ಸಾಧನೆ ಮಾಡಿದ ಕುಮಾರ ಕಕ್ಕಯ್ಯನವರ ನಿಜದ ನೆಲೆಯನ್ನು ವಸ್ತುನಿಷ್ಠವಾಗಿ ಶೋಧಿಸಿದ್ದಾರೆ ಶ್ರೀಮತಿ ಎಸ್.ಎಸ್. ಲಂಗೋಟಿಯವರು. (ಮೌಲ್ಯಮಾಪನ ವರಿದಯಿಂದ)

**–ಡಾ. ಕೆ. ರವೀಂದ್ರನಾಥ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

# ಪರಿವಿಡಿ

## ಕುಮಾರ ಕಕ್ಕಯ್ಯನ ವಚನಗಳು – ಒಂದು ಅಧ್ಯಯನ

**ಅಧ್ಯಾಯ – ೫**



**ಅಧ್ಯಾಯ – ೬**



**ಅಧ್ಯಾಯ– ೭**



**ಅಧ್ಯಾಯ–೮**

# ಅಧ್ಯಾಯ - ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

'ಕುಮಾರ ಕಕ್ಕಯ್ಯನ ವಚನಗಳು' ಕೃತಿಯ ಕರ್ತೃ ಶ್ರೀ ಭೀಮರಾವ ಸಾಯಬಣ್ಣ ಪೋಳ ಅವರು ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಲೇ ಧಾರ್ಮಿಕ, ಸಾಮಾಜಿಕ, ವೈಚಾರಿಕ, ಸಾಹಿತ್ಯಿಕ ಮುಂತಾದ ರಂಗಗಳಲ್ಲಿ ವಿಶಿಷ್ಟವಾದ ಸಾಧನೆ ಮಾಡಿದ್ದಾರೆ. ಭಾರತದ ಸನಾತನ ವರ್ಣಾಶ್ರಮ ಧರ್ಮವಾಗಿರುವ ಹಿಂದೂ (ವೈದಿಕ -ಶೈವ) ಧರ್ಮ-ಸಮಾಜದ ಅತಿ ಕೆಳಸ್ತರದಲ್ಲಿರುವ ಶೂದ್ರಾತಿಶೂದ್ರ, ಅಸ್ಪೃಶ್ಯ ಜನಾಂಗವೆನಿಸಿರುವ ಡೋಹರ ಎಂಬ ದಲಿತ ಪಂಚಮವರ್ಣ (ಪರಿಶಿಷ್ಟಜಾತಿ) ದಲ್ಲಿ ಜನಿಸಿದವರು. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಜನಿಸಿ, ಡಾ॥ ಬಾಬಾಸಾಹೇಬ ಅಂಬೇಡ್ಕರ ಅವರಂತೆಯೇ ಅಂದಿನ ಕಾಲದ ಉಚ್ಚವರ್ಣಿಯರ, ಮೇಲ್ವರ್ಗದವರ ದಬ್ಬಾಳಿಕೆ, ಶೋಷಣೆಗೆ ಒಳಗಾಗಿ ನೊಂದು ಬೆಂದವರು.

ಹನ್ನೆರಡನೆಯ ಶತಮಾನದ ದಲಿತ ಜನಾಂಗದ ಶರಣ ಡೋಹರ ಕಕ್ಕಯ್ಯನ ವಂಶದವರಾದ್ದರಿಂದ ತಮ್ಮನ್ನು 'ಕುಮಾರ ಕಕ್ಕಯ್ಯ' ಎಂದು ಅಭಿಮಾನದಿಂದ ಕರೆದುಕೊಂಡು, ಅದೇ ಹೆಸರನ್ನು ಕಾವ್ಯನಾಮವಾಗಿಸಿಕೊಂಡು, ಕಥೆ, ಕಾದಂಬರಿ, ಪ್ರಬಂಧ, ನಾಟಕ, ವಿಚಾರಸಾಹಿತ್ಯ ಹಾಗೂ ವಚನ ಸಾಹಿತ್ಯ ರಚಿಸಿದವರು. ತಮ್ಮ ಸ್ವರಚಿತ ವಚನಗಳಿಗೆ 'ಕುಮಾರ ಕಕ್ಕಯ್ಯ' ಎಂಬುದನ್ನೇ ವಚನಾಂಕಿತ ಮಾಡಿಕೊಂಡು ಸಾವಿರಾರು ವಚನಗಳನ್ನು ರಚಿಸಿದವರು. ಇವರ ಸಮಗ್ರ ವಚನಗಳ ಅಧ್ಯಯನ-ಚಿಂತನ-ಮೌಲ್ಯಮಾಪನದ ಅಗತ್ಯವಿದೆ.

ಕನ್ನಡ ಕವಿ-ಕಾವ್ಯ-ಪರಂಪರೆಯಲ್ಲಿ ೧೨ ನೇ ಶತಮಾನದ ವಚನಕಾರರು ಹಾಗೂ ವಚನ ಸಾಹಿತ್ಯಕ್ಕೆ ತನ್ನದೇ ಆದ ಒಂದು ವಿಶೇಷ ಸ್ಥಾನವಿದೆ. "ವಚನ ಗ್ರಂಥಗಳು ಕನ್ನಡ ಭಾಷೆಯಲ್ಲಿ ಬಹು ಮಹತ್ವದ ಗ್ರಂಥಗಳಾಗಿವೆ. ಒಂದು ಬಗೆಯ ವಾಙ್ಮಯವನ್ನೇ ಹುಟ್ಟಿಸಿರುತ್ತವೆಂದು ಹೇಳಬಹುದು. ಈ ವಾಙ್ಮಯವು ಮೊದಲಿಗೆ ಬಸವೇಶ್ವರನ ಕಾಲದಲ್ಲಿ ಉಗಮವಾಯಿತೆಂದು ತೋರುತ್ತದೆ."[೧]

ಪ್ರಪಂಚದ ಅನುಭಾವ ಸಾಹಿತ್ಯದಲ್ಲಿ ಕರ್ನಾಟಕದ ವಚನಸಾಹಿತ್ಯಕ್ಕೆ ಅತ್ಯುನ್ನತಸ್ಥಾನವಿದೆ. "ವಚನ ಎನ್ನುವದು ಕನ್ನಡದಲ್ಲಿ ವಿಶಿಷ್ಟ ಸಾಹಿತ್ಯ ಪ್ರಕಾರವೊಂದಕ್ಕೆ ಹೆಸರು. ಅನ್ಯಭಾಷೆಗಳ ಯಾವುದೇ ಮಾದರಿಯನ್ನೂ ಯಾವುದೇ ದೃಷ್ಟಿಯಿಂದಲೂ ಅನುಕರಿಸದೇ ಅಥವಾ ಆದರ್ಶವಾಗಿಟ್ಟುಕೊಳ್ಳದೇ ಕೇವಲ ಅನುಭವದಿಂದಲೇ ಮೂಡಿ ರೂಪಿತವಾದ ಈ ಪ್ರಕಾರವು ಕನ್ನಡದ ಹೆಮ್ಮೆಯಾಗಿದೆ. ವಿಶ್ವಸಾಹಿತ್ಯಕ್ಕೆ ಕನ್ನಡವು ಸಲ್ಲಿಸಿರುವ ಕಾಣಿಕೆಯಾಗಿದೆ"[೨] ಎಂಬ ಮಾತಿನಲ್ಲಿ ವಚನ ಸಾಹಿತ್ಯದ ಹಿರಿಮೆ ತಿಳಿಯುತ್ತದೆ.

---

೧. ವಚನಶಾಸ್ತ್ರಸಾರ ಭಾಗ ೧ - ಡಾ. ಫ.ಗು. ಹಳಕಟ್ಟಿ ಪ್ರಸ್ತಾವನೆ ಪು-೭.

೨. ವಚನ ಸಾಹಿತ್ಯ-ಡಾ.ಎಂ.ಚಿದಾನಂದಮೂರ್ತಿ ಬೆಂಗಳೂರು ವಿಶ್ವ ವಿದ್ಯಾಲಯ, ಪುಟ-೧

ಅಮೂಲ್ಯವಾದ ವಚನಸಾಹಿತ್ಯವು ಪ್ರಪಂಚದ ಯಾವುದೇ ದೇಶ, ಭಾಷೆಗಳ ಸಾಹಿತ್ಯದಿಂದ ತಂದದ್ದೂ ಅಲ್ಲ, ಅವುಗಳ ಪ್ರಭಾವದಿಂದಲೂ ರಚನೆಯಾದುದಲ್ಲ ಎಂಬುದನ್ನು ಅನೇಕ ವಿದ್ವಾಂಸರು ಸ್ಪಷ್ಟವಾಗಿ ತಿಳಿಸಿದ್ದಾರೆ. " ವಚನ ಸಾಹಿತ್ಯ ಎರವಲು ತಂದದ್ದಲ್ಲ, ಅದು ಕನ್ನಡದ ಸ್ವಾರ್ಜಿತ ಸೊತ್ತು, ವಚನಕಾರರು ಸಂಸ್ಕೃತದ ಆಚಾರ್ಯರಲ್ಲ, ಅವರು ಅಚ್ಚ ಕನ್ನಡದ ಬೇಸಾಯಗಾರರು."[೩] ಎಂಬಲ್ಲಿ ವಚನ ಸಾಹಿತ್ಯದ ಸ್ವಂತಿಕೆ, ಹೊಸತನ ಅರ್ಥವಾಗುತ್ತದೆ.

"ವಚನ ಸಾಹಿತ್ಯ ಕನ್ನಡದ ವಿಶಿಷ್ಟ ಸಾಧನೆಗಳಲ್ಲೊಂದು. ಅದು ಬಸವಣ್ಣ, ಅಲ್ಲಮ, ಅಕ್ಕಮಹಾದೇವಿಯವರಂಥ ಕೆಲವರ ವೈಯಕ್ತಿಕ ಸಿದ್ಧಿಯಾಗಿದ್ದಂತೆ ಆ ಶತಮಾನದ ಸಿದ್ಧಿಯೂ ಆಗಿದೆ. ಭಾಷೆ, ಉಕ್ತಿವಿಧಾನ, ಅಂಕಿತ ಬಳಕೆ, ಅನುಭವಗಳ ಸಾಮ್ಯ ಹಾಗೂ ಸಮಾನತೆ, ಇವೆಲ್ಲಕ್ಕಿಂತ ಮುಖ್ಯವಾಗಿ ಈ ಎಲ್ಲವುಗಳನ್ನು ಮೈಗೂಡಿಸಿಕೊಂಡು ಅವು ಸಾಧಿಸಿರುವ ಅಂಶಗಳು – ಇವುಗಳಲ್ಲಿ ವಚನಸಾಹಿತ್ಯ ಒಂದು ಸಮಷ್ಟಿ ಸಾಧನೆಯಾಗಿ ತೋರುತ್ತದೆ"[೪] ಎಂಬುದನ್ನು ಗಮನಿಸಿದಾಗ ವಚನಗಳ ಮಹತ್ವ ತಿಳಿದು ಬರುತ್ತದೆ.

"ವಚನ, ಶಿವಶರಣರು ತಮ್ಮ ಅನುಭವದ ಅಭಿವ್ಯಕ್ತಿಗಾಗಿ ರೂಪಿಸಿಕೊಂಡ ಒಂದು ವಿನೂತನ ಸಾಹಿತ್ಯ ಪ್ರಕಾರ. ಸಹಜತೆ, ಸರಳತೆ, ಸಂಕ್ಷಿಪ್ತತೆ, ವೈಚಾರಿಕತೆ, ಆತ್ಮೀಯತೆ ಹಾಗೂ ಭಾವ ಪ್ರಖರತೆ ಅದರ ವಿಶಿಷ್ಟ ಲಕ್ಷಣಗಳು. ಲೋಕಾನುಭವ ಹಾಗೂ ಶಿವಾನುಭವಗಳ ಸಾಮರಸ್ಯದೊಂದಿಗೆ 'ಸಕಲಜೀವಾತ್ಮರಿಗೆ ಲೇಸಬಯಸುವ' ಉದ್ದೇಶವನ್ನಿಟ್ಟುಕೊಂಡು ಹುಟ್ಟಿ ಬಂದ ಅದು –ಗದ್ಯದಂತೆ ಓದಲೂ, ಪದ್ಯದಂತೆ ಹಾಡಲೂ ಅನುಕೂಲವಾಗುವ ವೈಲಕ್ಷಣವನ್ನು ಹೊಂದಿದೆ. ಪ್ರತಿ ವಚನವೂ ಆಯಾ ವಚನಕಾರನ ಇಷ್ಟದೈವದ (ಇಷ್ಟಲಿಂಗದ) ಅಂಕಿತವನ್ನು ಧರಿಸಿರುವುದು ಅದರ ಮತ್ತೊಂದು ವಿಶೇಷತೆ"[೫] ವಚನ ಹಾಗೂ ವಚನಾಂಕಿತ ಅವಿನಾಭಾವ ಸಂಬಂಧ ಹೊಂದಿದೆ.

ವಚನ ಎಂದರೆ ಮಾತು, ನುಡಿ ಎಂದರ್ಥ. ಮಾತು ಎಂದಾಗ ಸಾಮಾನ್ಯರ ಮಾತು ಎಂದಲ್ಲ. ಶರಣರ ಹೃದಯಾಂತರಾಳದಿಂದ ಹೊರಹೊಮ್ಮಿದ ಮಾತುಗಳು. ಶರಣರು ಸ್ವಾನುಭಾವ ಹಾಗೂ ಲೋಕಾನುಭವದಿಂದ ಹೇಳಿದ ಮಾತುಗಳೇ ವಚನಗಳು " ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನಸಾಹಿತ್ಯಕ್ಕೊಂದು ವಿಶಿಷ್ಟ ಸ್ಥಾನವಿದೆ. ದಲಿತರು – ಶೋಷಿತರು – ಕೆಳವರ್ಗದವರು ಮೊದಲ ಬಾರಿಗೆ ಸಾಹಿತ್ಯದ ಮುಖಾಂತರ ಮಾತನಾಡಿದ್ದು ಇದೇ ಸಂದರ್ಭದಲ್ಲಿ. ಅರಮನೆಯಿಂದ ಹೊರಬಂದು ರಾಜಾಶ್ರಯದಿಂದ ದೂರವಾಗಿ, ಪಂಡಿತರ ಕಪಿಮುಷ್ಟಿಯಿಂದ

---

೩. ವಚನಧರ್ಮಸಾರ–ಎಂ.ಆರ್. ಶ್ರೀನಿವಾಸಮೂರ್ತಿ ಮೈಸೂರು ವಿಶ್ವ ವಿದ್ಯಾಲಯ, ಪುಟ೧೦.
೪. ವಚನಸಾಹಿತ್ಯ ಒಂದು ಇಣುಕು ನೋಟ – ಪ್ರೊ.ಜಿ.ಎಸ್.ಸಿದ್ದಲಿಂಗಯ್ಯ . ಪು –೯೯
೫. ವಚನ ಅಧ್ಯಯನ – ಡಾ॥ ವೀರಣ್ಣ ರಾಜೂರ. ಪು–೧೫೬.

ಪಾರಾಗಿ ಬಂದ ಕನ್ನಡ ಸಾಹಿತ್ಯ ಸಹಜವಾಗಿ ಉಸಿರಾಡಿದ್ದು, ನೆಲದ ಮಾತಿನಲ್ಲಿ ನಳ–ನಳಿಸಿದ್ದು ವಚನಕಾರರಲ್ಲಿ ಮಾತ್ರ, ಜಾತಿ–ಮತ–ಪಂಥಗಳನ್ನು ಬಿಟ್ಟು; ದೇಶ – ಭಾಷೆ– ವಯಸ್ಸುಗಳ ಅಂತರವನ್ನು ಮರೆತು; ಮೇಲು–ಕೀಳೆಂಬ ತಾರತಮ್ಯವನಳಿದು; ಸಾಮಾನ್ಯ ಜನತೆ ಮೊದಲ ಬಾರಿಗೆ ತಮ್ಮನ್ನು ಸಾಹಿತ್ಯದಲ್ಲಿ ತೊಡಗಿಸಿಕೊಂಡಿದ್ದು, ಸಾರ್ವಕಾಲಿಕ ಮೌಲ್ಯದ ಸಾಹಿತ್ಯವನ್ನು ಕೊಟ್ಟದ್ದು ಗಮನಿಸಬೇಕಾದ ಸಂಗತಿಗಳು".[೬]

"ವಚನಗಳು ಮೂಡಿಬಂದ ಕಾಲವು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ತುಂಬ ಮಹತ್ವಪೂರ್ಣವಾದುದು; ಸಾಹಿತ್ಯ ದೃಷ್ಟಿಯಿಂದಲೂ ಅತ್ಯಂತ ಮಹತ್ವದ ಮಾರ್ಪಾಟುಗಳಿಗೆ ಎಡೆಮಾಡಿಕೊಟ್ಟ ಕಾಲವದು. ಆಯಾ ಕಾಲ ಸ್ಥಿತಿಗನುಗುಣವಾಗಿ ಸಾಹಿತ್ಯದ ಸ್ವರೂಪವೂ ಮಾರ್ಪಾಟು ಹೊಂದುತ್ತದೆಂಬುದನ್ನು ನಮ್ಮ ಸಾಹಿತ್ಯೇತಿಹಾಸವನ್ನು ಪರಿಶೀಲಿಸಿರುವುದರಿಂದ ತಿಳಿಯಬಹುದು. ಹೀಗಾಗಿ ವಚನಗಳು ತಮ್ಮ ಹಿಂದಿನ ಕಾಲದ ಬರಹಕ್ಕಿಂತ ಸಂಪೂರ್ಣ ಭಿನ್ನಸ್ವರೂಪವನ್ನು ಪಡೆದು ಸಾಹಿತ್ಯವಾಗಲು ಕಾರಣ ಆಗಿನ ಸಾಮಾಜಿಕ ಪರಿಸ್ಥಿತಿ ಹಾಗೂ ಸಾಮಾಜಿಕ ಆಂದೋಲನಗಳು"[೭] ಎಂದು ನಾವು ಹೇಳಬಹುದು.

"ಸಮಾಜದಲ್ಲಿ ಆಗಿಂದಾಗ್ಗೆ ಉಂಟಾಗುತ್ತಿದ್ದ ಆಂದೋಲನಗಳ ಹುಟ್ಟಡಗಿಸಲು ಅದರ ವಿರುದ್ಧ ಕ್ರಾಂತಿ ತಲೆಎತ್ತುತ್ತಿತ್ತು. ಇಂತಹ ಕ್ರಾಂತಿಯ ಅನೇಕ ಅಸ್ತ್ರಗಳಲ್ಲಿ 'ವಚನ' ಎಂಬ ಸರಳ ಅಕ್ಷರದ ಮಹಾ ಅಸ್ತ್ರವನ್ನು ಎತ್ತಿ ಹಿಡಿದು ಜನ ಸಾಮಾನ್ಯರಿಗೆ ಅದನ್ನು ಹೆಚ್ಚಾಗಿ ಪರಿಚಯಿಸುವಲ್ಲಿ ಬಸವಾದಿ ಶರಣರು ಸಫಲತೆಯನ್ನು ಪಡೆದುಕೊಂಡರು. ಅಂದು ಸಾಮಾಜಿಕ ಪರಿವರ್ತನೆಗೆ ಇದರ ಬಳಕೆ ತೀರಾ ಅನಿವಾರ್ಯವಾಗಿತ್ತು. ಹೀಗಾಗಿ ಕನ್ನಡಕ್ಕೆ ವಿಶಿಷ್ಟವೂ ಅತ್ಯಂತ ಸತ್ವಪೂರ್ಣವೂ ಆದಂತಹ ವಚನಗಳ ಸೃಷ್ಟಿಗೆ ಶರಣರು ಕಾರಣೀಭೂತರಾದರು"[೮]

ಬಸವಾದಿ ಶರಣರು "ವಚನಗಳನ್ನು ರಚಿಸಿ ಸಾಹಿತಿಗಳಾಗಬೇಕೆಂದು ಹೊರಟವರಲ್ಲ. ಮೂಲತಃ ಅವರು ಸಮಾಜ ಸುಧಾರಕರು, ಚಿಂತಕರು..... ಅವರು ವಚನಗಳನ್ನೇನು ಬೆಟ್ಟ ಗುಡ್ಡ ಹಾಗೂ ಏಕಾಂತ ಪ್ರದೇಶಗಳಿಗೆ ಹೋಗಿ ರಚನೆ ಮಾಡಲಿಲ್ಲ. ಜನರ ಮಧ್ಯ ಇದ್ದುಕೊಂಡೇ, ಅವರ ನೋವು ನಲಿವುಗಳಿಗೆ ಸ್ಪಂದಿಸುತ್ತ ರಚಿಸಿದರು. ಸಮಾಜದಲ್ಲಿ ಏನೇನು ಕಂಡರು, ಅನುಭವಿಸಿದರು, ಅಂತಹ ಅನುಭವಗಳನ್ನೇ ತಮ್ಮ ನುಡಿಮುತ್ತುಗಳಲ್ಲಿ ಅಭಿವ್ಯಕ್ತ ಪಡಿಸಿದ್ದಾರೆ. ಆಯಾ ಸಂದರ್ಭಗಳಲ್ಲಿ ಅಲ್ಲೇ ಸಮಯಸ್ಫೂರ್ತಿಯಿಂದ ವಚನ ರಚಿಸಿದರು.[೯]

---

೬. ಆಧುನಿಕ ವಚನ ಸಾಹಿತ್ಯ – ಡಾ॥ ವ್ಹಿ. ಜಿ. ಪೂಜಾರ ಪುಟ – ೨.

೭. ವಚನ ಪರಿಸರ – ಡಾ॥ ಪಿ.ವಿ.ನಾರಾಯಣ ಪುಟ – ೩.

೮. ವಚನ ಸಾಹಿತ್ಯದಲ್ಲಿ ಕಾವ್ಯಾಂಶಗಳು – ಡಾ॥ ರಾಜಶೇಖರ ಜಮದಂಡಿ ಬಸವಬೆಳಗು ಸಂ.೨೩. ಸಂಚಿಕೆ ೧ ಪುಟ –೧೦.

೯. ವಚನ ಸಾಹಿತ್ಯ ಪರಂಪರೆ – ಡಾ॥ ವ್ಹಿ.ಜಿ.ಪೂಜಾರ ಪು –೨

"ವಚನ ಸಾಹಿತ್ಯ ಅಂತಸ್ಸತ್ವ ಮತ್ತು ಬರಹರೂಪಗಳೆರಡರಲ್ಲಿಯೂ ವಿಶಿಷ್ಟವಾದುದು. ಬಹುಶಃ ಇನ್ನಾವ ಭಾರತೀಯ ಸಾಹಿತ್ಯದಲ್ಲೂ ಇದಕ್ಕೆ ಸಂವಾದಿಯಾದುದು ಇನ್ನೊಂದಿಲ್ಲ"[೧೦]

ಈ ರೀತಿಯಾಗಿ ಕನ್ನಡದ ಹಿರಿಯ ಸಂಶೋಧಕರು, ವಿದ್ವಾಂಸರು ಕನ್ನಡಸಾಹಿತ್ಯದಲ್ಲಿ ವಚನಸಾಹಿತ್ಯದ ವಿಶೇಷತೆಯನ್ನು ವ್ಯಕ್ತಪಡಿಸಿರುವುದನ್ನು ಗಮನಿಸಿದಾಗ ವಚನಗಳ ಮಹತ್ವ ಅರಿವಾಗುತ್ತದೆ.

ಬಸವಾದಿ ಶರಣರು ತಮ್ಮ ಕಾಲದಲ್ಲಿ ಈ ವಚನ ಸಾಹಿತ್ಯದ ರಚನೆ – ಪ್ರಸಾರದ ಮೂಲಕ ನಾಡಿನ ಜನಮಾನಸವನ್ನು ಪರಿವರ್ತನೆ ಮಾಡಿದರು. ೧೨ನೇ ಶತಮಾನದ ಪೂರ್ವದಲ್ಲಿ ಭಾರತೀಯ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿದ್ದ ವರ್ಣಾಶ್ರಮ ಧರ್ಮದ ಜಾತಿವ್ಯವಸ್ಥೆ, ಸ್ಪೃಶ್ಯ – ಅಸ್ಪೃಶ್ಯ ಉಚ್ಚ – ನೀಚ, ಮೇಲು – ಕೀಳು ಮುಂತಾದ ಅಸಮಾನತೆಯನ್ನು ತೊಡೆಯಲೋಸುಗ ಮಹಾಕಾಂತ್ರಿಯನ್ನೇ ಮಾಡಬೇಕಾಯಿತು. ಇದು ಕಲ್ಯಾಣಕ್ರಾಂತಿ, ವಚನಕ್ರಾಂತಿ ಎಂದು ಪ್ರಸಿದ್ಧಿಯನ್ನು ಪಡೆಯಿತು.

೧೨ ನೆಯ ಶತಮಾನದಲ್ಲಿ ಕ್ರಿ.ಶ.೧೧೦೫ ರಲ್ಲಿ ಇಂಗಳೇಶ್ವರ–ಬಾಗೇವಾಡಿ (ಇಂದಿನ ಬಸವನಬಾಗೇವಾಡಿ)ಯಲ್ಲಿ ಮಾದರಸ–ಮಾದಲಾಂಬಿಕೆಯರ ಉದರದಲ್ಲಿ ಜನಿಸಿದ ಬಸವಣ್ಣನವರು ಸಂಪ್ರದಾಯ ಸಮಾಜದ ಕರ್ಮಠರ ಅಸಹನೆಗೆ ಒಳಗಾಗಿ 'ಕರ್ಮಲತೆಯಂತಿರ್ದ ಜನ್ನಿವಾರವಂ ಕಿತ್ತು ಬಿಸುಟು' ಅಕ್ಕನಾಗಮ್ಮ ಹಾಗೂ ಭಾವ ಶಿವದೇವರ ಊರಾದ ಕಪ್ಪಡಿ ಸಂಗಮಕೆ ಬಂದು ವಿದ್ಯಾರ್ಜನೆ ಗೈದು ಪ್ರಬುದ್ಧ ಚಿಂತಕರಾಗಿ ಹೊರಹೊಮ್ಮಿದರು. ಸಾವಿರಾರು ವರುಷಗಳಿಂದ ಜಿಡ್ಡುಗಟ್ಟಿದ್ದ ಮೂಢನಂಬಿಕೆ–ಕಂದಾಚಾರ,ಜಾತೀಯತೆ,ಕರ್ಮಠ ಧರ್ಮ–ಸಂಪ್ರದಾಯಗಳನ್ನು ತಮ್ಮ ಸ್ವತಂತ್ರ ವಿಚಾರವಾದದಿಂದ ಖಂಡಿಸಿ, ತಿರಸ್ಕರಿಸಿದರು.

ಸರ್ ಆರ್ಥರ್ ಮೈಲ್ಸ್ ಎಂಬ ಆಂಗ್ಲ ವಿದ್ವಾಂಸನು ತನ್ನ 'The Land of Lingam'ಎಂಬ ಗ್ರಂಥದಲ್ಲಿ – "Whatever the legend may say about Basava, the fact is pretty clear that He was the First Indian Free Thinker"[೧೧] ಎಂದು ಕರೆದಿರುವುದು ತಿಳಿದುಬರುತ್ತದೆ.

ಕಪ್ಪಡಿ ಸಂಗಮ (ಇಂದಿನ ಕೂಡಲಸಂಗಮ) ದಿಂದ ಮಂಗಳವೇಡೆ, ಅಲ್ಲಿಂದ ಕಲ್ಯಾಣ (ಇಂದಿನ ಬಸವಕಲ್ಯಾಣ) ಕ್ಕೆ ಆಗಮಿಸಿ ತಮ್ಮ ಧ್ಯೇಯಾದರ್ಶಗಳಿಗಾಗಿ ಕಲಚೂರ್ಯ ಬಿಜ್ಜಳನ ಪ್ರಧಾನಿಯಾಗಿ ಅನುಭವ ಮಂಟಪ ಎಂಬ ಸಂಸ್ಥೆ ರೂಪಿಸಿ ಸಮಗ್ರ ಕ್ರಾಂತಿಯ ರೂವಾರಿಯಾದರು.

ಪ್ರಣವದ ಬೀಜವ ಬಿತ್ತಿ, ಪಂಚಾಕ್ಷರಿಯ ಬೆಳೆಯ ಬೆಳೆದು,
ಪರಮ ಪ್ರಸಾದವನೊಂದು ರೂಪ ಮಾಡಿ ಮೆರೆದು,

೧೦. ವಚನಸಾಹಿತ್ಯ : ವೈಚಾರಿಕ ಅಧ್ಯಯನ – ಡಾ. ಎಚ್. ತಿಪ್ಪೇರುದ್ರಸ್ವಾಮಿ ಪು – ೩.
೧೧. Shri Basaveshwar Commemoration Volume, (1976) P-146.

ಭಕ್ತಿ ಫಲವನುಂಡಾತ ನಮ್ಮ ಬಸವಯ್ಯನು,
ಚನ್ನಬಸವನೆಂಬ ಪ್ರಸಾದಿಯ ಪಡೆದು,
ಅನುಭವಮಂಟಪವನನು ಮಾಡಿ
ಅನುಭವ ಮೂರ್ತಿಯಾದ ನಮ್ಮ ಬಸವಯ್ಯನು
ಅರಿವ ಸಂಪಾದಿಸಿ ಆಚಾರವನಂಗಗೊಳಿಸಿ
ಏಳುನೂರೆಪ್ಪತ್ತು ಅಮರಗಳಣಂಗಳ
ಅನುಭವ ಮೂರ್ತಿಗಳ ಮಾಡಿದಾತ ನಮ್ಮ ಬಸವಯ್ಯನು...[೧೨]

ಅನುಭವ ಮಂಟಪ ವೆಂಬ ಒಂದು ಐತಿಹಾಸಿಕವಾದ ಸಮಾಜೋ-ಧಾರ್ಮಿಕ ಸಂಸ್ಥೆಯನ್ನು ಹುಟ್ಟು ಹಾಕಿದರು ಬಸವಣ್ಣನವರು. " There is no doubt at the historicity of 'Anubhava Mantapa' being founded by Basava"[೧೩] ಎಂದು ಹೇಳುತ್ತಾ ಅದು ' Heart of Lingayat Religion' ಎಂದು ಕರೆದಿರುವರು.

ಬಸವಣ್ಣನವರಿಂದ ಸ್ಥಾಪಿತವಾದ ಅನುಭವ ಮಂಟಪಕ್ಕೆ ಭಾರತದಾದ್ಯಂತದಿಂದ ಅಂದರೆ ಕಾಶ್ಮೀರದಿಂದ ಕನ್ಯಾಕುಮಾರಿವರೆಗಿನ ಶರಣ - ಶರಣೆಯರು ಆಗಮಿಸಿ ಅನುಭವಮಂಟಪದ ಅನುಭಾವಗೋಷ್ಠಿಯಲ್ಲಿ ಪಾಲ್ಗೊಂಡು 'ವಚನ'ಗಳನ್ನು ರಚಿಸಿದರು.

ಪಾತಾಳದಗ್ಗವಣಿಯ ನೇಣಿಲ್ಲದೆ.
ಸೋಪಾನದ ಬಲದಿಂದಲ್ಲದೆ ತೆಗೆಯಬಹುದೇ ?
ಶಬ್ಧ ಸೋಪಾನವ ಕಟ್ಟಿ ನಡೆಸಿದವರು ಪುರಾತನರು.
ದೇವಲೋಕಕ್ಕೆ ಬಟ್ಟೆ ಕಾಣಿರೋ.
ಮರ್ತ್ಯಲೋಕದವರ ಮನದ ಮೈಲಿಗೆಯ ಕಳೆಯಲೆಂದು
ಗೀತ ಮಾತೆಂಬ ಜ್ಯೋತಿಯ ಬೆಳಗಿಸಿಕೊಟ್ಟರು
ಕೂಡಲಚೆನ್ನಸಂಗನ ಶರಣರು.[೧೪]

ಮರ್ತ್ಯಲೋಕದ ಮನುಜರ ಮನದ ಮಾಲಿನ್ಯ ಅಂದರೆ ಅಸ್ಪೃಶ್ಯತೆ, ಜಾತೀಯತೆ, ಮೌಢ್ಯ, ಅಜ್ಞಾನ, ಅನಾಚಾರ, ಶೋಷಣೆ ತೊಡೆದು ಹಾಕಿ ಸಮತೆ - ಸ್ವಾತಂತ್ರ್ಯ - ಬಂಧುತ್ವ - ಮಾನವೀಯತೆಯ ಧರ್ಮ-ಸಮಾಜ-ಸಂಸ್ಕೃತಿಯನ್ನು ರೂಪಿಸಲೋಸುಗ ಹಗಲಿರುಳು ಬಸವಾದಿ ಶರಣರು ಶ್ರಮಿಸಿದರು.

ಕಲ್ಯಾಣವೆಂಬ ಪ್ರಣತಿಯಲ್ಲಿ, ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ಶಿವನ ಪ್ರಕಾಶ ತೊಳಗಿ ಬೆಳಗಿತು.

---

೧೨. ಶಿವಶರಣೆಯರ ವಚನ ಸಂಪುಟ - ಸಂ.ಡಾ॥ ವೀರಣ್ಣರಾಜೂರ. ಪು.೨೬೮ ನೀಲಮ್ಮನ ವಚನ-೪೪

೧೩. Anubhava Mantapa - Rev. C.D. Uttangi. p-1.

೧೪. ವಚನಸಾಹಿತ್ಯ ಸಂಗ್ರಹ - ಸಂ. ಸಂ.ಶಿ.ಭೂಸನೂರಮಠ ಪುಟ - ೭, ವ -೧೯

ಈ ಬೆಳಗಿನಲ್ಲಿ ಅಸಂಖ್ಯಾತ ಶರಣಗಣಂಗಳು ಕಾರ್ಯ ನಿರ್ವಹಿಸಿದರು. ಅವರಲ್ಲಿ ಅಲ್ಲಮಪ್ರಭುದೇವ, ಮಾದಾರಚೆನ್ನಯ್ಯ, ಡೋಹರಕಕ್ಕಯ್ಯ, ನುಲಿಯಚಂದಯ್ಯ, ಹಡಪದ ಅಪ್ಪಣ್ಣ, ಕಿನ್ನರಿಬ್ರಹ್ಮಯ್ಯ, ಜೇಡರ ದಾಸಿಮಯ್ಯ, ಶಂಕರದಾಸಿಮಯ್ಯ, ಬಾಚಿಕಾಯಕದ ಬಸವಪ್ಪ, ಸಮಗಾರ ಹರಳಯ್ಯ ಹೊಲೆಯರ ಶಿವನಾಗಮಯ್ಯ ಮುಂತಾದ ಶರಣರು; ಅಕ್ಕನಾಗಮ್ಮ, ನೀಲಮ್ಮ, ಗಂಗಮ್ಮ, ಲಿಂಗಮ್ಮ, ಮುಕ್ತಾಯಕ್ಕ, ಲಕ್ಕಮ್ಮ , ಸಂಕವ್ವೆ , ಸತ್ಯಕ್ಕ, ಕಲ್ಯಾಣಮ್ಮ, ದುಗ್ಗಳೆ, ಅಕ್ಕಮಹಾದೇವಿ, ರಾಯಮ್ಮ, ಕಾಳವ್ವೆ, ವೀರಮ್ಮ, ಬೊಂತಾದೇವಿ, ಮಹಾದೇವಮ್ಮ, ಗುಡ್ಡವ್ವೆ, ಗೊಗ್ಗವ್ವೆ, ಅಕ್ಕಮ್ಮ , ಮಸಣಮ್ಮ ಮುಂತಾದ ಶರಣೆಯರೂ ಪ್ರಮುಖರಾಗಿದ್ದಾರೆ.

ಇಂತಹ ೭೭೦ ಅಮರ ಗಣಂಗಳೆನಿಸಿದ ಶರಣ – ಶರಣೆಯರು ವಚನಗಳ ರಚನೆ ಮಾಡಿದುದರಿಂದ ಅವರನ್ನು ಸಾಹಿತ್ಯದ ಪರಿಭಾಷೆಯಲ್ಲಿ ವಚನಕಾರರು – ವಚನಕಾರ್ತಿಯರು ಎಂದು ಕರೆಯಲಾಗಿದೆ.

ವಿಪ್ರಮೊದಲು ಅಂತ್ಯಜ ಕಡೆಯಾಗಿ ಅಂದಿನಯುಗದ ಎಲ್ಲ ಜಾತಿ–ಮತ ಪಂಥ–ಪಂಗಡವೆನ್ನದೇ ಸರ್ವರೂ ಬಸವಣ್ಣನವರ ಧರ್ಮ – ಸಮಾಜದ ಅವಿಭಾಜ್ಯ ಅಂಗವಾಗಿ ಕ್ರಾಂತಿ ಮಾಡಿದರು, " ಬಹುಸಂಖ್ಯಾತ ಶೂದ್ರರು, ದಲಿತರು ಸಂಸ್ಕೃತ ಭಾಷೆ ಕಲಿಯಲು ಆಸ್ಪದವಿಲ್ಲದ ಕಾಲದಲ್ಲಿ ಬಸವಣ್ಣನವರು ಜನಮಾನಸದ ಆಡು ನುಡಿಯಾದ 'ಕನ್ನಡ ಭಾಷೆ'ಯಲ್ಲಿಯೇ ತಮ್ಮ ಧರ್ಮದ ವಿಚಾರಗಳನ್ನು 'ವಚನ' ರೂಪದಲ್ಲಿ ಬರೆದರು, ಅನುಭವ ಮಂಟಪದ ಮೂಲಕ ಕ್ರಾಂತಿಗೈದರು"[೧೫]

ಹನ್ನೆರಡನೆಯ ಶತಮಾನದ ಬಸವಾದಿ ಶರಣರ ಕ್ರಾಂತಿಯನ್ನು ಹತ್ತಿಕ್ಕಲು ಕರ್ಮಠ ಧರ್ಮಾಂಧರು, ಪಟ್ಟಭದ್ರ ಪುರೋಹಿತ ಶಾಹಿಗಳು, ರಾಜಕೀಯ ಅವಕಾಶವಾದಿಗಳು ಒಂದಾಗಿ ಪಿತೂರಿ ನಡೆಸಿ, ರಾಜ ಬಿಜ್ಜಳನ ಹತ್ಯೆ ನಡೆಸಿ, ಅದರ ಅಪವಾದ ಶರಣರ ಮೇಲೆ ಬರುವಂತೆ ಮಾಡಿ, ಇತ್ತ ಬಸವಣ್ಣನವರು ಪ್ರಧಾನಿ ಹುದ್ದೆ ತ್ಯಜಿಸಿ ಸಂಗಮಕ್ಕೆ ಹೊರಡುವಂತೆ ಗಡಿಪಾರು ಆಜ್ಞೆ ಹೊರಡಿಸಿ, ಅತ್ತ ಶರಣರ ಕಗ್ಗೊಲೆ ಹಾಗೂ ಹರಳಯ್ಯ – ಮಧುವರಸರಿಗೆ ಎಳೆಹೊಟೆ ಶಿಕ್ಷೆಯಾಗುವಂತೆ ನೋಡಿಕೊಂಡರು. ಬಸವಾದಿ ಶರಣರು ರಚಿಸಿದ್ದ ಸಹಸ್ರಾರು–ಕೋಟ್ಯಾಂತರ ವಚನ ತಾಡೋಲೆಯ ಕಟ್ಟುಗಳ ಮಾರಣಹೋಮಗೈದು ಸರ್ವನಾಶಗೊಳಿಸಲು ಯತ್ನಿಸಿದರು. ಶರಣರ ಹೋರಾಟದ ಫಲವಾಗಿ ಹಾಗೂ ಜನಸಾಮಾನ್ಯರ ಕಳಕಳಿಯಿಂದ ಅಲ್ಪ–ಸ್ವಲ್ಪ ವಚನದ ಕಟ್ಟುಗಳು ಬಚ್ಚಿಡಲ್ಪಟ್ಟವು.

ಕಲ್ಯಾಣ ಕ್ರಾಂತ್ರಿಯ ತರುವಾಯ "ಈ ಬಸವಾದಿ ಶರಣರ ಪರಂಪರೆಯ ಬಳಿವಿಡಿದು ಶ್ರೀ ಕಾಡಸಿದ್ದೇಶ್ವರರು, ಶ್ರೀ ತೋಂಟದ ಸಿದ್ದಲಿಂಗೇಶ್ವರರು, ಶ್ರೀ ಸ್ವತಂತ್ರ ಸಿದ್ದಲಿಂಗೇಶ್ವರರು, ಶ್ರೀ ಷಣ್ಮುಖ ಶಿವಯೋಗಿಗಳು ಮುಂತಾದವರು ವಚನಗಳನ್ನು ಬರೆದು, ಈ ವಚನ ಪರಂಪರೆಯನ್ನು ಮುಂದುವರೆಸಿದರು.

---

೧೫. ಬಸವಣ್ಣನವರು – ಪ್ರೊ. ಸಿದ್ದಣ್ಣ ಲಂಗೋಟಿ ಪುಟ – ೨೭.

ಇಪ್ಪತ್ತನೆಯ ಶತಮಾನದ ಆಧುನಿಕ ಯುಗದಲ್ಲಿ ವಚನರಚನೆಯ ಮೊದಲಿಗರು ನಿರಂಜನ ಶರಣ "ಶ್ರೀ ಹರ್ಡೇಕರ ಮಂಜಪ್ಪನವರು ಜೀರಿಗೆ ಕಟ್ಟೆ ಬಸವಪ್ಪನವರು, ಡಾ॥ ಜ.ಚ.ನಿ, ಡಾ॥ಸಿದ್ಧಯ್ಯ ಪುರಾಣಿಕ, ಡಾ॥ ಮಹಾದೇವ ಬಣಕಾರ, ಶ್ರೀ ಮೂಜಗಂ, ಶ್ರೀ ಸಂಗಮೇಶ ಹೊಸಮನಿ, ಶ್ರೀ ಬ.ಗಿ.ಯಲ್ಲಟ್ಟಿ, ಶ್ರೀ ಅನ್ನದಾನಯ್ಯ ಪುರಾಣಿಕ, ಶ್ರೀ ವಿ.ಸಿದ್ಧರಾಮಣ್ಣ, ಶ್ರೀ ಮಾತೆ ಮಹಾದೇವಿ, ಡಾ॥ ತಿಪ್ಪೇರುದ್ರಸ್ವಾಮಿಗಳು, ಶ್ರೀ ಪಂಡಿತಾರಾಧ್ಯ ಶಿವಚಾರ್ಯ ಮಹಾಸ್ವಾಮಿಗಳು, ಶ್ರೀ ಬೆಲ್ದಾಳ ಶರಣರು, ಅಂಬಿಗರ ಕುಮಾರ ಚೌಡಯ್ಯ, ಶ್ರೀ ಸಂಗಮೇಶ ಹಂಡಿಗಿ, ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು, ಪ್ರೋ. ಸಿದ್ದಣ್ಣ ಲಂಗೋಟಿ, ಶ್ರೀ ಶೇಖರಪ್ಪ ಹೂಲಗೆರೆ, ಶ್ರೀ ಶಿವಾನಂದ ಸ್ವಾಮಿಗಳು, ಶ್ರೀ ಮನೋಹರ ಮೈದರಗಿ, ಶ್ರೀ ಚೆನ್ನಬಸವ ಸ್ವಾಮಿಗಳು ಮುಂತಾದವರ ಕೊಡುಗೆಯು ಅಪಾರವಾಗಿದೆ"[೧೬]

ಬಸವಾದಿ ಶರಣರ ಅರಿವು -ಆಚಾರ- ಅನುಭಾವ ಅಂಗವಿಸಿಕೊಂಡು ಆಧುನಿಕ ವಚನಕಾರರಾಗಿ ಹೊರಹೊಮ್ಮಿದವರು ಹಲವರಾದರೆ, ಇನ್ನು ಕೆಲವರು 'ವಚನ' ರಚನಾ ಮಾದರಿಯನ್ನು ಅನುಸರಿಸಿ ವಚನ ರಚನೆ ಮಾಡಿದ "ಡಾ.ಎಸ್.ವ್ಹಿ. ರಂಗಣ್ಣ, ಎಸ್.ವ್ಹಿ. ಪರಮೇಶ್ವರ ಭಟ್ಟ, ರಂಗನಾಥ ದಿವಾಕರ, ಚಂದ್ರಶೇಖರ ಐತಾಳ, ಬೆಟಗೇರಿ ಕೃಷ್ಣಶರ್ಮ, ಮುಂತಾದವರು" ಇದ್ದಾರೆ.[೧೭]

ಇಪ್ಪತ್ತನೆಯ ಶತಮಾನದ ಆಧುನಿಕ ಹಿರಿಯ ವಚನಕಾರರಲ್ಲಿ ಮೇರು ಸದೃಶ ವ್ಯಕ್ತಿತ್ವದ ಕ್ರಾಂತಿಕಾರಿ ದಲಿತ ವಚನಕಾರ ಶ್ರೀ 'ಕುಮಾರ ಕಕ್ಕಯ್ಯ' ಎಂಬ ಕಾವ್ಯನಾಮದಿಂದಲೇ ನಾಡಿಗೆ ಚಿರಪರಿಚಿತರಾದವರು ಶ್ರೀ ಭೀಮರಾವ ಸಾಯಬಣ್ಣ ಪೋಳ ಅವರು. "ಕುಮಾರ ಕಕ್ಕಯ್ಯಾ ಪೋಳ ಅವರದು ಈ ಶತಮಾನದ ಲಿಂಗವಂತ ಸಂಸ್ಕೃತಿಯಲ್ಲಿ ವಿಶಿಷ್ಟ ಹೆಸರು. ಶರಣ ಡೋಹರ ಕಕ್ಕಯ್ಯನವರ ಪರಂಪರೆಯ ಇವರು ಬಸವಣ್ಣನೆನ್ನ ಸ್ಥೂಲ, ಬಸವಣ್ಣನೆನ್ನ ಸೂಕ್ಷ್ಮ, ಬಸವಣ್ಣನೆನ್ನ ಕಾರಣವೆಂದು ಬದುಕಿದವರು. ತಮ್ಮ ಕುಟುಂಬ ವರ್ಗದಲ್ಲಿಯೂ ಬಸವ ವಾತಾವರಣವನ್ನು ತುಂಬಿದವರು.

ದಲಿತರ ಉದ್ಧಾರಕ್ಕೆ ಬಸವಸಿದ್ಧಾಂತ ಏಕಮೇವ ಸಾಧನವೆಂದು ನಂಬಿ, ಆ ದಿಸೆಯಲ್ಲಿ ಶ್ರೀ ಪೋಳ ಅವರು ನುಡಿದ ಮಾತು, ನಡೆದ ರೀತಿ ದಾಖಲಾರ್ಹವೆನಿಸಿವೆ. ಇದಕ್ಕೆ ಕಳಸವಿಟ್ಟಂತೆ ಇವರು ಮಾಡಿದ ಲೇಖನ ವ್ಯವಸಾಯವು ಸಂಪ್ರದಾಯವಾದಿಗಳಿಗೆ ಸಿಂಹಸ್ವಪ್ನವೆನಿಸಿದೆ. "ಇವನಮ್ಮವ, ಇವನಮ್ಮವ, ಇವ ನಮ್ಮವ' ಎಂದು ನಾವೆಲ್ಲ ಹೆಮ್ಮೆ ಪಡುವಂತೆ ಶರಣ ಸಂಸ್ಕೃತಿಯ ಪ್ರಸಾರಕ್ಕಾಗಿ ದುಡಿದ ಶ್ರೀ ಪೋಳ ಅವರು ನಮಗೆ ಶಾಶ್ವತ ಆದರ್ಶವೆನಸಿದ್ದಾರೆ."[೧೮]

---

೧೬. ಅಂಬಿಗ ಕುಮಾರ ಚೌಡಯ್ಯನ ವಚನ ವೈಢೂರ್ಯ-ಮಲ್ಲಿಕಾರ್ಜುನ ಹಾದಿಮನಿ ಮುನ್ನುಡಿ ಪುಟ xi

೧೭. ಪೂರ್ಣಜ್ಞ ವಚನಗಳು ಒಂದು ಅಧ್ಯಯನ – ಡಾ. ರಾಜೇಂದ್ರ ಯರನಾಳೆ ಪುಟ –೫.

೧೮. ಕುಮಾರ ಕಕ್ಕಯ್ಯ ಪೋಳ –ಸಿದ್ದಣ್ಣ ಲಂಗೋಟಿ ಮೊದಲಮಾತು ಪು– iv-v

'ಕುಮಾರ ಕಕ್ಕಯ್ಯ' ನವರು ಕ್ರಾಂತಿಕಾರಿ ಲೇಖಕರು, ನಾಟಕಕಾರ, ಕಥೆಗಾರ,ಕಾದಂಬರಿಕಾರ, ಪ್ರಬಂಧಕಾರ, ಕವಿ, ಸಂಶೋಧಕ, ವೈಚಾರಿಕ ಲೇಖಕರಾಗಿಯೂ ತಮ್ಮ ಪ್ರತಿಭೆಯನ್ನು ತೋರಿದ್ದಾರೆ. ಆದಾಗ್ಯೂ ಅವರ ತೀಕ್ಷ್ಣ ವಿಚಾರಗಳು ಹೊರಹೊಮ್ಮಿದ್ದು ಶ್ರೀಯುತರ ಸಹಸ್ರಾರು ವಚನಗಳಲ್ಲಿ ಎಂಬುದನ್ನು ಮನಗಾಣುತ್ತೇವೆ.

ಬಸವಾದಿ ಶರಣ ಕ್ರಾಂತಿಕಾರಿ ವಚನಗಳನ್ನು ಅರಿತು ಅಧ್ಯಯನ ಮಾಡಿ, ಅನುಭಾವವನ್ನು ಅಂಗವಿಸಿಕೊಂಡ ಕುಮಾರ ಕಕ್ಕಯ್ಯನವರು 'ವಚನ' ರಚನೆಗೆ ತೊಡಗಿಸಿಕೊಂಡರು. ತಮ್ಮ ವಚನಗಳನ್ನು 'ಸಿಡಿದ ಕಿಡಿನುಡಿಗಳು' ಎಂದು ಕರೆದುಕೊಂಡಿದ್ದು, ತಾವೇಕೆ ವಚನ ರಚನೆಗೆ ತೊಡಗಿಸಿಕೊಳ್ಳಬೇಕಾಯಿತು? ಎಂಬುದನ್ನು ತಮ್ಮದೊಂದು ವಚನದಲ್ಲಿ ಹೇಳಿಕೊಂಡಿದ್ದಾರೆ –

> ಶೋಷಣೆಯನ್ನು ಸೈರಿಸಲಿಕ್ಕಾಗದ ಕಾರಣ
> ಬಂಡವಾಳಶಾಹಿಯನ್ನು ಕಟುವಾಗಿ ಖಂಡಿಸಿದೆ.
> ಮೂಢನಂಬಿಕೆಗಳನ್ನು ನೋಡಲಿಕ್ಕಾಗದ ಕಾರಣ
> ಪುರೋಹಿತಶಾಹಿಯನ್ನು ಬಲವಾಗಿ ಧಿಕ್ಕರಿಸಿದೆ.
> ಕ್ರಾಂತಿಯ ಕುಂಡ ಹೊತ್ತುರಿಯದ ಕಾರಣ
> ಸಿಡಿದ ಕಿಡಿನುಡಿಗಳನ್ನು ಬರೆದೆನೆಂದ
> ಕುಮಾರ ಕಕ್ಕಯ್ಯ [೧೯]

"ಬಸವಭೂಮಿಯ ಕ್ರಾಂತಿಕಾರಿ ಮಣ್ಣಿನಲ್ಲಿ ಹಿಂದುಳಿದ ದಲಿತ ಡೋಹರ ಜಾತಿಯಲ್ಲಿ ಜನಿಸಿ, ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡು, ಕುಲಜರ ಕರ್ಮಠ ವರ್ತನೆಗಳ ಸಂಪ್ರದಾಯ ಕಟ್ಟಳೆಗಳಲ್ಲಿ ಶೂದ್ರನಾಗಿ ನರಳಿ, ಬಾಳಿನುದ್ದಕ್ಕೂ ದೈಹಿಕ – ಮಾನಸಿಕ – ಬೌದ್ಧಿಕ ನೋವನ್ನು ಉಣ್ಣುತ್ತಲೇ ಕಷ್ಟಕೋಟಲೆಗಳಲ್ಲಿ ಕರಿಗೊಂಡು, ಅನುಭಾವಿಯಾಗಿ ಜೀವನಾನುಭವದ ಕಿಡಿಗಳನ್ನೇ ನುಡಿಯಾಗಿಸಿ ಬರೆದ ಕುಮಾರ ಕಕ್ಕಯ್ಯ ನವರ ವಚನ ಸಾಹಿತ್ಯದಲ್ಲಿ ಜೀವಂತಿಕೆ ಇದೆ. ವಾಸ್ತವಿಕ ಬದುಕಿನ ಕಟು ಸತ್ಯದ ದರ್ಶನವಿದೆ, ಸವರ್ಣೀಯರ ದಬ್ಬಾಳಿಕೆಯನ್ನು ಶೋಷಣೆಯನ್ನು ಅನುಭವಿಸಿದ ದಲಿತನ ನೋವಿದೆ, ಛಲವಿದೆ, ಎದೆಗಾರಿಕೆ ಇದೆ. ಕೆಚ್ಚಿದೆ, ರೊಚ್ಚಿದೆ, ಪ್ರತಿಭಟನೆ ಇದೆ. ರಾಗ –ದ್ವೇಷ – ಪ್ರತೀಕಾರ –ಹಿಂಸೆ ಇಲ್ಲ, ಕ್ರಾಂತಿಕಾರಕ ನುಡಿಗಡಣವಿದೆ. ಬುದ್ಧ, ಬಸವ, ಅಂಬೇಡ್ಕರ ವಿಚಾರಧಾರೆಗಳ ಸಂಗಮವಿದೆ. ಕಲ್ಯಾಣ ಶರಣರ ಕ್ರಾಂತಿಯ ಸತ್ವವಿದೆ. "ಇವರ ಸಾಹಿತ್ಯವು ಹಿಂದುಳಿದ ಶೂದ್ರ–ದಲಿತ – ಪಂಚಮ. ಜನಾಂಗಕ್ಕೆ ರಚನಾತ್ಮಕ ಜಾಗೃತಿ, ಕ್ರಿಯಾಶೀಲ ಸಂಘಟನೆ, ತಮ್ಮ ಹಕ್ಕುಗಳಿಗಾಗಿ ಹೋರಾಡುವ ಕೆಚ್ಚು –ಸ್ವಾಭಿಮಾನ ಮೂಡಿಸುವಂತಹದ್ದಾಗಿದೆ."[೨೦]

---

೧೯. ಕುಮಾರ ಕಕ್ಕಯ್ಯನ ವಚನಗಳು –ಸಮಗ್ರ ಸಂಪುಟ ಪು–೩೩೩ ವ–೧೨೮೮.
೨೦. ಕುಮಾರ ಕಕ್ಕಯ್ಯ ಪೋಳ –ಪ್ರೋ. ಸಿದ್ದಣ್ಣ ಲಂಗೋಟಿ ಪು–೨೮–೨೯.

ಕುಮಾರ ಕಕ್ಕಯ್ಯನವರು ೧೯೭೪ ರಲ್ಲಿ 'ಕುಮಾರ ಕಕ್ಕಯ್ಯನ ವಚನಗಳು' ಎಂಬ ವಚನಸಂಕಲನ ಪ್ರಕಟಿಸಿದರು. ಅದರಲ್ಲಿ ೪೧೯ ವಚನಗಳು ಇರುತ್ತವೆ. ೧೯೮೬ ರಲ್ಲಿ 'ಶರಣರ ಸಮಗ್ರ ಕ್ರಾಂತಿ' ಎಂಬ ವಚನ ಸಂಕಲನ ಪ್ರಕಟವಾಯಿತು. ಅದರಲ್ಲಿ ೨೮೧ ವಚನಗಳಿವೆ. ೧೯೯೩ ರಲ್ಲಿ 'ಪ್ರಗತಿಪರ ವಿಚಾರವಾದಿ ಕುಮಾರ ಕಕ್ಕಯ್ಯನ ವಚನಗಳು' ಎಂಬ ವಚನಸಂಕಲನ ಪ್ರಕಟವಾಯಿತು. ಅದರಲ್ಲಿ ೧೨೩೫ ವಚನಗಳಿವೆ. ಕುಮಾರ ಕಕ್ಕಯ್ಯನವರು ೧೯೯೬ ರಲ್ಲಿ ಲಿಂಗೈಕ್ಯರಾದ ನಂತರ ಇತ್ತೀಚೆಗೆ ೨೦೦೫ ರಲ್ಲಿ ಅವರ ಪುತ್ರರು ಪ್ರಕಟಿತ ಹಾಗೂ ಅಪ್ರಕಟಿತ ವಚನಗಳನ್ನು ಕ್ರೋಢೀಕರಿಸಿ 'ಕುಮರ ಕಕ್ಕಯ್ಯನ ವಚನಗಳು-ಸಮಗ್ರ ವಚನ ಸಂಪುಟ' ಹೊರ ತಂದಿದ್ದಾರೆ. ಇದರಲ್ಲಿ ೧೪೭೩ ವಚನಗಳಿರುತ್ತವೆ. ನಮ್ಮ ಅಧ್ಯಯನಕ್ಕೆ ಇದೇ ಸಮಗ್ರ ವಚನ ಸಂಪುಟವನ್ನು ಬಳಸಿಕೊಳ್ಳಲಾಗಿದೆ.

**ಅಧ್ಯಾಯ-೧ : ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :**

ಈ ಅಧ್ಯಾಯದಲ್ಲಿ ವಚನಸಾಹಿತ್ಯದ ಧ್ಯೇಯಾದರ್ಶಗಳ ಹಿನ್ನೆಲೆಯಲ್ಲಿ ಕುಮಾರ ಕಕ್ಕಯ್ಯನ ವಚನಗಳ ಅಧ್ಯಯನದ ಉದ್ದೇಶ ಮತ್ತು ಮಹತ್ವವನ್ನು ವಿವರಿಸಲಾಗಿದೆ. ಕುಮಾರ ಕಕ್ಕಯ್ಯ ೨೦ನೇ ಶತಮಾನದ ಕ್ರಾಂತಿಕಾರಿ ವಚನಕಾರ. ಈ ಯುಗದ ಸಮಾಜೋ- ಧಾರ್ಮಿಕ ಶೋಷಣೆ, ಅಸ್ಪೃಶ್ಯತೆ, ಅನ್ಯಾಯ ಕುರಿತು ಪ್ರತಿಭಟಿಸಿದ ಸಮಾಜ ಸುಧಾರಣಾವಾದಿ ಲೇಖಕರು, ಬಸವಾದಿ ಶರಣರ ಸಮಾಜೋ-ಧಾರ್ಮಿಕ ಸುಧಾರಣೆಯ ಬಳಿವಿಡಿದು ೨೦ನೇ ಶತಮಾನದಲ್ಲಿ ಅದೇ ಕಾರ್ಯವನ್ನು ಮುಂದುವರೆಸಿದ ಪ್ರಗತಿಪರ ವಿಚಾರವಾದಿಯಾಗಿದ್ದಾರೆ. ಅವರ ಸಮಗ್ರ ವಚನಗಳನ್ನು ಈ ಸಂಶೋಧನೆಯ ವ್ಯಾಪ್ತಿಗೆ ಅಳವಡಿಸಲಾಗಿದೆ.

**ಅಧ್ಯಾಯ-೨ ಕುಮಾರ ಕಕ್ಕಯ್ಯನ ಜೀವನ-ಸಾಧನೆ-ಕೃತಿಗಳು - ಸೇವೆ -ಪ್ರಶಸ್ತಿಗಳು:**

ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಚಾಂದಕವಠೆ ಎಂಬ ಇತಿಹಾಸ ಪ್ರಸಿದ್ಧ ಗ್ರಾಮದಲ್ಲಿ ಡೋಹರ ಜನಾಂಗದಲ್ಲಿ ಜನಿಸಿದ ಭೀಮರಾವ ಸಾಯಬಣ್ಣ ಪೋಳ ಅವರು ದಲಿತರ ನೋವು ಉಂಡು ಬೆಳೆದವರು. ಸ್ಪೃಶ್ಯ-ಅಸ್ಪೃಶ್ಯ, ಮೇಲು-ಕೀಳು ಎಂಬ ಭೇದಭಾವ ಗಟ್ಟಿಯಾಗಿದ್ದ ಕಾಲದಲ್ಲಿ ದಲಿತ ಹುಡುಗ ವಿದ್ಯೆ ಕಲಿತದ್ದೇ ಒಂದು ಮಹಾಸಾಧನೆ. ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡು ತಾಯಿ,ಅಜ್ಜ, ಅಜ್ಜಿಯರ ಲಾಲನೆ-ಪಾಲನೆಯಲ್ಲಿ ಬೆಳೆದು, ಚಾಂದಕವಠೆ, ಸಿಂದಗಿ ವಿಜಾಪುರಗಳಲ್ಲಿ ಶಾಲೆ ಕಲಿತು, ಕಂದಾಯ ಇಲಾಖೆಯಲ್ಲಿ ಕಾರಕೂನರಾಗಿ, ಶಿರಸ್ತೇರದಾರ ಆಗಿ, ತಹಸೀಲ್ದಾರ ಆಗಿ ನಿವೃತ್ತರಾದವರು. ತಮ್ಮ ಜೀವನಾನುಭವವನ್ನು ಕಥೆ, ಕಾಂದಬರಿ,ನಾಟಕ, ಪ್ರಬಂಧ, ಸಂಶೋಧನೆ, ವಚನ ರಚನೆ ಕೃತಿಗಳ ಮೂಲಕ ಅಭಿವ್ಯಕ್ತಗೊಳಿಸಿದವರು. ಅನೇಕ ಸಂಘ ಸಂಸ್ಥೆಗಳಲ್ಲಿ ಸಮಾಜೋ - ಧಾರ್ಮಿಕ ಸೇವೆ ಮಾಡಿ, ಸಭೆ-ಸಮ್ಮೇಳನಗಳ ಅಧ್ಯಕ್ಷರಾಗಿ ಗೌರವ ಪಡೆದವರು. ಅವರ ಸಾಧನೆಯನ್ನು ೧೪ ಕೃತಿಗಳ ವಿವರದೊಂದಿಗೆ ಈ ಅಧ್ಯಾಯದಲ್ಲಿ ಮೌಲ್ಯಮಾಪನ ಮಾಡಲಾಗಿದೆ.

**ಅಧ್ಯಾಯ–೩ : ಕುಮಾರ ಕಕ್ಕಯ್ಯನ ವಚನಗಳ ವರ್ಗೀಕರಣ ಹಾಗೂ ಅವುಗಳ ವಿಸ್ತೃತ ಅಧ್ಯಯನ :**

ಕುಮಾರ ಕಕ್ಕಯ್ಯನವರ ವಚನಗಳಲ್ಲಿ – ಅ) ಸಾಮಾಜಿಕ, ಆ)ಧಾರ್ಮಿಕ ಇ)ರಾಜಕೀಯ ಈ)ಶೈಕ್ಷಣಿಕ ಉ) ವೈಚಾರಿಕ ಊ) ಕೌಟುಂಬಿಕ ಎಂದು ವಿಂಗಡಿಸಿ ಅವುಗಳ ಚಿಂತನ–ಮಂಥನ–ಮೌಲ್ಯಮಾಪನ ಮಾಡಲಾಗಿದೆ.

**ಅ) ಸಾಮಾಜಿಕ ವಿಚಾರಗಳು** – ಈ ಭಾಗದಲ್ಲಿ ಭಾರತೀಯ ಸಮಾಜದ ಸ್ವರೂಪ, ಚಾತುರ್ವರ್ಣ ಪದ್ಧತಿ, ಪಟ್ಟಭದ್ರರಿಂದ ಶೋಷಣೆ, ಸಮಾನತೆಗಾಗಿ ದಲಿತರ ಹೋರಾಟ, ಸಂಘರ್ಷ, ಮಹಿಳಾ ಸಮಾನತೆ, ಜಾತ್ಯಾತೀತ–ಜಾತಿರಹಿತ ಸಮಾಜ ನಿರ್ಮಾಣದ ವಿಚಾರಗಳ ಕುರಿತು ವಿವೇಚನೆ ಮಾಡಲಾಗಿದೆ.

**ಆ) ಧಾರ್ಮಿಕ ವಿಚಾರಗಳು** – ಕುಮಾರ ಕಕ್ಕಯ್ಯನ ವಚನಗಳಲ್ಲಿ ವರ್ಣಾಶ್ರಮ ಧರ್ಮ ಹಾಗೂ ಬಸವಾದಿ ಶರಣರ ಧರ್ಮ ಚಿಂತನಗಳು ಧರ್ಮ–ದೇವರು–ಧರ್ಮಗುರುಗಳ–ಶೋಷಣೆ, ದೇವಾಲಯ–ಪೂಜಾರಿ–ಪುರೋಹಿತರ ಶೋಷಣೆ, ಗುರು–ವಿರಕ್ತರ ವಿಡಂಬನೆ, ಮೂಢನಂಬಿಕೆ, ಕಂದಾಚಾರಗಳ ಕರ್ಮಸಿದ್ಧಾಂತ–ಪೂರ್ವಜನ್ಮ ಪುನರ್‌ಜನ್ಮ ಸಿದ್ಧಾಂತದ ವಿಚಾರಗಳು, ಮತಾಂತರ ಮುಂತಾದ ವಿಷಯಗಳ ಕುರಿತು ವಿವೇಚಿಸಲಾಗಿದೆ.

**ಇ) ರಾಜಕೀಯ ವಿಚಾರಗಳು** – ಕುಮಾರ ಕಕ್ಕಯ್ಯನ ವಚನಗಳಲ್ಲಿ ಸ್ವತಂತ್ರ ಭಾರತದ ಪ್ರಜಾಪ್ರಭುತ್ವ, ರಾಜಕೀಯ, ರಾಜಕಾರಣಿಗಳ ಡೊಂಬರಾಟ, ಲಂಚ–ವಂಚನೆ–ಭ್ರಷ್ಟಾಚಾರ, ಅಧಿಕಾರಿದಾಹ–ಧೂರ್ತತನ–ಪ್ರಜೆಗಳ ಶೋಷಣೆ ಕಲ್ಯಾಣರಾಜ್ಯ, ಗ್ರಾಮೀಣಾಭಿವೃದ್ಧಿ, ಆರ್ಥಿಕ ಸಮಾನತೆಯ ವಿಚಾರಗಳ ವಿವೇಚನೆ–ವಿಮರ್ಶೆ ಮಾಡಲಾಗಿದೆ.

**ಈ) ಶೈಕ್ಷಣಿಕ ವಿಚಾರಗಳು** – ಕುಮಾರ ಕಕ್ಕಯ್ಯನ ವಚನಗಳಲ್ಲಿ ಇಂದಿನ ಶಿಕ್ಷಣ, ಅದರ ಸ್ವರೂಪ, ಅದರ ಮಹತ್ವ, ಶಿಕ್ಷಕರು ವಿದ್ಯಾರ್ಥಿಗಳ ಸಂಬಂಧ, ಪಾಲಕರು–ಸಂಘ ಸಂಸ್ಥೆಗಳು, ಜಾತ್ಯಾತಿತ ರಾಷ್ಟ್ರನಿರ್ಮಾಣ, ಶಿಕ್ಷಣರಂಗದಲ್ಲಿ ನೈತಿಕತೆ ಮುಂತಾದ ವಿಚಾರಗಳ ವಿವೇಚನೆ ಮಾಡಲಾಗಿದೆ.

**ಉ) ವೈಚಾರಿಕ ವಿಚಾರಗಳು** – ಈ ವಿಭಾಗದಲ್ಲಿ ಕರ್ಮಠ ಸಂಪ್ರದಾಯಗಳು, ಅಜ್ಞಾನ–ಅಂಧಾನುಕರಣೆ,ಜ್ಞಾನ–ವಿಜ್ಞಾನ–ಸ್ವರೂಪ, ಮಾನವೀಯತೆ, ವಿಶ್ವಬಂಧುತ್ವ ಕುರಿತಾದ ವೈಚಾರಿಕ ವಿಚಾರಗಳ ಬಗ್ಗೆ ಅಧ್ಯಯನ–ಚಿಂತನ–ವಿವೇಚನೆ ಮಾಡಲಾಗಿದೆ.

**ಊ) ಕೌಟುಂಬಿಕ ವಿಚಾರಗಳು** – ಈ ವಿಭಾಗದಲ್ಲಿ ಕುಮಾರ ಕಕ್ಕಯ್ಯನ ವಚನಗಳಲ್ಲಿ ವ್ಯಕ್ತವಾಗಿರುವ ಸತಿ –ಪತಿ ಮಕ್ಕಳು, ಬಂಧು ಬಾಂಧವರು ಮುಂತಾದ ವಿಚಾರಗಳನ್ನು ಇಲ್ಲಿ ವಿವೇಚನೆ ಮಾಡಲಾಗಿದೆ.

**ಅಧ್ಯಾಯ–೪ ಕುಮಾರ ಕಕ್ಕಯ್ಯನ ವಚನಗಳಲ್ಲಿ ಜಾನಪದ ವಿಚಾರಗಳು :** ವಚನ ಸಾಹಿತ್ಯ ಜನಮಾನಸದ ನೋವು–ನಲಿವು, ಅವರ ಜೀವನ ಆದರ್ಶವನ್ನು ಬಿಂಬಿಸುತ್ತದೆ.

ನಾಡು–ನುಡಿ, ಪ್ರಕೃತಿ–ಪರಿಸರ, ಕೃಷಿ–ಕೃಷಿಕರು, ಕಸಬುದಾರರು, ಜನಪದರ ಗಾದೆ ಮಾತುಗಳು, ನೀತಿಯ ನುಡಿಗಳು ಹಾಗೂ ಬಿಡಿ ವಚನಗಳ ಚಿಂತನ–ವಿಚಾರ ವಿವೇಚನೆ ಮಾಡಲಾಗಿದೆ.

**ಅಧ್ಯಾಯ–೫ ಕುಮಾರ ಕಕ್ಕಯ್ಯನ ವಚನಗಳ ಭಾಷೆ–ಶೈಲಿ– ಛಂದಸ್ಸು.** : ಕುರಿತು, ಆಡುನುಡಿ, ದ್ವಿರುಕ್ತಿ, ನುಡಿಗಟ್ಟು, ಜೋಡು ನುಡಿಗಳು, ವ್ಯಾಕರಣಕ್ಕೆ ಸಂಬಂಧಿಸಿದ ವಿಚಾರಗಳ ಕುರಿತು ಇಲ್ಲಿ ಚಿಂತನೆ ನಡೆಸಲಾಗಿದೆ.

**ಅಧ್ಯಾಯ–೬ ಕುಮಾರ ಕಕ್ಕಯ್ಯನ ವಚನಗಳ ಮೇಲೆ ಬಸವಾದಿ ಶರಣರ ಪ್ರಭಾವ** : ಇಲ್ಲಿ ಹನ್ನೆರಡನೆಯ ಶತಮಾನದ ಬಸವಾದಿ ಶರಣರ ಕ್ರಾಂತಿಕಾರಕ ವಚನಗಳ ವಿಚಾರ ಪ್ರಭಾವ, ಆಧುನಿಕ ಪ್ರಮುಖ ವಚನಕಾರರಲ್ಲಿ ಕುಮಾರ ಕಕ್ಕಯ್ಯನ ಸ್ಥಾನ–ಮಾನ,ಕುಮಾರ ಕಕ್ಕಯ್ಯನ ವಚನಗಳ ಕುರಿತು ಸಮಕಾಲೀನ ವಚನಕಾರರ ಹಾಗೂ ವಿದ್ವಾಂಸರ ಅಭಿಪ್ರಾಯ ಸಂಗ್ರಹಿಸಿ ವಿವೇಚನೆ ಮಾಡಲಾಗಿದೆ.

**ಅಧ್ಯಾಯ–೭ ಉಪಸಂಹಾರ (ಸಮಾರೋಪ)** : ಸಕಲಜೀವಾತ್ಮರ ಲೇಸನೇ ಬಯಸಿದ ೧೨ನೇ ಶತಮಾನದ ಬಸವಾದಿ ಶರಣರ ಧ್ಯೇಯಾದರ್ಶಗಳನ್ನು ಅರಿತು, ಅರಗಿಸಿಕೊಂಡು, ಸಮಾಜೋ–ಧಾರ್ಮಿಕ ಸುಧಾರಣೆಗೆ ಸ್ಪಂಧಿಸಿದ ೨೦ನೇ ಶತಮಾನದ ದಲಿತವಚನಕಾರ ಕುಮಾರ ಕಕ್ಕಯ್ಯ ಪೋಳ ಅವರ ಸಮಗ್ರವಚನಗಳ – ಚಿಂತನ ಅಧ್ಯಯನದ ಒಟ್ಟು ಆಶಯ, ವಿವೇಚನೆ, ಮೌಲ್ಯಮಾಪನದ ಸಮಾರೋಪ ಮಾಡಲಾಗಿದೆ.

**ಅಧ್ಯಾಯ–೮ ಅನುಬಂಧಗಳು** : ಈ ಅಧ್ಯಾಯದಲ್ಲಿ (i) ಕುಮಾರಕಕ್ಕಯ್ಯನ ಕೈಬರಹ (ii) ಕುಮಾರ ಕಕ್ಕಯ್ಯನ ವಂಶವೃಕ್ಷ (iii) ಕುಮಾರಕಕ್ಕಯ್ಯ ಪೋಳ ಪ್ರತಿಷ್ಠಾನ (iv) ಕುಮಾರಕಕ್ಕಯ್ಯನ ಸಾಹಿತ್ಯ ಕೃತಿಗಳು (v) ಕುಮಾರಕಕ್ಕಯ್ಯನ ಬಿಡಿ ಲೇಖನಗಳು, (vi)ಕುಮಾರಕಕ್ಕಯ್ಯ ಕುರಿತು ಪ್ರಕಟಿತ ಗ್ರಂಥಗಳು ಹಾಗೂ ಲೇಖನಗಳು (vii) ಸಾಂದರ್ಭಿಕ ಗ್ರಂಥಗಳು (viii)ಸಮಜೋ–ಧಾರ್ಮಿಕ–ಸಾಹಿತ್ಯಿಕ ಪತ್ರಿಕೆಗಳ ಹಾಗೂ ದಿನಪತ್ರಿಕೆಗಳ ಮಾಹಿತಿ ಕೊಡಲಾಗಿದೆ.

ಈ ರೀತಿಯಾಗಿ 'ಕುಮಾರ ಕಕ್ಕಯ್ಯನ ವಚನಗಳು –ಒಂದು ಅಧ್ಯಯನ'ದಲ್ಲಿ ಅವರ ನಿರ್ಭೀತನಿಲವು, ನ್ಯಾಯ–ನಿಷ್ಠುರ, ಪ್ರಗತಿಪರ ವಿಚಾರಗಳು, ದೀನ–ದಲಿತರ ಉದ್ಧಾರದ ಕಳಕಳಿ, ಬಸವಾದಿಶರಣರ ಸರ್ವಸಮಾನತೆಯ ಕ್ರಾಂತಿಕಾರಿ ವಿಚಾರಗಳ ಬೆಳಕಿನಲ್ಲಿ ಮೌಲ್ಯಮಾಪನ ಮಾಡಲಾಗಿದೆ.

# ಅಧ್ಯಾಯ –೨

## ಕುಮಾರ ಕಕ್ಕಯ್ಯನ ಜೀವನ – ಸಾಧನೆ.

(ಅ) ಜನನ – ಬಾಲ್ಯ – ಶಿಕ್ಷಣ

(ಆ) ನೌಕರಿ – ಕೌಟುಂಬಿಕ ಜೀವನ – ಮಹಾಬಯಲಿನೊಳು ಬಯಲು

(ಇ) ಸಾಹಿತ್ಯ ಸಾಧನೆ – ಕೃತಿಗಳು

(ಈ) ಸಮಾಜೋ – ಧಾರ್ಮಿಕ ಸಾಧನೆ.

(ಉ) ಸಂಘ ಸಂಸ್ಥೆಗಳ ಸದಸ್ಯತ್ವ ಹಾಗೂ ಸೇವೆ.

(ಊ) ಸಮ್ಮೇಳನಗಳ ಅಧ್ಯಕ್ಷರು, ಅತಿಥಿಗಳು ಹಾಗೂ ಗೌರವ ಪ್ರಶಸ್ತಿಗಳು

# ಅಧ್ಯಾಯ – ೨
# ಕುಮಾರ ಕಕ್ಕಯ್ಯನ ಜೀವನ – ಸಾಧನೆ.

**(i) ಕುಮಾರ ಕಕ್ಕಯ್ಯನ ಜನನ – ಬಾಲ್ಯ –ಶಿಕ್ಷಣ :**

ಮಹಾನ್ ಕ್ರಾಂತಿಕಾರಿ, ಯುಗಪುರುಷ ಬಸವಣ್ಣನವರ ಜನ್ಮಭೂಮಿಯಾದ ವಿಜಾಪುರ ಜಿಲ್ಲೆಯು ಅನೇಕ ಕ್ರಾಂತಿಕಾರಿಗಳಿಗೆ, ಶರಣರು, ಸಂತರು, ದಾಸರು, ಕವಿಪುಂಗವರಿಗೆ ಜನ್ಮವಿತ್ತ ಜಿಲ್ಲೆಯಾಗಿದೆ. ವಿಜಾಪುರ ಜಿಲ್ಲೆಯನ್ನು ಕರ್ನಾಟಕದ ಪಂಜಾಬ ಅಂದರೆ ಐದು ನದಿಗಳ ಜಿಲ್ಲೆ ಎಂದು ಕರೆಯಲಾಗುತ್ತದೆ. ಭೀಮಾನದಿ, ಡೋಣಿ ನದಿ, ಕೃಷ್ಣಾನದಿ, ಘಟಪ್ರಭಾ ಹಾಗೂ ಮಲಪ್ರಭಾ ನದಿಗಳು ಹರಿಯುವ ಜಿಲ್ಲೆಯಾಗಿದ್ದರೂ, ಶತ ಶತಮಾನಗಳಿಂದ ಬರಗಾಲಕ್ಕೆ ಹೆಸರುವಾಸಿಯಾದ ಜಿಲ್ಲೆ, ಆರ್ಥಿಕವಾಗಿ ಬರಗಾಲವಿದ್ದರೂ ಜನರ ಹೃದಯ ಶ್ರೀಮಂತಿಕೆಗೆ, ಕವಿ– ಸಾಹಿತಿಗಳಿಗೆ ಬರವಿಲ್ಲ.

ಬೆಳವಲನಾಡಿನ ಈ ಜಿಲ್ಲೆಯ ಸಿಂದಗಿ ತಾಲೂಕಿನಲ್ಲಿ 'ಚಾಂದಕವಠೆ' ಎಂಬ ಸುಂದರ ಹೆಸರಿನ ಗ್ರಾಮವಿದೆ. ಇದು ಪ್ರಾಕೃತಿಕವಾಗಿ ರಮಣೀಯವಾದ ಊರು. ಗ್ರಾಮದ ಪೂರ್ವದಿಕ್ಕಿನಲ್ಲಿ ನವಲಿ ನದಿ ಇದೆ. ಈ ಗ್ರಾಮವು ಹನ್ನೆರಡನೆಯ ಶತಮಾನದಿಂದಲೂ ಐತಿಹಾಸಿಕವಾಗಿ ಪ್ರಸಿದ್ಧವಾಗಿದೆ. ಕಲ್ಯಾಣದ ಅನುಭವ ಮಂಟಪದ ಅಲ್ಲಮಪ್ರಭುದೇವರು ಹಾಗೂ ಚರಜಂಗಮರು ಶರಣರ ವಚನ ಸಂದೇಶ ಸಾರುತ್ತ ಬಂದು ವಾಸ್ತವ್ಯ ಮಾಡಿದ್ದು, ಕಲ್ಯಾಣ ಕ್ರಾಂತಿಯ ಕಾಲಕ್ಕೆ ಬಸವಣ್ಣವರು, ಹಡಪದ ಅಪ್ಪಣ್ಣ ಮುಂತಾದ ಶರಣಗಣಂಗಳು ಬಂದು ಲಿಂಗಾರ್ಚನೆ ಮಾಡಿ ಹೋದ ಸ್ಥಳವಿದಾಗಿದೆ. ಬಸವಣ್ಣದೇವರ ಗುಡಿ ಹಾಗೂ ಶರಣರ ಗುಹೆ ಇವೆ, ಊರ ಹೊರಗೆ ನವಲಿನದಿಯ ದಡದ ಹುಣಶಿಯ ಬನದಲ್ಲಿ ಪರಮಾನಂದ ಪ್ರಭುದೇವರ, ಬರಿಗಾಲಸಿದ್ಧ, ಕಂಠೀರವ ಒಡೆಯರ ಸ್ಮಾರಕ ದೇವಾಲಯಗಳಿವೆ.

ಚಾಂದವಕವಠೆ ಗ್ರಾಮದ ಹೊರವಲಯದಲ್ಲಿ ನವಲಿನದಿಯ ದಡದ ಹತ್ತಿರ ಬಸವಣ್ಣದೇವರ ದೇವಾಲಯ, ಪಕ್ಕದಲ್ಲಿ ಸುಂದರವಾದ ಬಸವಣ್ಣದೇವರ ಬಾವಿ ಅದರ ಎದುರಿಗೆ ಅಗಸಿಬಾಗಿಲು, ಅಲ್ಲಿಯೇ ಒಂದು ಗುಡಿಸಲ ಮನೆ. ಆ ಗುಡಿಸಲಲ್ಲಿ ಡೋಹರ ಜನಾಂಗದ ತುಳಜಾರಾಮ ಮತ್ತು ಎಲ್ಲವ್ವ ದಂಪತಿಗಳು ವಾಸವಾಗಿದ್ದರು ಅವರ ಮಗಳು ರಾಯೂಬಾಯಿ. ಇವಳ ಗಂಡ ವಿಜಾಪುರದ ಕತ್ತಿರ ಹಿಟ್ನಳ್ಳಿ – ಗಂಗನಳ್ಳಿಯ ಸಾಯಬಣ್ಣ. ಈ ದಂಪತಿಗಳಿಗೆ ದಿನಾಂಕ ೨೮.೦೭.೧೯೪೯ ರಂದು ಚಾಂದಕವಠೆಯಲ್ಲಿ ಜನಿಸಿದ ಗಂಡು ಮಗುವೇ ನಮ್ಮ ಆಧುನಿಕ ವಚನಕಾರ ಕುಮಾರ ಕಕ್ಕಯ್ಯ. ಇವರ ಮೂಲ ಹೆಸರು ಭೀಮ್ಯಾ ಸಾಯಬ್ಯಾ ಡ್ವಾರ' ಎಂದು ಶಾಲೆಯ ದಾಖಲಾತಿಯಲ್ಲಿದ್ದುದು. ಅಂದಿನ ಕಾಲದಲ್ಲಿ ಹಿಂದುಳಿದ ದೀನ ದಲಿತರಿಗೆ, ಹರಿಜನರಿಗೆ ಈ ರೀತಿ ಒರಟಾಗಿ ಹೆಸರನ್ನು

ದಾಖಲಾತಿ ಮಡಿಕೊಳ್ಳುತ್ತಿದ್ದರೆಂದು ಕುಮಾರ ಕಕ್ಕಯ್ಯನವರು ಹೇಳುತ್ತಿದ್ದರು. ಮಗು ಭೀಮ ಮೂರು ವರುಷದ ಕೂಸಾಗಿರುವಾಗಲೇ ತಂದೆ ಸಾಯಿಬಣ್ಣ ಪ್ಲೇಗ ರೋಗಬಂದು ಅಕಾಲ ಮರಣಕ್ಕೆ ತುತ್ತಾದ್ದರಿಂದ ಚಾಂದಕವಠೆಯಲ್ಲಿಯೇ ಅಜ್ಜ– ಅಜ್ಜಿ – ತಾಯಿ ಹಾಗೂ ಸೋದರಮಾವ ಶಂಕರ ಇವರ ಪ್ರೀತಿಯ ಕಣ್ಮಣಿಯಾಗಿ ಬೆಳೆಯಬೇಕಾಯಿತು. ಸ್ವಾತಂತ್ರ್ಯ ಪೂರ್ವದ ಅಂದಿನ ಕಾಲ ನಾಡಿನಾದ್ಯಂತ ಪ್ರತಿಯೊಂದು ಊರುಗಳಲ್ಲಿಯೂ ಮಡಿ ಮೈಲಿಗೆ, ಮೇಲ್ಜಾತಿ – ಕೀಳ್ಜಾತಿ, ಸ್ಪೃಶ್ಯ– ಅಸ್ಪೃಶ್ಯ, ಮುಂತಾದ ಕರ್ಮಠ ಮೂಢ ಸಂಪ್ರದಾಯ ವ್ಯಾಪಕವಾಗಿತ್ತು.

ಬಹುತೇಕ ಜನರು ಅನಕ್ಷರಸ್ಥರು, ಬಡತನ, ದಾರಿದ್ರ್ಯದಲ್ಲಿ ಜೀವನ ತೇಯುತ್ತಿದ್ದರು. ಹೊಲೆಯರು, ಮಾದಿಗರು, ಡೋಹರು, ಸಮಗಾರರು, ಕಬ್ಬಲಿಗರು ತಳವಾರ ಮುಂತಾದ ಜನರ ಕೆಲಮನೆಗಳು ಊರ ಹೊರವಲಯದಲ್ಲಿದ್ದವು.

"ಅಜ್ಜ ತುಳಜಾರಾಮ ತಮ್ಮ ಡೋಹರ ಕುಲದ ಕಾಯಕವಾದ ಚರ್ಮ ಹದಗೊಳಿಸಿ ಮಿಣಿ, ಬಾರಕೋಲು ಲಗ್ಗಾಣಿ, ಎತ್ತುಗಳಿಗೆ ಕೊರಳುಪಟ್ಟಿ, ಗೆಜ್ಜಿ ಸರ ಹೆಣೆದುಕೊಡುವುದು, ಮಟ್ಟಿ ಚರ್ಮದ ಏತ ತಯಾರಿಸುವುದರ ಮೂಲಕ ಉಪಜೀವನ ನಡೆಸುತ್ತಿದ್ದ. ಭೀಮನು ಅಜ್ಜ – ಅಜ್ಜಿ ಸೋದರ ಮಾವ ಶಂಕರ ಹಾಗೂ ವಿಧವೆ ತಾಯಿಯರ ಮಾತೃವಾತ್ಸಲ್ಯ – ಮಮತೆಯಲ್ಲಿ ಅವರೆಲ್ಲರ ಕಣ್ಮಣಿಯಾಗಿ ಬೆಳೆಯತೊಡಗಿದನು.

ಆಗಿನ ಕಾಲದಲ್ಲಿ ಮೇಲ್ಜಾತಿಯವರೇ ಶಾಲೆ ಕಲಿಯುವದರ ಬಗ್ಗೆ ಉದಾಸೀನತೆ ತೋರುತ್ತಿದ್ದಾಗ, ಇನ್ನು ಕೆಳಜಾತಿಯ ಹರಿಜನರು ಸಾಲಿಕಲಿತು ಮಾಡುವದೇನದ? ಸಾಲಿ ಕಲಿತು ಏನು ದೊಡ್ಡ ಸಾಹೇಬನಾಗೂದರ ಅಷ್ಟೇ ಅದೆ? ಎಂದು ಪ್ರಶ್ನಿಸುವಂತಿದ್ದ ಪರಿಸರದಲ್ಲಿ ಅಜ್ಜ ತುಳಜಾರಾಮನಿಗೆ, ಮೊಮ್ಮಗ ಭೀಮನನ್ನು ಓದಿಸಲೇಬೇಕೆಂಬ ಆಸೆ! ಮೊಮ್ಮಗನಾದರೂ ಅಲ್ಪ ಸ್ವಲ್ಪ ಕಲಿತು ಶಾಣ್ಯಾ ಆಗಲಿ ಎಂಬ ಹಂಬಲ. ಮನೆಯ ಎದುರಿಗೆ ಬಸವಣ್ಣದೇವರ ಗುಡಿಯ ಪೌಳಿ (ಆವರಣ)ಯಲ್ಲಿ ಒಂದು ಆರು ಅಂಕಣದ ೬ ಘೂಟ ಅಗಲ x ೨೪ ಘೂಟ ಉದ್ದನೆಯ ಪಡಸಾಲೆಯ ಚಂದ್ರಶಾಲೆ, ಅಲ್ಲಿಯೇ ಕನ್ನಡ ಪ್ರಾಥಮಿಕ ಶಾಲೆ ಇತ್ತು. ಅಜ್ಜ ಊರ ಹಿರಿಯರಿಗೆ ಹಾಗೂ ಶಾಲಾ ಮಾಸ್ತರುಗಳಿಗೆ ಗೋಗರೆದು ಮೊಮ್ಮಗನನ್ನು ಶಾಲೆಗೆ ಹೆಸರು ಹಚ್ಚಿಸಿದನು. ಪ್ರಾಥಮಿಕ ಶಾಲೆಯ ರಿಜಿಸ್ಟರದಲ್ಲಿ 'ಭೀಮ್ಯಾ ಸಾಯಬ್ಯಾ ಡ್ವಾರ' ಎಂದೂ ಹೆಸರು ದಾಖಲಾಯಿತು. (ಇದು ಸ್ವಾತಂತ್ರ್ಯ ಪೂರ್ವದ ಬ್ರಿಟಿಶರ ಕಾಲದ ಹಳ್ಳಿಗಳಲ್ಲಿಯ ಶಾಲೆಯ ಚಿತ್ರಣ, ದಲಿತರ ಪರಿಸ್ಥಿತಿಯನ್ನು ತೋರಿಸುತ್ತದೆ.)

ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ಬಾಲ್ಯದ ಜೀವನ – ನೋವು – ಯಾತನೆಯನ್ನು 'ಮೂಕನ ಭಾಷಣ' ಕೃತಿಯಲ್ಲಿ ಸ್ವತಃ ಹೇಳಿಕೊಂಡಿದ್ದಾರೆ. ಶ್ರೀಯುತರ ಮಾತುಗಳಲ್ಲಿಯೇ ನೋಡಬೇಕು– " ದಲಿತರ ನೋವು ದಲಿತರಿಗಲ್ಲದೆ

ಅದು ಅನ್ಯರಿಗೆ ತಿಳಿಯದು! ನಾನು ದಲಿತ ಜಾತಿಯಲ್ಲಿ ಹುಟ್ಟಿದ್ದೇನೆಂಬ ಒಂದೇ ಒಂದು ಕಾರಣಕ್ಕಾಗಿ, ಎಂಥ ಅವಮಾನಕರವಾದ ಹೀನ ಜೀವನ ಬಾಳುತ್ತಿದ್ದೇನೆ ಎಂಬುದು ನಿಮಗೆ ಗೊತ್ತೇ?"[೧]

"ಚಾಂದಕವಠೆಯಲ್ಲಿ ಆಗ ಶಾಲೆಗಳಿಗೆ ಸರಕಾರಿ ಕಟ್ಟಡ ಇರಲ್ಲಿಲ್ಲ. ಬಸವಣ್ಣ ದೇವರ ಗುಡಿಯ ಆವರಣದ ಚಂದ್ರಶಾಲೆಯ ಪಡಸಾಲೆಯಲ್ಲಿ ಊರಿನ ಕುಲಜರ ಮಕ್ಕಳು ಕುಳಿತುಕೊಳ್ಳುತ್ತಿದ್ದರು. ಕೆಳಗೆ ಅಂಗಳದ ಧುಮ್ಮಣ್ಣಿನಲ್ಲಿ (ಧೂಳು ಮಿಶ್ರಿತ ಮಣ್ಣು) ನಾನು ಹಾಗೂ ನನ್ನ ಗೆಳೆಯ ಹೊಲೆಯರ ಪಂಥರಿ ಇಬ್ಬರೂ ಕುಳಿತುಕೊಳ್ಳುತ್ತಿದ್ದೆವು. ಧೂಳಮಣ್ಣಿನಲ್ಲಿ ಉಣ್ಣಿ, ತಾಬಿ, ಇರುವೆಗಳು ನಮ್ಮ ಮೈಮೇಲೆ ಹರಿದಾಡುತಿದ್ದವು, ವಿಪರೀತ ಕಡೀತಿದ್ದವು, ರಕ್ತ ಹೀರುತ್ತಿದ್ದವು. ಹಾಗೆಯೇ ಮೈ ತುರಿಸಿಕೊಳ್ಳುತ್ತಾ, ಕೈ ಕಾಲು ಪರ ಪರ ಕೆರೆಯುತ್ತಾ ಮಾಸ್ತರು ಜೋರಾಗಿ ಹೇಳುವ ಅಕ್ಷರ, ಪದ, ಬರೆದುಕೊಳ್ಳುತ್ತಿದ್ದೆವು. ವಿಜಾಪುರ ಜಿಲ್ಲೆಯ ಬಿಸಿಲಿನ ಬೇಗೆ ಸಹಿಸಿಕೊಳ್ಳುವುದು ಅಂದ್ರ ಪಂಚಾಗ್ನಿ ನಡುವೆ ಕುಳಿತು ಮಾಡುವ ತಪಸ್ಸಿಗಿಂತ ಕಠಿಣವಾಗಿತ್ತು. ಮೇಲೆ ತಲೆ ಸುಡುತ್ತಿತ್ತು, ತೆಳಗ ಧೂಳ ಮಣ್ಣು, ಉಸುಕು ಸುಡ್ತಿತ್ತು. ಮೈಯೆಲ್ಲಾ ಬೆವರಿನಿಂದ ತೋಯ್ದು ಹೋಗ್ತಿತ್ತು. ಮೇಲೆ ಪಡಸಾಲೆಯ ನೆರಳಲ್ಲಿ ಕುಳಿತು ಪಾಠ ಓದುವ ಗೆಳೆಯರನ್ನು ಕಂಡು, ನಮ್ಮ ಹೀನಾಯ ದು:ಸ್ಥಿತಿ ಕಂಡು ಬಹಳ ಯಾತನೆಯಾಗ್ತಿತ್ತು. ಮಳೆಗಾಲದಲ್ಲಂತೂ ಅಂಗಳದ ಹಸಿ ಕೆಸರಿನ ಮೇಲೆಯೇ ಕುಳಿತುಕೊಳ್ಳೋದು, ಬಹಳ ಯಾತನೆಯಾಗ್ತಿತ್ತು. ಬಹಳ ರಾಡಿ ಇದ್ದರೆ ನಿಂತುಕೊಂಡೇ ಓದೋದು. ಮಳೆ ಬರುತ್ತಿದ್ದರೆ ಆ ದಿನ ನಾನು ಹಾಗೂ ನನ್ನ ಗೆಳೆಯ ಹೊಲೆಯರ ಪಂಥರಿ ನಮ್ಮ ನಮ್ಮ ಮನೆಗಳಿಗೆ ಹೋಗುತ್ತಿದ್ದೆವು. ಶಾಲೆ ಮಾಸ್ತರರು ದಿನಾಲೂ ಹುಡುಗರಿಗೆ ಆಟ ಆಡಿಸುತ್ತಿದ್ದರು. ಆಗಿನ ಕಾಲದ ಆಟದ ಮೈದಾನವೆಂದರೆ ಊರ ಹೊರಗಿರುವ ನವಲಿಹಳ್ಳದ ಉಸುಕಿನ ಬಯಲು. ಎಲ್ಲಾ ಹುಡುಗರು ಕಬಡ್ಡಿ, ಮುಟ್ಟುವ ಆಟ, ಸರಪಾಟ, ಕುಂಟಲಪಿ (ಗ್ರಾಮೀಣ ಕ್ರೀಡೆಗಳು) ಇತ್ಯಾದಿ ಆಡುತ್ತಿದ್ದರೆ ನಾನು ಪರದೇಶಿಯಂತೆ ದೂರದಲ್ಲಿ ಒಬ್ಬನೇ ನಿಲ್ಲುತ್ತಿದ್ದೆ. ನನ್ನನ್ನು ಆಟದಲ್ಲಿ ಕರೆದುಕೊಳ್ಳುತ್ತಿರಲಿಲ್ಲ, ನನ್ನನ್ನು ಮುಟ್ಟಿಸಿಕೊಳ್ಳುತ್ತಿರಲಿಲ್ಲ. ದೂರದಲ್ಲಿ ಹಳ್ಳದ ದಂಡಿಮ್ಯಾಲ ಕುಳಿತು ಅವರ ಆಟ, ಓಡಾಟ, ಕುಣಿದಾಟ ನೋಡ್ತಾ ಒಳಗೊಳಗೆ ಮರಗುತ್ತಿದ್ದೆ. ನಮ್ಮ ಮನೆ ಹತ್ತಿರಾನೇ ನವಲೀ ನದಿ ಹರೀತಿದ್ದರೂ ನಾವು ದೂರ ನಡೆದುಹೋಗಿ ಕೆಳಭಾಗದ ನೀರು ತರುತ್ತಿದ್ದೆವು. ಮೇಲ್ಭಾಗದಲ್ಲಿ ಮೇಲಿನ ಜಾತಿಯವರು ನೀರು ತರ್ತಿದ್ರು. ಇಂಥಾ ನೋವು ಅನುಭವಿಸುತ್ತಲೇ ನಾಲ್ಕನೇ ಕ್ಲಾಸಿನವರೆಗೆ ಕನ್ನಡ ಶಾಲೆಯಲ್ಲಿ ಕಲಿತೆ"[೨]

ಪ್ರಾಥಮಿಕ ಶಾಲೆ ಪಾಸಾಗಿ, ಇಂಗ್ಲೀಷ ಕಲಿಯಬೇಕೆಂಬ ಮಹದಾಸೆಯಿಂದ ಸಿಂದಗಿಗೆ ಬಂದರು. ಚಾಂದಕವಠೆಯಿಂದ ೧೦–೧೨ ಕಿ.ಮೀ ನಡೆದು

---

೧. ಮೂಕನ ಭಾಷಣ – 'ಕುಮಾರ ಕಕ್ಕಯ್ಯ' ಬಿ.ಎಸ್. ಪೋಳ. ಪುಟ – ೧೦೫

೨. ಕುಮಾರ ಕಕ್ಕಯ್ಯ ಪೋಳ – ಪ್ರೊ. ಸಿದ್ದಣ್ಣ ಲಂಗೋಟಿ ಪುಟ ೧೫–೧೬.

(ವಾರಕ್ಕೊಮ್ಮೆ)ಕೊಂಡು ಬರುವುದು. ಮೇಲ್ಜಾತಿಯ ಹುಡುಗರು ರೈತರ ಎತ್ತಿನ ಗಾಡಿಯಲ್ಲಿ ಕುಳಿತು ಊರಿಗೆ ಹೋಗಿ ಬರುತ್ತಿದ್ದರೆ, ಇವರು ಮಾತ್ರ ಆ ಗಾಡಿಗಳ ಹಿಂದೆ ತಮ್ಮ ಸಾಮಾನು – ಪುಸ್ತಕ ಹೊತ್ತುಕೊಂಡು ನಡೆದುಕೊಂಡೇ ಬರಬೇಕು! ತಾಲೂಕಾ ಸ್ಥಳದಲ್ಲಿಯ ಪರಿಸ್ಥಿತಿಯಾದರೂ ಸುಧಾರಿಸಿತ್ತೇ? ಖಂಡಿತವಾಗಿಯೂ ಇಲ್ಲ. ಶ್ರೀಯುತರ ಮಾತುಗಳಲ್ಲಿಯೇ ನೋಡಬೇಕು– " ಮಾಧ್ಯಮಿಕ ಶಿಕ್ಷಣಕ್ಕಾಗಿ ತಾಲೂಕಾ ಸ್ಥಳಕ್ಕೆ (ಸಿಂದಗಿಗೆ) ಬಂದಾಗ, ಅಲ್ಲಿ ನಡೆಯುತ್ತಿದ್ದ ಧರ್ಮಾರ್ಥ ಬೋರ್ಡಿಂಗದಲ್ಲಿ, ಉಳಿದ ಎಲ್ಲ ಹುಡುಗರು ಮಠದ ಪಡಸಾಲೆಯಲ್ಲಿ ಒಟ್ಟಿಗೆ ಊಟಕ್ಕೆ ಕೂಡ್ರುತ್ತಿದ್ದಾಗ, ನಾನು ಬಹುದೂರ ಬೇವಿನಮರದ ಕೆಳಗೆ ನಾಯಿಯ ಹಾಗೆ ಕಾದು ಕುಳಿತು, ಹಾಕಿದಾಗ ತಿಂದು ಎದ್ದಿದ್ದೇನೆ! ನನ್ನ ಅಜ್ಜ ಸ್ವಚ್ಛವಾಗಿ ಒಗೆದ ತನ್ನ ಅಂಗಿ ಶುಭ್ರವಾಗಿ ಕಂಡರೆ ಊರ ಕುಲಜರು ಸಿಟ್ಟಾಗಬಹುದೆಂದು, ಅದನ್ನು ಅಂಗಳದ ಹಾಳು ಮಣ್ಣಿನಲ್ಲಿ ಹೊರಳಾಡಿಸಿ, ಮಲಿನ ಮಾಡಿ, ಮೈಯಲ್ಲಿ ಹಾಕಿಕೊಂಡು ಹೋಗುವದನ್ನು ನೋಡಿದ್ದೇನೆ"[೩]

ಕುಮಾರ ಕಕ್ಕಯ್ಯನವರ ಬಾಲ್ಯದ ನೋವು ಬಹುಶಃ ಬಾಬಾಸಾಹೇಬ ಅಂಬೇಡ್ಕರರ ಬಾಲ್ಯದ ಜೀವನ – ಶಿಕ್ಷಣದ ನೆನಪು ತರುತ್ತದೆ. ಕುಮಾರ ಕಕ್ಕಯ್ಯನವರ ವಿದ್ಯಾರ್ಥಿಜೀವನದ ಕಾಲಕ್ಕೆ ಅವರ ಊರಿನಲ್ಲಿ ನಡೆದ ಒಂದು ಘಟನೆಯು ಮರೆಯಲಾಗದ ಆಘಾತವನ್ನುಂಟು ಮಾಡಿತು. "ಕುಮಾರ ಕಕ್ಕಯ್ಯನವರು ಬಾಲ್ಯದಿಂದಲೇ ವಿಪರೀತ ಆಸ್ತಿಕ ಸ್ವಭಾವದವರಾಗಿದ್ದರು. ಅವರೇ ಹೇಳಿಕೊಂಡಿರುವಂತೆ – "ಕಡುಬಡತನದಲ್ಲಿ ಜನಿಸಿ, ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡ ನಾನು ಚಾಂದಕವಠೆಯ ಪ್ರಕೃತಿಯ ಮಡಿಲಲ್ಲಿಯೇ ಬೆಳೆದು ದೊಡ್ಡವನಾದೆ. ಅದುವೇ ನನ್ನ ಊರು. ನನ್ನ ವಯಸ್ಸಿನ ೧೪ ನೇ ವರುಷ ರಾಜಾಹರಿಶ್ಚಂದ್ರ ಮತ್ತು ಧ್ರುವ ನಾಟಕಗಳನ್ನು ನೋಡುವ ಸುಯೋಗ ಕೂಡಿ ಬಂತು. ಹರಿಶ್ಚಂದ್ರ ನಾಟಕದಲ್ಲಿಯ ರೋಹಿಯ ಪಾತ್ರ ಮತ್ತು ಧ್ರುವ ನಾಟಕದಲ್ಲಿಯ ಧ್ರುವನ ಸದ್ಗುಣ, ಅವನು ದೇವರ ಬಗ್ಗೆ ಮಾಡುವ ತಪಶ್ಚರ್ಯ ನನ್ನ ಮನಸ್ಸಿನ ಮೇಲೆ ಬಹಳೇ ಗಾಢ ಪರಿಣಾಮಗಳನ್ನು ಬೀರಿದವು. ಅದುವೇ ನನ್ನ ಭಾವುಕ ಜೀವನಕ್ಕೆ ಮೊದಲಾಯಿತು. ನನ್ನಮನೆಯ ಎದುರಿನಲ್ಲಿಯೇ ಭವ್ಯ ದೇವಾಲಯದಲ್ಲಿ ಪವಡಿಸಿದ ಬಸವಣ್ಣದೇವರು, ಊರಹೊರಗೆ ಒಂದೂವರೆ ಮೈಲಿನ ಅಂತರದ ಮೇಲೆ ನವಲೀಹಳ್ಳದ ದಡದಲ್ಲಿ ಮರಗಳ ತೋಪಿನಲ್ಲಿ ಪುರಾತನ ಮಹಾಮಂದಿರದಲ್ಲಿ ಶೋಭಿಸುವ ಪರಮಾನಂದ, ನಾನು ಚಿಕ್ಕ ವಯಸ್ಸಿನಲ್ಲಿ ಕೇಳಿ ತಿಳಿದ ವಿಠೋಬಾ ರುಕುಮಾಯಿ, ಶಿವ ಪಾರ್ವತಿಯರನ್ನು ನನ್ನ ಆರಾಧ್ಯ ದೇವರನ್ನಾಗಿ ಆರಿಸಿಕೊಂಡೆ, 'ನಮಸ್ಕಾರ ಬಸವೇಶ್ವರನಿಗೆ, ಪರಮಾನಂದನಿಗೆ, ವಿಠ್ಠಲ – ರುಕುಮಾಯಿಗೆ, ಶಿವ – ಪಾರ್ವತಿಗೆ, ನಮಸ್ಕಾರ' ಎಂದು ನೆನಪು ಆದಾಗಲೊಮ್ಮೆ ಜಪಿಸಹತ್ತಿದೆ. ಎದೆಯ ಮೇಲೆ ಕೈ ಇಟ್ಟು ಹಗಲೂ ಇರುಳೂ ಉಣ್ಣುವಾಗ, ತಿನ್ನುವಾಗ, ಕೂತಾಗ,

೩. ಮೂಕನ ಭಾಷಣ –'ಕುಮಾರ ಕಕ್ಕಯ್ಯ ಬಿ.ಎಸ್.ಪೋಳ ಪುಟ ೧೦೫ –೧೦೬.

ನಿಂತಾಗ, ಮಲಗಿದಾಗ, ಏಳುವಾಗ, ರಾತ್ರಿ ಎಚ್ಚರಾದಾಗ ಸ್ಮರಿಸ ಹತ್ತಿದೆ. ಎದೆಯ ಮೇಲಿನ ಅಂಗಿ ಗುಂಡಿ ತಿರುವುತ್ತಾ, ಮನಸ್ಸಿನಲ್ಲಿಯೇ ನನ್ನ ಆರಾಧ್ಯ ದೇವರನ್ನು ಜಪಿಸುತ್ತಿದ್ದೆ, ಹಾಸಿಗೆಯಲ್ಲಿ ಮಲಗಿದಾಗ ನಿದ್ದೆ ಬರುವವರೆಗೆ ತದೇಕ ಚಿತ್ತದಿಂದಾ ಮರಳಿ ಮರಳಿ ದೇವರ ನಾಮ ಜಪ ಮಾಡುತ್ತಿದ್ದೆ. ಅದೆಷ್ಟೋ ಸಲ ಮಧ್ಯರಾತ್ರಿಯವರೆಗೆ ಹಾಸಿಗೆಯಲ್ಲಿ ಉರುಳಾಡುವುದನ್ನು ಕಂಡ ನನ್ನ ತಾಯಿ 'ಯಾಕಪ್ಪಾ ಇನ್ನೂ ನಿದ್ದೆ ಬರಲಿಲ್ಲವೆ?' ಎಂದು ಕೇಳುತ್ತಿದ್ದರು. ಸಾಲೆಯಲ್ಲಿಯೂ ಅಷ್ಟೇ, ಗುರುಗಳು ಹೇಳಿದ್ದೇ ಹೇಳಿದ್ದು, ನಾನು ಮಾಡಿದ್ದೇ ಮಾಡಿದ್ದು, ಹಗಲಿರುಳು ಅದೇ ತಪ, ಅದೇ ಜಪ, ಎಂದಾದರೂ ಅಡವಿಯಲ್ಲಿ ಹೊರಟರೆ ಪ್ರಶಾಂತವಾದ ಗಿಡಗಳ ಕೆಳಗೆ, ಬೆಳೆದ ಬೆಳೆಯಲ್ಲಿ ಏಕಾಂತವಾಗಿ ಅದೆಷ್ಟೋಸಲ ಗಂಟೆಗಟ್ಟಲೇ ಕುಳಿತಿರುವೆನು. ಹಗಲಿರುಳೂ ಅದೇ ಚಿಂತೆ".[೪]

ಇಂತಹ ಭಾವುಕ ಭಕ್ತಿಯ ಆಸ್ತಿಕ ಭೀಮನು (ಕುಮಾರ ಕಕ್ಕಯ್ಯ) ನಾಸ್ತಿಕನಾಗಲು, ವಿಚಾರವಾದಿಯಾಗಿ ಪರಿವರ್ತನೆಗೊಳ್ಳಲು ಅವರ ಬಾಲ್ಯ ಜೀವನದ ಕಾಲಕ್ಕೆ ಚಾಂದಕವಠೆ ಗ್ರಾಮದಲ್ಲಿ ನಡೆದ 'ಒಂದು ಘಟನೆ' ಕಾರಣವಾಯಿತು. ಭಾರತ ದೇಶಕ್ಕೆ "ಸ್ವಾತಂತ್ರ್ಯ ಸಿಗುವ ಮೊದಲು ಮುಸಲ್ಮಾನರು ಪಾಕಿಸ್ತಾನ ಬೇಡಿದಂತೆ, ದಲಿತರು ದ್ರಾವಿಡಸ್ಥಾನಬೇಕೆಂದು ಹಟ ಹಿಡಿದಾಗ, ದಲಿತರ ಕಣ್ಣೊರೆಸಲು, ಆಗ ಒಂದು ದೊಡ್ಡ ನಾಟಕವೇ ನಡೆದ್ಹೋಯಿತು! ಆ ಸಮಯದಲ್ಲಿ ನಮ್ಮೂರಿಗೆ ಬಂದ ಪೋಲೀಸರು ನನ್ನ ಸೋದರ ಮಾವ (ಶಂಕರ)ನ ಮೇಲೆ ಒತ್ತಾಯ ತಂದು, ಬಸವೇಶ್ವರಗುಡಿಯ ಪಕ್ಕದ ಹೊಕ್ಕು ತುಂಬುವ ಸಾರ್ವಜನಿಕ ಊರ ಬಾವಿಗೆ ಪ್ರವೇಶ ಮಾಡಿಸಿ (ಒಂದು ಕೊಡ ನೀರು ತರಿಸಿ), ದಲಿತೋದ್ಧಾರ ಕುರಿತು ಒಂದು ಭಾಷಣ ಬಿಗಿದು, ಹೊರಟು ಹೋದರು. ಪೋಲೀಸರು ಹೋಗುವದೊಂದೇ ತಡ, ಕುಲಜರು ನನ್ನ ಸೋದರಮಾವನಿಗೆ ಎಳೆದೊಯ್ದು ಅದೇ ಬಸವಣ್ಣನ ಗುಡಿಯ ಆವರಣದಲ್ಲಿ ಕಟ್ಟಿ ಹಾಕಿದರು! 'ತಪ್ಪಾಯಿತು, ತಿಳಿಯದ ಹುಡುಗ, ಪೋಲೀಸರ ಒತ್ತಾಯಕ್ಕೆ ಬಾವಿ ಮುಟ್ಟಿದ್ದಾನೆ. ಕ್ಷಮಿಸಬೇಕು" ಎಂದು ನನ್ನ ಅಜ್ಜ ಮತ್ತು ಅಜ್ಜಿ, ಆ ಜನಸಮೂಹದ ಮುಂದೆ ಸೆರಗೊಡ್ಡಿ ಹೊರಳಾಡಿ ಗೋಗರೆದರೂ ಊರಲ್ಲಿಯ ವೇಶ್ಯೆಯರು ಮೊದಲು ಮಾಡಿಕೊಂಡು ಎಲ್ಲರೂ ಬೈದದ್ದೇ ಬೈದದ್ದು!

ಯಾವ ಬಸವಣ್ಣ, ಯಾವ ದಲಿತರಿಗಾಗಿ ಪ್ರಾಣಾರ್ಪಣೆ ಮಾಡಿದನೋ, ಯಾವ ಬಸವಣ್ಣ, ಯಾವ ಢೋರನಿಗೆ 'ಬೊಪ್ಪನು ನಮ್ಮ ಡೋಹರ ಕಕ್ಕಯ್ಯ' ಎಂದು ಮನ್ನಿಸಿದ್ದನೋ, ಅವನ ಅನುಯಾಯಿಗಳೇ ಅದೇ ಗುಡಿಯಲ್ಲಿ ಅದೇ ಢೋರ ವಂಶದವನಾದ ನನ್ನ ಅಜ್ಜನ ಕಡೆಯಿಂದ ( ಆ ಕಾಲದಲ್ಲಿ ) ೫೧ ರೂಪಾಯಿ ದಂಡ ವಸೂಲ ಮಾಡಿಕೊಂಡರು.! ದಂಡಕೊಟ್ಟ ನನ್ನ ಅಜ್ಜ, 'ಬದುಕಿದೆಯಾ ಬಡ ಜೀವಿಯೇ! 'ಎಂದು, ನನ್ನ ಮಾವನನ್ನು ಬಿಡಿಸಿಕೊಂಡು

೪. ಧರ್ಮಕ್ರಾಂತಿ – ಶ್ರೀ ಭೀಮರಾವ ಎಸ್. ಪೋಳ ಚಾಂದಕವಠೆ, ೧೯೬೫ ಪ್ರಸ್ತಾವನೆ ಪುಟ i-ii.

ಬಂದು, ಅವನ ಮೈಗೆ ಗಂಟರಿಷಿಣ ಹಚ್ಚಿ ಕಾಸಿ ಉಪಚರಿಸಿದ್ದನ್ನು ನೋಡಿದ್ದೇನೆ! ಹೆಂಡ ಕುಡಿದು, ಖಂಡ ತಿಂದು, ಹಳಸಿದ ವೇಶ್ಯೆಯರೊಡನೆ ಗುದ್ದಾಡಿ, ತೂರಾಡುತ್ತಾ ಅಪರಾತ್ರಿಯಲ್ಲಿ ಮನೆಗೆ ಬರುವವರು, ನಾನು ಯಾವುದೇ ಕಾರಣ ಅವರ ಮನೆಗೆ ಹೋದರೆ ' ಎಲ್ಲಿ ತಮ್ಮ ಜಾತಿಯೇ ಕಳಚಿ ಬೀಳುವದೋ' ಎಂದು ನನ್ನನ್ನು ಹೊಸ್ತಿಲ ಹೊರಗಿನಿಂದಲೇ ಹೊತ್ತು ಹಾಕುವದನ್ನು ಸಹಿಸುತ್ತಲೇ ಇದ್ದೇನೆ! ಇತರ ಜಾತಿಯ ನೆರೆಹೊರೆಯವರು, ದಿನ ನಿತ್ಯ ನಮ್ಮೊಡನೆ ನಡೆದುಕೊಳ್ಳುವ ಹೀನವಾದ ರೀತಿ ನೀತಿಗಳನ್ನು ನೋಡಿದರೆ, ನಾವು ಮನುಷ್ಯರಾದರೂ ಅಹುದೋ ಅಲ್ಲವೋ ಎಂದು ಸಂಶಯಪಟ್ಟಿದ್ದೇನೆ!"[೫]

ಇಂತಹ ಹಲವಾರು ಪ್ರಸಂಗಗಳನ್ನು ಬಾಲ್ಯದಲ್ಲಿ ಕಂಡು, ಮಾನಸಿಕ ಆಘಾತ ಅನುಭವಿಸಿದ ಕುಮಾರ ಕಕ್ಕಯ್ಯನವರು– 'ಎಲ್ಲಿದ್ದಾನೆ ದೇವರು? ದೇವರು ಇದ್ದರೆ ಹೀಗೆಲ್ಲ ಆಗುತ್ತಿತ್ತೆ? ನಾಟಕಗಳಲ್ಲಿ ಬಂದು ಕಾಪಾಡುವ ದೇವರು ನಿಜ ಜೀವನದಲ್ಲಿ ಏಕೆ ಬಂದು ಕಾಪಾಡುವದಿಲ್ಲ? ಈ ಧರ್ಮ ದೇವರು ಎನ್ನುವದು ಎಲ್ಲಾ ಬರಿ ಸುಳ್ಳು'[೬] ಎಂದು ಚಿಂತನ ಮಾಡಿ, ಕೊನೆಗೆ ಸಂಪೂರ್ಣ ನಾಸ್ತಿಕತೆಯೆಡೆಗೆ, ಭೌತಿಕವಾದದೆಡೆಗೆ ತಿರುಗಿದರು.

ಚಾಂದಕವಠೆಯಲ್ಲಿ ಪ್ರಾಥಮಿಕ ೧ ರಿಂದ ೪ ನೇ ಕ್ಲಾಸಿನವರೆಗೆ ಶಾಲೆ ಕಲಿತು, ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಸಿಂದಗಿಗೆ ಬಂದರು. ಅಲ್ಲಿ ಧರ್ಮಾರ್ಥ ಬೋರ್ಡಿಂಗದಲ್ಲಿ ಉಚಿತ ಪ್ರಸಾದ ಸೇವಿಸುತ್ತಾ ೫ ರಿಂದ ೭ ನೇ ವರ್ಗದ ವರೆಗೆ ವಿದ್ಯಾಭ್ಯಾಸ ಮಾಡಿದರು. ಈ ಅವಧಿಯಲ್ಲಿಯೂ ಅವರು ಅನುಭವಿಸಿದ ಅಸ್ಪೃಶ್ಯತೆಯ ನೋವು ಅಸಹನೀಯವಾಗಿತ್ತು. ಸ್ವತಃ ಅವರೇ ಹೇಳಿಕೊಂಡಿರುವಂತೆ – 'ದಲಿತರ ನೋವು ದಲಿತರಿಗಲ್ಲದೆ ಅದು ಅನ್ಯರಿಗೆ ತಿಳಿಯದು! ನಾನು ದಲಿತ ಜಾತಿಯಲ್ಲಿ ಹುಟ್ಟಿದ್ದೇನೆಂಬ ಒಂದೇ ಒಂದು ಕಾರಣಕ್ಕಾಗಿ ಎಂಥ ಅವಮಾನಕರವಾದ ಹೀನ ಜೀವನ ಬಾಳುತ್ತಿದ್ದೇನೆ. ಎಂಬುದು ನಿಮಗೆ ಗೊತ್ತೇ? ನಮ್ಮ ಗ್ರಾಮದಲ್ಲಿ ನನ್ನ ಸಹಪಾಠಿ ವಿದ್ಯಾರ್ಥಿಗಳು ಗ್ರಾಮ ದೇವತೆಯ ಗುಡಿಯ ಪಡಸಾಲೆಯಲ್ಲಿ ಕುಳಿತುಕೊಳ್ಳುತ್ತಿದ್ದಾಗ ನಾನು ಅಂಗಳದ ಧುಮ್ಮಣ್ಣಿನಲ್ಲಿ ಮೈತುರಿಸುತ್ತಾ ಕುಳಿತು ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ್ದೇನೆ! ಮಾಧ್ಯಮಿಕ ಶಿಕ್ಷಣಕ್ಕಾಗಿ ತಾಲೂಕಾ ಸ್ಥಳಕ್ಕೆ (ಸಿಂದಗಿಗೆ) ಬಂದಾಗ ಅಲ್ಲಿ ನಡೆಯುತ್ತಿದ್ದ ಧರ್ಮಾರ್ಥ ಬೋರ್ಡಿಂಗದಲ್ಲಿ ಉಳಿದ ಎಲ್ಲ ಹುಡುಗರು, ಮಠದ ಪಡಸಾಲೆಯಲ್ಲಿ ಒಟ್ಟಿಗೆ ಊಟಕ್ಕೆ ಕೂಡ್ರುತ್ತಿದ್ದಾಗ, ನಾನು ಬಹುದೂರ ಬೇವಿನಮರದ ಕೆಳಗೆ, ನಾಯಿಯ ಹಾಗೆ ಕಾದು ಕುಳಿತು, ಹಾಕಿದಾಗ ತಿಂದು ಎದ್ದಿದ್ದೇನೆ!"[೭]

ಈ ರೀತಿಯ ಅಮಾನವೀಯ ನೋವು, ವ್ಯಥೆ ಅನುಭವಿಸುತ್ತಾ ಕಣ್ಣೀರಿನೊಂದಿಗೆ ಕೂಳು ತಿನ್ನುತ್ತಾ ಛಲದಿಂದ ವಿದ್ಯಾಭ್ಯಾಸ ಮಾಡಿ ಅಂದಿನ

೫. ಮೂಕನ ಭಾಷಣ : ಬಿ.ಎಸ್. ಪೋಳ ಪುಟ ೧೦೬–೧೦೭.
೬. ಕುಮಾರ ಕಕ್ಕಯ್ಯ ಪೋಳ – ಸಿದ್ದಣ್ಣ ಲಂಗೋಟಿ ಪುಟ –೨೧.
೭. ಮೂಕನ ಭಾಷಣ – ಬಿ.ಎಸ್. ಪೋಳ ಪು – ೧೦೫

ಮುಲ್ಕಿ ಪರೀಕ್ಷೆಯನ್ನು ಉಚ್ಚಕುಲದ ವಿದ್ಯಾರ್ಥಿಗಳಿಗಿಂತ ಹೆಚ್ಚು ಅಂಕ ಪಡೆದು ಉನ್ನತ ದರ್ಜೆಯಲ್ಲಿ ಪಾಸಾದರು.

ದಲಿತ ವರ್ಗದ ಬಾಲಕನ ಛಲ, ಆತನನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿಜಾಪುರಕ್ಕೆ ಬರುವಂತೆ ಮಾಡಿತು. ಅಂದು ವಿಜಾಪುರದಲ್ಲಿ ಹರಿಜನ ವಿದ್ಯಾರ್ಥಿಗಳಿಗಾಗಿ ಪ್ರಾರಂಭಗೊಂಡಿದ್ದ ಕಾಕಾ ಕಾರ್ಖಾನೀಸರ ಬೋರ್ಡಿಂಗ ಸೇರಿದರು. ಪಿಡಿಜೆ ಹೈಸ್ಕೂಲಿನಲ್ಲಿ ಎಂಟನೇ ವರ್ಗಕ್ಕೆ ಪ್ರವೇಶ ಪಡೆದರು. ಇಲ್ಲಿಯೂ ಕೂಡ ಅವರಿಗೆ ಜಾತಿಯ ಭೂತ ಕಾಡಿತು ಜಾಣ ವಿದ್ಯಾರ್ಥಿಯಾಗಿದ್ದರೂ ಕೂಡ ಎಂಟನೆಯ 'ಸಿ' ಕ್ಲಾಸಿನಲ್ಲಿ (ಕೆಳಜಾತಿಯವರಿಗಾಗಿ ಮೀಸಲಿರಿಸಿದ್ದರಿಂದ) ಕುಳಿತು ಓದಬೇಕಾಯಿತು. ಮುಂದೆ ಆ ಸ್ಕೂಲು ತೊರೆದು ವಚನಪಿತಾಮಹ ಶ್ರೀ ಫ.ಗು.ಹಳಕಟ್ಟಿಯವರು ಸ್ಥಾಪಿಸಿದ್ದ ಬಿ.ಎಲ್.ಡಿ.ಇ ಸಂಸ್ಥೆಯ ಶ್ರೀ ಸಿದ್ದೇಶ್ವರ ಹೈಸ್ಕೂಲ ಸೇರಿ ಅಲ್ಲಿ ೯ ಮತ್ತು ೧೦ ನೇ ಕ್ಲಾಸುಗಳನ್ನು ಓದಿದರು. ಅಂದಿನ ಕಾಲದಲ್ಲಿ ವಿಜಾಪೂರ ಜಿಲ್ಲೆಯು ಮುಂಬಯಿ ರಾಜ್ಯಕ್ಕೆ ಸೇರಿತ್ತಾದ್ದರಿಂದ 'ಸೆಕಂಡರಿ ಸ್ಕೂಲ ಸರ್ಟಿಫಿಕೇಟ್ ಎಕ್ಸಾಮಿನೇಶನ್ ಬೋರ್ಡ ಬಾಂಬೆ' ವತಿಯಿಂದ ಎಸ್.ಎಸ್.ಸಿ ಪರೀಕ್ಷೆಯನ್ನು ಮಾರ್ಚ ೧೯೫೧ರಲ್ಲಿ ಪಾಸಾದರು. ಹೈಸ್ಕೂಲಿಗೆ ಬಂದಾಗ ಭೀಮ್ಯಾ ಸಾಯಿಬ್ಯಾ ಡ್ವಾರ ಎಂದು ಇದ್ದ ಪ್ರಾಥಮಿಕ ಶಾಲೆಯಲ್ಲಿಯ ಹೆಸರು ಈಗ ' ಭೀಮಣ್ಣಾ ಸಾಯಿಬಣ್ಣಾ ಢೋರ' ಎಂದು ಬದಲಿಸಿದ್ದರು.

ii) **ನೌಕರಿ :** ವಿಜಾಪುರದಲ್ಲಿ ಎಸ್.ಎಸ್.ಸಿ ಪಾಸಾಗಿ ಹೆಚ್ಚಿನ ವಿದ್ಯಾರ್ಜನೆಗೆ ಸೋಲಾಪುರಕ್ಕೆ ಬಂದು, ಅಲ್ಲಿಯ ದಯಾನಂದ ಕಾಲೇಜಿನಲ್ಲಿ ಫಸ್ಟ ಇಯರ್ ಸೈನ್ಸ್ ವರ್ಗಕ್ಕೆ ಹೆಸರು ಹಚ್ಚಿದರು. ಮನೆತನದ ಆರ್ಥಿಕ ಅಡಚಣಿ ಹಾಗೂ ಬಡತನದಿಂದಾಗಿ ಶಿಕ್ಷಣ ಮುಂದುವರೆಸಲು ಸಾಧ್ಯವಾಗದೇ ಸೊಲ್ಲಾಪುರದಲ್ಲಿಯೇ ಆರೋಗ್ಯ ಇಲಾಖೆಯಲ್ಲಿ ಇನಾಕುಲೇಟರ್ ಅಂದರೆ ' ವ್ಯಾಕ್ಸಿನೇಶನ್ ಹಾಕುವ ಆರೋಗ್ಯ ಕಾರ್ಯಕರ್ತ ಎಂದು ನೌಕರಿಗೆ ಸೇರಿದರು. ೧೯೫೧ ರಿಂದ ೧೯೫೨ ಒಂದು ವರ್ಷ ದುಡಿದರು. ಅದನ್ನು ತ್ಯಜಿಸಿ, ವಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿಗೆ ಬಂದು ೯ ತಿಂಗಳ ಕಾಲ ಕಾರಕೂನರಾಗಿ (ಕ್ಲಾರ್ಕ) ಕಾರ್ಯಮಾಡಿದರು. ೧೯೫೩ ರಲ್ಲಿ ಚಾಂದಕವಠೆಯ ನವಲಿ ನದಿಗೆ ರಾಮನಹಳ್ಳಿ ಬಳಿ ಕೆರೆ ನಿರ್ಮಾಣ ಕಾಲಕ್ಕೆ ಕಾರಕೂನರಾಗಿ ಹೋಗಿ ಸೇವೆ ಸಲ್ಲಿಸಿದರು. ೧೯೫೪ರಲ್ಲಿ ರೆವೆನ್ಯೂ ಡಿಪಾರ್ಟಮೆಂಟ ಸೇರಿ ಅಲ್ಲಿ ದ್ವಿತೀಯ ದರ್ಜೆ ಕ್ಲಾರ್ಕ್ ಎಂದು ನೌಕರಿ ಪ್ರಾರಂಭಿಸಿದರು. ೧೯೫೪ ರಿಂದ ೫೮ ವರೆಗೆ ಬದಾಮಿಯಲ್ಲಿ, ೧೯೫೮ ರಿಂದ ೧೯೬೧ ರವರೆಗೆ ಬಸವನ ಬಾಗೇವಾಡಿಯಲ್ಲಿ ಸೇವೆ ಮಾಡಿದರು. ೧೯೬೦ –೬೧ ರಲ್ಲಿ ನಡೆದ ಜನಗಣತಿ ಕಾರ್ಯದಲ್ಲಿ ಶ್ರದ್ಧೆಯಿಂದ ಕಾರ್ಯಮಾಡಿ ವಿಜಾಪುರ ಜಿಲ್ಲಾ ಮಟ್ಟದಲ್ಲಿ 'ಶ್ರೇಷ್ಠ ಜನಗಣತಿ ಕಾರ್ಯನಿರ್ವಾಹಕ' ಎಂದು ಪದಕದೊಂದಿಗೆ ಪ್ರಶಸ್ತಿ ಪಡೆದರು. ಮುಂದೆ ೧೯೬೩ ರ ವರೆಗೆ ತಹಶೀಲ್ದಾರ ಕಛೇರಿಯಲ್ಲಿ ಕ್ಲಾರ್ಕ ನೌಕರಿ ಮುಂದುವರೆಸಿದರು. ೧೯೬೩ ರಲ್ಲಿ ಪ್ರಥಮ ದರ್ಜೆ

ಕಾರಕೂನರಾಗಿ (ಎಫ್.ಡಿ.ಸಿ) ಬಡ್ತಿಹೊಂದಿ ಜಮಖಂಡಿಗೆ ಬಂದು ಅಲ್ಲಿ ೧೯೬೭ ರ ವರೆಗೆ ಕಾರ್ಯ ನಿರ್ವಹಿಸಿದರು. ೧೯೬೭ ರಿಂದ ೧೯೬೯ ವರೆಗೆ ವಿಜಾಪುರಕ್ಕೆ ಬಂದು ಸೇವೆ, ೧೯೬೯ರಿಂದ ೧೯೭೧ ವರೆಗೆ ಇಂಡಿಯಲ್ಲಿ, ೧೯೭೧ ರಿಂದ ೭೫ ವರೆಗೆ ಮರಳಿ ವಿಜಾಪುರಕ್ಕೆ ಆಗಮಿಸಿ ಸೇವೆ ಮಾಡಿದರು.

೧೯೭೫ ರಲ್ಲಿ ಶಿರಸ್ತೇದಾರ ಎಂದು ಬಡ್ತಿ ಹೊಂದಿ, ಬಸವನಬಾಗೇವಾಡಿ ತಹಸೀಲ್ದಾರ ಕಚೇರಿಗೆ ಆಗಮಿಸಿ ೧೯೭೮ ವರೆಗೆ ಸೇವೆ ಸಲ್ಲಿಸಿದರು. ೧೯೭೮ ರಲ್ಲಿ ತಹಶೀಲ್ದಾರ ಆಗಿ ಬಡ್ತಿ ಹೊಂದಿ ಇಂಡಿಗೆ ಆಗಮಿಸಿ ೧೯೮೧ವರೆಗೆ ಸೇವೆ ಸಲ್ಲಿಸಿ ಒಳ್ಳೆಯ ಹೆಸರು ಸಂಪಾದಿಸಿದರು. ಅಲ್ಲಿಂದ ಕಲಬುರ್ಗಿಗೆ ವರ್ಗವಾಗಿ ಬಂದು ೧೯೮೨ ವರೆಗೆ ತಹಶೀಲ್ದಾರರಾಗಿ ಸೇವೆ ಸಲ್ಲಿಸಿದರು. ಇಲ್ಲಿ ಸೇವೆ ಸಲ್ಲಿಸುತ್ತಿರುವಾಗಲೇ ಕರ್ನಾಟಕ ರಾಜ್ಯದ ಕಾಂಗ್ರೆಸ್ ಪಕ್ಷದ ದಲಿತ ನಾಯಕರು ವಿಜಾಪುರ ಜಿಲ್ಲೆಯ ಬಳ್ಳೊಳ್ಳಿ ಮೀಸಲು ಕ್ಷೇತ್ರದಿಂದ ವಿಧಾನಸಭೆ ಚುನಾವಣೆಗೆ ನಿಲ್ಲಲು ಪ್ರೇರೇಪಿಸಿ, ತಹಶೀಲದಾರ ಹುದ್ದೆಯಿಂದ ಸ್ವಯಂ ಸೇವಾ ನಿವೃತ್ತಿ ತೆಗೆದುಕೊಳ್ಳಲು ಹೇಳಿದರು. ಹಿಂದುಳಿದ ದೀನ – ದಲಿತರ, ಬಡವರ ಸೇವೆಗೆ ಒಂದು ಒಳ್ಳೆಯ ಅವಕಾಶವೆಂದು ಭಾವಿಸಿದರು. ಆದರೆ ರಾಜಕೀಯ ಮುಖಂಡರ ತಂತ್ರಗಾರಿಕೆಯಿಂದಾಗಿ ಪಕ್ಷದ ಟಿಕೇಟು ದೊರಕದ್ದರಿಂದ ರಾಜಕೀಯದ ಬಗ್ಗೆ ಜಿಗುಪ್ಸೆಗೊಂಡು, ಆಗಲೇ ಕಲ್ಯಾಣನಾಡಿನ ಶರಣ ಪರಿಷತ್ತಿನ ಸಂಪರ್ಕದಲ್ಲಿದ್ದುದರಿಂದ ಶ್ರೀ ಬಸವರಾಜ ತಂಬಾಕೆ. ಶ್ರೀ ಲಿಂಗಣ್ಣ ಸತ್ಯಂಪೇಟೆ, ಶ್ರೀ ಸಿದ್ದಣ ಲಂಗೋಟಿ, ಶ್ರೀ ಈರಣ್ಣ ನಾಗಠಾಣ ವಕೀಲರು, ಡಾ॥ ಎಸ್.ಜಿ. ಬಮ್ಮಣ್ಣಿ ಮುಂತಾದವರ ಕಳಕಳಿಯ ಬಿನ್ನಹಕ್ಕೆ ಓಗೊಟ್ಟು ಬಸವಧರ್ಮ – ಸಮಾಜ – ಸಾಹಿತ್ಯ–ಸಂಸ್ಕೃತಿ – ಸಾಧನೆಗೆ ತೊಡಗಿಸಿಕೊಂಡರು.

**ಕೌಟುಂಬಿಕ ಜೀವನ :**

ಕುಮಾರ ಕಕ್ಕಯ್ಯ ಪೋಳ ಅವರದು ಬಾಲ್ಯದಿಂದಲೂ ಹೋರಾಟ, ಸಂಘರ್ಷದ ಜೀವನವಾಗಿತ್ತು. ವಿದ್ಯಾರ್ಥಿಜೀವನ ಮುಗಿದು ನೌಕರಿ ಪ್ರಾರಂಭಿಸಿದಾಗ, ಸಿಂದಗಿ ತಾಲೂಕಿನ ಕನ್ನೊಳ್ಳಿ ಗ್ರಾಮದ ವಧು ಸುಂದರಾಬಾಯಿಯನ್ನು ನೋಡಿ, ಒಪ್ಪಿದರು. ದಿನಾಂಕ ೧೭.೦೬.೧೯೫೩ ರಲ್ಲಿ ಕಲ್ಯಾಣ–ವಿವಾಹವಾಯಿತು. ಸತಿ–ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂಬ ಶರಣರವಾಣಿಯಂತೆ ಇವರ ದಾಂಪತ್ಯ ಜೀವನವು ಪ್ರಾರಂಭವಾಯಿತು. ಇವರ ಉದರದಿಂದ ನಾಲ್ಕು ಜನ ಗಂಡು ಮಕ್ಕಳು ಹಾಗೂ ಇಬ್ಬರು ಹೆಣ್ಣುಮಕ್ಕಳು ಜನಿಸಿದರು. ಎಲ್ಲ ಮಕ್ಕಳಿಗೂ ಉತ್ತಮವಾದ ಶಿಕ್ಷಣ ದೊರೆಯುವಂತೆ ಮಾಡಿದರು.ಅವರ ಪ್ರತಿಭೆ ಹಾಗೂ ಬುದ್ಧಿಮಟ್ಟಕ್ಕನುಸಾರವಾಗಿ ವಿದ್ಯಾಭ್ಯಾಸ ಮಾಡಿಸಿದರು.

ಹಿರಿಯ ಮಗ ಡಾ.ಶಿವಶಂಕರ, ಎಂಬಿಬಿಎಸ್, ಡಿಪಿಎಂ, ಎಫ್.ಸಿಜೆಪಿ, ಎಫ್.ಸಿ ಎಸ್.ಇ.ಪಿ ಪದವಿಗಳನ್ನು ಹೊಂದಿ, ಧಾರವಾಡದ ಮಾನಸಿಕ ಆರೋಗ್ಯಕೇಂದ್ರದಲ್ಲಿ ಮನೋವೈದ್ಯಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಪತ್ನಿ ಶ್ರೀಮತಿ ಮಾಲತಿ ಪೋಳ ಇವರು ಎಂ.ಎಚ್.ಎಸ್‌ಸಿ ಓದಿ ಧಾರವಾಡದಲ್ಲಿಯೇ

ಮಕ್ಕಳು ಮತ್ತು ಮಹಿಳಾ ಕಲ್ಯಾಣ ಇಲಾಖೆಯ ಜಿಲ್ಲಾ ಅಧಿಕಾರಿಯಾಗಿ ಸೇವೆ ಮಾಡುತ್ತಿದ್ದಾರೆ. ಇವರಿಗೆ ಚಿ॥ ರಶ್ಮಿ ಹಾಗೂ ಚಿ॥ ಉಜ್ವಲ ಇಬ್ಬರು ಮಕ್ಕಳಿದ್ದಾರೆ.

ಎರಡನೆಯವಳು ಮಗಳು ಡಾ॥ ಸುಶೀಲಾ, ಎಂ.ಬಿ.ಬಿ.ಎಸ್, ಎಂ.ಎಸ್. ಓದಿ ವಿಜಾಪುರದಲ್ಲಿ ವೈದ್ಯೆಯಾಗಿ ಕಾಯಕ ಮಾಡುತ್ತಿದ್ದಾರೆ. ಇವರ ಪತಿ ಶ್ರೀ ಪ್ರಕಾಶ ಗರಗ ಬಿ.ಇ. ಎಕ್ಸಿಕ್ಯೂಟಿವ್ ಇಂಜನಿಯರಾಗಿ ಝಳಕಿಯಲ್ಲಿ ಸರಕಾರದ ನೀರಾವರಿ ಇಲಾಖೆಯಲ್ಲಿ ಸೇವೆಸಲ್ಲಿಸುತ್ತುದ್ದಾರೆ. ಇವರಿಗೆ ಚಿ॥ ನಯನಾ ಹಾಗೂ ಚಿ॥ ದೀಪಕ ಎಂಬ ಇಬ್ಬರು ಮಕ್ಕಳಿದ್ದಾರೆ.

ಮೂರನೆಯವರು ಮಗ, ಶ್ರೀ ಶಿವಪುತ್ರ ಬಿ.ಎಸ್‌ಸಿ. ಪದವೀಧರ. ವಿಜಾಪುರದಲ್ಲಿ ಅರಣ್ಯ ಇಲಾಖೆಯಲ್ಲಿ ಅಧಿಕಾರಿಯಾಗಿ ಸೇವೆಯಲ್ಲಿದ್ದಾರೆ. ಇವರ ಪತ್ನಿ ಶ್ರೀಮತಿ ಅನಿತಾ, ಬಿ.ಎ ಪದವೀಧರೆ. ಇವರಿಗೆ ಚಿ॥ ರೋಹಿಣಿ ಹಾಗೂ ಚಿ॥ ಅಶ್ವಿನಿ ಎಂಬ ಇಬ್ಬರು ಪುತ್ರಿಯರಿದ್ದಾರೆ.

ನಾಲ್ಕನೇಯವರು ಮಗ, ಶ್ರೀ ಶ್ರೀಕಾಂತ, ಇವರು ಬಿ.ಎ. ಪದವೀಧರ. ಇವರೂ ಕೂಡ ಅರಣ್ಯ ಇಲಾಖೆಯಲ್ಲಿ ಅಧಿಕಾರಿಯಾಗಿ ಜಮಖಂಡಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಪತ್ನಿ ಶ್ರೀಮತಿ ರೇಖಾ, ಬಿ.ಎ. ಪದವೀಧರೆ. ಇವರಿಗೆ ಚಿ॥ ನಿಖಿಲ ಹಾಗೂ ಚಿ॥ ಗೌತಮ ಇಬ್ಬರು ಮಕ್ಕಳಿದ್ದಾರೆ.

ಐದನೆಯವನು ಮಗ, ಶ್ರೀ ಚಿದಾನಂದ ಬಿ.ಇ ಓದಿದ್ದು, ಸರಕಾರದ ಪಿಡಬ್ಲುಡಿ ಇಲಾಖೆಯಲ್ಲಿ ಇಂಜನೀಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಪತ್ನಿ ಶ್ರೀಮತಿ ಸಾವಿತ್ರಿ, ಬಿ.ಎಸ್‌ಸಿ. ಬಿ.ಇಡಿ ಪದವೀಧರೆ, ಇವರು ವಿಜಾಪುರ ಸರಕಾರಿ ಹೈಸ್ಕೂಲಿನಲ್ಲಿ ಅಧ್ಯಾಪಕಿಯಾಗಿದ್ದಾರೆ. ಇವರಿಗೆ ಚಿ॥ಬೀನಾ ಎಂಬ ಪುತ್ರಿ ಇರುತ್ತಾಳೆ.

ಆರನೆಯವಳು ಮಗಳು, ಶ್ರೀಮತಿ ಪ್ರಮೀಳಾ ಬಿ.ಎಸ್‌ಸಿ.ಬಿ.ಇಡಿ ಇವರು ಕಾರವಾರ ಜಿಲ್ಲೆಯ ಕದ್ರಾದಲ್ಲಿ ಹೈಸ್ಕೂಲ ಅಧ್ಯಾಪಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಪತಿ ಶ್ರೀ ಎನ್.ಪಿ ಗಜಾಕೋಶ ಬಿ.ಇ ಓದಿದ್ದು. ಕರ್ನಾಟಕ ವಿದ್ಯುತ್‌ಶಕ್ತಿ ಮಂಡಳಿಯ ಇಂಜನಿಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರಿಗೆ ಚಿ॥ ಸುನಿಧಿ ಎಂಬ ಮಗಳಿದ್ದಾಳೆ.

ಈ ರೀತಿಯಾಗಿ ಮಕ್ಕಳು, ಸೊಸೆಯಂದಿರು, ಅಳಿಯಂದಿರು, ಮೊಮ್ಮಕ್ಕಳನ್ನೊಳಗೊಂಡ ತುಂಬು ಸಂಸಾರವನ್ನು ಪಡೆದು, ಸದ್ಗೃಹಸ್ಥ ಶರಣ ಜೀವನ ಬಾಳಿದವರು ಕುಮಾರ ಕಕ್ಕಯ್ಯ ಪೋಳರು.

**ಬಸವ ಮಹಾಬಯಲಿನೊಳು ಬಯಲು :** 'ಕುಮಾರ ಕಕ್ಕಯ್ಯ ಪೋಳ' ಎಂದೇ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ, ಶರಣಸಾಹಿತಿಗಳ ಬಳಗದಲ್ಲಿ ಖ್ಯಾತರಾಗಿದ್ದ ಧೀಮಂತ ಶರಣ, ಬಸವತತ್ವದ ಕ್ರಾಂತಿಕಾರಿ ಹೋರಾಟಗಾರ ದಿನಾಂಕ: ೧೫-೦೨-೧೯೯೬ ರಂದು ವಿಜಾಪುರದ ತಮ್ಮ ಮನೆ "ಶರಣ ಕಕ್ಕಯ್ಯ ನಿವಾಸ" ದಲ್ಲಿ ಬಸವ ಮಹಾಬಯಲಿನಲ್ಲಿ ಬಯಲಾದರು.

ಶರಣ ಕುಮಾರ ಕಕ್ಕಯ್ಯನವರು ದಿನಾಂಕ ೧೫.೦೨.೧೯೯೬ರಂದು ಲಿಂಗೈಕ್ಯರಾಗುವ ಪೂರ್ವದಲ್ಲಿ ಬೆಳಗಿನ ಜಾವ ತಮ್ಮ ಪತ್ನಿ ಹಾಗೂ ಮಕ್ಕಳನ್ನು

ಕೈಸನ್ನೆ ಮಾಡಿ ಹತ್ತಿರ ಕರೆದು – "ನಾನು ಬಸವಣ್ಣನವರ ಕಡೆಗೆಹೊರಟೇನಿ, ಬಸವಣ್ಣನವರ ಮಾಮನ್ಯಾಗ ಹೊಲಸ ಭಾಳ ಚಲ್ಯಾರ, ಭಾಳ ಹೊಲಸ ಆಗ್ಯಾದ, ಸ್ವಚ್ಚ ಮಾಡೂನು, ನೀನೂ ಬರ್ತಿದ್ರ ಬಾ, ...... ನೀ ಬ್ಯಾಡ ಬಿಡು, ಈಗ ನಾನೇ ಹೋಗ್ತೀನಿ,....... ಆಗಲೇ ನಾನು ಹೋಗಿದ್ದೆ, ಬಸವಣ್ಣನವರು....... ಬಾಗಿಲ ಹಾಕ್ಯಾರ, ಮಧ್ಯಾಹ್ನ ೪–೦೦ ಗಂಟೆಗೆ ಬಾಗಿಲ ತೆಗೀತೀನಿ, ಬಾ ಅಂದಾರ"[೮] ಎಂದು ನುಡಿದು ಆಯಾಸದಿಂದ ಕಣ್ಣು ಮುಚ್ಚಿ ಮಲಗಿದರು. ಸರಿಯಾಗಿ ಮಧ್ಯಾಹ್ನ ನಾಲ್ಕು ಗಂಟೆಗೆ ಕಣ್ಣು ತೆರೆದು ಎಲ್ಲರನ್ನೂ ಕಾರುಣ್ಯ ದೃಷ್ಟಿಯಿಂದ ನೋಡಿ, ಕಣ್ಣು ಮುಚ್ಚಿದರು, ಅವರ ಶರಣ ಚೇತನವು – ಬಸವ ಮಹಾಚೇತನದ ಮಹಾಬಯಲಿನಲಿ ಬೆರೆಯಿತು.

ಶ್ರೀ ಕುಮಾರ ಕಕ್ಕಯ್ಯನವರು ತಮ್ಮ ' ಅಂತ್ಯ ಸಂಸ್ಕಾರ 'ದ ಬಗ್ಗೆಯೂ ಕೂಡ ಮಕ್ಕಳೊಂದಿಗೆ ಮೊದಲೇ ತಿಳಿಸಿದ್ದರಂತೆ– " ಇಲ್ಲೀತನಕ ಸಮಾಜದಾಗ ನಮ್ಮನ್ನು ದಲಿತರು, ಅಸ್ಪೃಶ್ಯರು ಅಂತಾ, ನಮಗ ಹೊಲ ಇಲ್ಲದ್ದಕ್ಕೆ ಸತ್ತಾಗ, ಊರ ಹೊರಗ ಹೆಣ ಒಯ್ದು ಸುಡುತ್ತಿದ್ದರು. ಈಗ ನಾನು ಹೊಲ ಖರೀದಿಸೀನಿ. ನನ್ನ ಲಿಂಗದೇಹವನ್ನು ಹೊಲಕ್ಕೆ ಒಯ್ದು ಬಸವಧರ್ಮದ ಪ್ರಕಾರ ಕ್ರಿಯಾ ಸಮಾಧಿ ಮಾಡಬೇಕು. ಹಲಗಿ ಹಚ್ಚಬಾರದು, ಭಜನೆ ಹಚ್ಚಿರಿ, ಶಿವಶರಣರ ವಚನಗಳನ್ನು ಹಾಡಿಸಿರಿ, ನಮ್ಮ ತೋಟದೊಳಗೆ ಅಂತ್ಯ ಸಂಸ್ಕಾರ ಮಾಡಿರಿ"[೯]

ಈ ಪ್ರಕಾರವೇ ನಾಡಿನಾದ್ಯಂತದಿಂದ ಆಗಮಿಸಿದ ಬಸವಧರ್ಮದ ಸ್ವಾಮಿಗಳು, ಶರಣರು, ಬಂಧು–ಬಳಗದವರು ಬಸವ ಭಜನೆ, ಸ್ತುತಿ, ಜಯಘೋಷ ಮಾಡುತ್ತ ಅವರ ಹೊಲಕ್ಕೆ ಹೋಗಿ ಷಟ್‌ಸ್ಥಲಯುಕ್ತ ಕ್ರಿಯಾ ಸಮಾಧಿ ಮಾಡಲಾಯಿತು. ಶರಣರ ಜೀವನ ಮರಣದಲ್ಲಿ ನೋಡು ಎಂಬಂತೆ ಬಾಳಿ ಬದುಕಿದರು, ಜನಮನದಲ್ಲಿ ಉಳಿದರು[೧೦]

**iii) ಸಾಹಿತ್ಯ ಸಾಧನೆ – ಕೃತಿಗಳು :**

ಕುಮಾರ ಕಕ್ಕಯ್ಯಾ ಪೋಳ ಅವರು ಬಾಲ್ಯದಿಂದಲೂ ಅಸ್ಪೃಶ್ಯತೆಯ ನೋವು ಉಣ್ಣುತ್ತಲೇ, ವರ್ಣಾಶ್ರಮಧರ್ಮದ ಹೊಲೆಗೆಸರ ಹೊಂಡದಿಂದ ಮೇಲೆದ್ದು ಬಂದು, ಅಪಾರ ಜೀವನಾನುಭವದಿಂದ ಕ್ರಾಂತಿಕಾರಿ ಸಾಹಿತ್ಯ ರಚನೆಯನ್ನು ೧೯೬೩ ರಿಂದಲೇ ಪ್ರಾರಂಭಿಸಿದರು. ಅವರು ಜಮಖಂಡಿಗೆ ನೌಕರಿ ಮಾಡಲು ಬಂದಾಗ, ಅಲ್ಲಿ 'ನವಹಿಂದ್' ಎಂಬ ವಾರ ಪತ್ರಿಕೆ ನಡೆಸುತ್ತಿದ್ದ ಶ್ರೀ ಪ್ರೋಂಕ್ಷೆ ಬಂಧುಗಳ ಪರಿಚಯವಾಯಿತು. ಆ ಪತ್ರಿಕೆಯು ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು. ಶ್ರೀ ಪೋಳ ಅವರು ಎರಡೂ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಶ್ರೀ ಪ್ರೋಂಕ್ಷೆಯವರು ಪತ್ರಿಕೆಯ ಕನ್ನಡ ವಿಭಾಗವನ್ನು

---

೮. ಕುಮಾರ ಕಕ್ಕಯ್ಯ ಪೋಳ – ಪ್ರೊ. ಸಿದ್ದಣ್ಣ ಲಂಗೋಟಿ ಪುಟ – ೯೬.

೯. ಅದೇ – ಪುಟ ೯೭.

೧೦. ಕುಮಾರ ಕಕ್ಕಯ್ಯ ಪೋಳ – ಪ್ರೊ. ಸಿದ್ದಣ್ಣ ಲಂಗೋಟಿ ಪುಟ ೯೮.

ಇವರಿಗೆ ವಹಿಸಿಕೊಟ್ಟಿದ್ದರಿಂದ ನವಹಿಂದ್ ಪತ್ರಿಕೆಯಲ್ಲಿ ' ಬೋಳಿಸಿದ ತಲೆ' ಎಂಬ ಶೀರ್ಷಿಕೆಯಲ್ಲಿ ಚುಟುಕುಗಳನ್ನು ಬರೆದು ಪ್ರಕಟಿಸತೊಡಗಿದರು. ಇವು ಸಾಮಾಜಿಕ ದೋಷಗಳ ಮೇಲೆ ಚಾಟಿ ಏಟಿನಂತೆ ಪ್ರಹಾರ ಮಾಡತೊಡಗಿದವು. ಓದುಗರ ಸಂಖ್ಯೆ ಹೆಚ್ಚಾಯಿತು.

೧೯೬೫ ರಿಂದ ೧೯೯೬ ವರೆಗೆ ಅಖಂಡ ೩೨ ವರುಷಗಳ ಕಾಲ ವೈವಿಧ್ಯಮಯವಾದ ೧೪ ಕ್ರಾಂತಿಕಾರಕ ಸಾಹಿತ್ಯ ಕೃತಿಗಳನ್ನು ಬರೆದು ಪ್ರಕಟಿಸಿದರು.
**೧. ಧರ್ಮಕ್ರಾಂತಿ** : ಇದು ೧೯೬೫ ರಲ್ಲಿ ಪ್ರಕಟವಾದ ವೈಚಾರಿಕ ಕೃತಿಯಾಗಿದೆ. ಇದರಲ್ಲಿ ಅದ್ಭುತವಾದ ೮೨ ವೈಚಾರಿಕ ಚಿಂತನಕ್ಕೆ ತೊಡಗಿಸುವ ನುಡಿಮುತ್ತುಗಳಿವೆ. ಈ ಕೃತಿಯನ್ನು ಅರ್ಪಣೆ ಮಾಡಿದ ರೀತಿಯು ಕಣ್‌ತೆರೆಸುವಂತಿದೆ – "ಭಕ್ತಿ ಭಕ್ತಿ ಎಂದು ಭಜಿಸಿ, ನೇಮನಿಷ್ಠೆಯಿಂದ ಜಪ ಮಾಡಿ ನೇರವಾಗಿ ಸ್ವರ್ಗಸೇರಿ, ಮುಕ್ತಿ ಪಡೆಯಬೇಕೆಂದು ಹಲುಬಿ ಹಂಬಲಿಸಿ, ಗಾಳಿಯೊಡನೆ ಗುದ್ದಾಡುವ ಮಹಾನುಭಾವರಿಗೆ ಸಮರ್ಪಣೆ"[೧೧] ಈ ಕೃತಿಯಲ್ಲಿ ೮೨ ವಿಚಾರಪೂರ್ಣ ವಾಕ್ಯಗಳನ್ನು ವೈಚಾರಿಕವಾಗಿ ವಿವರಿಸುತ್ತಾ ಓದುಗರಿಗೆ ಚಿಂತನಕ್ಕೆ ತೊಡಗಿಸಿದ್ದಾರೆ–

* ಕಾಣದ ದೇವರನ್ನು ಹುಡುಕುವದಕ್ಕಿಂತ ಕಾಣುವ ಸುಂದರ ಸೃಷ್ಟಿಯನ್ನೊಮ್ಮೆ ಸೂಕ್ಷ್ಮ ದೃಷ್ಟಿಯಿಂದ ನೋಡು.
* ಈ ನಿಸರ್ಗದ ತೊಟ್ಟಿಲನ್ನು ತೂಗುತ್ತಿರುವ ಶಕ್ತಿಯೇ ದೇವರೆಂದು ತಿಳಿ.
* ದೇವರು ರೂಪತಾಳಿ ಅವತರಿಸುವನು ಎಂದು ತಿಳಿದರೆ ಅದು ಮೂರ್ಖತನದ ಪರಮಾವಧಿ.
* ಎರಡನೆಯವರ ತುತ್ತು ಕಸಿದುಕೊಂಡರೆ ಅದು ನಿನ್ನ ಹೊಟ್ಟೆಯಲ್ಲಿ ವಿಷವಾಗುವುದು.
* ಧರ್ಮ, ಜಾತಿ, ಭಾಷೆಯ ವ್ಯಾಮೋಹದಲ್ಲಿ ಸೊಣಗನಂತೆ ಬೊಗಳಿ ದೇಶದ್ರೋಹಿಯಾಗಬೇಡ.
* ನಿನ್ನ ಸತಿಯು ಪತಿವ್ರತೆಯಾಗಿರಬೇಕು ಎಂದು ಹಂಬಲಿಸುವ ನೀನು ಮೊದಲು ಸತಿವ್ರತನಾಗು.[೧೨]

**೨. ಇದು ನನ್ನ ಸಮಾಜ** : ೧೯೬೭ ರಲ್ಲಿ ಪ್ರಕಟವಾದ ಇದೊಂದು ಕ್ರಾಂತಿಕಾರಕ ನಾಟಕವಾಗಿದೆ. ಸಂಪ್ರದಾಯದ ಕರ್ಮಠ ಹಿಂದೂ ಸಮಾಜದ ನಗ್ನ ಚಿತ್ರಣವನ್ನು ಈ ನಾಟಕದ ಮೂಲಕ ಮಾಡಿಸಿದ್ದಾರೆ–

"ಇದು ನನ್ನ ಸಮಾಜ! ಜಾತಿ ಜಾತಿಯ ಸೆಣೆಸಾಟ, ಮೇಲು ಕೀಳುಗಳ ಬಡಿದಾಟ, ಹೆಚ್ಚು ಕಡಿಮೆಯ ತಿಕ್ಕಾಟ, ಭಾರತ ಮಾತೆಯ ಪೇಚಾಟ! ಇದು ಸಹಸ್ರಾರು ವರುಷಗಳಿಂದಾ ನಡೆದು ಬಂದ ಪೆಡಂಭೂತ ಸಮಾಜದ ಪರಿಪಾಠ. ಜಾತೀಯತೆಯ ಕುಟಿಲತೆಯಿಂದಾಗಿ ಶತಶತಮಾನ ವರುಷಗಳಿಂದ ದೇಶ ದಾಸತ್ವ

೧೧. ಧರ್ಮಕ್ರಾಂತಿ – ಶ್ರೀ ಬಿ.ಎಸ್. ಪೋಳ ಚಾಂದಕವಠೆ ಪುಟ – iii.
೧೨. ಕುಮಾರ ಕಕ್ಕಯ್ಯ ಪೋಳ – ಪ್ರೊ ಸಿದ್ದಣ್ಣ ಲಂಗೋಟಿ ಪುಟ –೨೧.

ವಹಿಸಿತು! ಆದರೂ ನಮ್ಮದು ಹೆಮ್ಮೆಯ ಇತಿಹಾಸ. ಮೂಗು ಹೋದರೂ ಮೂಗಿನ ಸೊಳ್ಳೆ ಇದೆ ಅನ್ನುವದು ಇದು ನನ್ನ ಸಮಾಜ!.

ಅಮೇರಿಕೆಯಲ್ಲಿಯ ಬಿಳಿಯರು ಅಲ್ಲಿಗೆ ವಲಸೆ ಬಂದ ನಿಗ್ರೋ ಜನರಿಗೆ ಸರಿಸಮಾನ ಹಕ್ಕು ಕೊಡುತ್ತಿಲ್ಲಾ ಎಂದು ಭಾರತದಲ್ಲಿ ಬೊಬ್ಬಾಟ! ಆದರೆ ಒಂದೇ ಬಣ್ಣದ, ಬಂದೇ ಉಸುರಿನ, ಒಂದೇ ಉದರದ ಬಂಧುಗಳನ್ನು ಊರ ಹೊರಗಿಟ್ಟು ಮೋಜ ನೋಡುವ ಕರಾಳ ಸನ್ನಿವೇಶ, ಈ ನನ್ನ ಸಮಾಜದಲ್ಲಿ !.

ದೇಶ ಸ್ವತಂತ್ರವಾಯಿತು. ಆದರೆ ಊರ ಮುಂದಿನ ಹೊಲಗೇರಿ ಊರಲ್ಲಿ ಕೂಡಿ ಲೀನವಾಗಲಿಲ್ಲ![೧೩]

"ಯಾವ ದೇಶದಾಗ, ಯಾವ ಧರ್ಮದಲ್ಲಿ ನಮಗೆ ಮರ್ಯಾದೆ ಇಲ್ಲಾ, ಆ ದೇಶ, ಆ ಧರ್ಮದ ಅಭಿಮಾನ ನಮಗೆ ಯಾಕ ಇರಬೇಕು? ಇದು ನಮಗೆ ಬಿಡಲಾರದ ಕರ್ಮ ಏನು? ಈ ದರಿದ್ರ ಧರ್ಮ ಈ ದರಿದ್ರ ಜಾತಿ, ನಾವು ಅದೇಕೆ ಬದಲಾಯಿಸಬಾರದು ?........ ಯಾವ ಧರ್ಮದಲ್ಲಿ ನಮ್ಮನ್ನು ಮನುಷ್ಯರೆಂದು ಕಾಣುವದಿಲ್ಲಾ, ಆ ಧರ್ಮ ತಗೊಂಡು ನಮಗೇನು ಮಾಡುವದಪ್ಪಾ?[೧೪]

ನಾಟಕದ ಪಾತ್ರಗಳ ಮೂಲಕ ಇಂತಹ ಮಾತುಗಳನ್ನು ಹೊರಹೊಮ್ಮಿಸಿ ಸಮಾಜವನ್ನು ಬಡಿದೆಬ್ಬಿಸುವ ಪ್ರಯತ್ನ ಮಾಡಿದ್ದಾರೆ. ಶೋಷಣೆ ದಬ್ಬಾಳಿಕೆ, ಕೊಲೆ – ಸುಲಿಗೆ, ಎಲ್ಲವೂ ಕಣ್ಣೆದುರಿಗೆ ನಡೆಯುವಂತೆ ವಾಸ್ತವ ಸಂಗತಿಗಳಿಗೆ ಹಿಡಿದ ಕನ್ನಡಿಯಾಗಿದೆ. ಪ್ರಸ್ತುತ ಈ ನಾಟಕದಲ್ಲಿ ಹಣಿಮಿ ಎಂಬ ವೇಶ್ಯೆ ಹೇಳುವ ಮಾತುಗಳು ನಾಗರಿಕ ಸಮಾಜ ತಲೆ ತಗ್ಗಿಸುವಂತೆ ಮಾಡುತ್ತವೆ"[೧೫]

೩. **ಸಮಾಜದ ತೊಡರಿಗೆ ಧರ್ಮದ ಕಗ್ಗಂಟು** : ಇದು ೧೯೬೯ ರಲ್ಲಿ ಪ್ರಕಟವಾದ ೧೬ ಕಥೆಗಳ ಕಥಾಸಂಕಲನವಾಗಿದೆ. ಕಥೆಗಾರ ಶ್ರೀ ಕುಮಾರ ಕಕ್ಕಯ್ಯನವರು ಈ ಗ್ರಂಥದ ವಿಜ್ಞಾಪನೆಯಲ್ಲಿ ಹೇಳಿರುವಂತೆ "ನೊರೆ ಹಾಲಿನಂತಿದ್ದ ನೈಜಧರ್ಮ, ತಲೆಮಾರುಗಳಿಂದಾ ಸಾಗಿ ಬಂದ ಸಂಪ್ರದಾಯದ ಪರಿಣಾಮವಾಗಿ ಅದು ಈಗ ತಂಗಳ ಮಜ್ಜಿಗೆಯಂತೆ ಹುಳಿಚಿಟ್ಟಿದೆ. ಹುಳಹೊಕ್ಕ ಕಾಯಿಯಂತೆ ಒಳ ತಿರುಳೆಲ್ಲವೂ ಲಯವಾಗಿ ಕೇವಲ ಶಿಷ್ಟಾಚಾರದ ಚಿಪ್ಪು ವಿಪರೀತವಾಗಿ ಬೆಳೆದು ನಿಂತಿದೆ.

ಇಂದಿನ ಧಾರ್ಮಿಕತೆ ಮತ್ತು ಜಾತೀಯತೆಯ ಕುರುಡು ನಂಬಿಗೆಯ ಹಾಗೂ ಶುಷ್ಕ ವಿಚಾರಗಳು ಬಲಹೀನ ಹಾಗೂ ಸ್ವಾರ್ಥಿಗಳ ತಂಡ ತಂಡಗಳನ್ನೇ. ನಿರ್ಮಿಸಿರುವವು. ಸಹಸ್ರಾರು ವರುಷಗಳಿಂದ ಪೌರಾಣಿಕ ಧರ್ಮವು ಹೇಳುತ್ತಾ ಬಂದ ಪ್ರಚಲಿತ ಸಂಪ್ರದಾಯದಿಂದ ಅದಾವ ಗೌರವಯುತ ಘನಕಾರ್ಯವಾಗಿದೆ? ಸಮಾಜದಲ್ಲಿಯ ಸ್ವಪ್ರತಿಷ್ಠೆಯ ಅತಿರೇಕವು ನಾಡನ್ನು ಅದಾವ ಮಟ್ಟಕ್ಕಿಳಿಸಿದೆ? ಎಷ್ಟೊಂದು ಜಗದ್ಗುರುಗಳು? ಎಷ್ಟೊಂದು ಮಠಗಳು? ಎಷ್ಟೊಂದು ಗುಂಪು,

೧೩. ಇದು ನನ್ನ ಸಮಾಜ – ಶ್ರೀ ಭೀಮರಾವ ಎಸ್.ಪೋಳ ಚಾಂದಕವಠೆ ಪುಟ –೧೦೬.
೧೪. ಇದು ನನ್ನ ಸಮಾಜ ಪುಟ ೮೩–೮೪.
೧೫. ದಲಿತ ಸಾಹಿತಿ ಕುಮಾರ ಕಕ್ಕಯ್ಯ ಪೋಳ – ಡಾ. ಎಚ್.ಟಿ. ಪೋತೆ ಪುಟ – ೧೪.

ಪಂಥ, ಜಾತಿ, ಮತಗಳು? ಒಬ್ಬರನ್ನು ಕಂಡರೆ ಮತ್ತೊಬ್ಬರಿಗೆ ಆಗದು. ಒಂದು ಮನೆಯ ಸೊಣಗವು ಇನ್ನೊಂದು ಮನೆಯ ಸೊಣಗವನ್ನು ಕಂಡು ಹಲ್ಲು ಕಿರಿದು ಹೌಹಾರಿ ಅದರ ಮೇಲೆ ಎರಗುವಂತೆ, ಒಂದು ಕೋಮಿನವರ ಮೇಲೆ ಇನ್ನೊಂದು ಕೋಮಿನವರು ಎರಗುತ್ತಾರೆ. ಇದಕ್ಕೂ ಮಿಗಿಲಾದ ಅಧೋಗತಿ, ಅವನತಿ ಮತ್ತೆ ಬೇರುಂಟೆ? ಇದಕ್ಕೆ ಹೊಣೆಯಾರು? ಇದನ್ನು ಹೇಳುವುದಕ್ಕಾಗಿಯೇ ಶೃಂಗಾರ ಭರಿತ, ಜಾಗೃತ ಜೀವಂತವಾದ ಈ ಕಥಾ ಸಂಕಲನ."[೧೬]

ಈ ಕಥಾ ಸಂಕಲನದಲ್ಲಿ 'ಕಣ್ಣು ಮುಚ್ಚಿ ಪುಣ್ಯ ಎನಬೇಡಾ, ದುಷ್ಟ ಗ್ರಹಗಳು, ಪೇಚಾಡಿದ ಪುನರ್ಜನ್ಮ, ಮರಣದ ತರುವಾಯ ಮುಂದೇನು? ನಾಸ್ತಿಕ, ಅಪ್ಸರೆಯರಿಂದ ಅಂಗಸೇವೆ, ಅಯ್ಯ ಮಾಡಿದ ಪಾಪ ಕೈ ಮ್ಯಾಗ, ನೀಯೆನ್ನ ಮುಟ್ಟಬೇಡ, ಸಮಾಜದ ತೊಡರಿಗೆ ಧರ್ಮದ ಕಗ್ಗಂಟು' ಮುಂತಾದ ಕಥೆಗಳು ಮನನೀಯವಾಗಿವೆ, ವೈಚಾರಿಕ ಚಿಂತನೆಗೆ ಹಚ್ಚುತ್ತವೆ.

**೪. ನಿಯತಿ ಶಾಸನ.** : ಇದು ಕುಮಾರ ಕಕ್ಕಯ್ಯ ಪೋಳ ಅವರ ಚೊಚ್ಚಲ ಕಾದಂಬರಿಯಾಗಿದ್ದು, ೧೯೭೩ ರಲ್ಲಿ ಪ್ರಕಟವಾಗಿದೆ. ಶ್ರೀಯುತರು ಕಾದಂಬರಿಯ ಪ್ರಾರಂಭದ 'ಅರಿಕೆ'ಯಲ್ಲಿ – "ಜಾತಿ – ಪಂಥ, ದೇವ –ಧರ್ಮಗಳ ಹೆಸರಿನಲ್ಲಿ ಎಲ್ಲೆಲ್ಲಿಯೂ ನಡೆದದ್ದು ಬೂಟಾಟಿಕೆ. ಲಂಚ ಕೊಡದೆ, ಕಾಳ ಸಂತೆಗೆ ಹೋಗದೆ, ವಶೀಲಿ ಹಚ್ಚದೆ ಯಾವ ಕೆಲಸವೂ ಸುಗಮಗೊಳ್ಳುವದಿಲ್ಲ. ಇಂತಹ ದುಷ್ಕೃತಿಗಳ ಪರಿಣಾಮವೆಂದರೆ ಸಮಾಜದ ಅಳಿಗಾಲ! ನಾಡಿಗೆ ನರಕ!! ಆದರೇನು? ನಿಯತಿ ಶಾಸನ ತಪ್ಪುವುದೇ ? ಅದರ ಕರಾಳ ಚಕ್ರದಲ್ಲಿ ಸಿಕ್ಕು ಗಾಸಿಗೊಳ್ಳುತ್ತಿರುವ ಅವನನ್ನು ಸತ್ಯ ಹಾಗು ಧಾರ್ಮಿಕತೆ ಮಾತ್ರ ಉಳಿಸಬಲ್ಲವೆಂದು ಭಾವಿಸಿದ್ದೇನೆ. ಅದನ್ನೇ ಈ ಕೃತಿಯಲ್ಲಿ ರೂಪಿಸಲು, ಬಣ್ಣಿಸಲು ಪ್ರಯತ್ನಿಸಿದ್ದೇನೆ."[೧೭] ಎಂದು ತಮ್ಮ ಉದ್ದೇಶವನ್ನು ವ್ಯಕ್ತ ಪಡಿಸಿದ್ದಾರೆ.

ಖ್ಯಾತ ಜಾನಪದ ಸಾಹಿತಿ ಶ್ರೀ ಸಿಂಪಿ ಲಿಂಗಣ್ಣನವರುಈ ಕೃತಿಯ ಮುನ್ನುಡಿಯಲ್ಲಿ – "ಶ್ರೀ ಪೋಳ ಅವರು ಏರಿಕೆಯ ಉತ್ಸಾಹದಲ್ಲಿ ಬರೆದ ಈ ನಿಯತಿ ಶಾಸನವು ತಾಂತ್ರಿಕ ಚಮತ್ಕಾರದಿಂದ ಹಾಗೂ ವಿಷಯ ಪುರಸ್ಕಾರದಿಂದ ವಾಚಕರ ಮರ್ಮವನ್ನು ಕೆಣಕುವ ಕಿಡಿಯಾಗಿದೆ. ಇದೊಂದು ತಪ್ಪೊಪ್ಪಿಗೆ, ಆತ್ಮ ನಿವೇದನೆ ಮಹರ್ಷಿ ಟಾಲಸ್ಟಾಯರ ಕನಫೆಶ್ಯನ್, ಮಹಾತ್ಮಾ ಗಾಂಧಿಯವರ ಸತ್ಯ ಸಂಶೋಧನೆ ಇವುಗಳ ಮಾದರಿಯಲ್ಲಿ ರೂಪುಗೊಂಡ ಸಮರ್ಥ ಕೃತಿ. ನಿಯತಿ ಶಾಸನದ ನಿವೇದಕ ಟಾಕಾರಾಮ ಕಾಲ್ಪನಿಕ ವ್ಯಕ್ತಿ. ಆದರೂ ಇಂದಿನ ಭ್ರಷ್ಟಾಚಾರ ಸಮಾಜದ ಪ್ರತೀಕ ಪ್ರತಿನಿಧಿ. ಅಟ್ಟ ಮೇಲೆ ಒಲೆ ಉರಿದಂತೆ ಕೆಟ್ಟಮೇಲೆ ಬುದ್ಧಿ ಬಂದ ಶಾಪಗ್ರಸ್ಥ"[೧೮]

---

೧೬. ಸಮಾಜದ ಧರ್ಮದ ಕಗ್ಗಂಟು – ಬಿ.ಎಸ್. ಪೋಳ ಪುಟ – iii.

೧೭. ನಿಯತಿ ಶಾಸನ – ಬಿ.ಎಸ್. ಪೋಳ ಪುಟ – xi

೧೮. ನಿಯತಿ ಶಾಸನ – ಬಿ.ಎಸ್. ಪೋಳ ಮುನ್ನುಡಿ ಪುಟ – iv

"ಟಾಕಾರಾಮನ ಬದುಕಿನ ಚಿತ್ರಣದ ಮೂಲಕ ಸಮಾಜದ ದುರಂತ ದುಃಸ್ಥಿತಿ ತಿಳಿಸುತ್ತಾ ಬಸವಣ್ಣನವರ ಧರ್ಮ ತತ್ವಗಳ ಮಹತ್ವ ಹಾಗೂ ಅವಶ್ಯಕತೆಗಳನ್ನು ಬಿಂಬಿಸಿದ್ದಾರೆ. ಈ ಭೂಮಿಯ ಮೇಲೆ ಆಗಿ ಹೋದ ಮಾನವೀಯ ಮೌಲ್ಯಗಳ ಪ್ರತಿಪಾದಕರಲ್ಲಿ ಬಸವಣ್ಣನವರು ಶ್ರೇಷ್ಠರಾಗಿದ್ದಾರೆ. ಆತ್ಮವಂಚಕರಾದ ಇಂದಿನ ಸಂಪ್ರದಾಯವಾದಿಗಳು, ಧರ್ಮಾಧಿಕಾರಿಗಳು ಹಾಗೂ ಮಠಾಧೀಶರು ಅಂದಿನಿಂದ ಇಂದಿನವರೆಗೂ ತಮ್ಮ ಜೀವವಿರೋಧಿ ನೆಲೆಯನ್ನು ಹೆಚ್ಚಿಸಿಕೊಳ್ಳುತ್ತಾ ಬಸವ ಚಿಂತನೆಗೆ ಅಗೌರವ ತಂದಿದ್ದಾರೆ. ಬಸವಧರ್ಮಕ್ಕೆ ಚಿಂತನಗೆ ಬೇಲಿ ಹಾಕುತ್ತಾ ಕುಬ್ಜರಾಗಿ ವರ್ತಿಸುತ್ತಿದ್ದಾರೆ"[೧೯] ಎಂದು ಪೋಳ ಅವರು ಎಚ್ಚರಿಸಿದ್ದಾರೆ.

**೫. ಗೀಜಗನ ಗೂಡು.** ೧೯೭೫ ರಲ್ಲಿ ಪ್ರಕಟವಾದ ಒಂದು ಸಾಮಾಜಿಕ ಕಾದಂಬರಿಯಾಗಿದೆ. ಈ ಕಾದಂಬರಿಯಲ್ಲಿ ನಿರುದ್ಯೋಗಿ ಯುವಕರಿಗೆ ಸಂದೇಶವಿದೆ. ಶ್ರೀಯುತರ ಆಶಯದಂತೆ – "ಚರಂಡಿಯ ತೇವಿಲ್ಲದೆ ಕಪ್ಪೆ ಬದುಕಿದರೂ ಬದುಕಬಹುದು, ಆದರೆ ನೌಕರಿ ಇಲ್ಲದೆ ಇಂದಿನ ಪದವೀಧರ ಬದುಕಲಾರ. ಪದವೀಧರನಾದ ಶಿವಾನಂದ ನೌಕರಿಗಾಗಿ ಏನೆಲ್ಲ ಪ್ರಯತ್ನ ಮಾಡುತ್ತಾನೆ. ಕೊನೆಗೆ ಸಿಕ್ಕ ನೌಕರಿ ಕೈಬಿಟ್ಟಾಗ, ಆತನಿಗೆ ತನ್ನ ಜೀವನವೇ ವ್ಯರ್ಥವೆನಿಸುತ್ತದೆ. ತಮ್ಮ ಹಳ್ಳಿಯ ತೋಟದ ಬಾವಿಯಲ್ಲಿ ನೇತಾಡುವ ಗೀಜಗನ ಗೂಡನ್ನು ನೋಡುತ್ತಾನೆ. ಆ ಗೀಜಗ ಹಕ್ಕಿ, ಟೆಕ್ನಿಕಲ್ ಕೋರ್ಸ ತೆಗೆದುಕೊಂಡು ಡಿಪ್ಲೋಮಾ ಪಾಸ ಆಗಿಲ್ಲ ಅಥವಾ ತನ್ನಂತೆ ಪದವೀಧರನಾಗಿ ಯಾವುದೇ ಯುನಿವರ್ಸಿಟಿ ಸರ್ಟಿಫಿಕೇಟ್ ಪಡೆದಿಲ್ಲ. ಆದಾಗ್ಯೂ ಇಷ್ಟೊಂದು ಕಲಾತ್ಮಕವಾದ ಗೂಡನ್ನು ಅದು ಹೇಗೆ ಕಟ್ಟುತ್ತದೆ? ಹಕ್ಕಿಗಳು ತಮ್ಮ ಕೊಕ್ಕೆಯಿಂದ ಬದುಕುತ್ತವೆ. ಬಾಹುಗಳಲ್ಲಿ ಶಕ್ತಿ ಇದ್ದ ನಾನು ಸ್ವಾವಲಂಬಿ ಜೀವನ ಬದುಕಲಾರೆನೆ?"[೨೦]

ಈ ರೀತಿ ಚಿಂತನ ಮಾಡುವ ತರುಣ ತನ್ನ ಜೀವನ ಮಾರ್ಗವನ್ನೇ ಬದಲಿಸಿಕೊಂಡು ಸಂತೋಷದ ಬದುಕನ್ನು ನಡೆಸುತ್ತಾನೆ. ಈ ಕಾದಂಬರಿಯಲ್ಲಿ ಬರುವ ಸುನಂದಳ ಪಾತ್ರವು ಮಧುರ ಪ್ರೇಮದಿಂದ ಕೂಡಿದ್ದು ಕಾದಂಬರಿಯ ಜೀವಾಳವಾಗಿದೆ.

ಈ ಕಾದಂಬರಿಯ ಮುನ್ನುಡಿಯಲ್ಲಿ ಶ್ರೀ ಮೇಘಮಿತ್ರ ಅವರು – "ಪ್ರಜ್ಞಾಶೀಲ ಲೇಖಕ, ತನ್ನ ಹಾಗೂ ತನ್ನ ಪರಿಸರದ ಜನಜೀವನವನ್ನು ಆಳವಾಗಿ ಅವಲೋಕಿಸಿ ಆತ್ಮಾನುಭೂತಿಯನ್ನು ಅಸ್ಖಲಿತವಾಗಿ ಅಭಿವ್ಯಕ್ತಗೊಳಿಸುತ್ತಾನೆ. ಇಂಥ ಅಗ್ನಿ ದಿವ್ಯ ಪ್ರಸಂಗದಿಂದ ಉದ್ಭೂತಗೊಳ್ಳವ ಸತ್ಯವು ಲೋಕಜೀವನಕ್ಕೆ ಬೆಂಬೆಳಕು ನೀಡುತ್ತದೆ. ಪ್ರಸ್ತುತ ಕಾದಂಬರಿ 'ಗೀಜಗನ ಗೂಡು' ಲೇಖಕರ ಈ ಬಗೆಯ ಪ್ರಾಮಾಣಿಕ ಪ್ರಯತ್ನದ ಫಲವಾಗಿ ಮೂಡಿ ಬಂದ ಉತ್ತಮ ಕೃತಿಯಾಗಿದೆ"[೨೧]

---

೧೯. ದಲಿತ ಸಾಹಿತಿ ಕುಮಾರ ಕಕ್ಕಯ್ಯ ಪೋಳ – ಡಾ. ಎಚ್.ಟಿ.ಪೋತೆ ಪು –೧೧

೨೦. ಗೀಜಗನಗೂಡು – ಶ್ರೀ ಬಇ.ಎಸ್. ಪೋಳ. ಕವ್ವರ ಪುಟ –೪.

೨೧. ಗೀಜಗನ ಗೂಡು – ಶ್ರೀ ಬಿ. ಎಸ್.ಪೋಳ ಮುನ್ನುಡಿ ಪುಟ – i.

ಒಟ್ಟಿನಲ್ಲಿ ಶ್ರೀ ಕುಮಾರ ಕಕ್ಕಯ್ಯನವರು ಬರೆದ ಗೀಜಗನಗೂಡು ಕಾದಂಬರಿಯು ಇಂದಿನ ಆಧುನಿಕ ಯುಗದ ನಿರುದ್ಯೋಗಿ ತರುಣರಿಗೆ, ಸೋಮಾರಿ ಯುವಜನತೆಗೆ ಜೀವನದಲ್ಲಿ ಒಂದು ಸ್ಪಷ್ಟವಾದ ಗುರಿಯನ್ನು ತೋರುತ್ತದೆ. ಸ್ವಾವಲಂಬನೆಯ ಬದುಕು ರೂಪಿಸಿಕೊಂಡು ಸ್ವಾಭಿಮಾನದಿಂದ ಬಾಳುವ ಎದೆಗಾರಿಕೆಯನ್ನು ರೂಢಿಸಿಕೊಳ್ಳಲು ಪ್ರೇರಣೆ ನೀಡುತ್ತದೆ.

**೬.ಕುಮಾರ ಕಕ್ಕಯ್ಯನ ವಚನಗಳು :** ಕ್ರಾಂತಿಕಾರಿ ಲೇಖಕ ಕುಮಾರ ಕಕ್ಕಯ್ಯನವರು ೧೯೬೧ ರಿಂದಲೇ ಲೇಖನ, ಚುಟುಕು, ಕವಿತೆ, ವಚನ ಬರೆಯಲು ಪ್ರಾರಂಭಿಸಿದವರು. ಶ್ರೀಯುತರು ತಾವು ಬರೆದ ವಚನಗಳನ್ನು ಬಿಡಿ ಬಿಡಿಯಾಗಿ ದಿನಪತ್ರಿಕೆ, ವಾರಪತ್ರಿಕೆ, ಪಾಕ್ಷಿಕ, ಮಾಸಿಕಗಳಿಗೆ ಕಳಿಸುತ್ತಿದ್ದರು, ವಿಜಾಪುರದ ಶರಣ ಬಳಗ ಹಾಗೂ ಗೆಳೆಯರ ಒತ್ತಾಸೆಯಂತೆ ೧೯೭೭ರಲ್ಲಿ ಸ್ವರಚಿತ ವಚನಗಳ ಒಂದು ಸಂಕಲನವನ್ನು ಪ್ರಕಟನೆಗೆ ಸಿದ್ಧ ಪಡಿಸಿದರು. ವಿಜಾಪುರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿತು. ಈ ಕೃತಿಯಲ್ಲಿ ಒಟ್ಟು ೪೧೬ ವಚನಗಳಿವೆ.

ಈ ಕೃತಿಗೆ ಮುನ್ನುಡಿ ಬರೆದ ಕನ್ನಡದ ಖ್ಯಾತ ಕಾದಂಬರಿಕಾರ ಶ್ರೀ ಬಸವರಾಜ ಕಟ್ಟಿಮನಿ ಅವರು ಶ್ರೀ ಕುಮಾರ ಕಕ್ಕಯ್ಯನವರ ಹಾಗೂ ಅವರ ವಚನಗಳ ಕುರಿತು " ಸಾಹಿತ್ಯದ ಕೇಂದ್ರವಾದ ಧಾರವಾಡದಿಂದ ದೂರದಲ್ಲಿರುವ ವಿಜಾಪುರದಲ್ಲಿ ಶ್ರೀ ಪೋಳರಂಥ ಯೋಗ್ಯತಾವಂತ ಸಾಹಿತಿಗಳಿದ್ದರೂ ಸಹ, ಅವರ ಬರಹಗಳು ಅಚ್ಚಾಗಲು ಅಲ್ಲಿ ಸರಿಯಾದ ಪತ್ರಿಕೆಗಳಿಲ್ಲದೆ, ಪ್ರೋತ್ಸಾಹಕರಿಲ್ಲದೆ, ವಿಮರ್ಶಕರಿಲ್ಲದೆ ಇರುವದರಿಂದ, ಅವರು ಅಖಿಲ ಕರ್ನಾಟಕದಲ್ಲಿ ಪರಿಚಿತರಾಗುವದು ಕಠಿಣವಾಗಿದೆ......... ಅವರು ಬರೆದ ಚುರುಕಾದ ವಚನಗಳು ವಾಚಕರ ಮನಸ್ಸಿನಲ್ಲಿ, ಬಹು ವರ್ಷಗಳವರೆಗೆ ಉಳಿಯುವಂಥವುಗಳಾಗಿವೆ. ಇವುಗಳಲ್ಲಿಯ ಹಲವು ನುಡಿಗಳು ಗಾದೆಯ ಮಾತುಗಳಾಗಿ ಜನ ಜೀವನದಲ್ಲಿ ಶಾಶ್ವತ ಸ್ಥಾನ ಪಡೆಯುವಂಥವುಗಳಾಗಿವೆ. ಶ್ರೀ ಪೋಳ ಅವರು ಕನ್ನಡ ಸಾಹಿತ್ಯದಲ್ಲಿ ನುರಿತವರು, ಆಳವಾಗಿ ಅಭ್ಯಶಿಸಿದವರು, ಗದ್ಯ ಪದ್ಯಗಳೆರಡರಲ್ಲಿಯೂ ಕೈಯಾಡಿಸಿದವರು, ಭಾಷೆಯ ಮೇಲೆ ಪ್ರಭುತ್ವವುಳ್ಳವರೂ ಆಗಿರುವರು."[೨೨]

ರೆವಿನ್ಯೂ ಇಲಾಖೆಯಲ್ಲಿ ನೌಕರರಾಗಿ ದುಡಿಯುತ್ತಲೇ ಜೀವನಾನುಭವಗಳನ್ನು ವಚನರೂಪದಲ್ಲಿ ಹೊರ ಹೊಮ್ಮಿಸಿದ ಅವರ ಸಾಹಿತ್ಯ ಶಕ್ತಿ ಅದ್ಭುತವಾದುದು–

" ಇಂಜನೀಯರರನ ಮಗನ ಲಗ್ನ
ಗುತ್ತೇದಾರರ ಹುಂಡಿಗೆ ವಿಘ್ನ.
ತಹಸೀಲ್ದಾರನ ಮಗಳ ಲಗ್ನ
ತಲಾಟಿಯವರ ವೇತನಕ್ಕೆ ವಿಘ್ನ.
ಅಮಲದಾರರ ಮಕ್ಕಳ ಲಗ್ನ

೨೨. ಕುಮಾರ ಕಕ್ಕಯ್ಯನ ವಚನಗಳು – ಶ್ರೀ ಬಿ. ಎಸ್.ಪೋಳ ಮುನ್ನುಡಿ ಪುಟ ೧–೨.

ಬಡಪಾಯಿ ನೌಕರರಿಗೆ ಕಡುವಿಘ್ನವೆಂದ
ಕುಮಾರ ಕಕ್ಕಯ್ಯ[೨೩]

ಖ್ಯಾತ ಸಾಹಿತಿ ಶ್ರೀ ಹಂ. ಪ. ನಾಗರಾಜಯ್ಯ ಅವರು – " ಬಿ.ಎಸ್.ಪೋಳ ಅವರು ಕುಮಾರ ಕಕ್ಕಯ್ಯಾ ಎಂಬ ಕಾವ್ಯನಾಮದಿಂದ ವಚನಗಳನ್ನು ರಚಿಸಿದ್ದಾರೆ. ತಮ್ಮ ಸುತ್ತಲ ಬದುಕನ್ನು ಅವರು ಹೇಗೆ ಗ್ರಹಿಸಿದ್ದಾರೆಂಬುದನ್ನು ಇಲ್ಲಿ ಅನೇಕ ವಚನಗಳು ತಿಳಿಸುತ್ತವೆ. ಬಹುಪಾಲು ವಚನಗಳು ನೀತಿಬೋಧನೆ, ಧಾರ್ಮಿಕ ದೃಷ್ಟಿ, ವೈರಾಗ್ಯ ಭಾವ ಮುಂತಾದ ಆದರ್ಶಗಳನ್ನು ಎತ್ತಿ ಹಿಡಿದಿವೆ. ಸಹಜವಾಗಿಯೇ ಇಂಥ ವಚನಗಳಲ್ಲಿ ಕಾವ್ಯಾಂಶ ಕಡಿಮೆಯಾಗಿ ಚಿಂತನಾಂಶಗಳು ಅಧಿಕವಾಗಿರುತ್ತವೆ.[೨೪] ಎಂದಿದ್ದಾರೆ.

**೭. ಮೂಕನ ಭಾಷಣ :** ೧೯೭೯ರಲ್ಲಿ ಪ್ರಕಟವಾದ ಕುಮಾರ ಕಕ್ಕಯ್ಯಾ ಪೋಳ ಅವರು ಬರೆದ ಪ್ರಬಂಧಗಳ ಸಂಕಲನವಾಗಿದೆ. ವಿಜಾಪುರದ ಡಾ॥ ಅಂಬೇಡ್ಕರ ಸ್ಮಾರಕ ಸಮಿತಿಯವರು ಪ್ರಕಟಿಸಿದ್ದು, ಇದರಲ್ಲಿ ಸಾಕ್ಷಾತ್ಕಾರ, ಆರ್ಯರ ದೇವ ದೇವತೆಗಳು, ಧರ್ಮಗುರುಗಳು, ಹಿಂದೂ ಧರ್ಮದ ರಹಸ್ಯ ಎಂಬ ನಾಲ್ಕು ವೈಚಾರಿಕ ಪ್ರಬಂಧಗಳಿವೆ. ಸಹಸ್ರಾರು ವರುಷಗಳಿಂದ ಉಚ್ಚವರ್ಣೀಯರ ದಬ್ಬಾಳಿಕೆಗೆ ತುತ್ತಾದ ದಲಿತ (ಮೂಕ) ಭಾಷಣ ಮಾಡುತ್ತಾನೆ.

ಕುಮಾರ ಕಕ್ಕಯ್ಯನವರೇ ಹೇಳುವಂತೆ – " ಈ ಭಾಷಣ ತತ್ವಜ್ಞಾನಿಗಳಿಗಾಗಿ, ವಿದ್ವಾಂಸರಿಗಾಗಿ, ಅಥವಾ ವಿಜ್ಞಾನಿಗಳಿಗಾಗಿ ಹೇಳಿದುದಲ್ಲ. ಯಾವುದೇ ಆಳವಾದ ಅಭ್ಯಾಸ ಅಥವಾ ಪಾಂಡಿತ್ಯದ ಪ್ರದರ್ಶನ ಮಾಡುವ ಇಚ್ಛೆ ನನಗಿಲ್ಲ. ವಾದ ಹಾಕಿ ವಿಷಯ ಸಮರ್ಥಿಸಲು ನಾನು ಬಯಸುವದಿಲ್ಲ. ದೇವರು, ಧರ್ಮ ಮತ್ತು ಜಾತಿ ಇವುಗಳ ವಿಪರೀತ ಪರಿಣಾಮಗಳಿಂದಾಗಿ ಇಂದಿನ ಮಾನವ, ಮಾನವೀಯತೆಯನ್ನು ಕಳೆದುಕೊಂಡಿದ್ದಾನೆ. ಧರ್ಮದ ಹೆಸರಿನಲ್ಲಿ ಕೆಲವೊಂದು ವಿಶಿಷ್ಟ ಕೋಮಿನವರು ದಬ್ಬಾಳಿಕೆ ನಡೆಸಿದ್ದಾರೆ. ಕೆಳವರ್ಗದ ಬಡಪಾಯಿಗಳು ಘೋರವಾದ ಯಾತನೆಗಳನ್ನು ಅನುಭವಿಸುತ್ತಿದ್ದಾರೆ. ಧರ್ಮದ ಭದ್ರಕೋಟೆಯಲ್ಲಿ. ಧಾರ್ಮಿಕ ಬಂಧೀಖಾನೆಗಳಲ್ಲಿ ಜಾತೀಯತೆಯ ಸಂಕೋಲೆಗಳಿಂದ ಪ್ರತಿಬಂಧಿತರಾಗಿ ಜನನದಿಂದ ಮರಣದವರೆಗೆ ಒಂದೇ ಸವನೆ ಕೊಳೆಯುತ್ತಲೇ ಇರುವ, ಸಹೋದರ ಸಹೋದರಿಯರಲ್ಲಿ ಕೆಲವರಾದರೂ ನನ್ನ ಈ ಮೂಕನ ಭಾಷಣದ ಅರ್ಥ ಮಾಡಿಕೊಂಡರೆ, ಅದು ನಾನು ಹೇಳಿದ್ದಕ್ಕೆ ಸಾರ್ಥಕ"[೨೫] ಎಂದಿದ್ದಾರೆ.

' ಸಾಕ್ಷಾತ್ಕಾರ' ಪ್ರಬಂಧದಲ್ಲಿ – " ಹಾಲು ಅಮೃತ, ಅದನ್ನು ಕುಡಿಯಬೇಕು, ಆದರೆ ಹಾಲೆಂದು ಸುಣ್ಣದ ನೀರು ಕೊಟ್ಟರೆ? ಕಾಲ್ಪನಿಕ ಸಾಕ್ಷಾತ್ಕಾರಕ್ಕಾಗಿ ಅನೇಕರು ಅನೇಕ ಮಾರ್ಗಗಳನ್ನು ಅನುಸರಿಸುತ್ತಾರೆ. ಸಾಕ್ಷಾತ್ಕಾರ...... ಮನಸ್ಸಿನ ಕಾಲ್ಪನಿಕ

---

೨೩. ಕುಮಾರ ಕಕ್ಕಯ್ಯನ ವಚನಗಳು – ಪುಟ ೧೧ ವಚನ –೩.
೨೪. ಕುಮಾರ ಕಕ್ಕಯ್ಯನ ವಚನಗಳು – ಪುಟ ೧–೨.
೨೫. ಮೂಕನ ಭಾಷಣ – ಶ್ರೀ ಎಸ್. ಪೋಳ ಮುನ್ನುಡಿ ಪುಟ –೩

ಭ್ರಾಂತಿಯೇ ಹೊರತು, ಅದಕ್ಕೆ ಯಾವುದೇ ರೀತಿಯ ಯಾವುದೇ ಅಧಿಕೃತ ಆಧಾರ ಇಲ್ಲ ಗೊಡ್ಡು ಅಧ್ಯಾತ್ಮಿಗಳ ಬಗ್ಗೆ ಎಚ್ಚರವಾಗಿರಿ. ಮೋಸ ಹೋಗಿ ಆ ಬಳಿಕ ಪರಿತಪಿಸಬೇಡಿ"[೨೬]) ಎಂದು ಎಚ್ಚರಿಸಿದ್ದಾರೆ.

'ಆರ್ಯರ ದೇವ –ದೇವತೆಗಳು' ಎಂಬ ಪ್ರಬಂಧದಲ್ಲಿ – " ಆರ್ಯರಿಗೆ ಬೇಕಾದವರೆಲ್ಲರೂ ದೇವ –ದೇವತೆಗಳಾದರು, ಬೇಡಾದವರೆಲ್ಲರೂ ದಾನವರಾದರು. ಈ ದೇವ ದೇವತೆಗಳು ಯುದ್ಧಗಳನ್ನು ಮಾಡಿದ್ದಾರೆ, ಒಬ್ಬರ ರುಂಡ ಇನ್ನೊಬ್ಬರು ಚಂಡಾಡಿದ್ದಾರೆ. ಒಬ್ಬರ ಹೆಂಡಿರನ್ನು ಇನ್ನೊಬ್ಬರು ಓಡಿಸಿಕೊಂಡು ಹೋಗಿದ್ದಾರೆ"[೨೭]

'ಧರ್ಮಗುರುಗಳು' ಪ್ರಬಂಧದಲ್ಲಿ – 'ಧರ್ಮದ ಹೆಸರಿನಲ್ಲಿ ಜನತೆಯ ಮೌಢ್ಯದ ದುರುಪಯೋಗ ಮಾಡಿಕೊಂಡು ಅಡ್ಡ ಪಲ್ಲಕ್ಕಿಯಲ್ಲಿ ಮೆರೆಯುತ್ತಾರೆ, ಪಾದ ಪೂಜೆ ಮಾಡಿಸಿಕೊಳ್ಳುತ್ತಾರೆ. ಪಟ್ಟಾಭಿಷೇಕ ಮಾಡಿಸಿಕೊಳ್ಳುತ್ತಾರೆ. ರತ್ನಖಚಿತ (ಬೆಳ್ಳಿ ಬಂಗಾರದ) ಕಿರೀಟ ಧರಿಸಿ ಸಿಂಹಾಸನ ಮೇಲೆ ಕೂಡುತ್ತಾರೆ" [೨೮]ಇಂಥವರ ಬಗ್ಗೆ ಸಮಾಜ ಎಚ್ಚರವಹಿಸಬೇಕೆಂದು ತಿಳಿ ಹೇಳುತ್ತಾರೆ.

'ಹಿಂದೂಧರ್ಮದ ರಹಸ್ಯ' ಎಂಬ ಪ್ರಬಂಧದಲ್ಲಿ – "ಹಿಂದೂ ಧರ್ಮದ ಮನುಸ್ಮೃತಿಯ ಕಟ್ಟಳೆಗನುಗುಣವಾಗಿ ಕುಲಜರು ಅಂತ್ಯಜರ ಮರ್ದನ ಮಡುತ್ತಲೇ ಇದ್ದಾರೆ...... ದಲಿತರನ್ನು ದಲಿತರನ್ನಾಗಿಡುವುದರಲ್ಲಿಯೇ ಹಿಂದುಗಳ ಪ್ರತಿಷ್ಠೆ ಅಡಗಿದೆ. ಅದೇ ಅವರ ಧರ್ಮದ ರಹಸ್ಯವಾಗಿದೆ."[೨೯] ಈ ಬಗ್ಗೆ ಎಚ್ಚರವಹಿಸಿರಿ ಎಂದು ದೀನ, ದಲಿತ, ಹಿಂದುಳಿದವರಿಗೆ ಎಚ್ಚರಿಸಿದ್ದಾರೆ.

ಜಾಗೃತಿಯ ಕಾಲ ಹತ್ತಿರವಾಗುತ್ತಿದೆ. ದೀನ – ದಲಿತರು, ಶೂದ್ರ – ಅಸ್ಪೃಶ್ಯರು, ಬಡವರು –ಶೋಷಿತರು, ಮಹಿಳೆಯರು – ಕಾರ್ಮಿಕರು ಎಲ್ಲರೂ ಜಾಗೃತರಾಗಬೇಕಿದೆ. ಶಿಕ್ಷಣ ಹಾಗೂ ಸಂಸ್ಕಾರ ಪಡೆದು ಸನಾತನ ಧರ್ಮದ ಕರ್ಮಠ – ಸಮಪ್ರದಾಯವಾದಿಗಳ ದೈಹಿಕ–ಬೌದ್ಧಿಕ ಶೋಷಣೆಯಿಂದ ಮುಕ್ತರಾಗಬೇಕಿದೆ. "ಮೂಕನ ಭಾಷಣ ಇದು ಬರಿ ಭ್ಹಾಷಣವಲ್ಲ, ಕರ್ಮಠ ಸಂಪ್ರದಾಯ, ಕ್ರೂರ ಧರ್ಮ ಹಾಗೂ ಪುರೋಹಿತಶಾಹಿಯನ್ನು ಭಸ್ಮಮಾಡುವ ಜ್ವಾಲಾಮುಖಿಯಾಗಿ ಹೊರಹೊಮ್ಮಿದ ಕ್ರಾಂತಿಕಾರಿ ಗ್ರಂಥವಾಗಿದೆ"[೩೦]

**೮. ಬಸವಧರ್ಮ ಯಾರ ಸೊತ್ತು? :** ಕುಮಾರ ಕಕ್ಕಯ್ಯ ಪೋಳ ಅವರಿಂದ ರಚಿತವಾದ, ೧೯೮೩ರಲ್ಲಿ ಪ್ರಕಟವಾದ ಈ ಕೃತಿಯು ಚಿಂತನಪರ ಪುರಾಣ ಪ್ರಬಂಧವಾಗಿದೆ.

ಈ ಚಿಂತನಪರ ಪುರಾಣ ಪ್ರಬಂಧದಲ್ಲಿ ಕುಮಾರ ಕಕ್ಕಯ್ಯನವರು ಪರಮೇಶ್ವರ ಕೈಲಾಸ, ಧಾರ್ಮಿಕ ಸೆರೆಯಾಳುಗಗಳು, ಶಿವನಸಭೆ, ಚಂದೀರಾಜನ ಪ್ರಭಾವ,

೨೬. □ ಅದೇ □ ಪುಟ–೧–೨

೨೭. ಮೂಕನ ಭಾಷಣ – ಶ್ರೀ ಬಿ.ಎಸ್. ಪೋಳ ಪುಟ–೩೪.

೨೮. ಮೂಕನ ಭಾಷಣ – ಶ್ರೀ ಎಸ್. ಪೋಳ ಪುಟ –೫೮

೨೯. □ ಅದೇ □ ಪುಟ ೧೦೪–೧೦೫.

೩೦. ಕುಮಾರ ಕಕ್ಕಯ್ಯ ಪೋಳ – ಪ್ರೊ ಸಿದ್ದಣ್ಣ ಲಂಗೋಟಿ ಪುಟ ೪೯.

ಆಗದವರ ಆಪಾದನೆ, ವೈರಿಗಳ ಅವಶ್ಯಕತೆಯೇ ಇಲ್ಲ, ಕಳ್ಳನ ತಿರುಬೊಬ್ಬೆ, ದುರುದ್ದೇಶಿತ ಪ್ರಶ್ನೆ, ಸವರ್ಣೀಯರ ಬಂಡವಾಳ, ಮಾತಿನ ಬಂಟರು, ಶರಣರ ಪ್ರತಿಜ್ಞೆ ಮುಂತಾದ ಒಟ್ಟು ಹನ್ನೊಂದು ಅಧ್ಯಾಯಗಳಲ್ಲಿ ಬಸವಾದಿ ಶರಣರ ಧರ್ಮ – ಸಮಾಜ – ಸಂಸ್ಕೃತಿ ಹಾಗೂ ಕಲ್ಯಾಣಕ್ರಾಂತಿ, ಇತ್ಯಾದಿ ವಿಷಯಗಳ ಕುರಿತು ವೈಚಾರಿಕವಾಗಿ ಚಿಂತನೆ ನಡೆಸಿದ್ದಾರೆ. ಸ್ವತಃ ಲೇಖಕರೇ ತಮ್ಮ ಈ ಗ್ರಂಥದ ಪೀಠಿಕೆಯಲ್ಲಿ ತಮ್ಮ ಈ ಪ್ರಬಂಧದ ಉದ್ದೇಶವನ್ನು ಹೀಗೆ ವಿವರಿಸಿದ್ದಾರೆ – " ಬಸವಧರ್ಮದ ಮೇಲೆ ಆನುವಂಶಿಕವಾಗಿ ತಮ್ಮ ಸಂತಾನವೇ ಪ್ರಭುತ್ವ ನಡೆಸಬೇಕೆನ್ನುವ ಈ ಪುರೋಹಿತಶಾಹಿ ಧರ್ಮ ಗುರುಗಳು 'ವೀರಶೈವ ಸಿದ್ಧಾಂತವು ಜಾತಿ ಸಂಕರಣವನ್ನು ಸಂಪೂರ್ಣವಾಗಿ ಖಂಡಿಸುತ್ತದೆ, ಆದ್ದರಿಂದ ವೀರಶೈವರಲ್ಲಿ ಜಾತಿಸಂಕರಣಕ್ಕೆ ಆಸ್ಪದವೇ ಇಲ್ಲ' ಎಂದು ಹೇಳುತ್ತ ಇವರು ಮತ್ತೆ ತಮ್ಮದನ್ನೇ ಸಾಧಿಸುತ್ತಿದ್ದಾರೆ. ಹಾಗಾದರೆ 'ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೇ ಎಂಬೆ" ಎಂದು ಸಾರುವ ಬಸವಣ್ಣನವರ ಧರ್ಮ ಯಾರದು? ಅದು ಯಾರ ಸೊತ್ತು? ಅದರ ವಾರಸುದಾರರು ಯಾರು? ಬಸವಣ್ಣನವರನ್ನು ಬಲಿ ತೆಗೆದುಕೊಂಡವರು ಯಾರು? ಶರಣರು ಕಣ್ಣೀರು ಸುರಿಸಿದಲ್ಲಿ ಇಂದು ರಕ್ತ ಸುರಿಯುತ್ತಿರುವದೇಕೆ? ಕಲ್ಯಾಣ ಕಟುಕರಾಳಲಿ ಎಂದು ಶಪಿಸಿದವರಾರು? ಬಸವಣ್ಣನವರ ಪರುಷಕಟ್ಟೆ ಕಟುಕರ ಮಾರುಕಟ್ಟೆ ಆದದ್ದೇಕೆ? ಬಸವಣ್ಣನವರ ಜಾತ್ಯಾತೀತತೆಗೆ ಭದ್ರ ಬೀಗ ಹಾಕಿ, ಅದರ ಮೇಲೆ ಘಟಸರ್ಪಗಳಾಗಿ ಕಾವಲು ಕುಳಿತವರಾರು? ಇಂಥ ಇನ್ನೂ ಅನೇಕ ವಿಷಯಗಳನ್ನು. ಹೇಳುವದೇ ಈ 'ಬಸವಧರ್ಮ ಯಾರ ಸೊತ್ತು ? ಎಂಬ ಕಲ್ಯಾಣ ಶರಣರ ದುರಂತ ಪುರಾಣ ಪ್ರಬಂಧದ ಉದ್ದೇಶ........ ಕೆಲವೊಂದು ಜನ ಪಟ್ಟಭದ್ರ ಹಿತಾಸಕ್ತಿಗಳು, ಲಿಂಗಾಯತರ ಮೇಲೆ ಆನುವಂಶಿಕವಾಗಿ ತಮ್ಮ ಪ್ರಭುತ್ವ ಸ್ಥಾಪಿಸುವದಕ್ಕಾಗಿ, ಬಸವಣ್ಣ ಮತ್ತು ಬಸವಧರ್ಮಕ್ಕೆ ಕಲಂಕ ಹಚ್ಚುತ್ತಿದ್ದಾರೆ."[೩೧]

ಬಸವಧರ್ಮವು ಉಚ್ಚವರ್ಗಿಯರ, ಮೇಲ್ಜಾತಿಯವರ, ಪೂಜಾರಿ ಪುರೋಹಿತರ ಕಪಿಮುಷ್ಠಿಯಲ್ಲಿ ಸಿಲುಕಿ ನಲುಗಿ ಹೋಗುತ್ತಿರುವುದನ್ನು ಮನಗಂಡ ಕುಮಾರ ಕಕ್ಕಯ್ಯ ಪೋಳ ಅವರು ಇದರ ನಿಜವಾದ ವಾರಸುದಾರರು ಯಾರು? ಎಂಬುದನ್ನು ಆಧಾರ ಸಹಿತವಾಗಿ ಚರ್ಚಿಸಿ, ಇದು ದೀನದಲಿತರ, ಅಸ್ಪೃಶ್ಯರ ಶೂದ್ರರ, ಮಹಿಳೆಯರ ಸೊತ್ತು ಎಂಬುದನ್ನು ಪ್ರತಿಪಾದಿಸಿದ್ದಾರೆ. ಬಸವತತ್ವನಿಷ್ಠ ಸಮಾಜಸುಧಾರಕ ಸ್ವಾಮಿಗಳಾದ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಪೂಜ್ಯ ಶ್ರೀ ಮನಿಪ್ರ ಮಹಾಂತಸ್ವಾಮಿಗಳವರು "ಬಸವಧರ್ಮ ಯಾರ ಸೊತ್ತು ? ಎಂಬ ಈ ಗ್ರಂಥದಲ್ಲಿ ಕುಮಾರ ಕಕ್ಕಯ್ಯ ಪೋಳ ಅವರು ಸಕಲಜೀವಿಗಳಿಗೆ ಲೇಸನೇ ಬಯಸಿದ, ಮಾನವ ಕುಲದ ಕಲ್ಯಾಣ ಬಯಸಿದ ಸಮತೆ–ಸ್ವಾತಂತ್ರ್ಯ–ಬಂಧುತ್ವದ ವಿಶ್ವವಿನೂತನವಾದ ಬಸವಧರ್ಮವು ಇಂದು ಪುರೋಹಿತಶಾಹಿ, ಶೋಷಕರ ಪಾಲಾಗಿರುವುದನ್ನು ಕಂಡು ಮನನೊಂದಿದ್ದಾರೆ. ನ್ಯಾಯನಿಷ್ಠುರರಾಗಿ

---

೩೧. ಬಸವಧರ್ಮ ಯಾರ ಸೊತ್ತು ? – ಕುಮಾರ ಕಕ್ಕಯ್ಯ ಪೋಳ ಪುಟ –೧೫.

ಗಣಾಚಾರಿಗಳಾಗಿ ಮೌಢ್ಯದ ವಿರುದ್ಧ ಕ್ರಾಂತಿ ಕಹಳೆ ಮೊಳಗಿಸಿದ್ದಾರೆ, ಬಸವಧರ್ಮದ ಜ್ಯೋತಿ ಬೆಳಗಿಸಿದ್ದಾರೆ......... ಜಾತಿ ರಹಿತ ಸಮಾಜ ನಿರ್ಮಾಣದ ಧ್ಯೇಯವಿರಿಸಿದ ಕಲ್ಯಾಣ ಶರಣರ ಬಸವಧರ್ಮವು ಚೆನ್ನಯ್ಯ, ಕಕ್ಕಯ್ಯ ಹರಳಯ್ಯ, ಶಿವನಾಗಮಯ್ಯ. ಚೌಡಯ್ಯ, ಮಾಚಯ್ಯ, ಚಂದಯ್ಯ, ಅಪ್ಪಣ್ಣ, ಗೊಲ್ಲಾಳೇಶ್ವರ, ಗುಂಡಯ್ಯ, ಉರಿಲಿಂಗಪೆದ್ದಿ ಮುಂತಾದ ಶರಣಪರಂಪರೆಯವರ ಸೊತ್ತು ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ."[೩೨]

ಈ ರೀತಿಯಾಗಿ 'ಬಸವಧರ್ಮ ಯಾರ ಸೊತ್ತು ?' ಎಂಬ ಚಿಂತನಪರ ಪ್ರಬಂಧವು ವೀರಶೈವ ಜಂಗಮ ಪುರೋಹಿತಶಾಹಿಗಳ ಶೋಷಣೆ, ಹುನ್ನಾರಗಳನ್ನು ಬಯಲುಮಾಡಿ, ಬಸವಭಕ್ತರನ್ನು ಜಾಗೃತ ಮಾಡುವಲ್ಲಿ ಯಶಸ್ವಿಯಾದ ಕೃತಿಯಾಗಿದೆ.

**೯. ಬಸವಧರ್ಮ ದರ್ಶನ :** ೧೯೮೫ ರಲ್ಲಿ ಪ್ರಕಟವಾದ 'ಬಸವಧರ್ಮ ದರ್ಶನ' ಎಂಬ ಕೃತಿಯಲ್ಲಿ ಕುಮಾರ ಕಕ್ಕಯ್ಯ ಪೋಳ ಅವರು ಬಸವಧರ್ಮದ ದರ್ಶನವನ್ನೇ ಮಾಡಿಸಿದ್ದಾರೆ. ಕುಮಾರ ಕಕ್ಕಯ್ಯ ಪೋಳ ಅವರು ದಿನಾಂಕ ೧೧–೧೧–೧೯೮೪ ರಂದು ರಾಯಚೂರ ಜಿಲ್ಲೆಯ ಲಿಂಗಸಗೂರ–ಛಾವಣಿಯ ಪರಿಶಿಷ್ಟ ಜಾತಿ ಪಂಗಡಗಳ ದಲಿತರ ಕೇರಿಯಲ್ಲಿ, ಚಿತ್ತರಗಿ–ಇಳಕಲ್ಲದ ಪೂಜ್ಯ ಶ್ರೀಮನಿಪ್ರ ಮಹಾಂತಸ್ವಾಮಿಗಳು (ದಲಿತರ ಕೇರಿಯಲ್ಲಿ) ೯೮ ಜನ ದಲಿತ ಸ್ತ್ರೀ – ಪುರುಷರಿಗೆ ಬಸವಧರ್ಮದ ಇಷ್ಟಲಿಂಗ – ದೀಕ್ಷಾ ಸಂಸ್ಕಾರ ನೀಡಿ, ಆ ಕೇರಿಯಲ್ಲಿಯೇ ದಲಿತರು ತಯಾರಿಸಿದ ಪ್ರಸಾದವನ್ನು ಲಿಂಗಾಯತ ಸಮಾಜದ ಹಿರಿಯರನ್ನು ಕರೆದುಕೊಂಡು ಸಹಪಂಕ್ತಿ ಭೋಜನ ಸ್ವೀಕರಿಸಿದರು. ಆ ಸಮಯದಲ್ಲಿ ಜರುಗಿದ ಶರಣ ಸಮ್ಮೇಳನದಲ್ಲಿ ದಲಿತ ಸಾಹಿತಿಗಳಾದ ಶ್ರೀ ಕುಮಾರ ಕಕ್ಕಯ್ಯ ಪೋಳ ಅವರು ಮುಖ್ಯ ಅತಿಥಿಗಳಾಗಿ ನೀಡಿದ ಸುದೀರ್ಘ ಭಾಷಣವೇ 'ಬಸವಧರ್ಮ ದರ್ಶನ' ಎಂದು ಪುಸ್ತಕ ರೂಪದಲ್ಲಿ ನಂತರ ಪ್ರಕಟಿಸಿದರು.

ಈ ಕೃತಿಯಲ್ಲಿ ಶ್ರೀಯುತರು "ಬಸವಧರ್ಮ–ಸಿದ್ಧಾಂತ–ಸಮಾಜದ ದರ್ಶನ ಮಾಡಿಸಿ, ಪುರೋಹಿತಶಾಹಿ ವ್ಯವಸ್ಥೆ ಬೆಳೆದು ಬಂದ ಬಗೆ ಹಾಗೂ ಶೋಷಣೆ ವಿವರಿಸಿ, ಇದರಿಂದ ಹೊರಬರುವ ಉಪಾಯವನ್ನು ಸಹ ನಿರೂಪಿಸಿದ್ದಾರೆ."[೩೩] ಸ್ವತಃ ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ಕೃತಿಯ ಮುನ್ನುಡಿಯಲ್ಲಿ– "ಬಸವಾದಿ ಕಲ್ಯಾಣ ಶರಣರು, ಅಂದಿನ ಜಾತ್ಯಾಂಧ ಕರ್ಮಠ ಯುಗದಲ್ಲಿ ಧಾರ್ಮಿಕ ಆಂದೋಲನ ಹೂಡಿ, ಬಸವಧರ್ಮವೆಂಬ ಎಳೆಯ ಗಿಡಕ್ಕೆ ತಮ್ಮ ರಕ್ತದ ನೀರು ಎರೆದು ಬೆಳೆಸಿದರು. ಆದರೆ ನಮ್ಮ ದುರ್ದೈವಕ್ಕೆ ಅದು ಆನುವಂಶಿಕವಾಗಿ ತಮ್ಮ ಸಂತಾನವೇ ಈ ಲಿಂಗಧಾರಿಗಳ ಮೇಲೆ ಪ್ರಭುತ್ವ ನಡೆಸಬೇಕು ಎಂಬ ಜಾತಿವಾದಿ ವೀರಶೈವ ಪುರೋಹಿತಶಾಹಿಗಳ ಕೈಗೆ ಸಿಕ್ಕಿದ್ದು ಧಾರ್ಮಿಕ ಲೋಕದ ದೊಡ್ಡ ದುರಂತವಾಗಿದೆ"[೩೪] ಎಂದು ಸ್ಪಷ್ಟವಾಗಿ ನಿರ್ಭೀತಿಯಿಂದ ಬರೆದಿದ್ದಾರೆ.

---

೩೨. ▯ ಅದೇ ▯ – ಶರಣವಾಣಿ ಪುಟ vi

೩೩. ಕುಮಾರ ಕಕ್ಕಯ್ಯ ಪೋಳ – ಸಿದ್ದಣ್ಣ ಲಂಗೋಟಿ ಪುಟ – ೫೩

೩೪. ಬಸವಧರ್ಮ ದರ್ಶನ – ಕುಮಾರ ಕಕ್ಕಯ್ಯ ಪೋಳ ಮುನ್ನುಡಿ ಪುಟ–೩

ಬಸವಧರ್ಮದ ಪ್ರಣಾಳಿಕೆಯನ್ನು ಈ ಕೃತಿಯಲ್ಲಿ ಶ್ರೀ ಕುಮಾರ ಕಕ್ಕಯ್ಯ ಪೋಳ ಅವರು ಸೂತ್ರರೂಪದಲ್ಲಿ ನೀಡಿದ್ದಾರೆ.–

"(೧)ದಯವೇ ಧರ್ಮದ ಮೂಲ (೨) ಸತ್ಯ ಶುದ್ಧ ಕಾಯಕವೇ ಕೈಲಾಸ (೩)ಸದಾಚಾರಿಗೆ ಇಹದಲ್ಲಿಯೇ ಸ್ವರ್ಗ, ಅನಾಚಾರಿಗೆ ಇಹದಲ್ಲಿಯೇ ನರಕ. (೪) ಧಾರ್ಮಿಕವಾಗಿ ಹೆಣ್ಣು – ಗಂಡು ಸಮಾನರು (೫) ಬಾಲವಿವಾಹ ಹಾಗೂ ಸಹಗಮನ ತಪ್ಪು (೬) ವಿಧುರರಂತೆ ವಿಧವೆಯರೂ ಸಹ ಮತ್ತೆ ಮದುವೆಯಾಗ ಬಹುದು. (೭) ಲಿಂಗಧಾರಿಗಳೆಲ್ಲರೂ ಧಾರ್ಮಿಕವಾಗಿ ಸರಿಸಮಾನರು(೮) ಲಿಂಗಧಾರಿಗಳೆಲ್ಲರೂ ಸಹಪಂಕ್ತಿ ಭೋಜನ ಮತ್ತು ಅಂತರ್‌ವಿವಾಹ ಮಾಡಬಹುದು (೯) ಕಾಯಕದಲ್ಲಿ ಮೇಲು ಕೀಳು ಎಂಬುದಿಲ್ಲ (೧೦)ಲಿಂಗಧಾರಿಗಳಿಗೆ ಪಂಚಾಚಾರ. ಷಟ್‌ಸ್ಥಲ, ಅಷ್ಟಾವರಣಗಳೇ ಧರ್ಮಸೂತ್ರಗಳು (೧೧) ಲಿಂಗಧಾರಿಗಳಿಗೆ ಕಲ್ಯಾಣ ಶರಣರ ವಚನಗಳೇ ಧರ್ಮಗ್ರಂಥಗಳು. (೧೨) ಇಷ್ಟಲಿಂಗವೇ ಪರಶಿವನ ಪ್ರತಿರೂಪ (೧೩) ಸಾತ್ವಿಕ ಜೀವನ, ಸಮಾಜ ಸಂಘಟನೆ, ಮಾನವ ಕಲ್ಯಾಣ ಹಾಗೂ ರಾಷ್ಟ್ರದ ಏಳ್ಗೆ ಇವು ಬಸಧರ್ಮದ ಉದ್ದೇಶ "[೩೫]

ಬಸವಧರ್ಮದ ಸಮಾನತೆಯ ಗಾಳಿ ವಿಶ್ವದ ತುಂಬಾ ಭರದಿಂದ ಬೀಸುತ್ತಿದೆ. ಅದು ವಿಶ್ವ ಧರ್ಮವಾಗುವ ಕಾಲ ಶರವೇಗದಿಂದ ಧಾವಿಸಿ ಬರುತ್ತಲಿದೆ.

**೧೦. ಶರಣರ ಸಮಗ್ರ ಕ್ರಾಂತಿ :** ಇದು ೧೯೮೬ ರಲ್ಲಿ ಕುಮಾರ ಕಕ್ಕಯ್ಯ ಪೋಳ ಅವರು ಪ್ರಕಟಿಸಿದ ೨೮೧ ನೂತನ ವಚನಗಳ ಕೃತಿಯಾಗಿದೆ. ಈ ಗ್ರಂಥದಲ್ಲಿ ೧) ಬಸವ ಕ್ರಾಂತಿ–ಕಲ್ಯಾಣ ಕ್ರಾಂತಿ ೨) ದೇವರು–ಧರ್ಮ–ಧಾರ್ಮಿಕತೆ ೩) ಪತಿ–ಸತಿ–ಸಂತತಿ ೪) ಶಿಕ್ಷಣ–ಸಂಸ್ಕೃತಿ–ಸಮಾಜ ೫) ಮದ–ಮೋಹ–ಮತ್ಸರ ೬) ಕುಲ–ಗೋತ್ರ–ಜಾತಿ–ಮತ ೭) ಸ್ವಾನುಭವ–ಲೋಕಾನುಭವ ೮) ಜನನ–ಜೀವನ–ಮರಣ ಎಂಬ ಉಪವಿಭಾಗಗಳನ್ನು ಮಾಡಿ ವಚನಗಳನ್ನು ವಿಂಗಡಿಸಿ ಪ್ರಕಟಿಸಿದ್ದಾರೆ.

ಬಸವಾದಿ ಶರಣರ ಕ್ರಾಂತಿಯು ಜಗತ್ತಿನಲ್ಲಿ ಅಜರಾಮರವಾಗಿ ಉಳಿಯುವ ಅಮರ ಕ್ರಾಂತಿಯಾಗಿದೆಯೆಂದು ತಮ್ಮದೊಂದು ವಚನದಲ್ಲಿ ಬರೆದಿದ್ದಾರೆ –

" ಅಯ್ಯಾ ದೇವನಿಗಾಗಿ ಭವಿಗಳ ವಿರುದ್ಧ ಬಂಡೆದ್ದ
ಧರ್ಮಕ್ಕಾಗಿ ವರ್ಣಾಶ್ರಮದ ವಿರುದ್ದ ಹೋರಾಡಿದ
ಜಾತಿ–ಮತ–ಪಂಥ, ಕುಲ–ಗೋತ್ರ ಈಡಾಡಿದ
ಸಮಾಜದ ಸಮತೆಗಾಗಿ ಪ್ರಾಣಾರ್ಪಣೆ ಮಾಡಿದ
ಶರಣರ ಕಲ್ಯಾಣ ಕ್ರಾಂತಿಯು ಜಗದಲ್ಲಿ ಅಮರವೆಂದ
ಕುಮಾರ ಕಕ್ಕಯ್ಯ "[೩೬]

"ವಿಶ್ವ ಧರ್ಮವಾಗಿ ಬೆಳಗಬೇಕಾದ ಬಸವಧರ್ಮಕ್ಕೆ ಭದ್ರವಾದ ಬೀಗ ಹಾಕಲ್ಪಟ್ಟಿತು ಯಾಕೆ ? ನಮ್ಮ ಕಿವಿ ಕಟುಸತ್ಯವನ್ನು ಕೇಳಲು ಅಸಮರ್ಥವಾಗಿ ಕಿವುಡಾಗಿದೆ.

---

೩೫. ಬಸವಧರ್ಮ ದರ್ಶನ – ಕುಮಾರ ಕಕ್ಕಯ್ಯ ಪೋಳ ಪುಟ–೧೮.

೩೬. ಶರಣರ ಸಮಗ್ರಕ್ರಾಂತಿ – ಕುಮಾರ ಕಕ್ಕಯ್ಯ ಪೋಳ ಪುಟ –೩ ವ–೫.

ನಮ್ಮ ಕಣ್ಣು ಸತ್ಯದ ತೀವ್ರ ಪ್ರಕಾಶವನ್ನು ನೋಡಲಾಗದೆ ಕುರುಡಾಗಿದೆ. ನಮ್ಮ ಬುದ್ಧಿ ನಿಜ ಪರಿಸ್ಥಿತಿಯನ್ನು ಗ್ರಹಿಸುವ ಜ್ಞಾನ ಶಕ್ತಿ ಕಳೆದುಕೊಂಡು ಜಂಗು ತಿಂದಿದೆ. ಬಸವಣ್ಣನವರ ನಿಜ ಅನುಯಾಯಿಗಳು ಅದೆಂದಿಗೂ ದುರ್ಬಲರಲ್ಲ. ಅಂತಹ ದುರ್ಬಲರಿಗೆ ಈ ಸಮಾಜದಲ್ಲಿ ಸ್ಥಾನವೇ ಇಲ್ಲ. ಲಿಂಗವಂತರಲ್ಲಿ ಇಂದೇ ಆ ಪ್ರಜ್ಞೆ ಮೂಡಿಬಂದರೆ ನಾಳೆಯೇ ಈ ಧರ್ಮ ವಿಶ್ವಧರ್ಮ. ಅದು ಕಾರಣ ಇಂದಿನ ವೀರಶೈವಧರ್ಮದ ಪಟ್ಟಭದ್ರ ಹಿತಾಸಕ್ತಿಗಳು ಸಮರ್ಥಿಸಿಕೊಳ್ಳುವಂತೆ ಆಗಮಗಳ ಆಧಾರಿತ ವರ್ಣಾಶ್ರಮ ಜಾತಿಪದ್ಧತಿಯು ಧರ್ಮವೋ ? ಅಥವಾ ಬಸವಾದಿ ಪ್ರಮಥರು ತಮ್ಮ ವಚನಗಳಲ್ಲಿ ಹೇಳಿದಂತೆ ವರ್ಣಾತೀತ, ಜಾತ್ಯಾತೀತ ಬಸವಧರ್ಮ ವಿಶ್ವಧರ್ಮವೋ ? ಎಂಬುದನ್ನು ಧರ್ಮಾಭಿಮಾನಿಗಳು ತೂಗಿ ನೋಡಬೇಕು"[೩೭] ಎಂದು ಈ ಕೃತಿಯ ಪೀಠಿಕೆಯಲ್ಲಿ ಸುಧೀರ್ಘವಾಗಿ ಚರ್ಚಿಸಿದ್ದಾರೆ.

**೧೧.ಚಾತುರ್ವರ್ಣ ಧರ್ಮದರ್ಶನ :** ಕುಮಾರ ಕಕ್ಕಯ್ಯ ಪೋಳ ಅವರು ಬರೆದ ಈ ಕೃತಿಯು ೧೯೮೮ ರಲ್ಲಿ ಪ್ರಕಟವಾಗಿದೆ. ಇದೊಂದು ಅವರು ಬಾಳಿನುದ್ದಕ್ಕೂ ಗೈದ ಅಧ್ಯಯನ – ಚಿಂತನ – ಸಂಶೋಧನೆಯ ಫಲವಾಗಿ ರಚನೆಗೊಂಡ ಸಂಶೋಧನಾತ್ಮಕ ಹೆಬ್ಬೊತ್ತಿಗೆಯಾಗಿದೆ.

ಈ ಗ್ರಂಥದ ಪ್ರಾರಂಭಕ್ಕೆ ಪೀಠಿಕೆಯಲ್ಲಿ ಕುಮಾರ ಕಕ್ಕಯ್ಯನವರು, ಈ ಕೃತಿಯ ರಚನೆಯ ಬಗ್ಗೆ ಹೇಳಿಕೊಂಡಿದ್ದಾರೆ – "ಹಿಂದುಗಳು ಮೆಟ್ಟಿ ಆಳುತ್ತಿದ್ದಾರೆ. ಅಸ್ಪೃಶ್ಯರು ಒಟ್ಟರಿಸಿ ಅಳುತ್ತಿದ್ದಾರೆ ! ಇಂತಹ ದುಃಖಮಯ (ಹಿಂದೂ ವರ್ಣಾಶ್ರಮ) ಧರ್ಮದಿಂದ ಮುಕ್ತರಾಗಬೇಕೆಂಬುದೇ ನನ್ನ ಅಂತರಾಳದ ಕೂಗಾಗಿದೆಯೇ ಹೊರತು ನಾನೊಬ್ಬ ಸಾಹಿತಿ ಎನಿಸಬೇಕೆಂಬ ಇಚ್ಛೆ ನನಗಿಲ್ಲ. ಭಾರತದ ಹಿಂದುಗಳ ಸಂಪತ್ತು ಭೂಮಿಯಲ್ಲಿಲ್ಲ, ಗಣಿಗಳಲ್ಲಿಲ್ಲ, ಖಜಾನೆಗಳಲ್ಲಿಲ್ಲ. ಅದು ಇರುವದು ಅವರ ಧರ್ಮ ಗ್ರಂಥಗಳಲ್ಲಿ, ಅವರ ಚಾತುರ್ವರ್ಣ ಜಾತಿಪದ್ಧತಿಯಲ್ಲಿ. ಇವೆಲ್ಲವುಗಳನ್ನು ನನ್ನ ಜನಗಳಿಗೆ (ದಲಿತರು, ಅಸ್ಪೃಶ್ಯರಿಗೆ ) ಆಯಾ ಧರ್ಮಗ್ರಂಥಗಳ ಆಧಾರಗಳಿಂದಲೇ ತಿಳಿ ಹೇಳಬೇಕಾಗಿದೆ.

ಈ ಗ್ರಂಥದಲ್ಲಿ ನಾನು ಹೇಳಿದ್ದರಲ್ಲಿ ವೇದ, ಆಗಮ, ಶಾಸ್ತ್ರ, ಪುರಾಣ, ರಾಮಾಯಣ, ಮಹಾಭಾರತ, ಭಗವದ್ಗೀತೆ, ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಇತ್ಯಾದಿ ಗ್ರಂಥಗಳ ಸಂಶೋಧಕರ ಲಿಖಿತ ಘಟನೆಗಳನ್ನು, ಆಯಾ ಸಂದರ್ಭಗಳನ್ನು ಎತ್ತಿಕೊಂಡು, ಭಾರತದ ಅಂದಿನ ಮೂಲನಿವಾಸಿಗಳಲ್ಲಿ ಅಂದಿನ ಆರ್ಯರಿಗೆ ಶರಣುಹೋದ ಜನಸಾಮಾನ್ಯ ದ್ರಾವಿಡರು ಹೇಗೆ ಶೂದ್ರರಾದರು ? ಶರಣುಹೋಗದೆ ಕೊನೆಯವರೆಗೆ ಸ್ವಾಭಿಮಾನದಿಂದ ಹೋರಾಡುತ್ತಲೇ ಉಳಿದ ಆದಿ ಕ್ಷತ್ರೀಯರು ಹೇಗೆ ಅಸ್ಪೃಶ್ಯರಾಗಿ ಸಮಾಜದಿಂದ ಬಹಿಷ್ಕರಿಸಲ್ಪಟ್ಟರು ? ಹೇಗೆ ದ್ವಿಪಾದ ಪಶುಗಳಿಗಿಂತಲೂ, ಹಂದಿ ನಾಯಿಗಳಿಗಿಂತಲೂ ಕನಿಷ್ಠರಾದರು ? ಎಂಬಿತ್ಯಾದಿ ಸತ್ಯ ಸಂಗತಿಗಳನ್ನು ಬಿಚ್ಚು ಮನಸ್ಸಿನಿಂದ, ನನ್ನ ಬಂಧು ಭಗಿನಿಯರಿಗೆ ಅತೀ

---

೩೭. ☐ ಅದೇ ☐ ಪೀಠಿಕೆ – ಪುಟ ೧೧.

ಸರಳ ಭಾಷೆಯಲ್ಲಿ ವಿವರಿಸಿ ಹೇಳ ಬೇಕಾಗಿದೆಯೇ ಹೊರತು, ಇದರಲ್ಲಿ ನನ್ನ ಪಾಂಡಿತ್ಯವೆಂಬುದೇನೂ ಇಲ್ಲ. ..... ಅಂದಿನಿಂದ ಇಂದಿನವರೆಗೆ, ಈ ಅಮಾನುಷವಾದ ಹಿಂದೂಧರ್ಮದಿಂದ ತಮ್ಮ ರಕ್ಷಣೆಯನ್ನು ತಾವು (ದಲಿತರು) ಮಾಡಿಕೊಳ್ಳಲು ಸಾಧ್ಯವಾಗಿಲ್ಲ ! ಅವರು ದಿನನಿತ್ಯ ಬಿಡುತ್ತಿರುವ ನಿಟ್ಟುಸಿರು, ಸುರಿಸುತ್ತಿರುವ ಬೆವರು, ಕಣ್ಣೀರು ರಕ್ತ ಆ ಭೂಮಾತೆಗೇ ಗೊತ್ತು ! ಹೀಗಾಗಿ ಅಂತ್ಯಜರು, ದುಃಖ ದಾರಿದ್ರ್ಯ ಸಂಕಟಗಳ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದಾರೆ. ಧರ್ಮವೆಂದರೆ ತಾಯಿ ಇದ್ದಂತೆ, ಆದರೆ ಹಿಂದುಗಳು ಅವಳನ್ನು ವ್ಯಭಿಚಾರಕ್ಕೆ ಎಳೆದಿದ್ದಾರೆ! ಈ ಚಾತುರ್ವರ್ಣ ಧಾರ್ಮಿಕ ಸೆರೆಮನೆಯಲ್ಲಿ ಜನನದಿಂದ ಮರಣದವರೆಗೆ ಅಸ್ಪೃಶ್ಯತೆಯ ಸಂಕೋಲೆಗಳಿಂದ ಬಂಧಿತರಾಗಿ ಒಂದೇ ಸವನೆ ಕೊಳೆಯುತ್ತಲೇ ಇದ್ದಾರೆ, ನರಳುತ್ತಲೇ ಇದ್ದಾರೆ"[೩೮]

ಚಾತುರ್ವರ್ಣ ಧರ್ಮ ದರ್ಶನ ಕೃತಿಯಲ್ಲಿ ನಾಲ್ಕು ಅಧ್ಯಾಯಗಳನ್ನು ಮಾಡಿದ್ದಾರೆ – ೧) ಬ್ರಹ್ಮನ ಭ್ರಾಂತಿ ೨) ದೇವತೆಗಳ ದ್ವಂದ್ವ ೩) ಧರ್ಮ ಗುರುಗಳ ಅವಾಂತರ ೪) ಅಸ್ಪೃಶ್ಯರಾದ ಆದಿ ಕ್ಷತ್ರೀಯರು.

ಈ ನಾಲ್ಕು ಅಧ್ಯಾಯಗಳ ಅಡಿಯಲ್ಲಿ ಒಟ್ಟು ೬೧ ಉಪ ವಿಭಾಗಗಳನ್ನು ವಿಂಗಡಿಸಿಕೊಂಡು ವಿವರವಾಗಿ, ಆಧಾರಸಹಿತವಾಗಿ ಈ ಕೃತಿಯ ರಚನೆ ಮಾಡಿದ್ದಾರೆ. ಈ ಕೃತಿಯನ್ನು ಕುರಿತು ನಮ್ಮ ನಾಡಿನ ಖ್ಯಾತ ಸಾಹಿತಿಗಳೂ, ಚಿಂತಕರೂ ಆದ ಶ್ರೀ ಕೆ.ಪಿ ಪೂರ್ಣಚಂದ್ರ ತೇಜಸ್ವಿಯವರು – "ಇದೊಂದು ಅಧ್ಯಯನಪೂರ್ಣ ಕೃತಿಯೆಂಬುದರಲ್ಲಿ ಸಂದೇಹವಿಲ್ಲ. ಹಿಂದೂ ಧರ್ಮದ ಉದ್ಗ್ರಂಥಗಳನ್ನು ಅಧ್ಯಯನ ಮಾಡಿ, ಅದರ ಭೀಕರ ಅಮಾನವೀಯ ಅಂಶಗಳನ್ನು ತಾವು (ಕುಮಾರ ಕಕ್ಕಯ್ಯ ಪೋಳರು ) ಬೆಳಕಿಗೆ ತಂದಿರುವದಂತೂ ತುಂಬಾ ಶ್ಲಾಘನೀಯ ಅಂಶ"[೩೯] ಎಂದು ಬರೆದಿದ್ದಾರೆ.

ಪ್ರೊ. ಕೆ. ಎಸ್. ಭಗವಾನ್ ಅವರು ಈ ಕೃತಿಯ ಕುರಿತು. – "ಹಿಂದು ಸಮಾಜದ ಕೊಳಕಿನ ಹೊಂಡ ಯಾವುದು, ಅದು ಏಕೆ ಗಬ್ಬು ನಾರುತ್ತದೆ ಎಂಬುದನ್ನು ತೋರಿಸಿರುವ ನಿಮ್ಮ ವೈಚಾರಿಕ ಸ್ಪಷ್ಟನೆ ಶ್ಲಾಘನೀಯವಾಗಿದೆ. ನಿಮ್ಮ ಕೃತಿ ಓದುತ್ತಿದ್ದರೆ ನನಗೆ ಡಾ॥ ಬಾಬಾ ಸಾಹೇಬ ಅಂಬೇಡ್ಕರರನ್ನು ಓದುತ್ತಿರುವಂತೆ ಅನುಭವವಾಯಿತು"[೪೦] ಎಂದು ಬರೆದಿದ್ದಾರೆ.

**೧೨. ಧರ್ಮಗುರುಗಳ ಅವಾಂತರ ಅರ್ಥಾತ್ ಲಿಂಗಾಯತ ಧರ್ಮಸ್ಥಾಪಕರು ಯಾರು ?**

೧೯೮೮ ರಲ್ಲಿ ಪ್ರಕಟವಾದ ಈ ಕೃತಿಯು ಲಿಂಗಾಯತ ಧರ್ಮದಲ್ಲಿ ಕಾಲಾನಂತರದಲ್ಲಿ ಪ್ರಾರಂಭವಾದ ವೀರಶೈವ ಪುರೋಹಿತಶಾಹಿ ಧರ್ಮಗುರುಗಳ

---

೩೮. ಚಾತುರ್ವರ್ಣ ಧರ್ಮದರ್ಶನ – ಕುಮಾರ ಕಕ್ಕಯ್ಯ ಪೋಳ –ಪೀಠಿಕೆ ಪುಟ i-iv

೩೯. ಚಾತುವರ್ಣಧರ್ಮದರ್ಶನ ಗ್ರಂಥದ ಅನುಬಂಧ – ಪುಟ ೧೯೨.

೪೦. ❑ ಅದೇ ❑ ಪುಟ ೧೭೩ – ೧೭೪.

ಅವಾಂತರವನ್ನು ಚಿತ್ರಿಸುತ್ತದೆ. ಸ್ವತಃ ಲೇಖಕರೇ ಪೀಠಿಕೆಯಲ್ಲಿ ಹೇಳಿರುವಂತೆ "ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಗಳು ಹೋದವು, ರಾಜ ಮಹಾರಾಜ ಚಕ್ರವರ್ತಿಗಳೂ ಹೋದರು, ಸಂಸ್ಥಾನಿಕರು ಜಹಗೀರದಾರರು ವತನದಾರರು ಹೋದರು, ಇಂದಿನ ಜಾತ್ಯಾತೀತ ಪ್ರಜಾಪ್ರಭುತ್ವದಲ್ಲಿ ವರ್ಣಾಶ್ರಮ ಚಾತುರ್ವರ್ಣ ಜಾತಿಪದ್ಧತಿಗೆ ಹುಟ್ಟು ಹಾಕಿದ, ಮೂಲ ಬ್ರಾಹ್ಮಣರೇ ಬ್ರಾಹ್ಮಣತ್ವವನ್ನು ಬಿಡುತ್ತಿರುವಾಗ, ತಾವು ಲಿಂಗಿಬ್ರಾಹ್ಮಣರು ಎಂದು ಹೇಳಿಕೊಳ್ಳುತ್ತಿರುವ ಈ ಪುರೋಹಿತಶಾಹಿಗಳು, ಕೇವಲ ತಮ್ಮ ಜಾತಿಪದ್ಧತಿ ಪ್ರಕಾರ ಭಕ್ತ ವರ್ಗದ ಮೇಲೆ ಆನುವಂಶಿಕವಾಗಿ ಧಾರ್ಮಿಕ ಪ್ರಭುತ್ವ ನಡೆಸಬೇಕೆಂಬ ಒಂದೇ ಒಂದು ಕಾರಣಕ್ಕಾಗಿ, ಇಲ್ಲದ ತರ್ಕ ಅಂತೆ ಕಂತೆಗಳನ್ನು ಪ್ರತಿಪಾದಿಸುತ್ತಿದ್ದಾರೆ. ಇದೆಲ್ಲವನ್ನು ಬಿಟ್ಟು ಆತ್ಮ ಸಾಕ್ಷಿಯಾಗಿ, 'ಬಸವಣ್ಣನೆ ಧರ್ಮಸ್ಥಾಪಕ' ಎಂಬ ಸತ್ಯಸಂಗತಿಯನ್ನು ನಿರ್ಮಲ ಮನಸ್ಸಿನಿಂದ ಒಪ್ಪಿಕೊಂಡರೆ ಧರ್ಮ ಒಡೆಯುವ ಪ್ರಶ್ನೆಯೇ ಇಲ್ಲ. ಒಡೆಯಲು ಬಸವಣ್ಣನದು ಪಟ್ಟಭದ್ರ ಹಿತಾಸಕ್ತಿಗಳ ಒಂದು ಜಾತಿ ಅಲ್ಲ, ಅದು ವಿಶ್ವಧರ್ಮ"[೪೧] ಎಂದು ಉದ್ದೇಶವನ್ನು ವ್ಯಕ್ತಪಡಿಸಿದ್ದಾರೆ. ಈ ಧರ್ಮಗುರುಗಳ ಅವಾಂತರ ಕೃತಿಯಲ್ಲಿ ೧) ದೇವರಿಗಾಗಿ ಗುರುಸೇವೆ. ೨)ದೇವರ ದಲ್ಲಾಳಿಗಳು ೩) ಧರ್ಮಗುರುಗಳ ವಿಷವೃತ್ತ ೪) ಧರ್ಮಗುರುಗಳ ಅವಾಂತರ ೫) ವಚನಸಾಹಿತ್ಯ V/S ಸಿದ್ಧಾಂತ ಶಿಖಾಮಣಿ 6) ಬಸವಾದಿ ಪ್ರಮಥರು V/S ಪುರೋಹಿತಶಾಹಿಗಳು ೭) ವೀರಶೈವ ಧರ್ಮಸ್ಥಾಪಕರು ಯಾರು ? ೮) ಬಸವಣ್ಣನೇ ಧರ್ಮಸ್ಥಾಪಕ ಎಂಬ ಉಪವಿಭಾಗಗಳಲ್ಲಿ ತಮ್ಮ ಸಂಶೋಧನಾಪೂರ್ಣ ಚಿಂತನೆಗಳನ್ನು ವ್ಯಕ್ತಪಡಿಸಿದ್ದಾರೆ.

**೧೩. ಕುಮಾರ ಕಕ್ಕಯ್ಯನ ವಚನಗಳು :** ಕುಮಾರ ಕಕ್ಕಯ್ಯ ಪೋಳ ಅವರಿಂದ ೧೯೯೦ ರಲ್ಲಿ ಬರೆಯಲ್ಪಟ್ಟು ಕಲ್ಯಾಣನಾಡಿನ ಶರಣ ಪರಿಷತ್ತಿನಿಂದ ಪ್ರಕಾಶಗೊಂಡ ಈ ವಚನ ಗ್ರಂಥದಲ್ಲಿ ೬೭೫ ವಚನಗಳಿವೆ. ಈ ವಚನಗಳನ್ನು ೧) ದೇವರು – ಧರ್ಮ –ಸಂಪ್ರದಾಯ ೨)ಪತಿ – ಪತ್ನಿ – ಪ್ರೇಮ ೩) ಶ್ರಮ – ಸಂಸಾರ – ಸಂಪತ್ತು ೪) ಶಿಕ್ಷಣ – ಸಂಸ್ಕೃತಿ – ಸಮಾಜ ೫) ಕುಡಿತ – ಕಾಮ –ಕದನ ೬) ಕುಲಗೋತ್ರ – ಜಾತಿಮತ ೭) ಜನನ – ಜೀವನ– ಮರಣ ೮) ಅಧಿಕಾರ – ಆಡಳಿತ – ರಾಜಕಾರಣ. ೯) ಸ್ವಾನುಭವ – ಲೋಕಾನುಭವ ೧೦) ಬಸವಕ್ರಾಂತಿ – ಕಲ್ಯಾಣ ಕ್ರಾಂತಿ ಎಂಬ ಹತ್ತು ಉಪ ಶೀರ್ಷಿಕೆಗಳ ಅಡಿಯಲ್ಲಿ ವಿಭಜಿಸಿದ್ದಾರೆ.

**೧೪. ಪ್ರಗತಿಪರ ವಿಚಾರವಾದಿ ಕುಮಾರ ಕಕ್ಕಯ್ಯಾನ ವಚನಗಳು :**

೧೯೯೩ರಲ್ಲಿ ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ಸಮಗ್ರ ವಚನಗಳನ್ನು ಒಂದೆಡೆ ಸಂಗ್ರಹಿಸಿ ಒಟ್ಟು ೧೨೩೫ ವಚನಗಳ ಸಮಗ್ರ ಸಂಪುಟವನ್ನು ಪ್ರಕಟಿಸಿದ್ದಾರೆ.

ಶ್ರೀಯುತರ ವಚನಗಳ ಈ ಕೃತಿಗೆ ಮುನ್ನುಡಿ ಬರೆದ ಅನುಭಾವಿ ಸಾಹಿತಿ ವೀರಶ್ರೀ ಬಸವಣ್ಣ ಹಂಪನಗೌಡ್ರು ತುಂಬಾ ಮಾರ್ಮಿಕವಾಗಿ ಅರ್ಥಪೂರ್ಣವಾಗಿ

---

೪೧. ಧರ್ಮಗುರುಗಳ ಅವಾಂತರ – ಕುಮಾರ ಕಕ್ಕಯ್ಯ ಪೋಳ. ಪೀಠಿಕೆ ಪುಟ v

ಹೇಳುತ್ತಾರೆ – "ಕುಮಾರ ಕಕ್ಕಯ್ಯನವರ ಅಂತರಾಳದಲ್ಲಿ ಹೊಯ್ದಾಡುತ್ತಿರುವ ವಿಚಾರಗಳ ಸುಳಿಯನ್ನು ಗುರುತಿಸುವುದು ಅಷ್ಟೊಂದು ಸುಲಭವಲ್ಲ. ಬಹುಕಾಲದಿಂದ ಜಿಡ್ಡುಗಟ್ಟಿ ರೂಢಿಗೊಂಡು ಬಂದ ಶೋಷಣೆಯ ಧಾರ್ಮಿಕ ವ್ಯವಸ್ಥೆ, ಮೇಲ್ಜಾತಿಯವರ ಕ್ರೂರ ಅಟ್ಟಹಾಸ, ಜನಸಾಮಾನ್ಯರನ್ನು ಅವನತಿಯತ್ತ ಕೊಂಡೊಯ್ಯುವ ಪುರೋಹಿತ ಶಾಹಿಗಳ ಪಾಖಂಡಿತನ ಇತ್ಯಾದಿ ಇತ್ಯಾದಿಗಳನ್ನು ಕೇಳಿ ಕಂಡು ಅನುಭವಿಸಿ ರೋಷಿ ಹೋಗಿದ್ದಾರೆ. ಅವರ ಅಂತರಾಳದ ಈ ಕ್ರಾಂತಿಯ ಕೂಗನ್ನು ಅವರ ವಚನಗಳಲ್ಲಿ ಕಂಡುಕೊಳ್ಳಬಹುದು"[೪೨]

ಈ ವಚನ ಗ್ರಂಥದಲ್ಲಿ ಪ್ರಕಟವಾದ ಪ್ರತಿಯೊಂದು ವಚನಕ್ಕೂ ಸೂಕ್ತವಾದ ಶೀರ್ಷಿಕೆಯನ್ನು ಕೊಟ್ಟು ವಚನ ಪ್ರಕಟಿಸಿದ್ದಾರೆ.

ವಚನಗಳನ್ನು ಬಿಡಿ ಬಿಡಿಯಾಗಿ ಓದಿದರೂ ಅಷ್ಟೇ, ಸಮಗ್ರವಾಗಿ ಓದಿದರೂ ಅಷ್ಟೇ, ಪ್ರತಿಯೊಂದು ವಚನವೂ ಓದುಗರ ಹೃದಯ ಸ್ಪರ್ಷಿಸುತ್ತವೆ, ವಿಚಾರಕ್ಕೆ ತೊಡಗಿಸುತ್ತವೆ. ಉದಾಹರಣೆಗೆ–

ಧರ್ಮದ ಹೆಸರಲ್ಲಿ ಅಸ್ಪೃಶ್ಯತೆ
ಧರ್ಮದ ಹೆಸರಲ್ಲಿಯೇ ಶೋಷಣೆ
ಧರ್ಮದ ಹೆಸರಲ್ಲಿ ದಬ್ಬಾಳಿಕೆ
ಧರ್ಮದ ಹೆಸರಲ್ಲಿಯೇ ವ್ಯಭಿಚಾರ
ಧೂರ್ತರಿಗೆ ಧರ್ಮವೊಂದು
ದೊಡ್ಡ ಬಂಡವಾಳವೆಂದ, ಕುಮಾರ ಕಕ್ಕಯ್ಯ[೪೩]

ಕುಮಾರ ಕಕ್ಕಯ್ಯನ ವಚನಗಳನ್ನು ಓದಿದ ನಮ್ಮ ನಾಡಿನ ಖ್ಯಾತ ಕವಿಗಳೂ, ಆಧುನಿಕ ವಚನಕಾರರೂ ಆದ ಡಾ॥ ಸಿದ್ದಯ್ಯ ಪುರಾಣಿಕರು (ಕಾವ್ಯಾನಂದರು) ಹೀಗೆ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ – " ನಿಮ್ಮ ವಚನ ಸಂಗ್ರಹ ಓದಿ ಪುಲಕಿತನಾದೆ. ಎಷ್ಟೊಂದು ವಿಷಯಗಳ ಬಗ್ಗೆ ಎಷ್ಟೊಂದು ಆಳವಾಗಿ ಆಲೋಚಿಸಿರುವಿರಿ. ಅವುಗಳಿಗೆ ಎಷ್ಟೊಂದು ಪ್ರಾಮಾಣಿಕ ಅಭಿವ್ಯಕ್ತಿಯನ್ನು ನೀಡಿರುವಿರಿ. ನಿಮ್ಮ ವಚನಗಳಲ್ಲಿ ಮನೋಜ್ಞವಾಗಿ ಮೂಡಿ ನಿಂತಿರುವ ನಿಮ್ಮ ಮಾನವೀಯ ದೃಷ್ಟಿ, ನೀವು ಕಂಡಿರಿಸಿರುವ ಬಸವಣ್ಣನವರ ಮಹೋನ್ನತ ಮೂರ್ತಿ ಸ್ವರೂಪ, ವಚನಗಳಲ್ಲಿ ನೀವು ವಿಶದೀಕರಿಸಿರುವ ಬಸವಧರ್ಮದ ಅನನ್ಯತೆ, ಅನೇಕ ವಚನಗಳಲ್ಲಿ ಸುಸ್ಪಷ್ಟವಾಗಿರುವ ನಿಮ್ಮ ಸಾಮಾಜಿಕ ಕ್ರಾಂತಿಯ ಕಳಕಳಿಗಳು, ಓದುಗರ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತುವಂಥವುಗಳಾಗಿವೆ. ಶಿವಾನುಭವ – ಲೋಕಾನುಭವಗಳ ಹೃದಯ ಸಂಗಮದಂತಿರುವ ನಿಮ್ಮ ಈ ವಚನಗಳು ...... ನನಗೆ ಹಿಡಿಸಲಾರದಷ್ಟು ಹಿಗ್ಗು, ತನ್ನ ಹೆಸರನ್ನು ಸುಲಿಗೆಗಾಗಿ ಬಳಸಿಕೊಳ್ಳುತ್ತಿರುವ ಸನ್ಯಾಸಿ, ಸಾಹಿತಿ ಮತ್ತು ರಾಜಕಾರಣಿಗಳಿಂದ ಬಸವಣ್ಣ ಈಗ ನಿಮ್ಮಂತಹ

೪೨. ಪ್ರಗತಿಪರ ವಿಚಾರವಾದಿ ಕುಮಾರ ಕಕ್ಕಯ್ಯನ ವಚನಗಳು – ಮುನ್ನುಡಿ ಪುಟ– ೭.
೪೩. ಪ್ರಗತಿಪರ ವಿಚಾರವಾದಿ ಕುಮಾರ ಕಕ್ಕಯ್ಯನ ವಚನಗಳು – ಪುಟ –೧೦೨ ವಚನ– ೪೦೨.

ನಿಜನಿಷ್ಠುರ ಕೈ ಸೇರುತ್ತಿದ್ದಾನೆ. ಅವನನ್ನು ಆಷಾಢಭೂತಿಗಳಿಂದ ಬಿಡಿಸಿಕೊಂಡು, ಶ್ರೀ ಸಾಮಾನ್ಯರಿಗೆ ಮುಟ್ಟಿಸುತ್ತಿರುವ ನಿಮ್ಮ ಮಣಿಹಕ್ಕೆ ಎಲ್ಲ ಯಶಸ್ಸನ್ನು ಕೋರುತ್ತಾ, ನಿಮ್ಮ ನಿರ್ಭೀತ, ನ್ಯಾಯ ನಿಷ್ಠುರ ಮತ್ತು ಪುರೋಗಾಮಿ ವಿಚಾರಧಾರೆಗಾಗಿ ನಿಮ್ಮನ್ನು ಮನಃಪೂರ್ವಕ ಅಭಿನಂದಿಸುತ್ತೇನೆ"[೪೪].

ಈ ರೀತಿಯಾಗಿ ಕುಮಾರ ಕಕ್ಕಯ್ಯನ ವಚನಗಳು ಸಮಾಜೋ – ಧಾರ್ಮಿಕ, ಸಾಹಿತ್ಯಿಕವಾಗಿ ಅತಿ ಮಹತ್ವಪೂರ್ಣವಾಗಿವೆ ಎನ್ನಬಹುದು.

**೧೫. ಕುಮಾರ ಕಕ್ಕಯ್ಯನ ವಚನಗಳು – ಸಮಗ್ರ ವಚನ ಸಂಪುಟ:** ಕುಮಾರ ಕಕ್ಕಯ್ಯ ಪೋಳ ಅವರು ೧೯೯೬ ರಲ್ಲಿ ಲಿಂಗೈಕ್ಯರಾದ ನಂತರ, ಕ್ರಿ.ಶ ೨೦೦೫ ರಲ್ಲಿ ಅವರ ಚಿರಂಜೀವ ಶ್ರೀ ಚಿದಾನಂದ ಭೀಮರಾವ ಪೋಳ ಅವರು ಈ ಹಿಂದೆ ಪ್ರಕಟವಾದ ೧೨೩೫ ವಚನಗಳ ಸಹಿತವಾಗಿ ಅಪ್ರಕಟಿತವಾಗಿಯೇ ಹಸ್ತಪ್ರತಿಯಲ್ಲಿ ಉಳಿದಿದ್ದ ೨೩೮ ವಚನಗಳನ್ನು ಸೇರ್ಪಡೆ ಮಾಡಿ ಒಟ್ಟು ೧೪೭೩ ವಚನಗಳ ಸಮಗ್ರ ಸಂಪುಟವನ್ನು ಪ್ರಕಟಪಡಿಸಿದ್ದಾರೆ.

ಈ ಎಲ್ಲ ವಚನಗಳ ಸಮಗ್ರ ಸಂಪುಟವನ್ನು ಈ ಮಹಾಪ್ರಬಂಧದ ಬರವಣಿಗೆಗಾಗಿ ಪರಿಶೀಲಿಸಿ, ಬಳಸಿಕೊಳ್ಳಲಾಗಿದೆ.

**೧೬. ಕುಮಾರ ಕಕ್ಕಯ್ಯ ಪೋಳ ರಚಿಸಿದ ತ್ರಿಪದಿ ಸಾಹಿತ್ಯ :**

ಕುಮಾರ ಕಕ್ಕಯ್ಯ ಪೋಳ ಅವರು 'ತ್ರಿಪದಿ' ಸಾಹಿತ್ಯ ಪ್ರಕಾರದಲ್ಲಿ ಕೃಷಿ ಮಾಡಿದ್ದಾರೆ. ಅವರ ತ್ರಿಪದಿಗಳು ಜನಪದ ಗರತಿಯರ ತ್ರಿಪದಿಗಳಂತೆಯೇ ಅನುಭವ ಪೂರ್ಣವಾಗಿವೆ. 'ಕಲ್ಯಾಣ ಕ್ರಾಂತಿ' ಕುರಿತು ಅವರೇ ಬರೆದಿರುವ ತ್ರಿಪದಿ ರಚನೆ ಹೀಗಿದೆ –

ಕಲ್ಯಾಣ ಊರಾಗ ಶರಣರು ಇಷ್ಟ್ಯಾಕ
ಹರನಾಮ ಜಯಘೋಷ ಮಾಡ್ಯಾರ । ಬಸವಣ್ಣ
ಜಾತಿಯ ಭೂತ ಬಿಡಿಸ್ಯಾರ ॥

ಕಲ್ಯಾಣ ಊರೀಗಿ ಉರಿಯಾಕ ಹತ್ಯಾದ
ಕ್ರಾಂತಿಯ ಕಿಡಿಯು ಸಿಡಿದಾದ । ಶರಣರು
ತ್ರಿಶೂಲ ಹಿಡಿದು ಕಾದ್ಯಾರ ॥

ಕಲ್ಯಾಣ ಕೆರಿನೀರ ರಕ್ತ್ಯಾಕ ಆಗ್ಯಾವ
ರುಂಡುರುಳಿ ಧಂಡ ಬಿದ್ದಾವ । ಶರಣರ
ನೆತ್ತರ ಕಾವಲಿ ಹರದಾವ ॥

ಕಲ್ಯಾಣ ಉಳವಿ ನಡುವೆ ಧೂಳ್ಯಾಕ ಎದ್ದಾದ
ಚೆನ್ನಬಸವಣ್ಣ ಬರುವಾಗ । ಶರಣರು
ಘೋರ ಕಾಳಗ ಮಾಡ್ಯಾರ॥

---

೪೪ ಕುಮಾರ ಕಕ್ಕಯ್ಯನ ವಚನಗಳು – ವಿಮರ್ಶೆ ಮತ್ತು ಅನಿಸಿಕೆಗಳು – ಪುಟ ೩೧೩.

ಉಳವೀಯ ಮಹಾಮನಿಗಿ ಮುತ್ತಿಗಿ ಹಾಕ್ಯಾರ
ನೂರಾರು ಶರಣರು ಸಿಕ್ಕಾರ ಒಳಗ । ಸೈನಿಕರು
ಕಗ್ಗೊಲೆ ಮಾಡಿ ಕುಣಿದಾರ ॥

ಶರಣರ ಶಿಶುಧರ್ಮ ಪರದೇಶಿ ಆಗ್ಯಾದ
ಮಲತಾಯಿ ಕೈಗಿ ಸಿಕ್ಕಾದ । ಬಸವಣ್ಣ
ಕೊರಗಿ ಕೊರಗಿ ಸೊರಗ್ಯಾನ॥[೪೫]

**೧೭. ಕುಮಾರ ಕಕ್ಕಯ್ಯನವರ ಕವಿತೆಗಳು :**

ಕುಮಾರ ಕಕ್ಕಯ್ಯ ಪೋಳ ಅವರು ಕವಿತೆ ಬರೆಯುವುದರಲ್ಲಿಯೂ ಸಿದ್ಧಹಸ್ತರು. ಶ್ರೀಯುತರು ಬರೆದ ಕೆಲವು ಕವಿತೆಗಳು ಬಿಡಿ ಬಿಡಿಯಾಗಿ ಬಸವಬೆಳಗು, ಶಿವಾನುಭವ, ಕಲ್ಯಾಣ ಕಿರಣ, ಶಾಂತಿಕಿರಣ, ಕನ್ನಡಮ್ಮ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಕೆಲವು ಕವಿತೆಗಳು ಹಸ್ತಪ್ರತಿಯಲ್ಲಿ ಅಪ್ರಕಟಿತವಾಗಿಯೇ ಉಳಿದಿವೆ. ಒಂದೆರಡು ಕವಿತೆಗಳನ್ನು ಇಲ್ಲಿ ನೋಡಬಹುದು.

– ಕವಿತೆ ೧ :

ನೋಡೆ ನೋಡೆ ನಾ
ಇಂಥ ಸಾಧು ಸಜ್ಜನರಾ
ನೋಡೆ ನೋಡೆ ನಾ, ಇಂಥ ............. ॥೧॥

ಕ್ಯಾವಿ ವಸ್ತ್ರ ಮೈಮ್ಯಾಗ
ಸುಂದರಿಯರ ಚಿತ್ರ ಮನದಾಗ
ನೋಡೆ ನೋಡೆ ನಾ, ಇಂಥ ..........॥೨॥

ಜಪಮಾಲಿಕೆ ಕೈಯಾಗ
ಹೀನ ವಿಚಾರ ಮನದಾಗ
ನೋಡೆ ನೋಡೆ ನಾ, ಇಂಥ ........... ॥೩॥

ಜಾತಿಯ ಹುಲಿದೊಗಲು ಮೈಮ್ಯಾಗ
ನರಿಯ ಕುಹಕ ವಿಚಾರ ಮನದಾಗ
ನೋಡೆ ನೋಡ ನಾ, ಇಂಥ ............ ॥೪॥

**ಕವಿತೆ – ೨ :**

ಭಜನಿ ಮೇಳಾ ನಮ್ಮದಿದು
ಹರಿಜನ ಕೇರ್ಯಾಗ
ಕುಡುಕರ ಮೇಳಾ ಅವರದದು
ಸವರ್ಣ ಮಂದ್ಯಾಗ ............... ॥೧॥

---

೪೫. ಶರಣರ ಸಮಗ್ರಕ್ರಾಂತಿ – ಕುಮಾರ ಕಕ್ಕಯ್ಯ ಪೋಳ ಕವ್ವರ ಪುಟ – ೪.

ಸೂಳೆಯರೆಲ್ಲಾ ಕಡಿಮೆ ಆದರು
ನಮ್ಮ ಆದಿ ಜನದಾಗ
ಸಿಂಗಾರಿಯರು ಮೀರಿ ನಿಂತಾರು
ಸುಧಾರಿಸಿದ ಓಣ್ಯಾಗ ................ ॥೨॥

ಅಂಜಿ ಸಲಾಮ ಹಾಕುದು
ಹರಿಜನ ಮಂದ್ಯಾಗ
ಗಾಂಜಿಸೇದಿ ಡುರುಕಿ ಹೊಡ್ಯೂದು
ಮೇಲ್ಜಾತಿ ಉಚ್ಚ ಕುಲದಾಗ ॥೩॥

ಅಕ್ಷರ ಓದಿ ಶಿಕ್ಷಣ ಪಡೆದು
ಮುಂದೆ ನಡೆದರು ನಮ್ಮ ಮಂದ್ಯಾಗ
ಹೆಂಡಾ ಕುಡಿದು ಖಂಡಾ ತಿಂದು
ಸಂದಿ ಸುತ್ತತಾರ ಸವರ್ಣ ಕುಲದಾಗ ॥೪॥

ಮುತ್ಯಾ ಗಾಂಧಿ ಮಾತ ಕೇಳಿ
ಎಚ್ಚರಾಗ್ಯಾರ ನಮ್ಮ ಜನದಾಗ
ಹೆಚ್ಚು ಅನ್ನು ನೀಚ ಜನರನ್ನ
ಮೆಟ್ಟಿ ತುಳೀತಾರ ಈಗಿನ ಜಗದಾಗ ॥೫॥

**೧೮. ಚುಟುಕು ಸಾಹಿತ್ಯ ರಚನೆ :**

ಕುಮಾರ ಕಕ್ಕಯ್ಯ ಅವರು 'ಚುಟುಕು' ಸಾಹಿತ್ಯ ರಚನೆಯಲ್ಲಿಯೂ ಸಿದ್ಧಹಸ್ತರಾಗಿದ್ದಾರೆ. ಅವರ ಚುಟುಕುಗಳು ಅಲ್ಲಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

**ಚುಟುಕು –೧.**

ನೀ ಎಲ್ಲಿ ಹೋದಿ ಸಿಂದಿ
ಹಗಲಿರುಳು ಹುಡುಕತದ ಮಂದಿ ।
ಎಟದೂರ ಹೋದಿ ನೀ ಸಿಂದಿ
ಯಾವ ದೇಶ ಈಗ ನೀ ಕಂಡಿ ॥

**ಚುಟುಕು –೨.**

ಎಲ್ಲಾ ಗೀಡಾ ಊರಾಗ
ತಾಯಿ ಗಿಡಾ ಅಡವ್ಯಾಗ
ಭಕ್ತಿ ಇಲ್ಲ ಜಗದಾಗ
ಸ್ವರ್ಗ ಹೇಗೆ ಸಿಕ್ಕೀತು ಜನದಾಗ॥

**೧೯. ಬಿಡಿ – ಬಿಡಿ ಲೇಖನಗಳು :**

ಕುಮಾರ ಕಕ್ಕಯ್ಯ ಪೋಳ ಅವರು ಗಣಾಚಾರ ತತ್ವವನ್ನು ಅಂಗವಿಸಿಕೊಂಡಿದ್ದ ಧೀರ ಶರಣಸಾಹಿತಿಯಾಗಿದ್ದರು. ಶ್ರೀಯುತರು ಬಸವಾದಿ

ಶರಣರ ಬಗ್ಗೆ ಯಾರೇ ನಿಂದೆ, ಅವಹೇಳನದ ಮಾತುಗಳನ್ನಾಡಿದರೆ, ಸಾಹಿತ್ಯ ಸೃಷ್ಟಿಸಿದರೆ ಅಂಥವರವನ್ನು ನಿರ್ಭಿಡೆಯಿಂದ, ನಿಷ್ಠುರವಾಗಿ ಖಂಡಿಸಿ ಭಾಷಣ ಮಾಡುತ್ತಿದ್ದರು, ಲೇಖನಗಳನ್ನು ಬರೆದು ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಸ್ವತಃ ಅವರೇ ಹೇಳಿರುವಂತೆ – "ಬಸವಣ್ಣನವರ ಆಸ್ತಿ ಹೊಡೆಯಲು ಆತನ ವಾರಸುದಾರರು ಎಂದು ಹೇಳಿಕೊಳ್ಳುವ ಈ ಠಕ್ಕರು (ವೀರಶೈವರು) ದತ್ತಕ ಮಕ್ಕಳೇ ಹೊರತು ಸ್ವಂತ ಮಕ್ಕಳಲ್ಲ. ಇಂಥವರು ಅಪ್ಪ ಬಸವಣ್ಣನಿಗೆ ಅವಮಾನ ನಡೆದರೂ ಬೆಣಿ ಬಡದಾವರಂಗ ಗಪ್ ಕುಂದರತಾರ. ನಾನು ಬಸವಣ್ಣನ ಚೊಚ್ಚಲಮಗ ನನ್ನಿಂದ ಸಹಿಸಿಕೊಳ್ಳಲಿಕ್ಕೆ ಆಗೂದಿಲ್ಲ" ಎಂದು ಸಿಡಿದೇಳ್ತಿದ್ದರು.

ವೀರಶೈವರೆಂದು ಕರೆದುಕೊಳ್ಳುವ ಖಾನೇ ಸುಮಾರಿ ಗುರು – ಜಗದ್ಗುರು, ವಿರಕ್ತ – ಸ್ವಾಮಿ, ಸಾಹಿತಿ – ಸಂಶೋಧಕ ಯಾರೇ ಆಗಿರಲಿ ಬಸವಾದಿ ಶರಣರ ಬಗ್ಗೆ ನಿಂದೆ ನುಡಿದಾಗ, ಅಪಚಾರ ಮಾಡಿದಾಗ, ನ್ಯಾಯನಿಷ್ಠುರರಾಗಿ ನೀವು ಮಾಡಿದ್ದು ತಪ್ಪು, ಖಂಡನೀಯ ಎಂದು ಉಗ್ರವಾಗಿ ಪ್ರತಿಭಟಿಸಿ ಲೇಖನ ಬರೆದು ಪ್ರಕಟಿಸುತ್ತಿದ್ದರು. ಅವರು ಬರೆದ ಕೆಲವು ಲೇಖನಗಳು ಹೀಗಿವೆ –

೧. ಬಸವನ ಬಲಿದಾನ ಹುಸಿಹೋಗಬೇಕೆ?
೨. ಸಿದ್ಧಾಂತ ಶಿಖಾಮಣಿ ಗೀತೆಯ ನಕಲಲ್ಲವೆ ?
೩. ಡಾ॥ ಜಚನಿ ಅವರ ಪ್ರತಿಗಾಮಿತನ
೪. ಮೂಜಗಂ ವರ್ತನೆ ಖಂಡನೀಯ
೫. ಯಾರ ಪಿತೂರಿಯಿಂದ ವೀರಶೈವ ಒಂದಾಗಿಲ್ಲ !
೬. ಮಹಾಚೈತ್ರ ತಪ್ಪಿದ ಜಂಗೀಜಖಾನ್ ದಾಳಿ
೭. ೧೯೯೧ ರ ಜನಗಣತಿ – ಲಿಂಗಾಯತ ಧರ್ಮ
೮. ಗೊಡ್ಡಾಕಳ – ಧಡ್ಡ ಮಗ – ಅಡ್ಡ ಪಲ್ಲಕ್ಕಿ
೯. ಬಸವಣ್ಣ ಧರ್ಮಸ್ಥಾಪಕ ಅಲ್ಲ ಎನ್ನುವ ಹಿಂದಿನ ಗತ್ತುಗಾರಿಕೆ ಏನು?
೧೦. ಜಂಗಮರ ಪ್ರಶ್ನೆ – ವೀರಶೈವರಿಗೆ ಮನವಿ.
೧೧. ಕೇವಲ ತಾಳಿಕಟ್ಟಿಕೊಂಡರೆ ಆಯಿತೆ?
೧೨. ಲಿಂಗಾಯತಕ್ಕೆ ಪರಿಶಿಷ್ಟರ ಮತಾಂತರ.

ಇಂತಹ ವೈಚಾರಿಕ, ಪ್ರತಿಭಟನಾತ್ಮಕ ಕ್ರಾಂತಿಕಾರಕ ಲೇಖನಗಳು ನೂರಾರು ಸಂಖ್ಯೆಯಲ್ಲಿವೆ"[೪೬]

**iv) ಸಮಜೋ–ಧಾರ್ಮಿಕ ಸಾಧನೆ :**

ಭಾರತದಲ್ಲಿ ಧರ್ಮ ಮತ್ತು ಸಮಾಜಗಳು ಅವಿನಾಭಾವ ಸಂಬಂಧ ಹೊಂದಿವೆ. ವರ್ಣಾಶ್ರಮ ಧರ್ಮ – ಸಮಾಜ ವ್ಯವಸ್ಥೆಯ ಸನಾತನ ಹಿಂದೂ ಧರ್ಮದಲ್ಲಿ ದಲಿತರ ಸ್ಥಾನ 'ಅಂತ್ಯಜ'ರಾಗಿ ಇರುವದಾಗಿದೆ ಎಂಬುದನ್ನು ಅರಿತಿದ್ದ

೪೬. ಕುಮಾರ ಕಕ್ಕಯ್ಯ ಪೋಳ – ಪ್ರೊ. ಸಿದ್ದಣ್ಣ ಲಂಗೋಟಿ ಪುಟ– ೪೪–೪೫

ಕುಮಾರ ಕಕ್ಕಯ್ಯ ಪೋಳ ಅವರು, ಹಿಂದೂ ಧರ್ಮ ಹಾಗೂ ಅದರ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದರು. 'ಹಿಂದೂ ಧರ್ಮದ ರಹಸ್ಯ' ಎಂಬ ಪ್ರಬಂಧದಲ್ಲಿ ಶ್ರೀಯುತರು ಹೀಗೆ ಬರೆದಿದ್ದಾರೆ – " ಮಾನ್ಯರೇ, ಈಗ ನಾನು ಹೇಳಬಯಸುವ ವಿಷಯ 'ಹಿಂದೂ ಧರ್ಮದ ರಹಸ್ಯ ಅರ್ಥಾತ್ ದಲಿತ ಜನ್ಮದ ಸಮಸ್ಯೆ. ಚಾತುರ್ವರ್ಣ ಜಾತಿಪದ್ಧತಿ ಆಚರಿಸುವ ಹಿಂದುಗಳು, ದೇವರು ಮತ್ತು ಧರ್ಮದ ಹೆಸರಿನಲ್ಲಿ ಮಾತ್ರ ಹಿಂದುಗಳಾಗಿದ್ದಾರೆ. ಆದರೆ ಆಚಾರ – ವಿಚಾರ, ಸುಖ–ಸಂಪತ್ತು, ಪ್ರತಿಷ್ಠೆಗಳಲ್ಲಿ ಸಾಕ್ಷಾತ್ ದಾನವರಾಗಿದ್ದಾರೆ. ತತ್ಪರಿಣಾಮ ಭಾರತದಲ್ಲಿ ದೀನ ದಲಿತರು ಹುಟ್ಟುತ್ತಾರೆ ಮತ್ತು ಸಾಯುತ್ತಾರೆ. ಆದರೆ, ಮಾನವರಾಗಿ ಅವರೆಂದೂ ಬಾಳುವದಿಲ್ಲ.ಪಶುಗಳಂತೆ ದುಡಿಯುತ್ತಾರೆ, ಪ್ರಾಣಿಗಳಂತೆ ತಿನ್ನುತ್ತಾರೆ ! ಧರ್ಮ ಮತ್ತು ಜಾತಿಯ ಹೆಸರಿನಲ್ಲಿ ಅವರ ಮೇಲಾಗುವಷ್ಟು ಅನ್ಯಾಯ ಅತ್ಯಾಚಾರಗಳು ಮತ್ತಾವ ಬೇರೆ ಕಾರಣಗಳಿಂದಲೂ ಆಗುವದಿಲ್ಲ ! ಕುಲಜರಿಂದ ದಲಿತ ಸ್ತ್ರೀಯರ ಮೇಲೆ ಬಲಾತ್ಕಾರ, ಸವರ್ಣಿಯರಿಂದ ಶೂದ್ರರ ಸಜೀವ ದಹನ, ಅಂತ್ಯಜರ ಮೇಲೆ ಸಾಮೂಹಿಕ ಹಲ್ಲೆ, ........ ಉತ್ತರ – ದಕ್ಷಿಣ ಪೂರ್ವ–ಪಶ್ಚಿಮ, ಹಳ್ಳಿ–ಪಳ್ಳಿ, ಪ್ಯಾಟಿ –ಪಟ್ಟಣ ಅಲ್ಲಿ–ಇಲ್ಲಿ ಎಲ್ಲಿ ಹೋದರೂ ದಲಿತರ ಸಮಸ್ಯೆ ದುರ್ಭರವಾಗಿದೆ, ಭೀಕರವಾಗಿದೆ, ಭಯಾನವಾಗಿದೆ !"[೪೭]

**ಕರ್ನಾಟಕ ಪಂಚಮ ಪ್ರಗತಿ ಸಂಘ ವಿಜಾಪುರ. :**

ಶ್ರೀಯುತರು ೧೯೮೫ ರಲ್ಲಿ ದಲಿತರ ಉದ್ಧಾರಕ್ಕಾಗಿ 'ಕರ್ನಾಟಕ ಪಂಚಮ ಪ್ರಗತಿ ಸಂಘ'ವನ್ನು ಹುಟ್ಟು ಹಾಕಿ, ತಾವು ಅದರ ಸ್ಥಾಪಕ ಅಧ್ಯಕ್ಷರಾಗಿ ಹೋರಾಟಕ್ಕೆ ಇಳಿದರು. ಹೊಲೆಯ ಮಾದಿಗ, ಡೋಹರ, ಸಮಗಾರ, ಚಂಡಾಲ ಎಂಬ ಐದು ದಲಿತ ಪಂಗಡಗಳ ಜನರ ಕಲ್ಯಾಣಕ್ಕಾಗಿ, ಪ್ರಗತಿಗಾಗಿ ಈ ಸಂಘ ಹುಟ್ಟು ಹಾಕಿದರು. " ಭಾರತದ ಸಂವಿಧಾನ ಪ್ರಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗ ಎಂದರೆ – ಊರಿಂದ ಹೊರಗೆ ಮತ್ತು ನಾಗರಿಕತೆಯಿಂದ ದೂರವಿದ್ದ ಅಸ್ಪೃಶ್ಯರು ಮತ್ತು ಅಲೆಮಾರಿಗಳು. ಅರ್ಥಾತ್ ಅಸ್ಪೃಶ್ಯರೆಂದರೆ ಯಾರಿಗೆ ಸಾರ್ವಜನಿಕ ಕೆರೆ, ಬಾವಿ, ಮಠ, ಮಂದಿರ, ಗುಡಿ, ಗುಂಡಾರ ಮತ್ತು ಗ್ರಾಮದ ಧಾರ್ಮಿಕ ಸಮಾರಂಭ ಇತ್ಯಾದಿ ಕಾರ್ಯಕಲಾಪಗಳಲ್ಲಿ ಪ್ರವೇಶ ಅಥವಾ ಆಸ್ಪದ ಇರುವದಿಲ್ಲವೋ ಅಂಥ ಜನಾಂಗ. ಅದೇ ಪ್ರಕಾರ ಅಲೆಮಾರಿಗಳೆಂದರೆ– ಯಾವುದೇ ಸ್ಥಾವರ ಅಥವಾ ಜಂಗಮ ಆಸ್ತಿಪಾಸ್ತಿ ಇಲ್ಲದೆ, ಗಿರಿ ಪರ್ವತ ಬುಡಕಟ್ಟು ಪ್ರದೇಶಗಳಲ್ಲಿ ಹೊಟ್ಟೆ ಪಾಡಿಗಾಗಿ ಅಲೆದಾಡುವ ನಿರ್ಗತಿಕ ಜನಾಂಗ"[೪೮]

ಈ ಜನಾಂಗಗಳ ಪ್ರಗತಿಗಾಗಿ ಸಂಘ ಕಟ್ಟಿ, ಅವರಿಗೆ ನೈಜ ಸೌಲಭ್ಯಗಳು ದೊರಕುವಂತೆ ಹಾಗೂ ಅವರಿಗೆ ಆಗುವ ಅನ್ಯಾಯ ಸರಿಪಡಿಸಲೋಸುಗ ಶ್ರಮಿಸಿದರು.

---

೪೭ ಮೂಕನ ಭಾಷಣ – ಶ್ರೀ ಬಿ.ಎಸ್. ಪೋಳ ಪುಟ – ೭೬

೪೮. ಕರ್ನಾಟಕ ಪಂಚಮ ಪ್ರಗತಿ ಸಂಘ ವಿಜಾಪುರ ಪ್ರಕಟಣೆ – ದಿನಾಂಕ – ೧–೨–೧೯೮೬

**ಜಾಗೃತ ಶೂದ್ರ ಸಂಘ :** ಕುಮಾರ ಕಕ್ಕಯ್ಯ ಪೋಳ ಅವರು ಶೂದ್ರರಲ್ಲಿ ಜಾಗೃತಿ ಒಡಮೂಡಿಸುವ ಸಲುವಾಗಿ ೧೯೮೪ ರಲ್ಲಿ 'ಜಾಗೃತ ಶೂದ್ರ ಸಂಘ' ವೊಂದನ್ನು ಶ್ರೀ ಬಿ.ಆರ್. ಹುಜರೆ ಮಾಜಿ ಶಾಸಕರು, ಶ್ರೀ ಕೂಸಪ್ಪ ತೊರವಿ, ಶ್ರೀ ಎಲ್.ಎಸ್. ಮೂಕಿಹಾಳ, ಶ್ರೀ ಜಿ.ಎಮ್. ಗೌರ ಬಾಗಲಕೋಟೆ ಇವರ ಹಾಗೂ ಸಮಾಜದ ಹಿತಚಿಂತಕರೊಂದಿಗೆ ಚರ್ಚಿಸಿ, ಸಂಘವನ್ನು ಹುಟ್ಟು ಹಾಕಿದರು. ಶ್ರೀಯುತರೇ ಹೇಳುವಂತೆ – "ಬುದ್ಧ ಬಸವ ಬಾಬಾಸಹೇಬರ ತತ್ವಗಳ ನೆಲಗಟ್ಟಿನ ಮೇಲೆ ನವಸಮಾಜವನ್ನು ಕಟ್ಟಬೇಕಾಗಿದೆ. ಊರ ಹೊರಗಿನ ಶೂದ್ರ ಕೇರಿಗಳನ್ನು ಊರಲ್ಲಿ ಕೂಡಿಸಿ ವಿಲೀನ ಮಾಡಬೇಕಾಗಿದೆ. ನಾವು ಕುರಿಗಳಾದರೆ ಎಲ್ಲರೂ ನಮ್ಮನ್ನು ಹರಿದು ತಿನ್ನುವವರೇ ! ಇಂದು ನಾವು ನಮ್ಮವರನ್ನು ಹುಲಿಗಳನ್ನಾಗಿ ಮಾಡಬೇಕಾಗಿದೆ, ಸಿಂಹಗಳನ್ನಾಗಿ ಮಾಡಬೇಕಾಗಿದೆ. ಶ್ರಮಜೀವಿಗಳಾದ ಶೂದ್ರರು ಶ್ರೇಷ್ಠರೆಂಬುದನ್ನು ಸಿದ್ಧಮಾಡಿ ಕೊಡಬೇಕಾಗಿದೆ. ಇದಕ್ಕಾಗಿ ಜಾಗೃತ ಶೂದ್ರ ಸಂಘ ಕಟ್ಟಬೇಕಿದೆ"[೪೯] ಎಂದು ತಮ್ಮ ಪ್ರಕಟನೆಯಲ್ಲಿ ತಿಳಿಸಿದ್ದಾರೆ.

ಈ ರೀತಿಯಾಗಿ ಹಿಂದುಳಿದ ಶೂದ್ರ – ಅಸ್ಪೃಶ್ಯ–ದಲಿತ ಜನಾಂಗದ ಪ್ರಗತಿ, ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸಿದವರು ಕುಮಾರ ಕಕ್ಕಯ್ಯ ಪೋಳರು.

**v) ಸಂಘ–ಸಂಸ್ಥೆಗಳ ಸದಸ್ಯತ್ವ ಹಾಗೂ ಸೇವೆ:**

ಕುಮಾರ ಕಕ್ಕಯ್ಯ ಪೋಳ ಅವರು ಹಿಂದುಳಿದ ದಿನ ದಲಿತರ, ಅಸ್ಪೃಶ್ಯರ, ಶೂದ್ರರ ಉದ್ಧಾರಕ್ಕಾಗಿ ಸ್ವತಃ ಕೆಲವು ಸಂಘಗಳನ್ನು ಹುಟ್ಟು ಹಾಕಿದ್ದಲ್ಲದೆ. ಪ್ರಗತಿಪರ ಕಾರ್ಯಮಾಡುವ ಕೆಲವು ಸಂಘ ಸಂಸ್ಥೆಗಳಲ್ಲಿ ಸದಸ್ಯರಾಗಿ ವಿವಿಧ ಪದಾಧಿಕಾರಿ ಹುದ್ದೆಗಳಲ್ಲಿ ಕ್ರಿಯಾಶೀಲವಾಗಿ ಕಾರ್ಯಮಾಡಿದರು, ವಿವರ ಹೀಗಿದೆ –

೧. ಅಧ್ಯಕ್ಷರು, ಪಂಚಮ ದಲಿತ ಪ್ರಗತಿ ಸಂಘ, ವಿಜಾಪುರ
೨. ಅಧ್ಯಕ್ಷರು, ಜಾಗೃತ ಶೂದ್ರ ಸಂಘ, ವಿಜಾಪುರ
೩. ಅಧ್ಯಕ್ಷರು, ಕಲ್ಯಾಣನಾಡಿನ ಶರಣ ಪರಿಷತ್ತು ಬಸವಕಲ್ಯಾಣ ಬೀದರ
೪. ಬೋಧಕರು, ಶರಣಸಿದ್ಧಾಂತ ವಿದ್ಯಾಪೀಠ, ಇಳಕಲ್ಲ
೫. ಸಂಪಾದಕ ಸಲಹಾ ಸಮಿತಿ ಸದಸ್ಯರು, ಬಸವಬೆಳಗು ಪತ್ರಿಕೆ ಇಳಕಲ್ಲ
೬. ಚೇರಮನ್, ಕೆಸಿಎಂ ಸೊಸಾಯಿಟಿ ವಿಜಾಪುರ
೭. ಸದಸ್ಯರು, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ವಿಜಾಪುರ
೮. ಗೌ॥ ಸದಸ್ಯರು, ಅನುಭವ ಮಂಟಪ ಬಸವಕಲ್ಯಾಣ
೯. ಸದಸ್ಯರು, ಜಿಲ್ಲಾ ಕುಷ್ಠರೋಗ ನಿವಾರಣಾ ಸಮಿತಿ ವಿಜಾಪುರ
೧೦. ಸದಸ್ಯರು , ರಾಮಕೃಷ್ಣ ಮಿಶನ್ ಸಂಸ್ಥೆ ವಿಜಾಪುರ
೧೧. ಚೇರಮನ್, ಸ್ಕೂಲ್ ನಂ ೨೪ ವಿಜಾಪುರ
೧೨. ಪ್ರಧಾನ ಕಾರ್ಯದರ್ಶಿ, ಜಿಲ್ಲಾ ಸಾಹಿತ್ಯ ವರ್ಧಕ ಸಂಘ ವಿಜಾಪುರ
೧೩ ಕೋಶಾಧ್ಯಕ್ಷರು, ಜಿಲ್ಲಾ ಬಸವದಳ ವಿಜಾಪುರ

---

೪೯. ಜಾಗೃತ ಶೂದ್ರಸಂಘ – ವಿಜಾಪುರ ಪ್ರಕಟಣೆ – ೫–೧–೧೯೮೪

೧೪. ಸಂಸತ್ ಸದಸ್ಯರು, ಬಸವಧರ್ಮ ಪೀಠ ಕೂಡಲಸಂಗಮ
೧೫. ಉಪಾಧ್ಯಕ್ಷರು, ಶರಣ ಕಕ್ಕಯ್ಯ ಕಲ್ಯಾಣಮಂಟಪ ವಿಜಾಪುರ
೧೬. ಉಪಾಧ್ಯಕ್ಷರು, ಕಾಕಾ ಕಾರಖಾನೀಸ್ ಸ್ಮಾರಕ ಸಮಿತಿ ವಿಜಾಪುರ
೧೭. ಆಜೀವ ಸದಸ್ಯರು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು
೧೮. ಆಜೀವ ಸದಸ್ಯರು, ಬಸವತತ್ವ ಪ್ರಸಾರ ಸಂಸ್ಥೆ ಧಾರವಾಡ
೧೯. ಆಜೀವ ಸದಸ್ಯರು, ಅಖಿಲಭಾರತ ಶರಣಸಾಹಿತ್ಯ ಪರಿಷತ್ತು ಮೈಸೂರು
೨೦. ಆಜೀವ ಸದಸ್ಯರು, ಅಖಿಲಭಾರತ ವೀರಶೈವ ಮಹಾಸಭಾ ಬೆಂಗಳೂರು
೨೧. ಕಾರ್ಯದರ್ಶಿ, ಹರ್ಡೇಕರ ಮಂಜಪ್ಪ ಟ್ರಸ್ಟ ಕಮಿಟಿ ವಿಜಾಪುರ
೨೨. ಆಜೀವ ಸದಸ್ಯರು, ಬಸವ ಸಮಿತಿ ಬೆಂಗಳೂರು.
೨೩. ಚೇರಮನ್. ಕಕ್ಕಯ್ಯ ಹೌಸಿಂಗ್ ಸೊಸಾಯಿಟಿ ವಿಜಾಪುರ
೨೪. ಕಾರ್ಯನಿರ್ವಾಹಕರು, ಆಡಳಿತದಲ್ಲಿ ಕನ್ನಡ ತರಬೇತಿ,
ಕನ್ನಡ ಸಾಂಸ್ಕೃತಿಕ ಇಲಾಖೆ, ಕರ್ನಾಟಕ ಸರಕಾರ

ಈ ರೀತಿಯಾಗಿ ಕರ್ನಾಟಕದ ಮೈಸೂರು, ಬೆಂಗಳೂರು, ಧಾರವಾಡ, ವಿಜಾಪುರ, ಬೀದರ ವರೆಗೆ ಶ್ರೀಯುತರು ಹಲವಾರು ಸಂಘ-ಸಂಸ್ಥೆಗಳಲ್ಲಿ ತೊಡಗಿಸಿಕೊಂಡು ಅಹರ್ನಿಶವಾಗಿ ಶ್ರಮಿಸಿದವರಾಗಿದ್ದಾರೆ.

**vi) ಸಮ್ಮೇಳನಗಳ ಅಧ್ಯಕ್ಷರು, ಅತಿಥಿಗಳು ಹಾಗೂ ಗೌರವ ಪ್ರಶಸ್ತಿಗಳು :**

ಕುಮಾರ ಕಕ್ಕಯ್ಯ ಪೋಳ ಅವರ ಕನ್ನಡ ಸಾಹಿತ್ಯ ಹಾಗೂ ಶರಣಸಾಹಿತ್ಯ ಸೇವೆಯನ್ನು ಮನಗಂಡ ನಾಡಿನ ಅನೇಕ ಸಂಘಟನೆಗಳು ರಾಜ್ಯಮಟ್ಟದ, ಅಖಿಲ ಭಾರತ ಮಟ್ಟದ ಸಭೆ-ಸಮ್ಮೇಲನಗಳಲ್ಲಿ ಗೋಷ್ಠಗಳಲ್ಲಿ ಅತಿಥಿ, ಅಧ್ಯಕ್ಷರಾಗಿ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆ ಮಾಡಿ, ಗೌರವಿಸಿವೆ.

೧. ಬೆಂಗಳೂರಿನಲ್ಲಿ ನಡೆದ ದಲಿತ ಸಾಹಿತ್ಯ ಸಮ್ಮೇಲನದಲ್ಲಿ ಕವಿಗೋಷ್ಠಿ ಅಧ್ಯಕ್ಷರಾಗಿ
೨. ಬೆಳಗಾವಿಯಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ ಉಪನ್ಯಾಸಕರಾಗಿ
೩. ಗುಲಬರ್ಗಾ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿ ಅಧ್ಯಕ್ಷರಾಗಿ
೪. ಮುದ್ದೇಬಿಹಾಳದಲ್ಲಿ ಜರುಗಿದ ವಿಜಾಪುರ ಜಿಲ್ಲಾ ಕನ್ನಡ ಸಾಹಿತ್ಯ ಸಮೇಳನದಲ್ಲಿ ಮುಖ್ಯ ಅತಿಥಿ-ಉಪನ್ಯಾಸಕರಾಗಿ.
೫. ಜಮಖಂಡಿ ಬಸವಭೂಮಿಯ ಶರಣಸಮ್ಮೇಳನದ ಅಧ್ಯಕ್ಷರಾಗಿ.
೬. ಕಲ್ಯಾಣ ನಾಡಿನ ಶರಣಸಮ್ಮೇಳನದ ಅಧ್ಯಕ್ಷರಾಗಿ

ತಮ್ಮ ಪಾಂಡಿತ್ಯಪೂರ್ಣ ವೈಚಾರಿಕ ಉಪನ್ಯಾಸಗಳನ್ನು ನೀಡಿ, ಜನಮಾನಸವನ್ನು ಚಿಂತನೆಗೆ ತೊಡಗಿಸಿದ್ದಾರೆ.

ಕರ್ನಾಟಕ – ಆಂಧ್ರ – ಮಹಾರಾಷ್ಟ್ರ – ದಿಲ್ಲಿ ರಾಜ್ಯಗಳ ಅನೇಕ ನಗರ – ಪಟ್ಟಣ ಗ್ರಾಮಗಳಲ್ಲಿ ಸಂಚರಿಸಿ ಬಸವತತ್ವ ಕುರಿತು ಉಪನ್ಯಾಸಗಳನ್ನು ನೀಡಿ, ಜನಮಾನಸವನ್ನು ಚಿಂತನೆಗೆ ತೊಡಗಿಸಿದ್ದಾರೆ.

ಶ್ರೀಯುತರ ಶರಣಸಾಹಿತ್ಯ ಸೇವೆಯನ್ನು ಪರಿಗಣಿಸಿ– ಚಿತ್ತರಗಿ – ಸಂಸ್ಥಾನ ಮಠ ಇಳಕಲ್ಲದ ಶರಣಸಿದ್ಧಾಂತ ವಿದ್ಯಾಪೀಠದ "ಬಸವ ಗುರು ಕಾರುಣ್ಯ ಪ್ರಶಸ್ತಿ" ಲಭಿಸಿದೆ. ಅದೇ ಶ್ರೀಮಠದ 'ಲಿಂಗಾಯತ ಧರ್ಮಗ್ರಂಥ ಪುರಸ್ಕಾರ' ವು ಶ್ರೀಯುತರ 'ಕುಮಾರ ಕಕ್ಕಯ್ಯನ ವಚನಗಳು' ಕೃತಿಗೆ ಲಭಸಿದೆ. ಗದಗ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಹಾಗೂ ಇಳಕಲ್ಲದ ಶ್ರೀ ಮನಿಪ್ರ ಮಹಾಂತಸ್ವಾಮಿಗಳವರು ಚಿತ್ತರಗಿ ಸಂಸ್ಥಾನ ಮಠ 'ಬಸವಧರ್ಮ ಪ್ರಕಾಶ ಎಂಬ ಬಿರುದು ನೀಡಿ ಗೌರವಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು 'ರಾಜ್ಯೋತ್ಸವ ಪ್ರಶಸ್ತಿ' ನೀಡಿದೆ. ಕರ್ನಾಟಕ ಸರಕಾರ ಸಾಹಿತಿಗಳ ಮಾಶಾಸನವೆಂದು ೫೦೦ ರೂ॥ ನೀಡಿದೆ. ಲಿಂಗಾಯತ ಧರ್ಮ ಕೇಂದ್ರ ಬಸವ ಕಲ್ಯಾಣ ಅನುಭವ ಮಂಟಪದಲ್ಲಿ ವಿಶ್ವಬಸವಧರ್ಮ ಮೂಲಪೀಠದ ವತಿಯಿಂದ ಡಾ॥ ಬಿ.ವ್ಹಿ ಪಟೇಲರು ಪೂಜ್ಯ ಶತಾಯುಷಿ, ಶ್ರೀಮಘಚ ಚೆನ್ನಬಸವ ಪಟ್ಟದ್ದೇವರ ಲಿಂಗಹಸ್ತದಿಂದ ಸತ್ಕರಿಸಿ 'ವಿಶ್ವಗುರು ಬಸವ ಕರುಣೆ' ಪ್ರಶಸ್ತಿ ನೀಡಿದ್ದಾರೆ. ಲಿಂಗಾಯತ ಧರ್ಮಕ್ಷೇತ್ರ ಕೂಡಲಸಂಗಮದ ಬಸವಧರ್ಮ ಪೀಠದಲ್ಲಿ ಶರಣಮೇಳದ ಕಾಲಕ್ಕೆ ಪೂಜ್ಯ ಶ್ರೀ ಮಹಾಜಗದ್ಗುರು ಲಿಂಗಾನಂದ ಮಹಾಸ್ವಾಮಿಗಳು ಹಾಗೂ ಪೂಜ್ಯ ಶ್ರೀ ಜಗದ್ಗುರು ಮಾತೆ ಮಹಾದೇವಿ ತಾಯಿಯವರು 'ಬಸವಧರ್ಮ ಜ್ಯೋತಿ' ಎಂದು ಗೌರವ ನೀಡಿ ಸತ್ಕರಿಸಿದ್ದಾರೆ. ರಾಮದುರ್ಗ ವೀರಶೈವ ಸಮಾಜ–ಅಕ್ಕನಬಳಗ–ಬಸವಸೇವಾದಳದವರು 'ಬಸವ ಜ್ಯೋತಿ' ಗೌರವ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ. ಮುಂಬಯಿಯ ಬಸವೇಶ್ವರ ಫಿಲಾಸಾಫಿಕಲ್ ಸೋಸೈಟಿಯವರು ಬಸವ ಜಯಂತಿಯಂದು ೧೯೯೫ ರ ಮೇ ೭ ರಂದು 'ಬಸವ ಪ್ರಶಸ್ತಿ' ನೀಡಿ ಗೌರವಿಸಿದ್ದಾರೆ.

ಇಂತಹ ಆಧುನಿಕ ಶರಣ, ಆಧುನಿಕ ವಚನಕಾರ ಕುಮಾರಕಕ್ಕಯ್ಯ ಪೋಳ ಅವರನ್ನು ಪ್ರೊ ಸಿದ್ದಣ್ಣ ಲಂಗೋಟಿಯವರು ೧೯೯೧ ರಲ್ಲಿ ' ಬಸವಬೆಳಗು' ದಲ್ಲಿ ಜಗಜ್ಯೋತಿ ಬಸವೇಶ್ವರ ಅನುಭಾವ ಪೀಠದಿಂದ 'ಕರ್ನಾಟಕದ ಅಂಬೇಡ್ಕರ' ಎಂದು ಅಭಿಮಾನದಿಂದ ಗೌರವಿಸಿ 'ಬಸವಬೆಳಗು'ಪ್ರಶಸ್ತಿ ನೀಡಿ ಸತ್ಕರಿಸಿದ್ದಾರೆ.

# ಅಧ್ಯಾಯ – ೩.

## ಕುಮಾರ ಕಕ್ಕಯ್ಯನ ವಚನಗಳ ವರ್ಗೀಕರಣ ಹಾಗೂ ಅವುಗಳ ವಿಸ್ತೃತ ಅಧ್ಯಯನ.

ಅ. ಕುಮಾರ ಕಕ್ಕಯ್ಯನ ವಚನಗಳಲ್ಲಿ – ಸಾಮಾಜಿಕ ವಿಚಾರಗಳು.

ಆ. ಕುಮಾರ ಕಕ್ಕಯ್ಯನ ವಚನಗಳಲ್ಲಿ – ಧಾರ್ಮಿಕ ವಿಚಾರಗಳು.

ಇ. ಕುಮಾರ ಕಕ್ಕಯ್ಯನ ವಚನಗಳಲ್ಲಿ –ರಾಜಕೀಯ ವಿಚಾರಗಳು.

ಈ. ಕುಮಾರ ಕಕ್ಕಯ್ಯನ ವಚನಗಳಲ್ಲಿ – ಶೈಕ್ಷಣಿಕ ವಿಚಾರಗಳು.

ಉ. ಕುಮಾರ ಕಕ್ಕಯ್ಯನ ವಚನಗಳಲ್ಲಿ – ವೈಚಾರಿಕ ವಿಚಾರಗಳು.

ಊ. ಕುಮಾರ ಕಕ್ಕಯ್ಯನ ವಚನಗಳಲ್ಲಿ – ಕೌಟುಂಬಿಕ ವಿಚಾರಗಳು.

# ಅಧ್ಯಾಯ – ೩.

# ಕುಮಾರ ಕಕ್ಕಯ್ಯನ ವಚನಗಳ ವರ್ಗೀಕರಣ

## ಅ. ಕುಮಾರ ಕಕ್ಕಯ್ಯನ ವಚನಗಳಲ್ಲಿ ಸಾಮಾಜಿಕ ವಿಚಾರಗಳು :

### (i) ಸಮಾಜದ ಸ್ವರೂಪ – ದರ್ಶನ :

ಸಾವಿರಾರು ವರುಷಗಳ ಪ್ರಾಚೀನ ಇತಿಹಾಸ – ಸಂಸ್ಕೃತಿಯುಳ್ಳ ಭಾರತದಲ್ಲಿ ಸಮಾಜೋ–ಧಾರ್ಮಿಕ ವ್ಯವಸ್ಥೆಯು ಅನೇಕ ಏಳು–ಬೀಳುಗಳನ್ನು ಕಾಣುತ್ತ ಬಂದಿದೆ. 'ಸಮಾಜ ವ್ಯಕ್ತಿಗಳಿಂದ ನಿರ್ಮಿತವಾದುದು ಮತ್ತು ವ್ಯಕ್ತಿ ವಿಕಾಸಕ್ಕೆ ಸಹಾಯಕವಾಗಬೇಕಾದುದು. ಸಮಷ್ಠಿ ಸಹಕಾರದಿಂದ ವ್ಯಷ್ಟಿಹಿತ ಸಿದ್ಧಿಸುತ್ತದೆ. ವ್ಯಷ್ಟಿ ಮತ್ತು ಸಮಷ್ಟಿ ಪರಸ್ಪರ ಅವಲಂಬಿಗಳು, ಮತ್ತು ಪೂರಕಗಳು. ಅನೇಕ ಸಂದರ್ಭಗಳಲ್ಲಿ ಈ ಎರಡಕ್ಕೂ ಸಾಮರಸ್ಯವಿಲ್ಲದೆ ವಿರಸವನ್ನು ಸಮಾಜ ಎದುರಿಸಬೇಕಾಗುತ್ತದೆ. ವ್ಯಕ್ತಿಯ ಮೂಲಭೂತವಾದ ಆಕಾಂಕ್ಷೆಯನ್ನು ಪೂರ್ಣಗೊಳಿಸಿಕೊಡುವುದರ ಬದಲು ಅದಕ್ಕೆ ಅಡ್ಡಿಯಾಗಿ ಪರಿಣಮಿಸುತ್ತದೆ. ಅಪೂರ್ಣ ದೃಷ್ಟಿಯಿದುಂಟಾದ ಕೃತಕ ವಿಭಜನೆಯೇ ಇದಕ್ಕೆ ಕಾರಣ. ಇದನ್ನು ನಿವಾರಿಸಲು ಪೂರ್ಣದೃಷ್ಟಿಯಿಂದ ಜೀವನವನ್ನು ನೋಡಬಲ್ಲ ದರ್ಶನ ಬೇಕು.[೧]

'ಸಮಾಜ ಪದಕ್ಕೆ ಸಭೆ, ಸಂಘ, ಪಕ್ಷ, ಗುಂಪುಗಳೆಂಬ ಅರ್ಥಗಳಿವೆ. ನಿರ್ದಿಷ್ಟ ಜೀವನ ಮಾರ್ಗವನ್ನನುಸರಿಸುವ, ಆಂತರಿಕ ವ್ಯವಹಾರವುಳ್ಳ ಹಲವಾರು ವ್ಯಕ್ತಿಗಳ ಸುವ್ಯವಸ್ಥಿತ ಸಮುದಾಯವೇ ಸಮಾಜವೆಂದು ತಜ್ಞರು ವ್ಯಾಖ್ಯಾನಿಸುತ್ತಾರೆ. ಅಂದರೆ ವ್ಯಕ್ತಿಗಳೇ ಸಮಾಜದ ಘಟಕಗಳೆಂದಾಗುತ್ತದೆ. ಅತ್ಯಂತ ಪ್ರಾಚೀನಕಾಲದಲ್ಲಿ ಸಮಾಜವಿರಲಿಲ್ಲ. ಪ್ರಾಯಶಃ ಕುಟುಂಬ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಾಗಿನಿಂದ ಸಮಾಜದ ಕಲ್ಪನೆ ಮೂರ್ತತ್ವ ಪಡೆದಿರಬೇಕು. ಕಾಲಾನಂತರದಲ್ಲಿ ಸಮಾಜವೇ ರಾಷ್ಟ್ರಕ್ಕೆ ತಳಹದಿಯಾಗಿರಬೇಕು'[೨]

'ಸಮಾಜ ವ್ಯಕ್ತಿಗಳಿಂದ ಕೂಡಿದುದು ವ್ಯಕ್ತಿಯ ಬೆಳವಣಿಗೆ ಸಮಾಜದ ಬೆಳವಣಿಗೆ ಒಂದು ಸಮಾಜದ, ಒಂದು ದೇಶದ ಸಂಸ್ಕೃತಿಯನ್ನು ಆ ಸಮಾಜದ, ದೇಶದ, ಜನರ ರೀತಿ – ನೀತಿಗಳ ಮೇಲಿಂದ ಅಳೆಯಲಾಗುತ್ತದೆ. ಸಂಸ್ಕೃತಿಯೆಂಬುದು ಜನತೆಯ ಅಂತರಂಗದ ಉದಾತ್ತ ವಿಕಾಸ, ಆರೋಗ್ಯಕರವಾದ ಸಮಾಜದಲ್ಲಿಯೇ ವ್ಯಕ್ತಿಗಳು ಸುಸಂಸ್ಕೃತರಿರುತ್ತಾರೆ. ಸಮಾಜದ ಆರೋಗ್ಯವನ್ನು ಕಾಪಾಡಿಕೊಂಡು ಬರುವ ಜವಾಬ್ದಾರಿಯು ಹೆಚ್ಚಾಗಿ ಸಮಾಜದ ಉಚ್ಚವರ್ಗದ ಜನರ ಕೈಯಲ್ಲಿರುತ್ತದೆ. ಈ ಉಚ್ಚವರ್ಗದ ಜನ ಸಮಾಜದ ಹಿತವನ್ನು ನೋಡಬೇಕು........ ಆದರೆ ಭಾರತೀಯ ಧಾರ್ಮಿಕ ಇತಿಹಾಸದ ಪುಟಗಳನ್ನು ನೋಡಿದರೆ ಅಲ್ಲಿ ಮೇಲ್ವರ್ಗದ ಜನರೇ ಸಮಾಜದ ಸ್ವಾಸ್ತ್ಯವನ್ನು ಕೆಡಸಿದ್ದು ಕಂಡು ಬರುತ್ತದೆ'[೩]

---

೧. ಶರಣರ ಅನುಭಾವ ಸಾಹಿತ್ಯ – ಡಾ. ಎಚ್. ತಿಪ್ಪೇರುದ್ರಸ್ವಾಮಿ ಪು–೧೩೫.

೨. ಬಸವ ಸಂಹಿತೆ – ಡಾ. ದೇ. ಜವರೇಗೌಡ ಪು – ೩೯.

೩. ಶರಣರ ಆಂದೋಲನ ಹಾಗೂ ಹೊಸ ಸಮಾಜದ ಪರಿಕಲ್ಪನೆ – ಡಾ.ಎಂ. ಬಿ. ಹೂಗಾರ ಪುಟ – ೧೪೩೧

'ಸಮಾಜ' ಎಂಬ ಶಬ್ದದಲ್ಲಿ ಸಮ+ಅಜ ಎಂಬ ಎರಡು ಪದಗಳು ಸಂಧಿಯಾಗಿ ಸಮಾಜವಾಗಿದೆ. ಅಜ ಎಂದರೆ ಬ್ರಹ್ಮವೂ ಹೌದು, ಅಜ ಎಂದರೆ ಕುರಿಯೂ ಹೌದು. ಸಮಾಜದಲ್ಲಿ ಬ್ರಹ್ಮಜ್ಞಾನಿಗಳೆನಿಸಿಕೊಂಡ
ಉಚ್ಚ ಜನರೂ ಇದ್ದಾರೆ, ಮುಗ್ಧತೆ, ಅಜ್ಞಾನ, ಅನಕ್ಷರತೆ, ಮೌಢ್ಯತೆಯ ಪ್ರತೀಕವಾಗಿರುವ ಕುರಿಯಂತಹ ನಿಮ್ನವರ್ಗದವರೂ ಇದ್ದಾರೆ. ಇವರಿಬ್ಬರನ್ನೂ ಒಳಗೊಂಡಿರುವ ವ್ಯವಸ್ಥೆಯೇ ಸಮಾಜವಾಗಿದೆ.

ಭಾರತದಲ್ಲಿ ಆರ್ಯರು ಭಾರತಕ್ಕೆ ಬರುವದಕ್ಕಿಂತ ಮುಂಚೆ, ದ್ರಾವಿಡ ಜನಾಂಗವಿತ್ತು. ದ್ರಾವಿಡರು ಸಹಸ್ರಾರು ವರುಷಗಳಿಂದ ಕೃಷಿ ಪ್ರಧಾನ ಜೀವನ ಸಾಗಿಸುತ್ತಾ ಒಳ್ಳೆಯ ನಾಗರಿಕತೆ-ಸಂಸ್ಕೃತಿಯನ್ನು ಹೊಂದಿದವರಾಗಿದ್ದರು. ಹರಪ್ಪ-ಮಹೇಂಜೋದಾರೋ ಸಂಸ್ಕೃತಿಯ ಉತ್ಖನನದ ಅವಶೇಷಗಳಿಂದ ಇತಿಹಾಸಕಾರರು ಇದನ್ನು ಸ್ಪಷ್ಟಪಡಿಸಿದ್ದಾರೆ.

ಮಧ್ಯ ಏಶಿಯಾದ ಭಾಗದಿಂದ ಆರ್ಯರು ಅಲೆಮಾರಿಗಳಾಗಿ ಸಂಚರಿಸುತ್ತಾ ಸಂಪದ್ಭರಿತವಾದ, ಫಲವತ್ತಾದ ಜಂಬೂದ್ವೀಪವೆನಿಸಿದ ಭಾರತಕ್ಕೆ ಆಕ್ರಮಣಕಾರರಾಗಿ ಬಂದರು. ಉತ್ತರಭಾರತದ ಸಿಂಧೂ, ಗಂಗಾ, ಯಮುನಾ ಮುಂತಾದ ನದಿಗಳ ದಡದಲ್ಲಿ ನೆಲೆಯೂರಿದರು. ತಮ್ಮ ಶಸ್ತ್ರಾಸ್ತ್ರಗಳ ಬಲದಿಂದ ದ್ರಾವಿಡರ ಮೇಲೆ ದಾಳಿ ಮಾಡಿ ಅವರನ್ನು ಸೋಲಿಸಿದರು. ಸೋತು ಶರಣಾದವರನ್ನು ಗುಲಾಮರನ್ನಾಗಿಸಿಕೊಂಡರು. ಅವರ ಆಳ್ವಿಕೆಗೆ ಒಳಪಡದೇ ದಕ್ಷಿಣಭಾಗದೆಡೆಗೆ ಹಿಂದೆ ಸರಿದವರನ್ನು ದಸ್ಯು, ರಾಕ್ಷಸರೆಂದು ಕರೆದರು.

ಆರ್ಯರು ದ್ರಾವಿಡರ ಸಂಸ್ಕೃತಿ - ಸಮಾಜ - ಧರ್ಮವ್ಯವಸ್ಥೆಯ ಮೇಲೆ ಬೌದ್ಧಿಕ - ದೈಹಿಕ ಆಕ್ರಮಣ ಮಾಡಿ ತಮ್ಮದೇ ಆದ ಚಾತುರ್ವರ್ಣ ಪದ್ಧತಿಯ ಸಮಾಜೋ - ಧಾರ್ಮಿಕ ವ್ಯವಸ್ಥೆಯನ್ನು ಜಾರಿಗೆ ತಂದರು. ಇದನ್ನು ಗಟ್ಟಿಗೊಳಿಸಲು ಗ್ರಂಥಗಳನ್ನು ಅತಿಬುದ್ಧಿವಂತಿಕೆಯಿಂದ ರಚಿಸಿದರು. ಋಗ್ವೇದ,
ಯಜುರ್ವೇದ, ಅಥರ್ವಣವೇದ, ಸಾಮವೇದ ಎಂಬ ನಾಲ್ಕು ವೇದಗ್ರಂಥಗಳು ರಚನೆಗೊಂಡವು.

'ಋಗ್ವೇದ'ದ ೧೦ ನೆಯ ಮಂಡಲದ ೯೦ ನೇ ಸೂಕ್ತದ ೧೨ ನೆಯ ಶ್ಲೋಕವು ಚತುರ್ವರ್ಣಗಳ ಉಗಮವನ್ನು ಹೇಳುತ್ತದೆ.

ಬ್ರಾಹ್ಮಣೋಸ್ಯ ಮುಖಮಾಸೀತ್ ಬಾಹು ರಾಜನ್ಯ ಕೃತಃ।
ಉರುತದಸ್ಯ ಯದ್ವೈಶ್ಯಃ ಪದ್ಭ್ಯಾಮ್ ಶೂದ್ರೋ ಅಜಾಯತ॥

'ವಿರಾಟ್‌ಪುರುಷನ ಮುಖದಿಂದ ಬ್ರಾಹ್ಮಣನು, ಭುಜದಿಂದ ಕ್ಷತ್ರೀಯನು, ತೊಡೆಯಿಂದ ವೈಶ್ಯನು, ಪಾದದಿಂದ ಶೂದ್ರನು ಹುಟ್ಟಿದರು'[೪]

೪. ಬಸವತತ್ವ ಪ್ರದೀಪಿಕೆ - ವರ್ಣವ್ಯವಸ್ಥೆಯ ಉಗಮ - ಬಸವಶ್ರೀ ಸಿದ್ಧರಾಮ ಶರಣರು ಬೆಲ್ದಾಳ ಹಾಗೂ ಶ್ರೀ ಡಿ.ಎಂ. ಧನ್ನೂರ ಪು- ೯೫.

ಈ ರೀತಿಯಾಗಿ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ಋಗ್ವೇದದಲ್ಲಿಯೇ ಪ್ರಥಮತಃ ಹುಟ್ಟುಹಾಕಿದರು. ಅನಂತರ ಮಹಾಭಾರತದ ಅಂತರ್ಗತವಾಗಿ ಬರುವ ಭಗವದ್ಗೀತೆಯಲ್ಲಿ ಭಗವಾನ್ ಉವಾಚ ಎಂದು ಭಗವಂತನಾದ ಕೃಷ್ಣನ ಬಾಯಿಂದ – 'ಚಾತುರ್‌ವರ್ಣಮ್ ಮಯಾ ಸೃಷ್ಟ್ಯಂ ಗುಣಕರ್ಮ ವಿಭಾಗಶಃ'[೫] ನಾಲ್ಕು ವರ್ಣಗಳು ಗುಣಕರ್ಮಗಳಿಗನುಸಾರವಾಗಿ ನನ್ನಿಂದ ಸೃಷ್ಟಿಸಲ್ಪಟ್ಟವು ಎಂದು ನುಡಿಸಿದರು.

ಅದೇ ಭಗವದ್ಗೀತೆಯ ೯ ನೇ ಅಧ್ಯಾಯದ ೩೨ ಮತ್ತು ೩೩ ನೆಯ ಶ್ಲೋಕಗಳಲ್ಲಿ–

ಮಾಂ ಹಿ ಪಾರ್ಥ ವ್ಯಪಾಶ್ರಿತ ಯೇಪಿಸ್ಯುಃ ಪಾಪಯೋನಯ।
ಸ್ತ್ರೀಯೋ ವೈಶ್ಯೋಸ್ತಥಾ ಶೂದ್ರಾಸ್ತ್ರೇಪ್ತಿ ಯಾಂತಿ ಪರಾಂಗತಿಮ್ ॥
ಕಂ ಪುನಃ ಬ್ರಾಹ್ಮಣಃ ಪುಣ್ಯಾ ಭಕ್ತರಾಜಷ್ಯಯಸ್ತಥಾ ।
ಅನಿತ್ಯಮ್ ಸುಖಂ ಲೋಕ ಮಿಮಂ ಪ್ರಾಪ್ಯ ಭಜಸ್ವ ಮಾಮ್॥[೬]

"ಎಲೈ ಅರ್ಜುನನೆ, ಪಾಪಯೋನಿಜರಾದ ಸ್ತ್ರೀಯರು, ವೈಶ್ಯರು, ಶೂದ್ರರೂ ಕೂಡ ನನ್ನನ್ನು ಆಶ್ರಯಿಸಿ ಪರಮಗತಿಯನ್ನು ಹೊಂದುತ್ತಾರೆ. ಪುಣ್ಯ ಯೋನಿಜರಾದ ಬ್ರಾಹ್ಮಣರು ಮತ್ತು ಕ್ಷತ್ರಿಯರು (ರಾಜರು) ಪರಮಗತಿಯನ್ನು ಹೊಂದುವರೆಂದು ಹೇಳಬೇಕಾದುದೇನಿದೆ ? ಅನಿತ್ಯವೂ ಅಸುಖವೂ ಆದ ಈ ಲೋಕವನ್ನು ಪಡೆದಿರುವ ನೀನು ನನ್ನನ್ನು ಭಜಿಸು"[೭]

ಈ ರೀತಿಯಾಗಿ ಚಾತುರ್ವರ್ಣ ಸಮಾಜ ವ್ಯವಸ್ಥೆಯನ್ನು ಗಟ್ಟಿಗೊಳಿಸಿದುದಲ್ಲದೇ, ಅದರಲ್ಲಿಯೇ ಮೇಲು–ಕೀಳು, ಉಚ್ಚ–ನೀಚ, ಪುಣ್ಯಯೋನಿಜ – ಪಾಪಯೋನಿಜ ಎಂಬ ಭೇದಗಳನ್ನು ಕಲ್ಪಿಸಿದರು.

ಸ್ಮೃತಿಗಳ ಕಾಲದಲ್ಲಿ – ' ಮನುಸ್ಮೃತಿ, ಅತ್ರಿ, ವಿಷ್ಣು, ಹಾರೀತ, ಯಾಜ್ಞ್ಯವಲ್ಕ್ಯ, ಉಶನಾ, ಆಂಗಿರಾ, ಯಮ, ಆಪಸ್ತಂಭ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಗೌತಮ, ಶತಾತಪ, ವಸಿಷ್ಠ, ಶಂಖ, ಲಿಖಿತ, ದಕ್ಷ ಈ ಇಪ್ಪತ್ತು ಸ್ಮೃತಿಗಳು'[೮] ಮುಖ್ಯವಾದವುಗಳೆಂದು ಪರಿಗಣಿಸಿಲ್ಪಟ್ಟಿವೆ. ಈ ಸ್ಮೃತಿಗಳು ಹಿಂದೂ ಧರ್ಮ – ಸಮಾಜದ ಕಾನೂನು ಗ್ರಂಥಗಳೆಂದು ಪರಿಗಣಿಸಲ್ಪಟ್ಟಿವೆ. ಅದರಲ್ಲಿಯೂ ಮನುಸ್ಮೃತಿಯು ಹಿಂದೂ ಧರ್ಮಶಾಸ್ತ್ರಕ್ಕೆ ಬುನಾದಿಯಾಗಿದೆ. 'ಅದು ಸ್ವಾಯಂಭುವ ಮನುವಿನ ಉಪದೇಶವೆಂದೂ, ವರ್ಣಧರ್ಮ ರಹಸ್ಯಗಳನ್ನು ತಿಳಿಯಬಯಸಿ ಬಂದ ಋಷಿ ಮುನಿಗಳಿಗೆ ಸ್ವಾಯಂಭುವ ಮನುವಿನ ಶಿಷ್ಯ ಭೃಗು ಮಹರ್ಷಿ

---

೫. ಭಗವದ್ಗೀತೆ – ಅಧ್ಯಾಯ ೪, ಶ್ಲೋಕ ೧೩.
೬. ಭಗವದ್ಗೀತೆ ಅಧ್ಯಾಯ ೯ ಶ್ಲೋಕ ೩೨ ಹಾಗೂ ೩೩.
೭. ಬಸವತತ್ವ ಪ್ರದೀಪಿಕೆ – ವರ್ಣವ್ಯವಸ್ಥೆಯ ಉಗಮ – ಪು. ೧೦೩.
೮. ಯಾಜ್ಞವಲ್ಕ್ಯ ಸ್ಮೃತಿ – ಅನು. ನಾಗೇಶ ರಂಗೋಕುಲಕರ್ಣಿ ಪ್ರಸ್ತಾವನೆ ಪು – ೭.

ಬೋಧಿಸಿದ್ದೆಂದೂ ಪುರಾಣೋಕ್ತ. ಭಾರತದೇಶದ ಸಂಪ್ರದಾಯದಲ್ಲಿ ಮನು ಪುರಾಣ ಪ್ರಸಿದ್ದನು.[೯] ಆಗಿರುವನೆಂದು ಹೇಳಲ್ಪಟ್ಟಿದೆ.

ಈ ಮನುಸ್ಮೃತಿಯು ಎರಡು ಸಾವಿರ ವರುಷಗಳ ಕಾಲ ಭಾರತದ ಧರ್ಮ–ಸಮಾಜವನ್ನು ಅಲಿಖಿತ ಕಾನೂನು ಕಟ್ಟಳೆ ಎಂಬಂತೆ ಆಳುತ್ತಾ ಬಂದಿದೆ. ಚಾತುರ್ವರ್ಣ ಸಮಾಜದಲ್ಲಿ ಶ್ರೇಣೀಕೃತ ಭೇಧಗಳನ್ನು ಗಟ್ಟಿಗೊಳಿಸಿ, ಶೂದ್ರರನ್ನು ಹೀನಾಯವಾಗಿ ಕಂಡಿತು.

ಶೂದ್ರಂ ತು ಕಾರಯೇದ್ದಾಸ್ಯಂ ಕ್ರೀತಮಕ್ರೀತ ಮೇವ ವಾ।
ದಾಸಾಯೈವ ಹಿ ಸೃಷ್ಟೋ ಸೌ ಬ್ರಾಹ್ಮಣಸ್ಯ ಸ್ವಯಂಭುವಾ ॥[೧೦]

ಅಂದರೆ ಶೂದ್ರನು ಸೇವೆಗಾಗಿಯೇ ಜನಿಸಿದವನು ಆದುದರಿಂದ ಬ್ರಾಹ್ಮಣನು ಅವನಿಂದ ಸೇವೆ ಮಾಡಿಸಿಕೊಳ್ಳಬಹುದು.

'ಒಂದು ಪಕ್ಷ ಹಾಗೆ ಮಾಡಲು ಶೂದ್ರರು ನಿರಾಕರಿಸಿದರೆ ಅವರನ್ನು ಬಂಧಿಸಿ ಕೈಕೊಳ ಹಾಕಿ ಬ್ರಾಹ್ಮಣರ ಸೇವೆ ಮಾಡಲು ದಂಡಿಸಬೇಕೆಂದು ಅದು ತಾಕೀತು ಮಾಡುತ್ತದೆ. ಮಹಾ ಸೃಷ್ಟಿಕರ್ತ ಇಷ್ಟು ನಿರ್ದಯನೂ, ಅಮಾನುಷನೂ ಆಗುವುದು ಎಷ್ಟು ಶೋಚನೀಯ ! ತನ್ನ ಕೆಲವು ಮಕ್ಕಳಿಗೆ ಇನ್ನುಳಿದ ಎಲ್ಲಾ ಮಕ್ಕಳು ಜೀತಗಾರರಾಗಿ ದುಡಿಯಬೇಕೆಂದು ಬಯಸುವ ಅವನು ಎಂಥ ತಂದೆ![೧೧]

ಇಂತಹ ವರ್ಣಭೇದ, ವರ್ಗಭೇದ, ಆಶ್ರಮಭೇದ, ಲಿಂಗಭೇದಗಳಿಗೆ ಕಾರಣವಾಗಿರುವ ವೇದ–ಶಾಸ್ತ್ರ–ಆಗಮ–ಪುರಾಣಗಳನ್ನು ೧೨ ನೆಯ ಶತಮಾನದಲ್ಲಿ ಕ್ರಾಂತಿಕಾರಿ ಮಹಾಮಾನವ, ವಿಶ್ವಗುರು ಬಸವಣ್ಣನವರು ಉಗ್ರವಾಗಿ ಖಂಡಿಸುತ್ತಾರೆ.

ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ,
ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯ್ಯುವೆ
ನೋಡಯ್ಯ, ಕೂಡಲಸಂಗಮದೇವಾ,
ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ.[೧೨]

ಬಸವಾದಿ ಶರಣರು ಇಂತಹ ಅಮಾನವೀಯವಾದ ಸಮಾಜ ಪದ್ಧತಿಯ ಕುರಿತಾದ ಗ್ರಂಥಸ್ಥ ವ್ಯವಸ್ಥೆಯನ್ನು ತಿರಸ್ಕರಿಸಿದರು.

'ಆಧುನಿಕ ಸಂದರ್ಭದ ದಲಿತ ಬಂಡಾಯದವರು ಮನು ಸಂಸ್ಕೃತಿಯನ್ನು ವಿರೋಧಿಸಿ ಮನುಷ್ಯಪರ ನಿಂತ ಸ್ಥಿತಿ ಅನನ್ಯ. ಎಪ್ಪತ್ತರ ದಶಕದ ಸಂದರ್ಭದಲ್ಲಿ ಮಾನವೀಯ ಮೌಲ್ಯಗಳ ಉಳವಿಗಾಗಿ ದುಡಿದವರನ್ನು ನೋಡುತ್ತಾ ಅವರ ಬರಹವನ್ನು ಓದುವುದೇ ಒಂದು ರೋಮಾಂಚನ. ಎಪ್ಪತ್ತರ ಸಂದರ್ಭದ ಸಮಾಜೋ

---

೯. ಮನುಸ್ಮೃತಿ – ಅನು. ಚಕ್ರಕೋಡಿ ಈಶ್ವರಶಾಸ್ತ್ರಿ ಟೈಟಲ್ ಪುಟ – ii
೧೦. ಮನುಸ್ಮೃತಿ – ಅನು. ಚಕ್ರಕೋಡಿ ಈಶ್ವರಶಾಸ್ತ್ರಿ ಅಧ್ಯಾಯ ೮ ಶ್ಲೋಕ ೪೧೩.
೧೧. ಮಹಾಮನೆ ಪತ್ರಿಕೆ – ಡಾ. ಕೆ.ಎಸ್. ಭಗವಾನ್ ಪ್ರಬಂಧ ಸಂ. ೧೨ ಸಂ. ೦೪. ಪು.೭.
೧೨. ಬಸವಣ್ಣನವರ ವಚನಸಂಪುಟ – ಸಂ. ಡಾ. ಎಂ.ಎ. ಕುಲಬುರ್ಗಿ ವ – ೭೧೭.

– ಧಾರ್ಮಿಕ ಸ್ಥಿತಿಯು ಶೋಷಿತರು ಮೈಕೊಡವಿಕೊಂಡು ಎದ್ದು ನಿಂತ ಕಾಲ. ದನಿಕಳೆದುಕೊಂಡವರು, ಅವಮಾನಿತರು, ಮಹಿಳೆಯರು ಸ್ವತಃ ಪ್ರತಿಭಟಿಸಿದರು. ಆ ಪ್ರತಿಭಟನೆಗೆ, ನ್ಯಾಯದ ಕೂಗಿಗೆ ಸ್ಫೂರ್ತಿಯಾಗಿ ನಿಂತ ಹನ್ನೆರಡನೆಯ ಶತಮಾನದ ಬಸವಾದಿ ಶರಣರ ಚಿಂತನೆಗಳು ಪ್ರೇರಕಶಕ್ತಿಯಾದರೆ, ಕಾರ್ಲಮಾರ್ಕ್ಸ, ಅಂಬೇಡ್ಕರ, ಲೋಹಿಯಾ, ಜ್ಯೋತಿಬಾ ಫುಲೆ, ರಾಮಸ್ವಾಮಿ ಪೆರಿಯಾರ ಮುಂತಾದವರ ವಾದಗಳು ಈ ಸಂಚಲನೆಗೆ ಜೀವ ದ್ರವ್ಯವಾದವು'[೧೩]

ಆಧುನಿಕ – ವಿಜ್ಞಾನಯುಗದಲ್ಲಿ, ಸ್ವತಂತ್ರ ಭಾರತದಲ್ಲಿ ಇಂದಿಗೂ ದೀನ – ದಲಿತರ, ಶೂದ್ರ – ಪಂಚಮರ ಸ್ಥಿತಿಯು ಸಮಾಜೋ – ಧಾರ್ಮಿಕವಾಗಿ ಸುಧಾರಿಸಿಲ್ಲ. ಅಂತೆಯೇ ಕುಮಾರ ಕಕ್ಕಯ್ಯ ಪೋಳ ಅವರು ನಿಷ್ಠುರವಾಗಿ ಸ್ಪಂದಿಸುತ್ತಾರೆ. – 'ಇದು ನನ್ನ ಸಮಾಜ, ಜಾತಿ ಜಾತಿಯ ಶೆಣಸಾಟ, ಮೇಲು – ಕೀಳುಗಳ ಬಡಿದಾಟ, ಹೆಚ್ಚು ಕಡಿಮೆಯ ತಿಕ್ಕಾಟ, ಭಾರತಮಾತೆಯ ಪೇಚಾಟ! ಇದು ಸಹಸ್ರಾರು ವರುಷಗಳಿಂದ ನಡೆದು ಬಂದ ಪೆಡಂಭೂತ, ಸಮಾಜದ ಪರಿಪಾಠ. ಜಾತೀಯತೆಯ ಕುಟಿಲತೆಯಿಂದಾಗಿ, ಶತಶತಮಾನ ವರುಷಗಳಿಂದಾ ದೇಶ ದಾಸ್ಯತ್ವ ವಹಿಸಿತು! ಆದರೂ ನಮ್ಮದು ಹೆಮ್ಮೆಯ ಇತಿಹಾಸ! ಮೂಗು ಹೋದರೂ ಮೂಗಿನ ಸೊಳ್ಳೆ ಇದೆ ಅನ್ನುವದು ಇದು ನನ್ನ ಸಮಾಜ! ಅಮೇರಿಕೆಯಲ್ಲಿಯ ಬಿಳಿಯರು ಅಲ್ಲಿಗೆ ವಲಸೆ ಬಂದ ನಿಗ್ರೋಗಳಿಗೆ ಸರಿಸಮಾನ ಹಕ್ಕು ಕೊಡುತ್ತಿಲ್ಲಾ ಎಂದು ಭಾರತದಲ್ಲಿ ಬೊಬ್ಬಾಟ ! ಆದರೆ ಒಂದೇ ಬಣ್ಣದ, ಒಂದೇ ಉಸುರಿನ, ಒಂದೇ ಉದರದ ಬಂಧುಗಳನ್ನು ಊರ ಹೊರಗಿಟ್ಟು, ಮೋಜ ಮಾಡುವ ಕರಾಳ ಸನ್ನಿವೇಶ, ಈ ನನ್ನ ಸಮಾಜದಲ್ಲಿ! ದೇಶ ಸ್ವತಂತ್ರವಾಯಿತು. ಆದರೆ, ಊರ ಮುಂದಿನ ಹೊಲಗೇರಿ ಊರಲ್ಲಿ ಕೂಡಿ ಒಂದಾಗಲಿಲ್ಲ ! ಲೀನವಾಗಲಿಲ್ಲ !'[೧೪]

ಇದಕ್ಕೆ ಕಾರಣವೇನಿರಬಹುದು ? ಎಂಬ ಪ್ರಶ್ನೆಗೆ ವಚನಗಳ ಮೂಲಕವೇ ಕುಮಾರ ಕಕ್ಕಯ್ಯ ಪೋಳ ಅವರು ಉತ್ತರಿಸುತ್ತಾರೆ –

ಬಂಡವಾಳ ಶಾಹಿಗಳು ಧರ್ಮವನ್ನು
ಭದ್ರಪಡಿಸುತ್ತಾರೆ, ಬಲಿಯುತ್ತಾರೆ.
ಬಡಪಾಯಿಗಳು ಧರ್ಮವನ್ನು
ಆಚರಿಸುತ್ತಾರೆ, ಬಲಿಯಾಗುತ್ತಾರೆ.
ಗ್ರಂಥಸ್ಥ ಧರ್ಮವು
ಪಟ್ಟಭದ್ರ ಸಮಾಜ ವ್ಯವಸ್ಥೆಯ
ಅಡಿಪಾಯವೆಂದ ಕುಮಾರ ಕಕ್ಕಯ್ಯ[೧೫]

---

೧೩. ದಲಿತಸಾಹಿತಿ ಕುಮಾರ ಕಕ್ಕಯ್ಯ ಪೋಳ – ಡಾ. ಎಚ್. ಟಿ. ಪೋತೆ ಪು – ೧.
೧೪. ಇದು ನನ್ನ ಸಮಾಜ – ಭೀಮರಾವ ಎಸ್. ಪೋಳ ಪು – ೧೦೬.
೧೫. ಕುಮಾರ ಕಕ್ಕಯ್ಯನ ವಚನಗಳು – ಪು– ೭೭ ವ – ೨೯೮.

ಪಟ್ಟಭದ್ರ ಹಿತಾಸಕ್ತಿಯ ಸಮಾಜ ವ್ಯವಸ್ಥೆಗೆ ವೇದ, ಶಾಸ್ತ್ರ, ಆಗಮ, ಪುರಾಣ, ಗೀತೆ ಮುಂತಾದ ಧರ್ಮಗ್ರಂಥಗಳ ಮೂಲಕ ಜನ ಮಾನಸವನ್ನು ಆಳುತ್ತಿರುವುದೇ ಅಡಿಪಾಯವಾಗಿದೆ ಎಂಬುದನ್ನು ಮನಗಾಣಿಸುತ್ತಾರೆ.

ಕುಮಾರ ಕಕ್ಕಯ್ಯ ಪೋಳ ಅವರು ಬರೆದ ವಚನ ಸಾಹಿತ್ಯವು ಸಮಾಜದ ಸಮಸ್ಯೆಗಳ ಸ್ಪಂದನವಾಗಿದೆಯೆಂಬುದನ್ನು ಅವರ ವಚನದಲ್ಲಿ ಕಾಣುತ್ತೇವೆ. –

ಸಾಹಿತ್ಯವೆಂದರೆ ಪ್ರೇಮ ಕಾಮಗಳ ಗೀಳಲ್ಲ,
ಸಾಹಿತ್ಯವೆಂದರೆ ಮಡದಿ ಮಕ್ಕಳ ರಕ್ಷಣೆಯಲ್ಲ,
ಸಾಹಿತ್ಯವೆಂದರೆ ದೇವರು ಧರ್ಮದ ಚಿಂತನೆಯಲ್ಲ,
ಸಾಹಿತ್ಯವೆಂದರೆ ಸಾಕ್ಷ ಮೋಕ್ಷಗಳ ಸಾಧನೆಯಲ್ಲ,
ಸಾಹಿತ್ಯವೆಂದರೆ ಪ್ರತಿಭೆ ಪ್ರಭುತ್ವದ ಸಂಪಾದನೆಯಲ್ಲ,
ಸಾಹಿತ್ಯವೆಂದರೆ ಸಮಾಜದ ಸಮಸ್ಯೆಗಳ
ಸ್ಪಂದನವೆಂದ ಕುಮಾರ ಕಕ್ಕಯ್ಯ.[೧೬]

ಈ ರೀತಿ ಕ್ರಾಂತಿಕಾರಿ ವಚನಗಳ ಮೂಲಕ ಸಮಾಜದ ಸಮಸ್ಯೆಗಳಿಗೆ ಸ್ಪಂದಿಸಿ, ಜನಮಾನಸದಲ್ಲಿ ಜಾಗೃತಿಯುಂಟು ಮಾಡಿದವರು ಕುಮಾರ ಕಕ್ಕಯ್ಯನವರು.

**(ii) ಚಾತುರ್ವರ್ಣ ಸಮಾಜ ಪದ್ಧತಿ ಹಾಗೂ ಶೋಷಣೆ :**

ಸನಾತನ ಧರ್ಮದ ಧರ್ಮಗ್ರಂಥಗಳಾದ ವೇದಗಳಲ್ಲಿ ಚಾತುರ್ವರ್ಣ ಸಮಾಜ ವ್ಯವಸ್ಥೆಯ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ. ಋಗ್ವೇದಲ್ಲಿ ' ಬ್ರಹ್ಮನ ಮುಖದಿಂದ ಬ್ರಾಹ್ಮಣನು, ತೋಳುಗಳಿಂದ ಕ್ಷತ್ರೀಯನು, ತೊಡೆಗಳಿಂದ ವೈಶ್ಯನು, ಪಾದಗಳಿಂದ ಶೂದ್ರನೂ ಹುಟ್ಟಿ ಬಂದಿದ್ದಾರೆ ಎಂದು ಹೇಳಿದೆ.[೧೭]
ಅದೇ ರೀತಿಯಾಗಿ ಸ್ಮೃತಿಗಳ ಕಾಲಕ್ಕೆ ಧರ್ಮಶಾಸನ – ಕಾನೂನು ಗ್ರಂಥ ರಚಿಸಿದ ಮನು ಮಹಾಶಯನು–

ಚಾತುರ್ವರ್ಣ್ಯಂ ತ್ರಯೋ ಲೋಕಾಶ್ಚತ್ವಾರಶ್ಚಾ ಶ್ರಮಾಃ ಪೃಥಕ್ ।
ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ವೇದಾತ್ ಪ್ರಸಿಧ್ಯತಿ ॥[೧೮]

ಅಂದರೆ – ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳೂ, ಸ್ವರ್ಗ, ಮರ್ತ್ಯ, ಪಾತಾಳ ಎಂಬ ಮೂರು ಲೋಕಗಳೂ, ಬಾಲ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳೂ, ಭೂತ, ವರ್ತಮಾನ, ಭವಿಷ್ಯ ಎಂಬ ಮೂರು ಕಾಲಗಳೂ ಮತ್ತು ಇತರ ವಿದ್ಯಮಾನಗಳೆಲ್ಲವೂ ವೇದಗಮ್ಯಗಳಾಗಿವೆ.

ಸ್ವತಃ ಮನು ಮಹರ್ಷಿಯು ತನ್ನ ಪಾಂಡಿತ್ಯದ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಿರುವದನ್ನು ನೋಡಿ–

---

೧೬. ಕುಮಾರ ಕಕ್ಕಯ್ಯನ ವಚನಗಳು – ಪು – ೨೭೩ ವ ೧೦೮೦ (ಮೊದಲ ಮುದ್ರಣ)
೧೭. ಚಾತುರ್ವರ್ಣ ಧರ್ಮದರ್ಶನ – ಕುಮಾರ ಕಕ್ಕಯ್ಯ ಪೋಳ ಪು–೧
೧೮. ಮನುಸ್ಮೃತಿ – ಚಕ್ರಕೋಡಿ ಈಶ್ವರ ಶಾಸ್ತ್ರೀ, ಅ–೧೨ ಶ್ಲೋಕ – ೯೭.

ಯಃ ಕಶ್ಚಿತ್ಕಸ್ಯಚಿದ್ಧರ್ಮೋ ಮನುನಾ ಪರಿಕೀರ್ತಿತಃ!
ಸ ಸರ್ವೋಽಭಿಹಿತೋ ವೇದೇ ಸರ್ವಜ್ಞಾನಮಯೋ ಹಿ ಸಃ ॥[೧೯]

ಅಂದರೆ ಮನು ಸರ್ವಜ್ಞಾನವಂತನು ಮನು ಹೇಳಿದುದೆಲ್ಲವೂ ವೇದಗಳಲ್ಲಿ ಹೇಳಲ್ಪಟ್ಟಿದೆ.

"ಋಗ್ವೇದ, ಯಜುರ್ವೇದ, ಅಥರ್ವಣವೇದ, ಸಾಮವೇದ ಇವೆಲ್ಲವುಗಳಲ್ಲಿ ಹೇಳಿದ್ದನ್ನೇ ಉಪನಿಷತ್ತು, ಆಗಮ, ಶಾಸ್ತ್ರ, ಪುರಾಣ, ರಾಮಾಯಣ, ಮಹಾಭಾರತ, ಭಗವದ್ಗೀತೆ ಇತ್ಯಾದಿ ಧರ್ಮಗ್ರಂಥಗಳಲ್ಲಿ ಹೇಳಿದೆ. ಎಲ್ಲ ವೇದಾದಿ ಧರ್ಮಗ್ರಂಥಗಳನ್ನು ಕೃಷಿ ಮಾಡಿ ಅವುಗಳ ಸಾರಾಂಶವನ್ನು ಈ ಮನುಸ್ಮೃತಿಯಲ್ಲಿ ಕ್ರೋಢೀಕರಿಸಿ, ಇದನ್ನು ಹಿಂದೂ ಧರ್ಮ ಶಾಸನವನ್ನಾಗಿ ಮಾಡಲಾಗಿದೆ.

ಸಮಾಜದ ಸುವ್ಯವಸ್ಥಿತ ಆಡಳಿತಕ್ಕಾಗಿ ರೂಪಿಸಲ್ಪಟ್ಟಿತೆಂದು ಹೇಳಲ್ಪಡುವ ಚಾತುರ್ವರ್ಣ ಸಮಾಜ ಪದ್ಧತಿಯು ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಶೂದ್ರರ, ಶೂದ್ರಾತಿ ಶೂದ್ರರ ಶೋಷಣೆ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಮನು, ಅಪಸ್ತಂಬ, ಗೌತಮ ಮುಂತಾದವರ ಸ್ಮೃತಿ ಗ್ರಂಥಗಳಲ್ಲಿ ಶೂದ್ರರ ಮೇಲಿನ ದೌರ್ಜನ್ಯ ಹೇಗಿರಬೇಕು ಎಂಬ ಬಗ್ಗೆ ಕಾನೂನು ಕಟ್ಟಳೆಗಳನ್ನು ನೋಡಬಹುದಾಗಿದೆ.

ಶೂದ್ರಂ ತು ಕಾರಯೇದ್ದಾಸ್ಯಂ ಕ್ರೀತಮಕ್ರೀತಮೇವವಾ।
ದಾಸಾಯ್ಯೆವ ಹಿ ಸೃಷ್ಟೋ ಸಾ ಬ್ರಾಹ್ಮಣಸ್ಯ ಸ್ವಯಂಭುವಾ॥

ಅಂದರೆ – ಶೂದ್ರನು ಸೇವೆಗಾಗಿಯೇ ಜನಿಸಿದವನು. ಆದುದರಿಂದ ಬ್ರಾಹ್ಮಣನು ಅವನಿಂದ ಸೇವೆ ಮಾಡಿಸಿಕೊಳ್ಳಬಹುದು[೨೦]

ನ ಸ್ವಾಮಿನಾ ನಿಸ್ಸೃಷ್ಟೋಽಪಿ ಶೂದ್ರೋ ದಾಸ್ಯಾದ್ವಿ ಮುಚ್ಯತೇ।
ನಿಸರ್ಗಜಂ ಹಿ ತತ್ತಸ್ಯ ಕಸ್ತಸ್ಮಾತ್ತದ ಪೋಹತಿ॥

ಅಂದರೆ – ಶೂದ್ರನು ಸ್ವಾಮಿಯಿಂದ ಪರಿತ್ಯಕ್ತನಾದರೂ ದಾಸ್ಯದಿಂದ ವಿಮುಕ್ತಿ ಹೊಂದುವದಿಲ್ಲ, ಅವನ ಜನ್ಮದೊಡನೆ ಪ್ರಾಪ್ತವಾದ ದಾಸ್ಯವು ಅವನನ್ನು ಬಿಡದಿರುವುದರಿಂದ ದಾಸ್ಯದ ಹೊರತು ಅವನಿಗೆ ಬೇರೆ ಪುಣ್ಯ ಕಾರ್ಯವಿಲ್ಲ. ಪತ್ನಿಗೆ ಪತಿ ಸೇವೆಯಂತೆ ಶೂದ್ರನಿಗೆ ಬ್ರಾಹ್ಮಣ ಸೇವೆಯು ಸಕಲ ಪುರುಷಾರ್ಥದಾಯಕವು.[೨೧]

ಶೂದ್ರರಿಗೆ ಸಮಾಜದಲ್ಲಿ ಯಾವುದೇ ಪ್ರಕಾರದ ಗೌರವಯುತ ಸ್ಥಾನ ಮಾನಗಳಿಲ್ಲ. ಅವರನ್ನು ನಿರಂತರವಾಗಿ ದಾಸರನ್ನಾಗಿ, ಗುಲಾಮರನ್ನಾಗಿ

---

೧೯. ಮನುಸ್ಮೃತಿ – ಚಕ್ರಕೋಡಿ ಈಶ್ವರ ಶಾಸ್ತ್ರೀ, ಅ–೨ ಶೋಕ – ೭.
೨೦. ಮನುಸ್ಮೃತಿ – ಚಕ್ರಕೋಡಿ ಈಶ್ವರಶಾಸ್ತ್ರಿ ಅ– ೮ ಶ್ಲೋಕ – ೪೧೩
೨೧. ಮನುಸ್ಮೃತಿ – ಚಕ್ರಕೋಡಿ ಈಶ್ವರಶಾಸ್ತ್ರಿ ಅ –೮ ಶ್ಲೋಕ – ೪೧೪.

ದುಡಿಸಿಕೊಂಡರು. ಚಾತುರ್ವರ್ಣ ಸಮಾಜ ಪದ್ಧತಿಯಲ್ಲಿ ಶೂದ್ರನೇನಾದರೂ ಮೇಲಿನ ಮೂರು ವರ್ಣದವರೊಂದಿಗೆ ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೊಂದಿಗೆ ಸಮಾನ ಸ್ಥಾನ ಪಡೆಯಲು ಆಶಿಸಿದರೆ – ಅವರಿಗೆ ನೀಡಲ್ಪಡುವ ಶಿಕ್ಷೆಗಳು ಅದೆಂತಹ ಭಯಾನಕ, ಕ್ರೌರ್ಯಗಳಿಂದ ಕೂಡಿದ್ದವೆಂಬುದನ್ನು ಸ್ಮೃತಿಗಳಲ್ಲಿ ಕಾಣುತ್ತೇವೆ. ಆಪಸ್ತಂಬ ಸ್ಮೃತಿಯಲ್ಲಿ –.

> ಜಿಹ್ವಾಚ್ಛೇದನಂ ಶೂದ್ರಸ್ಯ ಆರ್ಯಂ ಧಾರ್ಮಿಕಮಾಕ್ರೋಶತಂ।
> ವಾಚಿ ಪಥಿ ಶಯ್ಯಾಯಾಮಾಸನ ಇತಿ ಸಮೀ ಭವತೋ ದಂಡ ತಾಡನಂ॥

‘ಮೊದಲ ಮೂರು ವರ್ಣಗಳಿಗೆ ಸೇರಿದ ವ್ಯಕ್ತಿಗಳನ್ನು ಶೂದ್ರ ನಿಂದಿಸಿದರೆ ಅವನ ನಾಲಗೆಯನ್ನು ಕತ್ತರಿಸಬೇಕು. ತ್ರೈವರ್ಣಿಕರ ಜೊತೆ ಶೂದ್ರನು ಸಮಾನ ಸ್ಥಾನ ಪಡೆಯಲು ಆಶಿಸಿದರೆ ಅವನನ್ನು ಬಾರುಕೋಲಿನಿಂದ ಥಳಿಸಬೇಕು”[೨೨] ಗೌತಮ ಸ್ಮೃತಿಯಲ್ಲಿ –

> ಶೂದ್ರೋ ದ್ವಿಜಾತೀನತಿ ಸಂಧಾಯಾಭಿಹತ್ಯ ವಾಗ್ದಂಡ।
> ಪಾರುಷ್ಯಾಭ್ಯಾಂ ಅಂಗಂ ಮೋಚ್ಯೋ ಯೇ ನೋಪಹನ್ಯಾತ್॥
> ಅಥಹಾಸ್ಯ ವೇದಂ ಉಪಶೃಣ್ವತಃ ತ್ರಪುಜತುಭ್ಯಾಂ ಶ್ರೋತ್ರಪ್ರತಿ ಪೂರಣಂ।
> ಉದಾಹರಣೇ ಜಿಹ್ವಾಚ್ಛೇದೋ ದಾರಣೇ ಶರೀರ ಭೇದಃ॥

“ದ್ವಿಜನನ್ನು ಬೈದರೆ ಅಥವಾ ಅವನನ್ನು ಹೊಡೆದರೆ ಶೂದ್ರನ ಆ ಅಂಗವನ್ನು ಊನ ಮಾಡಬೇಕು. ಅವನು ವೇದ ಪಠಣವನ್ನು ಕದ್ದು ಕೇಳಿದರೆ ಅವನ ಕಿವಿಗೆ ಕುದಿಯುವ ಅರಗು ಮತ್ತು ಸೀಸವನ್ನು ಸುರಿಯಬೇಕು. ಅವನು ವೇದೋಚ್ಚಾರಣೆ ಮಾಡಿದರೆ ಅವನ ನಾಲಗೆಯನ್ನು ಕತ್ತರಿಸಿ ಹಾಕಬೇಕು. ಅವನು ವೇದ ಮಂತ್ರಗಳನ್ನು ನೆನಪಿನಲ್ಲಿಟ್ಟುಕೊಂಡರೆ ಅವನ ದೇಹವನ್ನೇ ಕತ್ತರಿಸಿ ಚೂರು ಚೂರು ಮಾಡಬೇಕು”[೨೩] ವ್ಯಭಿಚಾರ ಮಾಡುವ ಚಾತುರ್‌ವರ್ಣೀಯರಿಗೆ ನೀಡಲ್ಪಡುವ ಶಿಕ್ಷೆಯನ್ನು ಸ್ಮೃತಿಗಳಲ್ಲಿ ಗಮನಿಸಿದರೆ, ಉಚ್ಚವರ್ಣೀಯರು ಶೂದ್ರರಿಗೆ ಮಾಡಿದ ಶೋಷಣೆ, ಅವರ ಮೇಲೆ ಮಾಡಿದ ಅನ್ಯಾಯ ನೋಡಬಹುದಾಗಿದೆ. ‘ಆಪಸ್ತಂಬ’ದಲ್ಲಿ– ನಾಶ್ಯಃ ಆರ್ಯಃ ಶೂದ್ರಾಯಾಂ॥

ವಧ್ಯಃ ಶೂದ್ರ ಆರ್ಯಾಯಾಂ॥

‘ಮೊದಲ ಮೂರು ವರ್ಣದ ಗಂಡಸರು ಶೂದ್ರ ಹೆಂಗಸರೊಡನೆ ವ್ಯಭಿಚಾರ ಮಾಡಿದರೆ ಅವರನ್ನು ಗಡಿಪಾರು ಮಾಡಬೇಕು. ಮೇಲಿನ ಮೂರು ವರ್ಣಕ್ಕೆ ಸೇರಿದ ಯಾವುದೇ ಹೆಂಗಸಿನ ಜೊತೆ ಶೂದ್ರ ಸಂಭೋಗ ಮಾಡಿದರೆ ಅವನನ್ನು ವಧೆ ಮಾಡಿ ಸಾಯಿಸಬೇಕು[೨೪]

---

೨೨. ಆಪಸ್ತಂಬ –೨.೧೦.೧೪–೧೫.ಹಿಂದೂಸಾಮ್ರಾಜ್ಯಶಾಹಿಯ ಇತಿಹಾಸ –ಭಗವಾನ್ ಪು– ೫೬–೫೭

೨೩. ಗೌತಮ – ೧೨. ೧. ೩–೬ ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ – ಪು –೫೭.

೨೪. ಆಪಸ್ತಂಬ – ೨.೧೦.೮–೯ ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ – ಪು – ೫೭.

ಶೂದ್ರ ವರ್ಣೀಯರು ಬಾಳಿನುದ್ದಕ್ಕೂ ಉಚ್ಚವರ್ಣೀಯರ ಗುಲಾಮರಾಗಿಯೇ ದುಡಿಯಬೇಕು, ಸೇವೆ ಮಾಡಬೇಕು. ಅವರು ಬೀಸಾಕುವ ಹಳೆಯ ಹರಿದ ಬಟ್ಟೆಗಳನ್ನೇ ಉಡಬೇಕು, ಎಂಜಲು ಅನ್ನವನ್ನೇ ತಿನ್ನಬೇಕು. ಸಾಮರ್ಥ್ಯವಿದ್ದರೂ ಆಸ್ತಿ- ಪಾಸ್ತಿ ಮಾಡಬಾರದು, ಹಣ ಸಂಗ್ರಹ ಮಾಡಬಾರದು ಎಂಬಿತ್ಯಾದಿ ಕರ್ಮಠ ಕಟ್ಟಳೆಗಳ ಶಾಸನ ಮಾಡಿದ್ದರು. ಮನುಸ್ಮೃತಿಯಲ್ಲಿ –

ಶಕ್ತೇನಾಪಿ ಹಿ ಶೂದ್ರೇಣ ನ ಕಾರ್ಯೋ ಧನ ಸಂಚಯಃ।
ಶೂದ್ರೋ ಹಿ ಧನಮಾಸಾದ್ಯ ಬ್ರಾಹ್ಮಣಾನೇವ ಬಾಧತೇ॥

'ಧನಾರ್ಜನೆಗೆ ಸಾಮರ್ಥ್ಯವಿದ್ದರೂ ಶೂದ್ರನು ಹಣ ಸಂಗ್ರಹಿಸಬಾರದು ಅದು ಅವನಿಗೆ ಬ್ರಾಹ್ಮಣ ಪೀಡೆಗೆ ಪ್ರೇರಣೆಯಾಗುವುದು'[೨೫]

ಈ ರೀತಿಯಾಗಿ ಶೂದ್ರ ವರ್ಣದವರ ಮೇಲೆ ನಿರಂತರವಾದ ದೌರ್ಜನ್ಯ ಎಸಗುತ್ತಾ ಅವರನ್ನು ತಮ್ಮ ಕಪಿಮುಷ್ಟಿಯಲ್ಲಿ ಬಂಧಿಸಿಟ್ಟುಕೊಂಡಿದ್ದರು.

ಒಂದು ವೇಳೆ ಉಚ್ಚ ವರ್ಣೀಯನೆನಿಸಿದವನು ಘೋರ ಅಪರಾಧಗಳನ್ನು ಮಾಡಿದರೂ ರಾಜನು ಅವನನ್ನು ಎಂದಿಗೂ ಕೊಲ್ಲಿಸಬಾರದಂತೆ![೨೬]

ಇಲ್ಲಿ ತಿಳಿದು ಬರುವದೇನೆಂದರೆ – ' ಬ್ರಾಹ್ಮಣನಿಗೇ ಒಂದು ಕಾನೂನು, ಶೂದ್ರನಿಗೇ ಒಂದು ಕಾನೂನು ಇತ್ತು. ಮೊದಲನೆಯವನನ್ನು ವಿಪರೀತ ಕನಿಕರದಿಂದಲೂ, ಕೊನೆಯವನನ್ನು ಮಿತಿ ಮೀರಿದ ಉಗ್ರ ಕ್ರೌರ್ಯದಿಂದಲೂ ಕಾಣಲಾಯಿತು.[೨೭]

ಈ ವರ್ಣಪದ್ಧತಿಯೇ ಕಾಲಾನಂತರದಲ್ಲಿ ಸಹಸ್ರಾರು ಜಾತಿಗಳನ್ನು ಹುಟ್ಟು ಹಾಕಿತು. " ಈ ಜಾತಿಯ ಬೇತಾಳ ಬ್ರಾಹ್ಮಣರಲ್ಲಿ ಹುಟ್ಟಿ, ಕ್ಷತ್ರಿಯರಲ್ಲಿ ರೂಪತಾಳಿ, ವೈಶ್ಯರಲ್ಲಿ ತಿಂದು, ಶೂದ್ರರಲ್ಲಿ ಬೆಳೆದು ಅಸ್ಪೃಶ್ಯರನ್ನು ಬಡಕೊಂಡಿದೆ. ಧರ್ಮದಿಂದ ಬಹಿಷ್ಕೃತರಾದ ಅಸ್ಪೃಶ್ಯರು, ದಾರಿದ್ರ್ಯ ರೇಖೆಗಿಂತ ತೀರ ಕೆಳಮಟ್ಟದ ಹೀನ ಜೀವನ ಬಾಳುತ್ತಿದ್ದಾರೆ! ಅವರಿಗೆ ವಾಸಕ್ಕೆ ಮನೆಯಿಲ್ಲ, ಬೇಸಾಯಕ್ಕೆ ಹೊಲವಿಲ್ಲ. ದುಡಿಯಲು ಸಮಾಜದಲ್ಲಿ ಅವಕಾಶವಿಲ್ಲ. ಶಿಕ್ಷಣದ ಗಂಧವಂತೂ ಮೊದಲಿಗೇ ಇಲ್ಲ. ತಾವು ಉಳಿದವರಿಗಿಂತ ಕೀಳೆಂಬ ಮಾನಸಿಕ ರೋಗದಿಂದ ಬಳಲುತ್ತಿದ್ದಾರೆ, ನರಳುತ್ತಿದ್ದಾರೆ! ಅವರಿಗೆ ಎಲ್ಲೆಲ್ಲಿಯೂ ಬರೀ ನಿರಾಶೆ, ಹತಾಶೆ. ಬಡತನದ ಬವಣೆ, ಹಸಿವೆಯ ತಾಪ, ಹೃದಯದ ನೋವು ಯಾರಿಗೆ ಹೇಳಬೇಕು? ಹಸಿವೆ ತಾಳದ ಅವರು ಕಸ ಮುಸುರೆ ಬಳಿಯುತ್ತಾರೆ, ಹಸಿದು ಹಳಸಿದ ಎಂಜಲು ತಿನ್ನುತ್ತಾರೆ, ಹೊಟ್ಟೆಯ ಪಾಡಿಗಾಗಿ ದಯಾ ಎಂದು ಭಿಕ್ಷೆ ಬೇಡುತ್ತಾರೆ, ಸಹೋದರಿಯರ ಶೀಲ ಮಾರುತ್ತಾರೆ! ಹಿಡಿ ಕಾಳಿಗಾಗಿ ಕಲ್ಲು ಗೋಡೆಗಳನ್ನು ಒಡೆಯುತ್ತಾರೆ, ಕೈಗೆ ಕಬ್ಬಿಣದ ಬೇಡಿಗಳನ್ನು ತೊಡುತ್ತಾರೆ! ಇಂಥ ಅವಮಾನಗಳು, ಸಂಕಟಗಳು, ಕಂಟಕಗಳು, ಅವರ ದಿನನಿತ್ಯದ ವ್ಯವಹಾರಗಳಾಗಿವೆ! ಹಿಂದೂ ಚಾತುರ್ವರ್ಣ

೨೫. ಮನುಸ್ಮೃತಿ – ಚಕ್ರಕೋಡಿ ಈಶ್ವರಶಾಸ್ತ್ರೀ ಅ– ೧೦ ಶ್ಲೋಕ – ೧೨೯.
೨೬. ಮನುಸ್ಮೃತಿ – ಅ–೮ ಶ್ಲೋಕ –೩೮೦.
೨೭. A History of Civilization in Ancient India - R.C. Dutt Vol-II P-47.

ಜಾತಿ ಪದ್ಧತಿಯ ಪ್ರಕಾರ ಅವರು ಒಡೆಯನ ಮನೆಯಲ್ಲಿ ಬೆಕ್ಕು, ನಾಯಿ, ಕತ್ತೆಗಳಿದ್ದಂತೆ. ಆ ಒಡೆಯನ ದೃಷ್ಟಿಯಲ್ಲಿ ಈ ದಲಿತರ ಜನನ –ಜೀವನ – ಮರಣ ಆ ಬೆಕ್ಕು ನಾಯಿಗಳಿಗಿಂತಲೂ ಕನಿಷ್ಟ !"[೨೮]

ಧರ್ಮಬಲ, ಅಧಿಕಾರಬಲ, ದ್ರವ್ಯಬಲ, ಮುಂಗೈಬಲ ಇವು ನಾಲ್ಕು ಶೋಷಣೆಯ ಮೂಲ ಮಾಧ್ಯಮಗಳು. ಶೂದ್ರರು – ಅಸ್ಪೃಶ್ಯರು ಈ ನಾಲ್ಕೂ ಬಲಗಳಿಂದ ಸಂಪೂರ್ಣ ವಂಚಿತರಾಗಿದ್ದರಿಂದಲೇ ಸಾವಿರಾರು ವರುಷಗಳ ಕಾಲ ಮೇಲ್ಜಾತಿಯವರ ದಬ್ಬಾಳಿಕೆಗೆ ತುತ್ತಾಗಿ, ನಲುಗಿ ಹೋಗಿದ್ದರು.

ಇಂತಹ ಅಮಾನುಷವಾದ, ಅಂಧಕಾರಮಯವಾದ ಕರಾಳ ಕಾಳರಾತ್ರಿಯಲ್ಲಿ ಮಾನವೀಯತೆಯ ಸಾಕಾರ ಮೂರ್ತಿಯಾಗಿ, ಮಾನವಕುಲದ ಉದ್ಧಾರಕನಾಗಿ, ಜಗಜ್ಯೋತಿಯಾಗಿ ಭಾರತದ ಕರ್ನಾಟಕ ಭೂಮಿಯಲ್ಲಿ ಜನಿಸಿ ಬಂದವರೇ ವಿಶ್ವಗುರು ಬಸವಣ್ಣನವರು. ರಾಷ್ಟ್ರಕವಿ, ವಿಶ್ವಮಾನವ ಕುವೆಂಪು ಅವರು ತಮ್ಮದೊಂದು ಕವಿತೆಯಲ್ಲಿ –

> ಕಾರ್ತಿಕದ ಕತ್ತಲಲಿ ಆಕಾಶದೀಪವಾಗಿ
> ನೀ ಬಂದೆ.
> ಬಟ್ಟೆಗೆಟ್ಟವರಿಗೊಂದು ದೊಂದಿ ದಿಕ್ಕಾಗಿ
> ಎಂಟು ಶತಮಾನಗಳ ಹಿಂದೆ,
> ಅಗ್ನಿ ಖಡ್ಗವನಾಂತ ಓ ಅಧ್ಯಾತ್ಮ ಕ್ರಾಂತಿವೀರ,
> ದೇವ ದಯೆಯೊಂದು ಹೇ ಧೀರಾವತಾರ,
> ಶ್ರೀ ಬಸವೇಶ್ವರಾ!
> ಜಾತಿ ಪದ್ಧತಿಯ ಹೋಮ ಕೂಪಕ್ಕೆ
> ಬಿದ್ದು, ವೈದಿಕರ ಯಜ್ಞ ತಾಪಕ್ಕೆ
> ಬಲಿವೋದ ದಲಿತ ಜೀವರನೆತ್ತಿ ಮತಿ ವಿಚಾರಕ್ಕೆ
> ಕಾಯಕದ ದಿವ್ಯ ತತ್ವದ ಸುಕ್ಷೇಮ ಧರ್ಮನಾಕಕ್ಕೆ
> ನಡೆಸಿದ ಮಹಾತ್ಮನೆ, ನಿನಗೆ ನಮೋನಮಃ[೨೯]

ಎಂದು ಬಸವಣ್ಣನವರ ಮಹಿಮೆಯನ್ನು ಸ್ತುತಿಸಿದ್ದಾರೆ.

ಎಂಟು ನೂರು ವರುಷಗಳ ಹಿಂದೆ ಈ ಚಾತುರ್ವರ್ಣ ಸಮಾಜೋಧರ್ಮ ವ್ಯವಸ್ಥೆಯನ್ನು ಪ್ರಶ್ನಿಸಿ, ಅದರ ತಾಯಿಬೇರನ್ನೇ ಕಿತ್ತೆಸೆದವರು ಬಸವಣ್ಣನವರು.

> ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ.
> ಜಲ ಬಿಂದುವಿನ ವ್ಯವಹಾರ ಒಂದೇ,

---

೨೮. ಚಾತುರ್ವರ್ಣಧರ್ಮದರ್ಶನ – ಕುಮಾರ ಕಕ್ಕಯ್ಯ ಪೋಳ ಪುಟ – ೧೯೩–೧೯೪.
೨೯. ಕುವೆಂಪು ಅವರ ದೃಷ್ಟಿಯಲ್ಲಿ ಶ್ರೀ ಬಸವೇಶ್ವರರು – ದೇ.ಜ.ಗೌ. ಪು –೧.

ಆಶೆ ಆಮಿಷ ರೋಷ ಹರುಷ ವಿಷಯಾದಿಗಳೆಲ್ಲ ಒಂದೇ,
ಏನನೋದಿ, ಏನ ಕೇಳಿ, ಏನು ಫಲ?
ಕುಲಜನೆಂಬುದಕ್ಕೆ ಆವುದು ದೃಷ್ಟ?
ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ।
ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ?

ಎಂದುದಾಗಿ,

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ,
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ.
ವರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ?
ಇದು ಕಾರಣ, ಕೂಡಲಸಂಗಮದೇವಾ,
ಲಿಂಗಸ್ಥಲವನರಿದವನೇ ಕುಲಜನು.[೩೦]

ಭಾರತದಲ್ಲಿ ಸಾವಿರಾರು ಜಾತಿಗಳ ಉಗಮಕ್ಕೆ ಕಾರಣವಾದ 'ವರ್ಣ ವ್ಯವಸ್ಥೆ'ಯನ್ನು ಇಷ್ಟೊಂದು ನಿಷ್ಠುರವಾಗಿ ಖಂಡಿಸಿದವರು ಮತ್ತೊಬ್ಬರು ಸಿಕ್ಕಲಾರರು. ಹುಟ್ಟಿನಿಂದ ಪ್ರತಿಯೊಬ್ಬರೂ ಸಮಾನರು. ಪ್ರತಿಯೊಬ್ಬರು ತಮ್ಮ ತಮ್ಮ ಶಕ್ತಿ – ಸಾಮರ್ಥ್ಯ ಪ್ರತಿಭೆ – ಅವಕಾಶಗಳಿಗೆ ಅನುಸಾರವಾಗಿ ಯಾವುದೇ ಉದ್ಯೋಗವನ್ನು ಕೈಕೊಳ್ಳಬಹುದು. ಕಾಯಕಗಳೆಲ್ಲವೂ ವ್ಯಷ್ಟಿ – ಸಮಷ್ಟಿಯ ಕಲ್ಯಾಣಕ್ಕೆ ಇರುತ್ತವೆ. ಕಾಯಕಗಳಲ್ಲಿ ಮೇಲು ಕೀಳು ಎಂದು ಎಣಿಸಬಾರದು ' ಕಾಯಕದಲ್ಲಿ ಕುಲವನರಸುವ ಎಲವೋ ಮಾತಂಗಿಯ ಮಗ ನೀನು' ಎಂದು ವಿಪ್ರವರ್ಣೀಯರನ್ನು ವಿಡಂಬನೆ ಮಾಡುತ್ತಾರೆ.

ಎನಿಸನೋದಿದಡೇನು? ಎನಿಸಕೇಳಿದಡೇನು?
ಚತುರ್ವೇದ ಪಾಠ ತೀವ್ರವಾದಡೇನು?
ಲಿಂಗಾರ್ಚನೆ ಹೀನವಾದಡೆ, ಶಿವಶಿವಾ।
ಬ್ರಾಹ್ಮಣನೆಂಬೆನೆ? ಎನಲಾಗದು.
ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ।
ಶ್ರತೇನ ಶ್ರೋತ್ರೀಯಶ್ಚೈವ ಬ್ರಹ್ಮ ಚರತಿ ಬ್ರಾಹ್ಮಣಾ॥

ಎಂದುದಾಗಿ,

ಬ್ರಹ್ಮನಾಸ್ತಿ ಶ್ವಪಚರಧಮರೆಂದುದಾಗಿ
ಇದು ಕಾರಣ ಕೂಡಲಸಂಗಮದೇವಾ
ವೇದಭಾರ ಭರಾಕ್ರಾಂತಾ ಬ್ರಾಹ್ಮಣಾಃ ಗಾರ್ದಭಾಃ ಎಂಬೆನು[೩೧]

---

೩೦. ಬಸವಣ್ಣನವರ ವಚನ ಸಂಪುಟ ಸಂ. ಡಾ॥ ಎಂ.ಎಂ. ಕಲಬುರ್ಗಿ ವ – ೫೯೦.
೩೧. ಬಸವಣ್ಣನವರ ವಚನ ಸಂಪುಟ – ಸಂ. ಡಾ॥ ಎಂ.ಎಂ. ಕಲಬುರ್ಗಿ ವ – ೫೮೭.

ಋಗ್ವೇದ, ಯಜುರ್ವೇದ, ಅಥರ್ವಣವೇದ, ಸಾಮವೇದ ಎಂಬ ನಾಲ್ಕು ವೇದಗಳನ್ನು ಅಧ್ಯಯನ ಮಾಡಿದರೂ, ಆತ ಬ್ರಾಹ್ಮಣನಾಗುವುದಿಲ್ಲ. ಶ್ವಪಚರನ್ನು ಅಧಮರೆಂದು ಕರೆದರೆ ಅವನೆಂತು ಬ್ರಹ್ಮಜ್ಞಾನಿ? ಅಲ್ಲಿ ಬ್ರಹ್ಮಜ್ಞಾನ ನಾಸ್ತಿಯಾಗಿರುತ್ತದೆ. ಹುಟ್ಟಿನಿಂದ ಯಾರೂ ಬ್ರಾಹ್ಮಣರಾಗುವುದಿಲ್ಲ. ಎಲ್ಲರೂ ಶೂದ್ರರೇ ಎಂಬ ವೈಜ್ಞಾನಿಕ ಸತ್ಯವನ್ನು ತಿಳಿಯಪಡಿಸುತ್ತಾರೆ.

ಈ ಶರಣ ಪರಂಪರೆಯ ಚಿಂತನ ಹಾಗೂ ಡಾ॥ ಅಂಬೇಡ್ಕರರ ವಿಚಾರಗಳನ್ನು ಅಧ್ಯಯನ ಮಾಡಿದ ಸಮಾಜ ಚಿಂತಕರು ಈ ಕುರಿತು ಬರೆಯುತ್ತಾರೆ – " ಹಿಂದೂ ಧರ್ಮ ಜಾತಿಗಳನ್ನು ಸೃಷ್ಟಿಸಿತಲ್ಲದೆ, ಅವುಗಳು ಒಂದುಗೂಡದಂತೆ ಎಚ್ಚರಿಕೆ ವಹಿಸಿದೆ. ಹೊಸ ಬದುಕನ್ನು ರೂಪಿಸಿ, ಹೊಸ ಸಮಾಜವನ್ನು ರೂಪಿಸಬೇಕಾದರೆ, ಹಿಂದೂ ಧರ್ಮವನ್ನು ಪೋಷಿಸಿರುವ ಪುರಾಣ ಶಾಸ್ತ್ರಗಳನ್ನು ನಿರಾಕರಿಸಬೇಕು. ಹಿಂದೂ ಧರ್ಮದ ದೇವರುಗಳನ್ನು ತಿರಸ್ಕರಿಸಬೆಕೆಂಬುದೇ ಇಂದಿನ ಅಂಬೇಡ್ಕರವಾದ, ಈ ವಾದವನ್ನು ನೂರಾರು ವರುಷಗಳ ಹಿಂದೆಯೇ ರಾಷ್ಟ್ರದ ಮುಂದಿಟ್ಟವರು ಬಸವೇಶ್ವರರು. ಅವರೆಷ್ಟು ಪುರಾತನರೋ ಅಷ್ಟೇ ನೂತನರು. ವೈಜ್ಞಾನಿಕ ಮನೋಭಾವ ಮತ್ತು ವಿಚಾರ ಬುದ್ಧಿಗಳ ದೃಷ್ಟಿಯಿಂದ ಅವರು ಅತ್ಯಾಧುನಿಕರು"[೩೨]

ಬುದ್ಧ– ಬಸವ – ಅಂಬೇಡ್ಕರರ ವಿಚಾರಧಾರೆಗಳನ್ನು ಅಧ್ಯಯನ ಮಾಡಿದ್ದ ಕುಮಾರ ಕಕ್ಕಯ್ಯ ಪೋಳ ಅವರು ಸನಾತನ ವೈದಿಕ ಕರ್ಮಠ ಜಾತಿ ವ್ಯವಸ್ಥೆಯನ್ನು ಕಟುವಾಗಿ ಟೀಕಿಸಿದ್ದಾರೆ–

ಬ್ರಾಹ್ಮಣೋಸ್ಯ ಮುಖ ಮಾಸೀದ್
ಬಾಹುರಾಜನ್ಯ ಕೃತಃ ಉರೂತದಸ್ಯಯದ್ ವೈಶ್ಯಃ
ಪದಭ್ಯಾಂ ಶೂದ್ರೋ ಅಜಾಯತಃ ಎಂದು
ಬ್ರಹ್ಮನ ಮುಖದಿಂದ ಬ್ರಾಹ್ಮಣ
ತೋಳುಗಳಿಂದ ಕ್ಷತ್ರಿಯ
ತೊಡೆಯಿಂದ ವೈಶ್ಯ
ಪಾದಗಳಿಂದ ಶೂದ್ರ ಹುಟ್ಟಿದರೆ
ಇನ್ನುಳಿದ ಜೈನ ಬೌದ್ಧ ಈಸಾಯಿ
ಅಂತ್ಯಜರೆಲ್ಲ ಎಲ್ಲೆಲ್ಲಿ ಹುಟ್ಟಿದರು
ಬ್ರಹ್ಮನೇ ಹೇಳಬೇಕೆಂದ ಕುಮಾರ ಕಕ್ಕಯ್ಯ[೩೩]

ಚಾತುರ್ವರ್ಣಗಳ ಉಗಮದ ಬಗ್ಗೆ ಹೇಳುವ ಋಗ್ವೇದಾದಿ ಗ್ರಂಥಗಳು ಅವುಗಳನ್ನು ಧರ್ಮಶಾಸನಗೊಳಿಸಿದ ಮನುವಾದಿ ಸ್ಮೃತಿಕಾರರಿಗೆ ಕುಮಾರ ಕಕ್ಕಯ್ಯ ತುಂಬಾ

---

೩೨. ಬಸವೇಶ್ವರ – ಅಂಬೇಡ್ಕರ – ಡಾ॥ ದೇಜಗೌ ಪು– ೬೪.
೩೩. ಕುಮಾರ ಕಕ್ಕಯ್ಯನ ವಚನಗಳು : ಪುಟ – ೮೭, ವ – ೩೩೭.

ವೈಚಾರಿಕವಾಗಿ ಪ್ರಶ್ನಿಸುತ್ತಾರೆ. ಚತುರ್‌ವರ್ಣದಿಂದ ಹೊರತಾಗಿರುವ ಜೈನ, ಬೌದ್ಧ, ಕ್ರಿಶ್ಚಿಯನ್, ಅಂತ್ಯಜ (ದಲಿತ) ರೆಲ್ಲಾ ಬ್ರಹ್ಮನ ಯಾವ ಯಾವ ಅಂಗಾಂಗಳಿಂದ ಹುಟ್ಟಿದರೆಂಬುದನ್ನು ಆ ಬ್ರಹ್ಮನೇ ಉತ್ತರಿಸಬೇಕೆಂದು ಕೇಳುತ್ತಾರೆ.

ಆನೆಗೆ ಎರಡು ಪ್ರಕಾರದ ಹಲ್ಲುಗಳು
ಹೊರಗೆ – ತೋರಿಕೆಯ ಹಲ್ಲುಗಳೇ ಬೇರೆ.
ಒಳಗೆ ತಿನ್ನುವ ದವಡೆ ಹಲ್ಲುಗಳೇ ಬೇರೆ.
ಜಾತಿವಾದಿಗಳಿಗೂ ಎರಡು ಬಗೆಯ ತತ್ವಗಳು
ಹೊರಗೆ – ಗುಣಕರ್ಮ ವಿಭಾಗಶಃ ಎಂದು ಹೇಳುವದೇ ಬೇರೆ.
ಒಳಗೆ – ಚಾತುರ್‌ವರ್ಣಂ ಮಯಾ ಸೃಷ್ಟ್ಯಮ್ ಎಂಬ
ಆಚರಣೆಯೇ ಬೇರೆ.
ಇವರಿಗೆ ಧರ್ಮಗೌಣ, ಜಾತಿ ಮುಖ್ಯವೆಂದ ಕುಮಾರ ಕಕ್ಕಯ್ಯ[೩೪]

ಮುಂದುವರೆದು, ಇನ್ನೊಂದು ವಚನದಲ್ಲಿ ಗೋಮುಖವ್ಯಾಘ್ರಗಳಂತಿರುವ ಸನಾತನ ಪಾಖಂಡಿಗಳನ್ನು ಎರಡು ನಾಲಿಗೆಯ ಘಟಸರ್ಪದ ವಿಷಕ್ಕೆ ಹೋಲಿಸುತ್ತಾರೆ –

'ಮಮಾತ್ಮಾ ಸರ್ವಭೂತಾತ್ಮ'
ಎಂದು ಬಾಯಲ್ಲಿ ಹೇಳುವದು ವೇದ ಶಾಸ್ತ್ರ,
'ಚಾತುರ್ವರ್ಣ್ಯಮ್ ಮಯಾ ಸೃಷ್ಟ್ಯಂ,
ಎಂದು ಕೃತಿಯಲ್ಲಿ ಮಾಡುವದು ಜಾತಿಭೇದ,
ಎರಡು ನಾಲಿಗೆಯವರು ಹೇಳುವ ಈ ಧರ್ಮ
ಘಟಸರ್ಪದ ವಿಷಕ್ಕಿಂತಲೂ ಘೋರವೆಂದ
ಕುಮಾರ ಕಕ್ಕಯ್ಯ[೩೫]

ಈ ಚಾತುರ್‌ವರ್ಣಗಳನ್ನು ಸೃಷ್ಟಿಸಿದ ಉಚ್ಚವರ್ಣೀಯರು ತಮ್ಮ ಅನುಕೂಲಕ್ಕೆ ತಕ್ಕಂತೆ ಸಂಸ್ಕೃತ ಶ್ಲೋಕಗಳ ರಚನೆ ಮಾಡಿ ನಿರಂತರವಾಗಿ ಸಮಾಜ ಶೋಷಣೆ ಮಾಡಿದರೆಂಬುದನ್ನು ವಚನಗಳ ಮೂಲಕ ವಿಡಂಬಿಸಿದ್ದಾರೆ –

ಆರ್ಯರ ಪ್ರಾರಂಭದಲ್ಲಿ ಬ್ರಹ್ಮನಿಗೆ
ವಾರಾಂಗನೆ ಊರ್ವಶಿಯಿಂದ ಹುಟ್ಟಿದಾತ ವಶಿಷ್ಟ.
ವಾರಾಂಗನೆಯ ಮಗನಾದ ವಶಿಷ್ಟನಿಗೆ
ಮಾದಿಗಳಾದ ಆರುಂಧತಿಯಿಂದ ಹುಟ್ಟಿದಾತ ಶಕ್ತಿಮುನಿ.
ಮಾದಿಗಳ ಮಗನಾದ ಶಕ್ತಿಮುನಿಗೆ
ಚಾಂಡಾಲಳ ಮಗಳಿಂದ ಹುಟ್ಟಿದಾತ ಪರಾಶರ.
ಚಾಂಡಾಲಳ ಮಗನಾದ ಪರಾಶರನಿಗೆ

---

೩೪. ಕುಮಾರ ಕಕ್ಕಯ್ಯನ ವಚನಗಳು : ಪುಟ – ೨೪೨ ವ – ೯೩೨.
೩೫. ಕುಮಾರ ಕಕ್ಕಯ್ಯನ ವಚನಗಳು : ಪುಟ – ೩೫ ವ – ೧೩೬.

ಅಂಬಿಗಳಾದ ಮತ್ಸ್ಯಗಂಧಿಯಿಂದ ಹುಟ್ಟಿದಾತ ವ್ಯಾಸ.
ವ್ಯಾಸ ಸಂತತಿ ಕೌರವ – ಪಾಂಡವರಂಥ
ತಮ್ಮ ಮಿಶ್ರ ಸಂತತಿಯ ಶ್ರೇಯಕ್ಕಾಗಿ
ಜನ್ಮನಾ ಜಾಯತೆ ಶೂದ್ರ :
ಸಂಸ್ಕಾರಾತ್ ದ್ವಿಜಮುಚ್ಯತೆ । ಎಂಬ
ಧರ್ಮವಾಣಿ ಕಲ್ಪಿಸಲಾಯಿತೆಂದ
ಕುಮಾರ ಕಕ್ಕಯ್ಯ.[೩೬]

ಈ ರೀತಿ ತಮ್ಮ ಸ್ವಾರ್ಥಕ್ಕಾಗಿ, ತಮ್ಮ ಅನಾಚಾರಗಳನ್ನು, ಅಕ್ರಮಗಳನ್ನು ಸಕ್ರಮಗೊಳಿಸುವ ಸಲುವಾಗಿ ತಮ್ಮ ಸ್ವೇಚ್ಛೆಗಾಗಿ ಶ್ಲೋಕಗಳ ರಚನೆ ಮಾಡಿದರು, ಸಹಸ್ರಾರು ಜಾತಿಗಳನ್ನು ಹುಟ್ಟು ಹಾಕಿದರು.

'ವೈದಿಕ ಮತ ಮಾತ್ರವಲ್ಲದೇ ಅದರ ಪ್ರಭಾವದ ನೆರಳಲ್ಲಿ ಬೆಳೆದು ಬಂದ ಮತಗಳೆಲ್ಲವೂ ಜಾತಿಗಳಿಂದಾಗಿ ಒಡೆದು ಹೋಗಿದ್ದ ಅಂಶ ಶರಣರನ್ನು ಎಚ್ಚರಿಸಿತು. ಹುಟ್ಟಿನ ಮೇಲೆ ವ್ಯಕ್ತಿಯೊಬ್ಬನ ಜೀವಿತ ವಿಧಾನವೇ ಅವಲಂಬನಗೊಳ್ಳುವ ವ್ಯವಸ್ಥೆಯಿಂದಾಗುವ ದುರಂತವನ್ನು ಅವರು ಕಂಡುಕೊಂಡರು, ಹಾಗಾಗಿ ಹುಟ್ಟನ್ನು ಅವಲಂಬಿಸಿ ಜನರನ್ನು ವಿಂಗಡಿಸುವ ವಿಧಾನವನ್ನು ಅವರು ವಿರೋಧಿಸಿದರು'[೩೭]

ಚಾತುರ್ವರ್ಣ ಹುಟ್ಟು ಹಾಕಿದುದರ ಪರಿಣಾಮವಾಗಿ ದೇಶ ಸಾವಿರಾರು ವರುಷಗಳಿಂದ ಪರಕೀಯರ ದಾಳಿಗೆ ಒಳಗಾಯಿತು, ಜನ ಶೋಷಣೆಗೆ ಒಳಗಾದರು. ಈ ಚಾತುರ್ವರ್ಣೀಯರು ತಮ್ಮವರಿಗೆ ತಾವೇ ಕಂಟಕರಾದರೆಂಬುದನ್ನು ತುಂಬಾ ಮಾರ್ಮಿಕವಾಗಿ ತಿಳಿಯಪಡಿಸುತ್ತಾರೆ ಕುಮಾರ ಕಕ್ಕಯ್ಯ –

ಜಾತಿವಾದಿ ದೇಶ ಬೆಂಕಿಬಿದ್ದ ಮನೆಯಂತೆ
ಅದು ಯಾವಾಗಲೂ ಉರಿಯುತ್ತಲೇ ಇರುವದು.
ಉರಿಹತ್ತಿದ ಮನೆಯಲ್ಲಿ ಹಿರಿದದ್ದೇ ಲಾಭ.
ಹಿರಿಯುತ್ತಲೇ ಪರಕೀಯರು ಬೆಳೆದು ನಿಂತರು.
ಪರಕೀಯರು ಪರಧರ್ಮಿಯರಿಗೆ ಕಂಟಕರಾದರೆ
ಚಾತುರ್ವರ್ಣೀಯರು ತಮ್ಮವರಿಗೆ
ತಾವೇ ಕಂಟಕರೆಂದ ಕುಮಾರ ಕಕ್ಕಯ್ಯ.[೩೮]

ಚಾತುರ್ವರ್ಣ ವ್ಯವಸ್ಥೆಯನ್ನು ಒಪ್ಪಿಕೊಳ್ಳದವರನ್ನು 'ಪಂಚಮ' ರೆಂದು ಪುರೋಹಿತಶಾಹಿಗಳು ಕರೆದರು. ಈ ಬಹಿಷ್ಕರಿಸಲ್ಪಟ್ಟವರು ಊರ ವ್ಯವಸ್ಥೆಯಿಂದ ಹೊರಗೆ ಹಾಕಲ್ಪಟ್ಟರು. ಅವರ ಕೇರಿಗಳನ್ನು 'ಹೊರಕೇರಿ' ಹೊಲಗೇರಿ'ಗಳೆಂದು ಕರೆಯಲಾಯಿತು. ಈ ಪಂಚಮರಲ್ಲಿ ಹೊಲೆಯ, ಮಾದಿಗ, ಸಮಗಾರ, ಡೋಹರ,

---

೩೬. ಕುಮಾರ ಕಕ್ಕಯ್ಯನ ವಚನಗಳು – ಪು–೮೪ ವ. ೩೨೬.
೩೭. ವಚನ ಪರಿಸರ – ಡಾ. ಪಿ. ವ್ಹಿ. ನಾರಾಯಣ ಪು – ೩೯೨ – ೩೯೩
೩೮. ಕುಮಾರ ಕಕ್ಕಯ್ಯನ ವಚನಗಳು – ಪುಟ– ೬೦ ವ –೨೩೩.

ಚಂಡಾಲ (ಶ್ವಪಚ) ಮುಂತಾದ ಜಾತಿಗಳು ರೂಪತಾಳಿದವು. ಮೇಲ್ಜಾತಿ – ಕೆಳಜಾತಿಯವರಲ್ಲಿ ಹದಿನೆಂಟು ಜಾತಿ, ನೂರೊಂದು ಕುಲಗಳಾಗಿ ರೂಪತಾಳಿದವು. ಅವೇ ಮತ್ತೆ ವಿಭಜನೆ ಹೊಂದುತ್ತಾ ಹೊಂದುತ್ತಾ ೩೫೦೦ ಜಾತಿಗಳಾದವು. ಈ ಜಾತಿಗಳಲ್ಲಿ ಅತ್ಯಂತ ಕೀಳು ಜಾತಿ 'ಅಂತ್ಯಜ, ಅಸ್ಪೃಶ್ಯ' ಎಂದು ಕರೆಯಲಾಯಿತು.

ಇಂತಹ ಪಂಚಮ ವರ್ಣೀಯರನ್ನು 'ದಲಿತ ಪಂಚಮ' ಎಂದು ಕರೆಯಲಾಯಿತು. ಇವರಿಗಾಗಿ ಕಠಿಣವಾದ ಧರ್ಮಶಾಸನ – ಕಾನೂನು ಜಾರಿಮಾಡಲಾಯಿತು.

> "ಚಂಡಾಲ ಶ್ವಪಚಾನಾಂ ತು ಬಹಿಗ್ರಾ ಮಾತ್ಪ್ರತಿ ಶ್ರಯಃ ।
> ಅಪಪಾತ್ರಾಶ್ಚ ಕರ್ತವ್ಯಾ ಧನ ಮೇಶಾಂ ಶ್ವಗರ್ದಭಮ್ ॥
>
> ವಾಂಸಾಸಿ ಮೃತಚೇಲಾನಿ ಭಿನ್ನ ಭಾಂಡೇಶು ಭೋಜನಮ್ ।
> ಕಾರ್ಷ್ಣಾಯ ಸಮಲಂಕಾರಃ ಪರಿವ್ರಜ್ಯಾ ಚ ನಿತ್ಯಶಃ ॥

ಊರ ಹೊರಗೆ ಚಂಡಾಲಾದಿಗಳ ವಾಸಸ್ಥಾನ. ಒಳ್ಳೆಯ ಪಾತ್ರೆಗಳನ್ನು ಅವರು ಉಪಯೋಗಿಸಬಾರದು. ನಾಯಿ, ಕತ್ತೆ ಅವರ ಸೊತ್ತು. ಹೆಣದ ಬಟ್ಟೆ ಅವರ ಉಡಿಗೆ. ಒಡೆದ ಓಡಿನಲ್ಲಿ ಊಟ, ಕಬ್ಬಿಣದ ಬಳೆ, ಉಂಗುರ ಅವರ ತೊಡುಗೆ, ಸದಾ ಸಂಚಾರ"[೩೯]

ಈ ರೀತಿಯ ಕಠೋರ, ಕ್ರೂರ ಧರ್ಮಶಾಸನ ರಚಿಸಿ ನಿಮ್ನ ಜಾತಿಗಳವರ ಶೋಷಣೆ ನಡೆಯಿತು.

ಇದು ಅನೂಚಾನವಾಗಿ ಸಾವಿರಾರು ವರುಷಗಳಿಂದ ಸಾಗಿ ಬಂದಿತು. ಇಂತಹ – ಶೋಷಣೆ ಸಹಿಸದ ಪೋಳ ಅವರಿಗೆ ಅಂಬೇಡ್ಕರ ಅವರ ಚಿಂತನೆಯ ಗಾಢ ಪ್ರಭಾವವಿರುವುದರಿಂದಲ್ಲದೇ ಬುದ್ಧ, ಬಸವರನ್ನು ಪ್ರಾಮಾಣಿಕವಾಗಿ ಅಪ್ಪಿಕೊಂಡಿರುವುದರಿಂದಲೇ ವ್ಯವಸ್ಥೆಯ ವಿರುದ್ಧ ನಿರ್ಭಿಡೆಯಿಂದಲೇ ಮಾತನಾಡಿದ್ದಾರೆ. ಸ್ವತಃ 'ಅಸ್ಪೃಶ್ಯತೆ'ಯ ಅವಮಾನದಿಂದ ನೊಂದು ಬೆಂದು ಬದುಕಿದ್ದ ಪೋಳ ಅವರು ದೀನ – ದಲಿತರ, ಶೂದ್ರರ, ಪಂಚಮರ, ಶೂದ್ರಾತಿ ಶೂದ್ರರ ಉದ್ದೇಶವೇನೆಂಬುದನ್ನು ಬಹು ಮಾರ್ಮಿಕವಾಗಿ ಇಲ್ಲಿ ಅವರು ವ್ಯಕ್ತಪಡಿಸಿದ್ದಾರೆ.

"ಬೆಕ್ಕಿನ ಕೈಯಲ್ಲಿ ಸಿಕ್ಕ ಇಲಿ, ತನ್ನ ಪ್ರಾಣ ರಕ್ಷಣೆಗಾಗಿ ಹೋರಾಡುತ್ತದೆಯೇ ಹೊರತು, ಆ ಬೆಕ್ಕಿನ ಮನಸ್ಸು ನೋಯಿಸುವ ಅಥವಾ ಆ ಬೆಕ್ಕಿಗೆ ದ್ರೋಹ ಬಗೆಯುವ ಕಾರಣಕ್ಕಲ್ಲ. ಅದೇ ಪ್ರಕಾರ ಚಾತುರ್ವರ್ಣವೆಂಬ ಬ್ರಹ್ಮರಾಕ್ಷಸನ ಕೈಯಲ್ಲಿ ಸಿಕ್ಕ ಅಸ್ಪೃಶ್ಯರ ವಿಮೋಚನೆಯ ಪ್ರಯತ್ನವನ್ನು ಆಕ್ಷೇಪಣೆ ಮಾಡುವ ಪ್ರಶ್ನೆಯೇ ಇಲ್ಲಿ ಹುಟ್ಟುವದಿಲ್ಲ. ಈ ಮಾತು ಬೆಂದ – ನೊಂದ ಹೃದಯದಿಂದ ಬಂದಿದ್ದೇ ಹೊರತು ಪಾಂಡಿತ್ಯದಿಂದ ಹೊರ ಹೊಮ್ಮಿದ್ದಲ್ಲ"[೪೦]

---

೩೯. ಮನುಸ್ಮೃತಿ. ಅಧ್ಯಾಯ ೧೦ ಶ್ಲೋಕ – ೫೧ – ೫೨

೪೦. ದಲಿತಸಾಹಿತಿ ಕುಮಾರ ಕಕ್ಕಯ್ಯ ಪೋಳ – ಡಾ. ಎಚ್.ಟಿ. ಪೋತೆ ಪು – ೧೭.

**(iii) ದಲಿತರ ಹೋರಾಟ–ಸಮಾನತೆಗಾಗಿ ಸಂಘರ್ಷ:**

'ಭಾರತದಲ್ಲಿ ಎಷ್ಟೊಂದು ಧರ್ಮಗಳು? ಎಷ್ಟೊಂದು ಪಂಥಗಳು? ಎಷ್ಟೊಂದು ಕೋಮುಗಳು? ಎಷ್ಟೊಂದು ಜಾತಿಗಳು? ಎಷ್ಟೊಂದು ಉಪಜಾತಿಗಳು? ಎಷ್ಟೊಂದು ಮರಿಜಾತಿಗಳು? ಒಂದೇ? ಎರಡೇ? ನೂರೇ?ಸಾವಿರೇ?ಆಕಾಶದಲ್ಲಿಯ ಚಿಕ್ಕೆಗಳನ್ನು ಎಣಿಸಿದರೂ ಎಣಿಸಬಹುದು, ಆದರೆ ನಮ್ಮ ದೇಶದಲ್ಲಿರುವ, ಇಂದು ಅಸ್ತಿತ್ವದಲ್ಲಿರುವ ಒಟ್ಟು ಜಾತಿಗಳು ಎಷ್ಟು ಎಂಬುದನ್ನು ಎಣಿಸಿ ಹೇಳಲಿಕ್ಕಾಗದು! ಒಂದು ಧರ್ಮದವರನ್ನು ಕಂಡರೆ ಮತ್ತೊಂದು ಧರ್ಮದವರಿಗೆ ತಿರಸ್ಕಾರ. ಒಂದು ಕೋಮಿನವರ ಏಳ್ಗೆಯನ್ನು ಇನ್ನೊಂದು ಕೋಮಿನವರು ಸಹಿಸಲಾರರು. ಒಂದು ಜಾತಿಯವರನ್ನು ಕಂಡರೆ ಇನ್ನೊಂದು ಜಾತಿಯವರಿಗೆ ಆಗದು, ಒಂದು ನಾಯಿಯನ್ನು ಕಂಡು ಮತ್ತೊಂದು ನಾಯಿ ಹಲ್ಲು ಕಿರಿದು ಹೌಹಾರಿ ಅದರ ಮೇಲೆ ತೂರಿ ಹೋಗುವಂತೆ, ಒಂದು ಕುಲದವರು ಮತ್ತೊಂದು ಕುಲದವರ ಮೇಲೆ ಎರಗುತ್ತಾರೆ. ಈ ಜಾತೀಯತೆಯಿಂದಾಗಿ ಮಾನವ ಮನುಷ್ಯತ್ವವನ್ನು ಕಳೆದುಕೊಂಡಿದ್ದಾನೆ! ಭಾರತದ ಭವಿಷ್ಯ ಭಯಾನಕವಾಗಿದೆ!!

ದಲಿತರಲ್ಲಿಯೂ ಬಲಗೈಯವರು ಎಡಗೈಯವರನ್ನು ಕೀಳಾಗಿ ಕಾಣುವಂತೆ, ಬ್ರಾಹ್ಮಣರು ವೈಶ್ಯರನ್ನು ಕೀಳಾಗಿ ಕಾಣುವಂತೆ. ಕ್ಷತ್ರಿಯರು ವೈಶ್ಯರ ಬಗ್ಗೆ ಹಾಗೆಯೇ ಭಾವಿಸುತ್ತಾರೆ. ಹಿಂದೂ ಧರ್ಮದ ಚಾತುರ್ವರ್ಣ ಜಾತಿ ಪದ್ಧತಿಯ ಪ್ರಕಾರ ದಲಿತರ ಹೆಗಲ ಮೇಲೆ ವೈಶ್ಯರು,ವೈಶ್ಯರ ಹೆಗಲ ಮೇಲೆ ಕ್ಷತ್ರಿಯರು, ಕ್ಷತ್ರಿಯರ ಹೆಗಲ ಮೇಲೆ ಬ್ರಾಹ್ಮಣರು ಕುಳಿತಿದ್ದಾರೆ! ಈ ಎಲ್ಲರ ಭಾರದಿಂದ ತಳದಲ್ಲಿ ಸಿಕ್ಕ ದಲಿತ ಜರ್ಜರಿತ ಆಗಿದ್ದಾನೆ!'[೪೧]

ಚಾತುರ್ವರ್ಣ ಧರ್ಮ ಮತ್ತು ಸಮಾಜ ವ್ಯವಸ್ಥೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನು ಹೊರತುಪಡಿಸಿ. ಈ ಸವರ್ಣಿಯರು ಹೊರದೂಡಿದ, ಇವರಿಂದ ಬಹಿಷ್ಕರಿಸಲ್ಪಟ್ಟ ಹಾಗೂ ಇವರ ವ್ಯವಸ್ಥೆಯನ್ನು ಒಪ್ಪದೇ ಹೊರಗುಳಿದ ಜನಾಂಗವೇ ದಲಿತರು. 'ದಲಿತ ಎಂದರೆ ಹಿಂದುಳಿದವನು, ದಮನಕ್ಕೆ ಒಳಗಾದವನು, ಶೋಷಿತನಾದವನು, ಆರ್ಥಿಕವಾಗಿ ಸಾಮಾಜಿಕವಾಗಿ ಕೆಳಮಟ್ಟದವನು ಎಂದು ಅರ್ಥ'[೪೨]

ದಲಿತ ಶಬ್ದಕ್ಕೆ ಒಂದು ಹೊಸದಾದ ಅರ್ಥವನ್ನು ಕಾಣಬಹುದಾಗಿದೆ. 'ದಲಿತರೆಂದರೆ ಕೇವಲ ದಲಿತ ಸಾಹಿತಿಗಳಲ್ಲ, ದಲಿತ ನೌಕರರಲ್ಲ, ದಲಿತ ಅಧಿಕಾರಿಗಳಲ್ಲ. ದಲಿತ ರಾಜಕಾರಣಿಗಳಲ್ಲ, ದಲಿತರೆಂದರೆ ಹಸಿವು ಮತ್ತು ಅಪಮಾನಕ್ಕೆ ಮತ್ತೊಂದು ಹೆಸರು. ಹಸಿವು ಮತ್ತು ಅಪಮಾನದ ಸಾಮಾಜಿಕ ವಾಸ್ತವದ ಮತ್ತೊಂದು ಹೆಸರು ದಲಿತರು. ಇದನ್ನು ಮುಚ್ಚಿಟ್ಟು ದಲಿತರನ್ನು ವ್ಯಾಖ್ಯಾನಿಸಲು ಬರುವದಿಲ್ಲ. ವ್ಯಾಖ್ಯಾನಿಸಲೂಬಾರದು. ದಲಿತರನ್ನು ಸರ್ಕಾರಿ ಭಾಷೆಯಲ್ಲಿ ಗ್ರಹಿಸವುದನ್ನು ಮೊದಲು ಬಿಡಬೇಕು. ಹಸಿವು ಮತ್ತು ಅಪಮಾನ ಎಂಬುದಕ್ಕೆ ಸರಕಾರಿ ನಿಘಂಟಿನಲ್ಲಿ ಅರ್ಥವಿಲ್ಲ'[೪೩]

---

೪೧. ಮೂಕನ ಭಾಷಣ – ಕುಮಾರಕಕ್ಕಯ್ಯ ಪುಟ–೯೪–೯೫.

೪೨. ಬಸವ ಮತ್ತು ದಲಿತೋದಯ – ಶಿವನಾಗಮಯ್ಯ–ಎನ್.ಬಸವರಾಧ್ಯ ಪು–೧೧

೪೩. ವಿಚಾರ ಸಾಹಿತ್ಯ–ಸಂ.ಡಾ.ಎಚ್.ಟಿ. ಪೋತೆ ಗ್ರಂಥದಲ್ಲಿ ಲೇಖನ–ಅಂಬೇಡ್ಕರ. ಲೇಖಕರು –ಡಾ.ಬಿ.ಎಂ. ಪುಟ್ಟಯ್ಯ ಪು–೯೪.

ಹಾಗಾದರೆ ದಲಿತರು ಯಾರು? ಎಂಬ ಬಗ್ಗೆ ಅಂಬೇಡ್ಕರ ಅವರ ಖಚಿತ ನಿಲವು ತುಂಬಾ ಸ್ಪಷ್ಟವಾಗಿತ್ತು. ಡಾ॥ ಅಂಬೇಡ್ಕರ ಅವರು ಸ್ವತಃ ದಲಿತ ಜನಾಂಗದಲ್ಲಿ ಜನಿಸಿದವರಾದ್ದರಿಂದ, ಆ ಜನಾಂಗದವರು ಶತ ಶತಮಾನಗಳಿಂದ ಅನುಭವಿಸಿಕೊಂಡು ಬಂದ ನೋವು ಅವರು ಸ್ವತಃ ಅನುಭವಿಸಿದ್ದುದರಿಂದ, ಅವರ ಹೋರಾಟ ಗಟ್ಟಿಯಾದ ನೆಲೆಯಲ್ಲಿತ್ತು. 'ಇಂದಿನ ದಲಿತರು ಚಾತುವರ್ಣ ಪದ್ಧತಿಯಿಂದ ಹೊರಗೆ ಇರುವುದರಿಂದ ಇವರನ್ನು ಪಂಚಮರು, ಅವರ್ಣೀಯರು ಎಂದೆಲ್ಲ ಕರೆಯಲಾಗುತ್ತದೆ. ಆದ್ದರಿಂದ ಇವರು ಹಿಂದೂಗಳಲ್ಲ......... ಹಿಂದೂಗಳಾಗಲು ಒಪ್ಪದವರು ಏನಾಗಬೇಕು? ಆದ್ದರಿಂದ ಅವರು ಔಟ್ ಕಾಸ್ಟ ಆಗಬೇಕಾಯಿತು. ಈ ಔಟ್ ಕಾಸ್ಟ ಜನಗಳಿಗೆ ಶಿಕ್ಷೆಯ ರೂಪದಲ್ಲಿ ಅಸ್ಪಶ್ಯತೆಯನ್ನು ಹೇರಿದ್ದರಿಂದ ಸಹಜವಾಗಿ ಅವರು ಜ್ಞಾನವಲಯದಿಂದ ದೂರ ಉಳಿದರು. ಮೌಢ್ಯ ಆವರಿಸಿಕೊಂಡಿತು. ಮಾನವ ಜನಾಂಗದ ಒಂದು ವರ್ಗ ಧಾರ್ಮಿಕ ಶೋಷಣೆಗೆ ಒಳಗಾಗಿ ಅಮಾನವೀಯ ಸ್ಥಿತಿ ತಲುಪಿರುವುದು ಜಗತ್ತಿನ ಇತಿಹಾಸದಲ್ಲಿ ಬೇರೆಲ್ಲೂ ಕಾಣಸಿಗುವದಿಲ್ಲ.[೪೪]

ವರ್ಣಾಶ್ರಮ ಧರ್ಮ-ಸಮಾಜ ವ್ಯವಸ್ಥೆಯು ಇಂತಹ ಅತಿ ಕ್ರೂರವಾದ ಶೋಃಷಣೆಗೆ ಇಳಿಯಲು, ಶೂದ್ರ ಮತ್ತು ಅತಿಶೂದ್ರ ಜನಾಂಗಗಳು ತತ್ತರಿಸಿ ಹೋದವು. 'ವರ್ಣ ವ್ಯವಸ್ಥೆಯಲ್ಲಿ ಶೂದ್ರರ ಸ್ಥಾನ ಕೆಳಮಟ್ಟದಲ್ಲಿತ್ತು. ಆದರೆ ಈ ನಾಲ್ಕು ವರ್ಣಗಳಲ್ಲದೆ ಇನ್ನೊಂದು ವರ್ಗವು ಸಮಾಜದಲ್ಲಿತ್ತು. ಅದೇ ದಲಿತವರ್ಗ. ಗೀತೆಯಲ್ಲಿ ನಾಲ್ಕೇ ವರ್ಣಗಳನ್ನು ಹೇಳಿದುದರಿಂದ ದಲಿತರು ತಮ್ಮನ್ನು ತಾವು ಐದನೆಯ ವರ್ಣದವರೆಂದು ಗುರುತಿಸಿಕೊಂಡರು. ಐದನೆ ವರ್ಣದವರಾದ್ದರಿಂದ ದಲಿತರೆಲ್ಲರೂ 'ಪಂಚಮ'ರಾದರು.[೪೫]

ಈ ದಲಿತರು, ಪಂಚಮರು ಚಾತರ್ವರ್ಣ ಸಮಾಜ ವ್ಯವಸ್ಥೆಯಿಂದ ಬಹಿಷ್ಕೃತರಾದವರು. ಇವರನ್ನು ಅಸ್ಪೃಶ್ಯರೆಂದು ಕರೆಯಲಾಯಿತು. 'ನಮ್ಮನ್ನು ಮುಟ್ಟಬೇಡ ಎನ್ನುವದು ಮೇಲ್ಜಾತಿಯವರ ದರ್ಪದ ವಾಣಿಯಗಿದ್ದರೆ, ನಮ್ಮನ್ನು ಮುಟ್ಟಿಸಿಕೊಳ್ಳಬೇಡಿ ಎನ್ನುವದು ಕೆಳಜಾತಿಯವರ ನೋವಿನ ದನಿಯಾಗಿತ್ತು.

'ವೃತ್ತಿಗನುಗುಣವಾಗಿ ಜಾತಿಪದ್ಧತಿ ನಿರ್ಮಾಣವಾಯಿತು. ಈ ಜಾತಿ ಪದ್ಧತಿಯಲ್ಲಿ ಅತ್ಯಂತ ಕಠಿಣವಾದ ಮತ್ತು ಕೀಳೆನಿಸಿಕೊಂಡ ವೃತ್ತಿಗಳನ್ನು ಮಾಡುತ್ತಿದ್ದವರು ಅಸ್ಪಶ್ಯರಾದವರು.[೪೬]

ಈ ಅಸ್ಪೃಶ್ಯರಿಗೆ ವಿಧಿಸಿದ ಶಾಸನಗಳು ಅತಿ ಕ್ರೂರವಾಗಿದ್ದವು. ಅವರು ಸತ್ತದನವನ್ನು ಹೊರಬೇಕು, ಅದರ ಮಾಂಸವನ್ನು ತಿನ್ನಬೇಕು. ಊರಹೊರಗೆ ಸ್ಮಶಾನದಲ್ಲಿ ವಾಸಿಸಬೇಕು. ಹೆಣದ ಮೇಲಿನ ಬಟ್ಟೆಗಳನ್ನು ತೊಡಬೇಕು. ಹೆಣದ

---

೪೪. ವಿಚಾರ ಸಾಹಿತ್ಯ- ಸಂ.ಡಾ.ಎಚ್.ಟಿ.ಪೋತೆ ಗ್ರಂಥದಲ್ಲಿ 'ಬುದ್ಧನೆಡೆಗೆ ಮರಳಿ ಮನೆಗೆ' ಲೇಖನ, ಲೇಖಕರು-ಡಾ. ಮೂಡ್ನಾಕೂಡು ಚಿನ್ನಸ್ವಾಮಿ ಪುಟ-೧೦೭

೪೫. ಶರಣರ ಬಂಡಾಯ-ಡಾ. ಸರಜೂ ಕಾಟ್ಕರ ಪುಟ-೬೬

೪೬ .ವಿಚಾರಸಾಹಿತ್ಯ-ಅಸ್ಪೃಶ್ಯತೆ ಮತ್ತು ಸಮಾಜದ ಹೊಣೆಗಾರಿಕೆ-ಡಾ. ಸಿದ್ಧಲಿಂಗಯ್ಯ ಪು-೧೦೮

ತಿಥಿಗೆ ಇಟ್ಟ ಅನ್ನವನ್ನೇ ತಿನ್ನಬೇಕು. ಮಲ ಹೊರಬೇಕು. ಉಚ್ಚವರ್ಣಿಯರ ಓಣಿಗಳಲ್ಲಿ ಬರುವುದಾದರೆ ಅದೂ ರಾಜಾಜ್ಞೆಯಂತೆ ಬರಬೇಕು. ಅವರ ನೆರಳು ಅವರ ಕಾಲಡಿಯಲ್ಲಿಯೇ ಬೀಳಬೇಕು. ಬೆಳಿಗ್ಗೆ–ಸಂಜೆ ಊರೊಳಗೆ ಬಂದರೆ ಅವರ ನೆರಳು ಉದ್ದವಾಗಿ ಉಚ್ಚವರ್ಣಿಯರ ಗೋಡೆಗಳ ಮೇಲೆ ಬಿದ್ದು ಅವು ಮೈಲಿಗೆಯಾಗುತ್ತವೆ. ದಲಿತರು ಕೊರಳಲ್ಲಿ ಮಣ್ಣಿನ ಮಡಿಕೆ–ಗಡಿಗೆ ಕಟ್ಟಿಕೊಂಡಿರಬೇಕು. ಅಕಸ್ಮಾತ್ ಉಗುಳು ಬಂದರೆ ಅದರಲ್ಲಿಯೇ ಉಗುಳಬೇಕು. ಸೊಂಟಕ್ಕೆ ಕಸಬಾರಗಿ–ಪೊರಕೆ ಕಟ್ಟಿಕೊಂಡಿರಬೇಕು.

ಅವರ ಹೆಜ್ಜೆಯ ಗುರುತುಗಳು ನೆಲದ ಮೇಲೆ ಮೂಡಿದ್ದರೆ ಪೊರಕೆ ಅಳಿಸಿಹಾಕುವಂತಿರಬೇಕು. ಊರೊಳಗೆ ಬರುವ ಪೂರ್ವದಲ್ಲಿ ಗಂಟೆ ಬಾರಿಸುತ್ತಾ–ಸಂಬೋಳಿ,ಸಂಬೋಳೀ ಎಂದು ಜೋರಾಗಿ ಕೂಗುತ್ತಾ ಬರಬೇಕು. ಅಂದರೆ ಉಚ್ಚ ವರ್ಣಿಯರು ತಮ್ಮ ತಮ್ಮ ಮನೆ ಬಾಗಿಲುಗಳನ್ನು ಭದ್ರಪಡಿಸಿಕೊಳ್ಳಲು ಸಹಾಯಕವಾಗಬೇಕು. ಇಂತಹ ಹೀನ ಪರಿಸ್ಥಿತಿ ದಲಿತರಿಗಿತ್ತು.

'ಈ ದೇಶದಲ್ಲಿ ದಲಿತರ ಮೊಟ್ಟ ಮೊದಲ ದನಿಯಾಗಿ ನಿಂತಾತ ಬಸವಣ್ಣ ಹಿಂದೆಂದೂ ನಡೆಯದೇ ಇದ್ದ ಹೋರಾಟವೊಂದನ್ನು ಹುಟ್ಟು ಹಾಕಿದ, ಆ ಮೂಲಕ ದಲಿತರ ಬೆಳವಣಿಗೆಗಾಗಿ ಶ್ರಮಿಸಿದ. ದಲಿತ ಜನಾಂಗದಿಂದ ಬಂದ ಶರಣರನ್ನು ತನ್ನ ಅಪ್ಪ–ಬೊಪ್ಪ ಎಂದು ಅಪ್ಪಿಕೊಂಡ. ಯಾವ ದಲಿತ ಜನಾಂಗ ಶತ–ಶತಮಾನಗಳಿಂದಲೂ ಕತ್ತಲೆಯಲ್ಲಿತ್ತೋ, ಅಂತಹ ಜನರ ಮುಖಂಡತ್ವದಲ್ಲಿ ಬಸವಣ್ಣ ಚಳುವಳಿ ಕಟ್ಟಿದ. ಯಾರು ಧರ್ಮ–ಸಮಾಜದಿಂದ ದೂರವಿದ್ದರೋ, ಅಂತಹವರನ್ನು ತನ್ನ ಧರ್ಮದ ಸಮಾಜದ ಪ್ರಮುಖ ಅಂಗವನ್ನಾಗಿ ಮಾಡಿದ. ವರ್ಣಾಶ್ರಮ ವ್ಯವಸ್ಥೆಯಲ್ಲಿ, ಸಾಂಪ್ರದಾಯಿಕವಾದ ಗೊಂಡಾರಣ್ಯದಲ್ಲಿ, ರಾಜಸತ್ತೆಯ ಹಿಡಿತದಲ್ಲಿ ಆಧ್ಯಾತ್ಮ–ಧರ್ಮವನ್ನುಳಿಸಿಕೊಂಡೂ ಬಸವಣ್ಣ ದಲಿತರನ್ನು ಬೆಳೆಸಿದ, ಬೆಳಗಿಸಿದ.'[೪೭]

ವರ್ಣವಾದಿಗಳಿಗೆ ಬಸವಣ್ಣನವರು ಸವಾಲು ಹಾಕಿದರು–

ಹೊಲೆಯೊಳಗೆ ಹುಟ್ಟಿ ಕುಲವನರಸುವೆ,
ಎಲವೋ ಮಾತಂಗಿಯ ಮಗ ನೀನು.
ಸತ್ತುದುದನೆಳೆವ ಅದೆತ್ತಣ ಹೊಲೆಯ?
ಹೊತ್ತು ತಂದು ನೀವು ಕೊಲುವಿರಿ.
ಶಾಸ್ತ್ರವೆಂಬುದು ಹೋತಿಂಗೆ ಮಾರಿ,
ವೇದವೆಂಬುದು ನಿಮಗೆ ತಿಳಿಯದು
ನಮ್ಮ ಕೂಡಲಸಂಗನ ಶರಣರು
ಕರ್ಮವಿರಹಿತರು, ಶರಣಸನ್ನಿಹಿತರು,

೪೭. ವಚನ ಚಳುವಳಿ–ಡಾ. ಬಸವರಾಜ ಸಬರದ ಪು–೧೬೧.

ಅನುಪಮ ಚಾರಿತ್ರ್ಯರು,
ಅವರಿಗೆ ತೋರಲು ಪ್ರತಿಯಿಲ್ಲವೋ.[೪೮]

'ನೆಲನೊದೇ–ಹೊಲಗೇರಿ ಶಿವಾಲಯಕೆ' ಎಂದು ಹೇಳಿದ ಬಸವಣ್ಣನವರು ಕುಲವೊಂದೇ ತನ್ನತಾನರಿದವಂಗೆ ಎಂದು ಸ್ಪಷ್ಟಪಡಿಸಿ, ಅಸ್ಪೃಶ್ಯತೆ ನಿರ್ಮೂಲನೆಯಿಂದಲೇ ದಲಿತೋದ್ಧಾರದ ಮೊದಲ ಹೆಜ್ಜೆಯನ್ನಿಡುತ್ತಾರೆ. ಬಸವಣ್ಣನವರ ಈ ಕಾರ್ಯವು ಕೇವಲ ಬಾಯಿಮಾತಿನಿಂದ ಹೇಳಿದುದಲ್ಲ. ಅವರು ಸ್ವತಃ ಆಚರಣೆಯಿಂದಲೇ ಸಾಧಿಸಿ ತೋರಿದರು. ಅಪ್ಪನು ನಮ್ಮ ಮಾದಾರ ಚೆನ್ನಯ್ಯ,ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ಎಂದು ಅಪ್ಪಿಕೊಂಡರು. ಹೊಲೆಯರ ಶಿವನಾಗಮಯ್ಯನ ಮನೆಯಲ್ಲಿ ಪ್ರಸಾದ ಸ್ವೀಕರಿಸಿದರು. ಮಾದಾರ ಚೆನ್ನಯ್ಯನ ಮನೆಯಲ್ಲಿ ಅಂಬಲಿಯ ಸವಿದರು, ಡೋಹರ ಕಕ್ಕಯ್ಯನ ಮನೆಯಲ್ಲಿ ಅನ್ನವನುಂಡರು. ಸಮಗಾರ ಹರಳಯ್ಯ–ಕಲ್ಯಾಣಮ್ಮರು ತಂದ ಚಮ್ಮಾವುಗೆಯನ್ನು ತಲೆಯ ಮೇಲೆ ಇಟ್ಟುಕೊಂಡರು. ಇಂತಹ ಕ್ರಾಂತಿ ಇತಿಹಾಸದಲ್ಲಿ ಇದು ಮೊದಲಿನದು, ಬಹುಶಃ ಕೊನೆಯದೂ ಎಂದು ನಿಃಸಂಶಯವಾಗಿ ಹೇಳಬಹುದು.

'ಅಸ್ಪೃಶ್ಯತಾ ನಿರ್ಮೂಲನವೇ ಆಧಾರವಾಗುಳ್ಳ ಜಾತಿ ವಿನಾಶ, ಸ್ತ್ರೀ ಸ್ವಾತಂತ್ರ್ಯ ರಕ್ಷಣೆ, ಕಾಯಕ ತತ್ವದ ಪ್ರತಿಷ್ಠಾಪನೆ ಮತ್ತು ವರ್ಗ ವರ್ಣರಹಿತವಾದ ಸಾಮಾಜಿಕ ಸ್ಥಿರೀಕರಣ ಮತ್ತು ವಿಚಾರ ಸ್ವಾತಂತ್ರ್ಯದ ಸರ್ವಸಮಾನತೆಯ ಪ್ರತಿಪಾದನೆ ಇವು ಬಸವಣ್ಣನವರ ಸಾಮಾಜಿಕ ಕ್ರಾಂತಿಯ ಪಂಚ ಮುಖಗಳು'[೪೯] ಎಂದು ಹೇಳುವ ಮಾತು ಸತ್ಯವಾಗಿದೆ.

ಅಸ್ಪೃಶ್ಯತೆ ಹಿಂದೂ ಧರ್ಮಕ್ಕೆ ತಗಲಿರುವ ರೋಗವೆಂದು ಸ್ವಾಮಿ ವಿವೇಕಾನಂದರೂ, ಅದೊಂದು ಅಭಿಶಾಪವೆಂದು ಮಹಾತ್ಮಗಾಂಧಿಯವರೂ, ಮಹಾಪಾಪವೆಂದು ಮಹಾಮೇಧಾವಿ ಡಾಕ್ಟರ ಅಂಬೇಡ್ಕರರೂ ಘಂಟಾಘೋಷವಾಗಿ ಸಾರಿದ್ದಾರೆ. ಅದರಿಂದಾಗಿ ಸವರ್ಣೀಯರೆಲ್ಲ ತಲೆತಗ್ಗಿಸಬೇಕಾಗಿದೆಯೆಂದು ಅವರು ಘೋಷಿಸಿದ್ದಾರೆ. ಆತ್ಮವತ್ ಸರ್ವ ಭೂತೇಷು ಎಂಬ ತತ್ವವು ಪುಸ್ತಕದಲ್ಲುಳಿದಿದೆಯೇ ಹೊರತು ಆಚರಣೆಯಲ್ಲಿಲ್ಲ. ಅಸ್ಪೃಶ್ಯತೆಯ ಬಗ್ಗೆ ಪ್ರಸ್ತಾಪಿಸುತ್ತಾ ಸ್ವಾಮಿ ವಿವೇಕಾನಂದರು– ಈ ನಾಡಿನ ಜನರ ಹೃದಯದಲ್ಲಿ ದಯೆ ಇದೆಯೇ ? ಅನುಕಂಪೆ ಇದೆಯೇ? ನಿಮ್ನ ವರ್ಗದ ಜನ ಹಗಲಿರುಳೆಲ್ಲ ದುಡಿದರೂ ಹೊಟ್ಟೆಗೆ ಕೂಳಿಲ್ಲ, ಮೈಗೆ ಚಿಂದಿಯಿಲ್ಲ, ಅವರು ಉದ್ಧಾರವಾಗುವ ತನಕ ನಾಡಿನ ಕಲ್ಯಾಣ ಸಾಧ್ಯವಿಲ್ಲ ಎಂದಿದ್ದಾರೆ. ತಮಗೆ ಪುನರ್‌ಜನ್ಮವಿರುವದಾದರೆ ಪರೆಯನಾಗಿ ಹುಟ್ಟುವ ಬಯಕೆಯನ್ನು ಗಾಂಧೀಜಿ ವ್ಯಕ್ತ ಪಡಿಸಿದ್ದುಂಟು ಬುದ್ಧ ರಾಮಾನುಜರೂ ಆ ವ್ರಣ ನಿವಾರಣೆಯ ಬಗ್ಗೆ ಪ್ರಯತ್ನ ನಡೆಸಿದ್ದುಂಟು. ಆದರೆ 'ಬಸವಣ್ಣನವರಂತೆ ಆ ನತದೃಷ್ಟರಿಗೆ ಮರುಗಿದ, ಕೊರಗಿದ, ಕಳವಳಿಸಿದ, ಹಂಬಲಿಸಿದ, ಶ್ರಮಿಸಿದ, ತಮ್ಮ

೪೮. ಬಸವಣ್ಣನವರ ವಚನ ಸಂಪುಟ–ಸಂ.ಡಾ.ಎಂ.ಎಂ. ಕಲಬುರ್ಗಿ ವ–೫೭೬.
೪೯. ಬಸವ ಸಂಹಿತೆ – ದೇಜಗೌ ಪು– ೪೦–೪೧

ಆತ್ಮಶ್ರೇಯಸ್ಸನ್ನೇ ತ್ಯಾಗ ಮಾಡಿದ, ತಮ್ಮ ಪ್ರಾಣವನ್ನೇ ಪಣವಾಗೊಡ್ಡಿದ ಹುತಾತ್ಮರು, ದಲಿತೋದ್ಧಾರಕ ಎಂಬ ಬಿರುದಿಗೆ ಪಾತ್ರರಾದ ಮತ್ತೊಬ್ಬರು ಅಂದಿನಿಂದ ಇಂದಿನವರೆಗೆ ಭರತಖಂಡದಲ್ಲಿ ಜನಿಸಲಿಲ್ಲವೆಂದೇ ಹೇಳಬಹುದು, ಪ್ರಾಯಶಃ ಅಂಬೇಡ್ಕರ ಹೊರತಾಗಿ'.[೫೦]

ಬಸವಾದಿ ಶರಣರ ನಂತರ ಏಳು ನೂರು ವರುಷಗಳ ತರುವಾಯ ಜನಿಸಿದ ಡಾ॥ ಬಾಬಾಸಾಹೇಬ ಅಂಬೇಡ್ಕರರು ದಲಿತೋದ್ಧಾರಕ್ಕಾಗಿ – ಅಸ್ಪಶ್ಯತೆಯ ನಿವಾರಣೆಗಾಗಿ, ಜಾತಿ ವಿನಾಶದ ಹೋರಾಟಕ್ಕಾಗಿ ಅನವರತ ವರ್ಣವ್ಯವಸ್ಥೆಯೊಂದಿಗೆ ಸಂಘರ್ಷ – ಆಂದೋಲನ ನಡೆಸಿದರು. 'ಜಾತಿ ಪದ್ಧತಿಯನ್ನು ನೀವು ಭಗ್ನಪಡಿಸಬೇಕಾದರೆ ನೀವು ವೇದಗಳು ಮತ್ತು ಶಾಸ್ತ್ರಗಳಿಗೆ ಡೈನಾಮೇಟ್ ಹಾಕಬೇಕು. ಏಕೆಂದರೆ ಅವು ವಿವೇಕವನ್ನು ನಿರಾಕರಿಸುತ್ತವೆ. ವೇದಶಾಸ್ತ್ರಗಳನ್ನು ಧ್ವಂಸ ಮಾಡಬೇಕು. ಏಕೆಂದರೆ ಅವುಗಳು ನೈತಿಕತೆಯನ್ನು ಒಪ್ಪುವುದಿಲ್ಲ. ನೀವು ಶ್ರುತಿಗಳು ಮತ್ತು ಸ್ಮೃತಿಗಳ ಧರ್ಮವನ್ನು ನಾಶಪಡಿಸಬೇಕು'[೫೧]

ಅಂಬೇಡ್ಕರರ ವಿಚಾರಗಳಿಂದ ಪ್ರೇರಿತರಾದ ಹಾಗೂ ಬಸವ – ಬುದ್ಧ – ಜ್ಯೋತಿಬಾ ಫುಲೆ, ನಾರಾಯಣಗುರು ಮುಂತಾದವರ ಕ್ರಾಂತಿಯಿಂದ ಪ್ರಭಾವಿತರಾದ ಅನೇಕ ದಲಿತ ಸಾಹಿತಿಗಳಲ್ಲಿ ಅಗ್ರಜರಾದವರು ಶ್ರೀ ಭೀಮರಾವ ಪೋಳ 'ದಲಿತರ ಎಲ್ಲಾ ರೀತಿಯ ಸಮಸ್ಯೆಗಳಿಗೆ ಕಾರಣವನ್ನು ಹುಡುಕುವುದುರೊಂದಿಗೆ ಆ ಮೂಲಗಳನ್ನು ಪ್ರತಿಭಟಿಸುವ ಅವಶ್ಯಕತೆ ದಲಿತಸಾಹಿತ್ಯದಲ್ಲಿ ಮುಖ್ಯವಾಗಿ ವ್ಯಕ್ತವಾಗಿರುವ ಅಂಶ. ದಲಿತ ಪ್ರಜ್ಞೆಯು ಶಿಕ್ಷಣದ ಜೊತೆಗೆ ಬೆಳೆಯುತ್ತಾ ಒಂದು ಆಸ್ಫೋಟದ ರೂಪದಲ್ಲೇ ವ್ಯಕ್ತವಾಗಿದೆ. ಆ ಆಸ್ಫೋಟದ ಹಂತದಲ್ಲಿರುವ ಉದ್ವೇಗ, ಆಕ್ರೋಶಗಳಿಂದ ಕೂಡಿದ ಪ್ರತಿಭಟನೆಯನ್ನು ದಲಿತಸಾಹಿತ್ಯ ಬಿಂಬಿಸಿದೆ.'[೫೨]

೨೦ ನೇ ಶತಮಾನದ ಮೊಟ್ಟ ಮೊದಲ ದಲಿತ ಹೋರಾಟಗಾರ, ಸಾಹಿತಿಯಾಗಿ ಕನ್ನಡ ನಾಡಿನಲ್ಲಿ ಜಾಗೃತಿಯೆಬ್ಬಿಸಿದವರು ಕುಮಾರ ಕಕ್ಕಯ್ಯ ಪೋಳ. ಗದ್ಯ–ಪದ್ಯ, ನಾಟಕ –ಪ್ರಬಂಧ, ಕಥೆ–ಕಾದಂಬರಿ ರಚನೆಯ ಮೂಲಕ ನವಜಾಗೃತಿ ಪ್ರಾರಂಭಿಸಿದರು. ವಚನ ರಚನೆಯ ಮೂಲಕ ಕ್ರಾಂತಿಯ ಕಿಡಿಗಳನ್ನು ಹೊತ್ತಿಸಿದರು.

ಇಲಿ ಹೌಹಾರಿ ಹೋರಾಡುವುದು
ಬೆಕ್ಕಿಗೆ ದ್ರೋಹ ಬಗೆಯಲಿಕ್ಕೆಂದಲ್ಲ.
ತನ್ನ ಪ್ರಾಣ ಉಳಿಸಿಕೊಳ್ಳಲಿಕ್ಕೆ.
ಅಂತ್ಯಜ ಗೋಗರೆದು ಹೋರಾಡುವುದು

---

೫೦. ಬಸವ ಸಂಹಿತೆ – ದೇಜಗೌ ಪು – ೪೧

೫೧. Annihilation of caste - Dr. Ambedkar. P. 96.

೫೨. ಸ್ತ್ರೀವಾದ ಮತ್ತು ಭಾರತೀಯತೆ ; ದಲಿತ ಸಾಹಿತ್ಯ – ಧರಣೀದೇವಿ ಮಾಲಗತ್ತಿ ಪು ೬೯ – ೭೦

ಕುಲಜನಿಗೆ ದ್ರೋಹ ಬಗೆಯಲಿಕ್ಕೆಂದಲ್ಲ,
ತನ್ನ ಜೀವ ಉಳಿಸಿಕೊಳ್ಳಲಿಕ್ಕೆಂದ
ಕುಮಾರ ಕಕ್ಕಯ್ಯ.[೫೩]

ದಲಿತನ ಹೋರಾಟ ಇನ್ನೊಬ್ಬರಿಗೆ ದ್ರೋಹ ಬಗೆಯಲಿಕ್ಕಲ್ಲ. ತಾನು ದ್ರೋಹಕ್ಕೆ ಒಳಗಾಗದಂತೆ, ಶೋಷಣೆಗೆ ಒಳಗಾಗದಂತೆ, ತನ್ನ ಜೀವ ಉಳಿಸಿಕೊಳ್ಳಲಿಕ್ಕೆ ಎಂಬುದನ್ನು ದಲಿತ ಸಮುದಾಯ ಹಾಗೂ ಬಲಿತ ಸಮುದಾಯಗಳೆರಡಕ್ಕೂ ಮನಗಾಣಿಸಿದರು ಅಂತ್ಯಜರ ನೋವು ಅಂತ್ಯಜರಿಗೆ ಅರ್ಥವಾಗಬೇಕು. –

ಹೆರಿಗೆಯ ನೋವು
ಹೆರುವವಳಿಗಲ್ಲದೆ ಸೂಲಗಿತ್ತಿಗೆ ಬಾರದು.
ಗಾಯದ ನೋವು
ಗಾಯಾಳುವಿಗಲ್ಲದೆ ವೈದ್ಯನಿಗೆ ಆಗದು.
ಅಂತ್ಯಜರ ನೋವು
ಅಂತ್ಯಜರಿಗಲ್ಲದೆ ಕುಲಜರಿಗೆ ತಿಳಿಯದೆಂದ
ಕುಮಾರ ಕಕ್ಕಯ್ಯ.[೫೪]

ಸವರ್ಣೀಯರ ದಬ್ಬಾಳಿಕೆಯಿಂದ ನಲುಗಿದ, ನಲುಗುತ್ತಿರುವ ಅಸ್ಪೃಶ್ಯರು, ಶೂದ್ರರು, ದಲಿತರು ಸ್ವಾಭಿಮಾನಿಗಳಾಗಿ ಅನ್ಯಾಯದ ಎದುರು ಹೋರಾಡಬೇಕೆಂದು ಕರೆ ನೀಡುತ್ತಾರೆ–

ಕಟ್ಟಿಗೆ, ಪ್ರವಾಹದೊಡನೆ ಹರಿದು ಹೋದರೆ
ಮೀನು, ಪ್ರವಾಹದೆದುರು ಈಸುವುದು.
ಪಟ, ಗಾಳಿಯೊಡನೆ ತೇಲಿ ಹೋದರೆ
ಪಕ್ಷಿ ಗಾಳಿಯ ಎದುರು ಹಾರುವುದು.
ಹೇಡಿಗಳು ಅನ್ಯಾಯಕ್ಕೆ ತಲೆಬಾಗಿದರೆ
ಸ್ವಾಭಿಮಾನಿಗಳು ಅನ್ಯಾಯದೆದುರು ಹೋರಾಡುವರೆಂದ
ಕುಮಾರ ಕಕ್ಕಯ್ಯ.[೫೫]

ಇಲ್ಲಿ ನಿರ್ಜೀವ ವಸ್ತುಗಳಾದ ಕಟ್ಟಿಗೆ, ಪಟಗಳು ಇರುವಂತೆ ದಲಿತರ ಸ್ಥಿತಿ ಆಗದೇ, ಮೀನು ಪಕ್ಷಿಗಳಂತೆ ಜೀವಂತಿಕೆಯನ್ನು ಹೊಂದಿರಬೇಕು. ತಮ್ಮ ಮೇಲೆ ಆಗುವ ದೌರ್ಜನ್ಯ – ಅನ್ಯಾಯಕ್ಕೆ ಹೇಡಿಗಳು ತಲೆಬಾಗುತ್ತಾರೆಯೇ ವಿನಃ ಸ್ವಾಭಿಮಾನಿಗಳು ತಲೆಬಾಗುವದಿಲ್ಲ. ಆದ್ದರಿಂದ ದಲಿತರು ಸ್ವಾಭಿಮಾನಿಗಳಾಗಿ ಹೋರಾಡಬೇಕೆಂದು ಕರೆಕೊಡುತ್ತಾರೆ.

---

೫೩. ಕುಮಾರ ಕಕ್ಕಯ್ಯನ ವಚನಗಳು – ಕುಮಾರ ಕಕ್ಕಯ್ಯ ಪೋಳ ಪು–೩ ವ– ೮.
೫೪. –ಅದೇ– ಪು–೩ ವ–೧೦
೫೫. –ಅದೇ– ಪು– ೩೪೮ ವ – ೧೩೫೧.

ತೋಳ ಏರಿಬಂದಾಗ ಕಿರುಬನಾಗು
ಕಿರುಬ ಎದುರು ಬಿದ್ದಾಗ ಕರಡಿಯಾಗು
ಕರಡಿ ತಿರುಗಿ ನಿಂತಾಗ ಹುಲಿಯಾಗು
ಹುಲಿ ಗುಡುಗಿ ಎರಗಿದಾಗ ಸಿಂಹನಾಗು.
ಅಯ್ಯಾ ನೀನು ಕುರಿಯಾದರೆ,
ಎಲ್ಲರೂ ನಿನ್ನನ್ನು ಹರಿದು ತಿನ್ನುವರೆಂದ
ಕುಮಾರ ಕಕ್ಕಯ್ಯ.[೫೬]

ಶೋಷಕರು, ತೋಳನ ರೀತಿಯಲ್ಲಿ ದಲಿತರ ಮೇಲೆ ಶೊಷಣೆ ಮಾಡಲುಬಂದರೆ ದಲಿತರು ಕಿರುಬರಾಗಬೇಕು, ಶೋಷಕರು ಕಿರುಬಾಗಿ ಎದುರು ಬಿದ್ದರೆ, ದಲಿತರು ಕರಡಿಯಾಗಬೇಕು. ಶೊಷಕರು ಕರಡಿಯ ರೂಪದಲ್ಲಿ ಬಂದರೆ ದಲಿತರು ಹುಲಿಯಾಗಬೇಕು ಶೋಷಕರು ಹುಲಿಯಾಗಿ ಗುಡುಗಿ ಎರಗಿದರೆ ಸಿಂಹವಾಗಬೇಕು. ಒಂದು ವೇಳೆ ದಲಿತರು ಕುರಿಯಂತೆ ತಲೆ ತಗ್ಗಿಸಿ ನಿಂತರೆ ಎಲ್ಲರೂ ನಿನ್ನನ್ನು ಹರಿದು ತಿನ್ನುತ್ತಾರೆ, ಅಂದರೆ ಶೋಷಣೆ ಮಾಡುತ್ತಾರೆ ಎಂದು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ಎಚ್ಚರಿಸುತ್ತಾರೆ.

ಶೂದ್ರರು, ದಲಿತರು ತಮ್ಮನ್ನು ಅಸ್ಪೃಶ್ಯರನ್ನಾಗಿಸಿದ, ಹೀನ ಅವಸ್ಥೆಗೆ ದೂಡಿದ ಚಾತುರ್ವರ್ಣ ಧರ್ಮವನ್ನು ತ್ಯಜಿಸಲೇಬೇಕೆಂದು ಕರೆಕೊಡುತ್ತಾರೆ –

ಶೂದ್ರಾಣಾಂ ವೇದಾಧ್ಯಯನ ಚ್ಛ
ಧನ ಸಂಚಯ ಪ್ರತಿಷೇಧೋಭವತಿ
ಶೂದ್ರರು ಮೂಢರು, ಕಡುಬಡವರಾಗಿರುವವರೆಗೆ
ಸವರ್ಣೀಯರ ಸೇವೆಗೆ ತೊಂದರೆಗಳಿಲ್ಲ.
ಧರ್ಮದ ಹೆಸರಿನಲ್ಲಿ ಅಧರ್ಮ ಹೇಳುವ ಆರ್ಯರ
ಸ್ಮೃತಿ ಶಾಸ್ತ್ರ ಧರ್ಮವನ್ನು ತ್ಯಜಿಸುವವರೆಗೆ
ಶೂದ್ರರಿಗೆ, ದಲಿತರಿಗೆ ಮುಕ್ತಿಯೇ ಇಲ್ಲೆಂದ
ಕುಮಾರ ಕಕ್ಕಯ್ಯ.[೫೭]

ಅಂತ್ಯಜರು, ಶೂದ್ರರು, ದಲಿತರು ಬಡತನ, ಅಜ್ಞಾನ, ಮೌಢ್ಯದಲ್ಲಿರುವವರೆಗೆ ಸವರ್ಣೀಯರು ದುಡಿಸಿಕೊಳ್ಳುತ್ತಾರೆ. ಆದ್ದರಿಂದ ಇವರು ಜಾಗೃತರಾಗಬೇಕು. ಇದು ಸಾಧ್ಯವೇ ? ಅಂತ್ಯಜರಲ್ಲಿ ಕೀಳರಿಮೆ, ಅಜ್ಞಾನ ತುಂಬಿದೆ. ಇವರು ತಮ್ಮನ್ನು ಇಂತಹ ಹೀನಸ್ಥಿತಿಗೆ ಈಡು ಮಾಡಿದ ಸವರ್ಣೀಯರ ವರ್ಣಾಶ್ರಮ ಧರ್ಮವನ್ನು ಬಿಡಲಾರರು ಎಂಬ ನೋವು ಕುಮಾರ ಕಕ್ಕಯ್ಯನವರಲ್ಲಿದೆ.

ಹೊಟ್ಟೆ ಬಟ್ಟೆಗಿಲ್ಲೆಂದು ಹೊಲಮನೆ ಮಾರಬಹುದು
ಉದ್ಯೋಗವಿಲ್ಲೆಂದು ಊರು ಬಿಟ್ಟು ಹೋಗಬಹುದು

---

೫೬. ಕುಮಾರ ಕಕ್ಕಯ್ಯನ ವಚನಗಳು – ಪು–೬, ವ–೨೩೧.
೫೭. –ಅದೇ– ಪು– ೩೦೫ ವ– ೧೧೭೮.

ಹೊಂದಾಣಿಕೆಯಿಲ್ಲೆಂದು ಮಡದಿಯನು ಬಿಡಬಹುದು
ದುಡಿಯಲೊಲ್ಲರೆಂದು ಮಕ್ಕಳನು ಹೊರದೂಡಬಹುದು
ತಮ್ಮನ್ನು ಪಶುಗಳಿಗಿಂತಲೂ ಕೀಳು ಮಾಡಿದ
ಧರ್ಮವನು ಅಂತ್ಯಜರು ಅದೆಂದಿಗೂ ಬಿಡರೆಂದ
ಕುಮಾರ ಕಕ್ಕಯ್ಯ.[೫೮]

ದಲಿತರು ಉಚ್ಚ ವರ್ಣಿಯರ, ಸವರ್ಣ ಹಿಂದುಗಳ ಶೋಷಣೆಯಿಂದ ಸಿಡಿದೇಳಬೇಕು, ಹೋರಾಟ ಮಾಡಬೇಕು. ಹೋರಾಟ ಮಾಡದೇ ಅವರ ಕಪಿಮುಷ್ಠಿಯಿಂದ ಪಾರಾಗಲು ಸಾಧ್ಯವಿಲ್ಲ. ಮನದೊಳಗಣ ಭಯ ಕಿತ್ತು ಹಾಕಿ ಮೇಲೇಳಬೇಕು ಅಂದರೆ ಮಾತ್ರ ಗುಲಾಮಗಿರಿ ತಪ್ಪುತ್ತದೆ ಎಂದು ಎಚ್ಚರಿಸುತ್ತಾರೆ–

ಪರಕೀಯರೊಡನೆ ರಾಜಕೀಯ ಹೋರಾಟ
ಸ್ವಕೀಯರೊಡನೆ ಜಾತಿಯ ಹೋರಾಟ
ಊರವರೊಡನೆ ಧಾರ್ಮಿಕ ಹೋರಾಟ
ಸಮಯ ಬಂದಾಗ ಭಯ ಬಿಟ್ಟು ಏಳದಿದ್ದರೆ
ದಲಿತರಿಗೆ ಗುಲಾಮಗಿರಿ ಅನುಗಾಲ ತಪ್ಪದೆಂದ
ಕುಮಾರ ಕಕ್ಕಯ್ಯ.[೫೯]

ದಲಿತರು ತಮ್ಮ ಉದ್ಧಾರಕ್ಕಾಗಿ ರಾಜಕೀಯ ಹೋರಾಟ, ಸಾಮಾಜಿಕ ಹೋರಾಟ, ಜಾತಿಯ ಹೋರಾಟ, ಧಾರ್ಮಿಕ ಹೋರಾಟ ಮಾಡಲೇಬೇಕಾಗುತ್ತದೆ. ಭಯ ತೊರೆದು ನಿರ್ಭಯರಾಗಿ ಹೋರಾಟಮಾಡಿ ಗುಲಾಮಗಿರಿಯಿಂದ ಹೊರಬರಲೇಬೇಕು. ಇಲ್ಲದಿದ್ದರೆ ಅನುಗಾಲ ಅವರ ಸೇವೆ ಮಾಡುತ್ತಲೇ ಸಾಯಬೇಕಾಗುತ್ತದೆ ಎಂದು ತಿಳಿ ಹೇಳುತ್ತಾರೆ. ಸ್ಪೃಶ್ಯ –ಅಸ್ಪೃಶ್ಯ ಎಂಬ ಭೇದ ಭಾವವು ವೈದಿಕ ಧರ್ಮದ ಪುರೋಹಿತಶಾಹಿಯ ಕುತಂತ್ರ,, ವ್ಯಭಿಚಾರವಾಗಿದೆ ಎಂದು ಅರುಹುತ್ತಾರೆ–

ಒಂದೇ ತಾಯಿಗೆ ಹುಟ್ಟಿದ ಅರ್ಜುನ, ಕರ್ಣರು
ಉಚ್ಚ–ನೀಚ ಎನಿಸಲು
ಕುಂತಿದೇವಿಯ ಅನೀತಿಯೇ ಕಾರಣ
ಒಂದೇ ಧರ್ಮದ ಜನರು
ಕುಲಜ–ಅಂತ್ಯಜ, ಸ್ಪೃಶ್ಯ –ಅಸ್ಪೃಶ್ಯ ಎನಿಸಲು
ವೈದಿಕ ಧರ್ಮದ ಹಾದರವೇ ಕಾರಣವೆಂದ
ಕುಮಾರ ಕಕ್ಕಯ್ಯ.[೬೦]

---

೫೮. ಕುಮಾರ ಕಕ್ಕಯ್ಯನ ವಚನಗಳು ಪು–೩ ವ–೯.
೫೯. ಅದೇ– ಪು–೭೪, ವ–೨೮೭
೬೦. ಕುಮಾರ ಕಕ್ಕಯ್ಯನ ವಚನಗಳು ಪು–೩೫ ವ–೧೩೯೩

'ಮಹಾಭಾರತ' ಕಥೆಯಲ್ಲಿ ಬರುವ ಕರ್ಣ, ಅರ್ಜುನ ಇಬ್ಬರೂ ಕುಂತಿಯ ಮಕ್ಕಳು. ಕುಂತಿಯ ಮದುವೆಯ ಪೂರ್ವದಲ್ಲಿ ಜನಿಸಿದಾತ ಕರ್ಣನಾದರೆ, ಮದುವೆಯ ನಂತರ ಹುಟ್ಟಿದಾತ ಅರ್ಜುನ. ಪಾಂಡುನನ್ನು ಮದುವೆಯಾಗುವ ಪೂರ್ವದಲ್ಲಿ ಸೂರ್ಯನ ಯೋಗದಿಂದ ಜನಿಸಿದ್ದರಿಂದ ಲೋಕಾಪವಾದಕ್ಕೆ ಹೆದರಿ ಗಂಗಾನದಿಯಲ್ಲಿ ಆ ಶಿಶುವನ್ನು ತೇಲಿಬಿಟ್ಟಳು, ಬೆಸ್ತರ ರಾಧೆಯು ಸಾಕಿ ಸಲಹಿದ್ದರಿಂದ ಆತ ಸೂತಪುತ್ರ ರಾಧೇಯ ಎನಿಸಿಕೊಂಡ, ಅರ್ಜುನನು ಕುಂತಿಯ ಮದುವೆಯ ನಂತರ ಇಂದ್ರದೇವನ ಯೋಗದಿಂದ ಜನಿಸಿದುದರಿಂದ ಆತನು ಕುಂತಿಯೇ ಸಲಹಿದ್ದರಿಂದ ಕೌಂತೇಯ ಎನಿಸಿಕೊಂಡ. ಇಬ್ಬರಿಗೂ ಕುಂತಿಯೇ ತಾಯಿಯಾದರೂ ಸಹ, ಅವರಿಬ್ಬರೂ ನೀಚ–ಉಚ್ಚ ಎನಿಸಿಕೊಳ್ಳಲು ಕುಂತಿಯ ಅನೀತಿಯುತ ದಾಂಪತ್ಯ ಜೀವನವೇ ಕಾರಣವಾಗಿದೆ. ಅದೇ ರೀತಿ ಒಂದೇ ಧರ್ಮದವರಾಗಿದ್ದರೂ ಕುಲಜ – ಅಂತ್ಯಜ, ಸ್ಪೃಶ್ಯ – ಅಸ್ಪೃಶ್ಯ ಎಂದು ವರ್ಣಭೇದ ಉಂಟಾಗಲು ಅಂದಿನ ವೈದಿಕ ಧರ್ಮದ ಹಾದರವೇ ಕಾರಣವೆಂದು ನಿರ್ಭಿಡೆಯಿಂದ, ನ್ಯಾಯ ನಿಷ್ಠುರತೆಯಿಂದ ವಚನ ರಚನೆಯ ಮೂಲಕ ಕುಮಾರ ಕಕ್ಕಯ್ಯ ತಿಳಿಸುತ್ತಾರೆ.

ಸವರ್ಣೀಯರ ಸರ್ವಾಧಿಕಾರ, ದಬ್ಬಾಳಿಕೆಯ ಸಮಾಜ – ಧರ್ಮದಲ್ಲಿ ಅಸ್ಪೃಶ್ಯರಿಗೆ ತಮ್ಮದೆನ್ನುವದೇನಿದೆ?

ಊರ ಕೆರೆ ಬಾವಿ ಗುಡಿ ಗುಂಡಾರ ಮುಟ್ಟುಗೊಡುವದಿಲ್ಲ.
ಮಠ ಮಂದಿರ ತೀರ್ಥ ಕ್ಷೇತ್ರಗಳಲ್ಲಿ ಬರಗೊಡುವದಿಲ್ಲ.
ಸಾಮಾಜಿಕ ಧಾರ್ಮಿಕ ಉತ್ಸವಗಳಲ್ಲಿ ಆಸ್ಪದವಿಲ್ಲ.
ಬಹಿಷ್ಕೃತರಾಗಿ ಊರ ಹೊರಗೆ ಕೊಳೆಯುವ ಅಸ್ಪೃಶ್ಯರಿಗೆ
ನಾಡು–ನುಡಿ, ದೇಶ–ಕೋಶ, ಧರ್ಮ–ದೇವರ ಮಾತೇಕೆ ?
ಅವೆಲ್ಲವುಗಳು ಕುಲಜರ ಸೊತ್ತೆಂದ
ಕುಮಾರ ಕಕ್ಕಯ್ಯ.[೬೧]

ಊರೊಳಗಿನ ಕೆರೆ, ಬಾವಿ, ಗುಡಿ ಗುಂಡಾರಗಳು, ನಾಡಿನೊಳಗಣ ಮಠ, ಮಂದಿರ, ತೀರ್ಥಕ್ಷೇತ್ರಗಳು, ಧಾರ್ಮಿಕ ಉತ್ಸವಗಳು ಎಲ್ಲವೂ ಕುಲಜರ ಸೊತ್ತಾಗಿವೆ. ಅಲ್ಲಿ ಅಂತ್ಯಜರಿಗೆ ಅವಕಾಶವಿಲ್ಲ. ಸಮಾಜದಿಂದ ಬಹಿಷ್ಕೃತರಾಗಿ ಊರಹೊರಗೆ ಹೊರಕೇರಿಗಳಲ್ಲಿ, ಹೊಲಗೇರಿಗಳಲ್ಲಿ ಕೊಳೆಯುವ ಅಸ್ಪೃಶ್ಯರಿಗೆ ನನ್ನ ನಾಡು, ನನ್ನ ಭಾಷೆ, ನನ್ನ ದೇಶ, ನನ್ನ ಕೋಶ, ನನ್ನ ಧರ್ಮ, ನನ್ನ ದೇವರು ಎಂಬ ಅಭಿಮಾನ ಬರಲು ಸಾಧ್ಯವೇ?ಎಂದು ಪ್ರಶ್ನಿಸುತ್ತಾರೆ.

ಎಷ್ಟೊಂದು ಕುಬೇರರು ಹುಟ್ಟಿದರೋ
ಅಷ್ಟೊಂದು ಜಾತಿಯ ದೇವಾಲಯಗಳು ಹುಟ್ಟಿದವು.

---

೬೧. ಕುಮಾರ ಕಕ್ಕಯ್ಯನ ವಚನಗಳು ಪು–೩೨೩ ವ–೧೨೫೧

ಎಷ್ಟೊಂದು ಸ್ವಾಮಿಗಳು ಹುಟ್ಟಿದರೋ
ಅಷ್ಟೊಂದು ಜಾತಿಯ ಮಠಗಳು ಹುಟ್ಟಿದವು.
ಎಷ್ಟೊಂದು ಪ್ರವಾದಿಗಳು ಹುಟ್ಟಿದರೋ
ಅಷ್ಟೊಂದು ಮತ ಧರ್ಮಗಳು ಹುಟ್ಟಿದವು.
ಇಂತಪ್ಪ ನಾಡಿನಲ್ಲಿ ಒಕ್ಕಟ್ಟು ಹೊಂದಾಣಿಕೆ
ಅದು ಹೇಗೆ ಸಾಧ್ಯವೆಂದ ಕುಮಾರ ಕಕ್ಕಯ್ಯ[೬೨]

ಭಾರತದಲ್ಲಿ ಇಷ್ಟೊಂದು ಭೇದ-ಭಾವನೆ, ಮೇಲು-ಕೀಳು, ಜಾತಿಗಳು ಇರುವಾಗ 'ಹಿಂದು-ನಾವೆಲ್ಲ ಒಂದು' ಎಂಬ ಘೋಷಣೆಗೆ ಅರ್ಥವಿದೆಯೆ? ಇಂತಹ ನಾಡಿನಲ್ಲಿ ಪ್ರಜೆಗಳು ಒಕ್ಕಟ್ಟಾಗಿರಲು ಸಾಧ್ಯವೇ?

ಈ ರೀತಿಯ ಜಾತಿಯ ದುರ್ಭಾವನೆ ಹೊಂದಿರುವ ಸವರ್ಣೀಯರ. ನೆರೆ ಹೊರೆಯಲ್ಲಿ ಇರಲು ಅವಕಾಶ ಮಾಡಿಕೊಡುವರೆ? ಅದೆಂದಿಗೂ ಸಾಧ್ಯವಿಲ್ಲ ಎನ್ನುತ್ತಾರೆ ಕುಮಾರ ಕಕ್ಕಯ್ಯ-

ಕಾಡಿನಲ್ಲಿ ಮನೆ ಮಾಡಬಹುದು.
ಖಗ ಮೃಗಗಳೊಡನೆ ಹೋರಾಡಬಹುದು.
ತುಂಬಿದ ಹೊಳೆಯಲ್ಲಿ ಹಾರಬಹುದು.
ಉರಿವ ಬೆಂಕಿಯಲ್ಲಿ ಜಿಗಿಯಬಹುದು.
ಜಾತಿ ಹೊದ್ದವರ ನೆರೆಹೊರೆಯಲ್ಲಿ ಇರಲಿಕ್ಕಾಗದೆಂದ
ಕುಮಾರ ಕಕ್ಕಯ್ಯ[೬೩]

ಎಷ್ಟೋ ಸಲ ಕುಲಜರು ತಮ್ಮ ರಾಜಕೀಯ ಸ್ವಾರ್ಥಕ್ಕಾಗಿ, ಸ್ವಹಿತಕ್ಕಾಗಿ ಅಂತ್ಯಜರ ಉದ್ಧಾರ, ಹರಿಜನೋದ್ಧಾರ, ಅಸ್ಪೃಶ್ಯತಾ ನಿವಾರಣೆಯ ಸಂಘ - ಸಂಸ್ಥೆಗಳನ್ನು ಹುಟ್ಟು ಹಾಕಿ, ಗಂಟಲು ಹರಿಯುವಂತೆ ಭಾಷಣ ಮಾಡಿ, ಘೋಷಣೆ ಕೂಗಿ, ಕಪಟ ನಾಟಕವಾಡುತ್ತಾರೆ. ಇಂಥವರು ಮಾಡುವ ಪ್ರತಿಜ್ಞೆ, ತೊಡುವ ದೀಕ್ಷೆಗಳು ಇವುಗಳ ಬಗ್ಗೆ ಎಚ್ಚರವಹಿಸಬೇಕೆಂದು ದಲಿತರಿಗೆ ತಿಳಿಹೇಳುತ್ತಾರೆ -

ಕುರಿಗಳ ರಕ್ಷಣೆಗೆ ತೋಳ ದೀಕ್ಷೆ ತೊಟ್ಟರೆ
ಗಡ್ಡೆ ಗೆಣಸು ಕಣಿಕೆ ಹೊಟ್ಟು
ಅದರ ಹೊಟ್ಟೆಗೆ ದಕ್ಕಬಹುದೇ?
ಅಂತ್ಯಜರ ಉದ್ಧಾರಕ್ಕೆ ಕುಲಜ ಪಣತೊಟ್ಟರೆ
ಸರಿ - ಸಮಾನತೆ, ರೋಟಿ - ಬೇಟಿ
ಅವನ ಜಾತಿಗೆ ಒಗ್ಗಬಹುದೇ?

---

೬೨. ಕುಮಾರ ಕಕ್ಕಯ್ಯನ ವಚನಗಳು ಪು-೩೮ ವ-೧೪೫
೬೩. ಕುಮಾರ ಕಕ್ಕಯ್ಯನ ವಚನಗಳು ಪು-೧೫೧ ವ-೫೮೧

ಅಂತ್ಯಜರನ್ನು ಬಹುದೂರ ಊರ ಹೊರಗಿಟ್ಟು
ಕುಲಜರು ಮಾಡುವ ಅಂತ್ಯಜರ ಉದ್ಧಾರ
ತೋಳಗಳು ಮಾಡುವ ಕುರಿಗಳ ರಕ್ಷಣೆಯಂತೆಂದ
ಕುಮಾರ ಕಕ್ಕಯ್ಯ[೬೪]

ಇಂತಹ ಆಷಾಢಭೂತಿ ದಲಿತೋದ್ಧಾರಕರೆಂಬ ಕುಲಜರ ಬಗ್ಗೆ ಎಚ್ಚರದಿಂದಿದ್ದು, ಸ್ವತಃ ಸಮಾಜದಲ್ಲಿರುವ ದೀನ – ದಲಿತ, ರೈತ – ಕಾರ್ಮಿಕ, ಸ್ತ್ರೀ – ಶೂದ್ರಾದಿಗಳು ಸಿಡಿದೆದ್ದರೆ ದೇಶವೇ ಜಾಗೃತವಾದೀತೆಂಬ ಕರೆಯನ್ನು ಕೊಡುತ್ತಾರೆ–

ಕಾರ್ಮಿಕ ಎದ್ದರೆ ಸಮಾಜ ಎದ್ದೀತು!
ಮತದಾರ ಎದ್ದರೆ ಆಡಳಿತ ಎದ್ದೀತು!
ರೈತ ಎದ್ದರೆ ನಾಗರಿಕತೆ ಎದ್ದೀತು!
ಸ್ತ್ರೀ ಎದ್ದರೆ ಧರ್ಮ ಎದ್ದೀತು!
ಶೂದ್ರ ಎದ್ದರೆ ದೇಶವೇ ಎದ್ದೀತೆಂದ
ಕುಮಾರ ಕಕ್ಕಯ್ಯ.[೬೫]

ಕನ್ನಡದ ನೆಲದಲ್ಲಿ ದಲಿತ, ಬಂಡಾಯ ಚಳುವಳಿಗಳು ರೂಪಗೊಳ್ಳುವ ಪೂರ್ವದಲ್ಲಿ ಸುಧಾರಣಾವಾದಿ ವಿಚಾರಗಳು ಪೋಳ ಅವರ ಬರಹಗಳಿಂದ ವ್ಯಕ್ತವಾಗಿದ್ದು ನಿಜಕ್ಕೂ ದಲಿತ–ಬಂಡಾಯ ಚಳುವಳಿಗೆ ಪೂರ್ವರಂಗವಾಗಿತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ದಲಿತ ಬಂಡಾಯ ಧೋರಣೆಯ ಅಂಶಗಳನ್ನು ಪೋಳ ಅವರ ಬರಹಗಳಲ್ಲಿ ನಾವು ದಟ್ಟವಾಗಿ ಕಾಣುವೆವು[೬೬]

ದಲಿತರ, ಅಸ್ಪೃಶ್ಯರ, ಶೂದ್ರರ, ತುಳಿತಕ್ಕೊಳಗಾದವರ ಹೋರಾಟ, ಸಂಘರ್ಷ ಇದು ನಿರಂತರ ಪ್ರಕ್ರಿಯೆಯಾಗಬೇಕು " ಶತಮಾನಗಳಿಂದ ಶೋಷಣೆಗೆ ಬಲಿಯಾಗುತ್ತ ಬಂದ ದಲಿತರಿಗೆ ಧ್ವನಿಯಾಗಿ ದಲಿತ ಸಂಘರ್ಷ ಸಮಿತಿ ತಲೆಎತ್ತಿ ನಿಂತುಕೊಂಡಿದ್ದು ಈ ದೇಶದ ಇತಿಹಾಸದಲ್ಲಿ ಮಹತ್ವದ ಘಟ್ಟವಾಗಿದೆ.ನಂತರ ಇದೂ ಕೂಡ ನಾನಾ ಕಾರಣಗಳಿಂದ ಛಿದ್ರ ಛಿದ್ರಗೊಂಡು ದಲಿತರ ಬದುಕಿನ ಭರವಸೆಗಳನ್ನು ಹೊಸಕಿ ಹಾಕಿತು. ಇಲ್ಲಿಯೂ ಸಹ ನಾಯಕರ ಭಿನ್ನಾಭಿಪ್ರಾಯ, ಅಧಿಕಾರ ದಾಹವೇ ಇಡೀ ಸಾಂಘಿಕ ಶಕ್ತಿಯನ್ನು ಉಡುಗುವಂತೆ ಮಾಡಿತು"[೬೭]

ದಲಿತ ಕವಿ, ಕ್ರಾಂತಿಕಾರಿ ಬರಹಗಾರ ಡಾ॥ ಸಿದ್ಧಲಿಂಗಯ್ಯನವರ ಮಾತುಗಳಲ್ಲಿ ದಲಿತರ ಉದ್ಧಾರದ ಮಾರ್ಗವನ್ನು ಕಾಣಬಹುದಾಗಿದೆ. 'ದಲಿತ ವರ್ಗದ ವಿದ್ಯಾವಂತರ ಮೇಲೂ ಜವಾಬ್ದಾರಿಯಿದೆ. ಡಾ॥ ಅಂಬೇಡ್ಕರ ಅವರ ಸಂದೇಶದಂತೆ

---

೬೪. ಕುಮಾರ ಕಕ್ಕಯ್ಯನ ವಚನಗಳು ಪು–೬೦. ವ–೨೩೦
೬೫. –ಅದೇ– ಪು–೩೦೪.ವ–೧೧೭೫
೬೬. ದಲಿತಸಾಹಿತಿ ಕುಮಾರ ಕಕ್ಕಯ್ಯ –ಡಾ. ಎಚ್.ಟಿ. ಪೋತೆ. ಪು–೧೫.
೬೭. ವಿಚಾರಸಾಹಿತ್ಯ– ಶೋಷಣೆಯ ವಿರುದ್ಧ ಹೋರಾಟದ ಸ್ಥಿತಿ–ಶಾಂತಕುಮಾರ ಪೂಜಾರ್ ಪು–೧೩೧.

ಶಿಕ್ಷಣ, ಸಂಘಟನೆ, ಹೋರಾಟವೇ ದಲಿತರ ವಿಮೋಚನೆಗೆ ಉಳಿದಿರುವ ದಾರಿಯೆಂದು ತಿಳಿದು ಅವರ ಕ್ರಾಂತಿಕಾರಕ ಕನಸನ್ನು ನಿಜವಾಗಿಸಬೇಕಾಗಿದೆ. ಮುಂದುವರೆದಿರುವ ದಲಿತರು ತಮ್ಮ ಹಿಂದುಳಿದಿರುವ ಬಾಂಧವರು ಶೈಕ್ಷಣಿಕವಾಗಿ, ಆರ್ಥಿಕವಾಗಿ ಮುಂದುವರೆಯಲು ನೆರವಾಗಬೇಕು. ದಲಿತರಲ್ಲೇ ಮನೆ ಮಾಡಿರಬಹುದಾದ ದುಶ್ಚಟಗಳನ್ನೂ ಕೀಳರಿಮೆಯನ್ನೂ ಅಳಿಸಿಹಾಕಿ ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಬೇಕು."[೬೮]

"ಭಾರತದ ಸಂವಿಧಾನವೇ ಅಸ್ಪೃಶ್ಯತೆಯು ಅಪರಾಧವೆಂದು ಸಾರಿದೆ. ಅದರ ೧೭ ನೆಯ ಕಟ್ಟಳೆ ಹೀಗಿದೆ – Untouchability is abolished and its practice in any form is forbidden. The enforcement of any disability advising out of untouchability shall be an offence punishable in accordance with Law"[೬೯] ಅಂದರೆ ಅಸ್ಪೃಶ್ಯತೆಯನ್ನು ನಾಶಮಾಡಲಾಗಿದೆ ಹಾಗೂ ಅದರ ಯಾವುದೇ ರೂಪದ ಆಚರಣೆಯನ್ನು ನಿಷೇಧಿಸಲಾಗಿದೆ. ಅಸ್ಪೃಶ್ಯತೆಯ ಬಗ್ಗೆ ಎಲ್ಲಿಯಾದರೂ ಒತ್ತಾಯಿಸಿದರೆ ಅದೊಂದು ಅಪರಾಧವಾಗುತ್ತದೆ. ಕಾನೂನು ಪ್ರಕಾರ ದಂಡನೆಗೆ ಒಳಗಾಗುತ್ತಾರೆ.

'ಶತಮಾನಗಳಿಂದ ಶೋಷಣೆಗೊಳಗಾದ ಅಸ್ಪೃಶ್ಯ ಜನಾಂಗದಲ್ಲಿ ಹುಟ್ಟಿ, ಬೆಳೆದು, ಆ ನೋವು ಯಾತನೆಗೆ ಕಾರಣವಾದ ವ್ಯವಸ್ಥೆಯನ್ನು ವಿರೋಧಿಸುತ್ತಾ ಮೌಢ್ಯತೆ–ಅಂಧ ಸಂಪ್ರದಾಯಗಳನ್ನು ತಿರಸ್ಕರಿಸುತ್ತಾ, ಮತಧರ್ಮಗಳ ಕೊಳಕುತನವನ್ನು ಬಯಲುಮಾಡುತ್ತಾ ಸೈದ್ಧಾಂತಿಕವಾಗಿ ಆಲೋಚಿಸಿ, ಸಂಘಟನಾತ್ಮಕವಾಗಿ ಹೋರಾಡಿ, ಸಮಾನತೆಗಾಗಿ ಹಾತೊರೆಯುವ ಸಾಹಿತಿಯು ದಲಿತಸಾಹಿತಿಯಾಗುತ್ತಾನೆ'[೭೦] ಇಂತಹ ಕ್ರಾಂತಿಕಾರಿ ಹೋರಾಟಗಾರ ಕುಮಾರ ಕಕ್ಕಯ್ಯ ಪೋಳ ಅವರಾಗಿದ್ದರು.

**iv) ಮಹಿಳಾ ಸಮಾನತೆ–ಲಿಂಗಭೇದದ ವಿರುದ್ಧ ಹೋರಾಟ :**

ಪ್ರಪಂಚದ ಜನಸಂಖ್ಯೆಯ ಅರ್ಧಭಾಗದಷ್ಟಿರುವ ಮಹಿಳೆಯು ಪ್ರಾಚೀನ ಕಾಲದಿಂದಲೂ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಅವಹೇಳನಕ್ಕೆ ಗುರಿಯಾಗುತ್ತಲೇ ಬಂದಿದ್ದಾಳೆ. ಭಾರತದ ಪ್ರಾಚೀನ ಇತಿಹಾಸದಲ್ಲಿ ಅವಳಿಗೆ ಒಂದು ಗೌರವದ ಸ್ಥಾನಮಾನವಿತ್ತೆಂದು ಹೇಳಲಾಗುತ್ತಿದೆ.. ವೇದಕಾಲದಲ್ಲಿ 'ಭಾರತೀಯ ಮಹಿಳೆ ಪುರುಷನಷ್ಟೇ ಸ್ಥಾನಮಾನಗಳನ್ನು ಬದುಕಿನ ಎಲ್ಲ ರಂಗಗಳಲ್ಲಿಯೂ ಪಡೆದಿದ್ದಳು. ಹೆಣ್ಣು ಹುಟ್ಟಿದರೆ ಆಗ ಯಾರೂ ಮೂಗು ಮುರಿಯುತ್ತಿರಲಿಲ್ಲ. ಹೆಣ್ಣು ಮಗುವಿಗೂ ಗಂಡು ಮಗುವಿಗೆ ಸಿಗುವಷ್ಟೇ ಸ್ವಾಗತ

---

೬೮. ವಿಚಾರಸಾಹಿತ್ಯ–ಅಸ್ಪೃಶ್ಯತೆ ಮತ್ತು ಸಮಾಜದ ಹೊಣೆಗಾರಿಕೆ–ಡಾ॥ ಸಿದ್ಧಲಿಂಗಯ್ಯ ಪು– ೧೧೦

೬೯. ಬಸವಣ್ಣನವರ ಜೀವನ –ಸಂದೇಶ : ಡಾ॥ ಸಿದ್ಧಯ್ಯ ಪುರಾಣಿಕ ಪು–೭೪

೭೦. ಸಂಕ್ರಮಣ ಸಾಹಿತ್ಯ–ದಲಿತ ಬಂಡಾಯ ನಿಲವುಗಳು : ಡಾ॥ ಬಸವರಾಜ ಸಬರದ ಪು–೧೭೫

ಸಿಗುತ್ತಿತ್ತು ಮಹಿಳೆಯ ವಿದ್ಯಾಭ್ಯಾಸವೆಂಬುದು ದೈನಂದಿನ ಬದುಕಿನ ಅಂಗವೇ ಆಗಿತ್ತು. ವಿದ್ಯಾಭ್ಯಾಸದೊಂದಿಗೆ ಉಪನಯನವೂ ಮುಖ್ಯಂಶವಾಗಿ ಕೂಡಿಕೊಂಡಿತ್ತು. ಗೃಹ್ಯ ಸೂತ್ರವೊಂದು ಮಹಿಳೆಯನ್ನು ಯಜ್ಞೋಪವೀತಿನೀ ಎಂದೇ ಸಂಬೋಧಿಸುತ್ತದೆ. ವೇದಗಳಲ್ಲಿ ಸುಮಾರು ೨೦೦ ಶ್ಲೋಕಗಳನ್ನು ಮಹಿಳೆಯರೇ ರಚಿಸಿದ್ದಾರೆ. ಇವರು ವೇದಾಂತ ಚರ್ಚೆಗಳಲ್ಲಿ ಕೂಡ ಭಾಗವಹಿಸುತ್ತಿದ್ದರು. ಋಷಿಗಳು ತಮ್ಮ ಅರ್ಧಾಂಗಿಯರನ್ನು ಬೌದ್ಧಿಕ ಸಾಧನೆಗಾಗಿ ತೊಡಗಿಸುವುದು ಅತ್ಯಂತ ಸಹಜವಾದ ಸಂಪ್ರದಾಯವಾಗಿತ್ತು'[೭೧]

'ಮಾತೃದೇವೋ ಭವ' ಎಂದು ಗೌರವ, ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ಎಂಬ ಹೊಗಳಿಕೆ ಎಲ್ಲವೂ ಮಹಿಳೆಗೆ ಅಭಿಮಾನದ ನುಡಿಗಳಾಗಿದ್ದವು. ಅದೇ ಮನು ಮಹಾಶಯನು–

ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ॥[೭೨]

ಅಂದರೆ–ಸ್ತ್ರೀಯನ್ನು ಬಾಲ್ಯದಲ್ಲಿ ತಂದೆಯು, ಯೌವನದಲ್ಲಿ ಗಂಡನು, ಮುಪ್ಪಿನಲ್ಲಿ ಮಕ್ಕಳು ರಕ್ಷಿಸುತ್ತಾರೆ. ಆದ್ದರಿಂದ ಸ್ತ್ರೀಗೆ ಸ್ವಾತಂತ್ರ್ಯದ ಅರ್ಹತೆಯಿಲ್ಲ. ಸ್ತ್ರೀಯು ಸ್ವಾತಂತ್ರ್ಯಕ್ಕೆ ಅನರ್ಹಳು ಎಂದರ್ಥ. ಇಲ್ಲಿ ಮನು ಮಹಾಶಯನ ಸ್ತ್ರೀವಿರೋಧಿ ನಿಲವು ವ್ಯಕ್ತವಾಗುತ್ತದೆ.

ಬಾಲಯಾ ಯುವತ್ಯಾ ವಾ ವೃದ್ಧಯಾ ವಾ ಪಿ ಯೋಷಿತಾ।
ನ ಸ್ವಾತಂತ್ರ್ಯೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವಪಿ॥[೭೩]

ಅಂದರೆ –ಹುಡುಗಿ ,ಯುವತಿ, ಮುದುಕಿ ಅಥವಾ ಹೆಂಗಸು ಮನೆಯಲ್ಲಿ ತನ್ನ ಯಜಮಾನನ್ನು ಕೇಳದೇ ಸ್ವತಂತ್ರವಾಗಿ ಯಾವ ಕೆಲಸವನ್ನು ಮಾಡಕೂಡದು.

ಸ್ಮೃತಿಗಳ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಯಾವುದೇ ಕೆಲಸ–ಕಾರ್ಯ ಮಾಡಲು ಸ್ವಾತಂತ್ರ್ಯವಿರಲಿಲ್ಲ ಎಂಬುದು ಇದರಿಂದ ತಿಳಿದು ಬರುತ್ತದೆ. ಈ ಕಾಲದಲ್ಲಿ ಸ್ತ್ರೀಯು ದಾನದ ವಸ್ತುವಾಗಿದ್ದಳು ಅವಳು ವಸ್ತ್ರದಾನ,ಅನ್ನದಾನ, ಹಿರಣ್ಯದಾನ, ಭೂದಾನ, ಗೋದಾನ ಮುಂತಾದ ದಾನಗಳ ರೀತಿಯಲ್ಲಿಯೇ 'ಕನ್ಯಾದಾನ'ಎಂಬಂತೆ ಪರಿಗಣಿಸಲ್ಪಟ್ಟಿದ್ದಳು. 'ದಾನದಿಂದ ಸ್ತ್ರೀಯು ಪತಿಯ ಸೊತ್ತಾಗುವಳು'[೭೪]

ಧಾರ್ಮಿಕವಾಗಿ " ಸ್ತ್ರೀಯನ್ನು ಬದುಕಿನ ಎಲ್ಲ ಹಂತಗಳಲ್ಲೂ ಪುರುಷನ ಅಧೀನವಾಗಿರಿಸಿ ಆಕೆಯ ಸ್ವತಂತ್ರ ಅಸ್ತಿತ್ವವನ್ನು, ಜೀವನೋಪಾಯವನ್ನು

---

೭೧. ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ –ಕಮಲಾದೇವಿ ಚಟ್ಟೋಪಾಧ್ಯಾಯ ಅನುಃ ವೈದೇಹಿ ಪು ೯.

೭೨. ಮನುಸ್ಮೃತಿ–ಚಕ್ರಕೋಡಿ ಈಶ್ವರ ಶಾಸ್ತ್ರಿ ಪು–೩೮೨ ಅಧ್ಯಾಯ–೯, ಶ್ಲೋಕ–೩.

೭೩. ಮನುಸ್ಮೃತಿ–ಚಕ್ರಕೋಡಿ ಈಶ್ವರ ಶಾಸ್ತ್ರಿ ಪು–೨೩೦ ಅ–೫ ಶ್ಲೋಕ–೧೪೭

೭೪. ಮನುಸ್ಮೃತಿ–ಚಕ್ರಕೋಡಿ ಈಶ್ವರ ಶಾಸ್ತ್ರಿ ಪು–೨೩೨ ಅ–೫ ಶ್ಲೋಕ ೧೫೨

ನಿರಾಕರಿಸಿದವು. ಧರ್ಮ ಅರ್ಥ ಕಾಮಗಳೆಂಬ ಪುರುಷಾರ್ಥಗಳ ಸಾಧನೆಗೆ, ಪುರುಷನ ಲೌಕಿಕ ಬದುಕಿನ ಅಗತ್ಯಗಳಿಗೆ ಪೂರಕವಾಗುವಂತೆ ಪರಮವಿಧೇಯತೆ, ಸೇವೆ, ತ್ಯಾಗ, ಸಹಿಷ್ಣುತೆಗಳಿಂದ ಆತನನ್ನು ಆಶ್ರಯಿಸಿ ಅನುಸರಿಸಿ ಬದುಕುವುದು ಸ್ತ್ರೀಯ ಬದುಕಿನ ಗುರಿಯೆಂದು ಅವು ಸಾರುತ್ತವೆ."[೭೫]

ವಿವಾಹ ಸಂದರ್ಭದಲ್ಲಿ ಸ್ತ್ರೀಯು ಪುರುಷನಿಗೆ ಧರ್ಮೇಚ, ಅರ್ಥೇಚ, ಕಾಮೇಚ ನಾತಿಚರಾಮಿ ಎಂದು ಹೇಳಿಸುವರೇ ಹೊರತು ಚತುರ್‌ವಿಧ ಪುರುಷಾರ್ಥಗಳಲ್ಲಿ ಕೊನೆಯದಾದ ಮೋಕ್ಷೇಚ' ಎಂಬುದನ್ನು ಹೇಳಿಸುವದಿಲ್ಲ. ಯಾಕೆಂದರೆ– 'ಹೆಂಡತಿಗೆ ಗಂಡನ ಸೇವೆಯಲ್ಲದೇ ಪೂಜೆ, ಹೋಮ, ಯಾಗ, ಉಪವಾಸ, ಜಪ ಒಂದೂ ಬೇಡ'[೭೬] ಒಟ್ಟಿನಲ್ಲಿ ಸ್ತ್ರೀಯು (ನಾಲ್ಕೂ ವರ್ಣಗಳ ಸ್ತ್ರೀಯರು) ಚಾತುರ್‌ವರ್ಣ ಧರ್ಮ–ಸಮಾಜ ವ್ಯವಸ್ಥೆಯಲ್ಲಿ ದಲಿತ–ಪಂಚಮರಂತೆಯೇ ಶೋಷಿತಳು. ದಲಿತರು ಊರ ಹೊರಗಿದ್ದು ಸವರ್ಣೀಯರ ಗುಲಾಮರಾಗಿ ದುಡಿದರೆ, ಎಲ್ಲ ವರ್ಣಗಳ ಸ್ತ್ರೀಯರು ತಮ್ಮ ತಮ್ಮ ಗೃಹಗಳಲ್ಲಿದ್ದು ತಮ್ಮ ತಮ್ಮ ಗಂಡಂದಿರ ಗುಲಾಮರಾಗಿ ದುಡಿಯುತ್ತಾ ಶೋಷಣೆಗೆ ಒಳಗಾದರು.

ಸ್ತ್ರೀಯು ಕೇವಲ ಭೋಗದ ವಸ್ತು, ಪುರುಷನ ಸಂತಾನ ಹೆರುವ ಯಂತ್ರ, ಆವಳಿಗೆ ಅಡಿಗೆಮನೆ–ಹೆರಿಗೆಮನೆಗಳು ಬಂದೀಖಾನೆಗಳಾದವು. ಈ ಅಡಿಗೆಮನೆ–ಹೆರಿಗೆಮನೆಗಳು ಆಚೆಯೂ ಒಂದು ಮರ್ತ್ಯಲೋಕದ 'ಮಹಾಮನೆ' ಯೊಂದಿದೆ ಎಂದು ತೋರಿದವರು ಬಸವಾದಿ ಶರಣರು ಮಾತ್ರ.

"ಅವಳು ಪುರುಷನಿಗೆ ಸಮಾನವೆಂದು ಸಾರಿ, ಧಾರ್ಮಿಕವೇ ಆಗಲಿ, ಸಾಮಾಜಿಕವೇ ಆಗಲಿ, ಎಲ್ಲ ಸ್ಥಾನಮಾನಗಳಿಗೂ ಅವಳು ಅರ್ಹಳೆಂದು ಡಂಗುರಿಸಿ, ಸ್ವಾತಂತ್ರ್ಯವನ್ನು ಘೋಷಿಸಿದ ಪ್ರಥಮ ಕೀರ್ತಿ ಪ್ರಾಯಶ: ಇಡೀ ಜಗತ್ತಿನಲ್ಲಿಯೇ ಬಸವಣ್ಣನವರಿಗೆ ಸಲ್ಲಬೇಕಾಗಿದೆ."[೭೭]

ಮೊಟ್ಟ ಮೊದಲ ಮಹಿಳಾ ವಿಮೋಚನೆ ಕಾಣಿಸುವುದು ಹನ್ನೆರಡನೆಯ ಶತಮಾನದ ವಚನ ಚಳವಳಿಯ ಸಂದರ್ಭದಲ್ಲಿ ಎಂದು ಹೇಳಬಹುದು, ಬಸವಣ್ಣನವರ ವಿಚಾರಧಾರೆಯ ಬೆಳಕಿನಲಿಯೇ ಅನೇಕ ಮಹಿಳೆಯರು ವಚನಕಾರ್ತಿಯರಾಗಿ ಬೆಳಗಿದರು. ಯಾವ ಧರ್ಮದಿಂದ ಮಹಿಳೆ ಅಸ್ಪೃಶ್ಯಳಾಗಿದ್ದಳೋ, ಬಸವಣ್ಣನವರ ಕಾಲಕ್ಕೆ ಅದೇ ಮಹಿಳೆ ಧರ್ಮಕ್ಕೆ ಅನಿವಾರ್ಯವಾದಳು."[೭೮]

ಸಾವಿರಾರು ವರುಷಗಳ ಹಿಂದೆಯೇ ಮಾತೃದೇವೋ ಭವ ಎಂದು ಕರೆದವರು, ಎಲ್ಲಿ ನಾರಿಯರು ಪೂಜಿಸಲ್ಪಡುತ್ತಾರೋ ಅಲ್ಲಿ ದೇವತೆಗಳು ವಾಸ ಮಾಡುತ್ತಾರೆ

---

೭೫. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ – ಸಂ. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ. ಪು–೩೨೧. (ಬಿ. ಎನ್. ಸುಮಿತ್ರಾಬಾಯಿ ಅವರ ಲೇಖನ)

೭೬. ಮನುಸ್ಮೃತಿ – ಅಧ್ಯಾಯ ೫, ಶ್ಲೋಕ – ೧೫೫.

೭೭. ಬಸವಸಂಹಿತೆ – ಡಾ॥ ದೇ. ಜವರೇಗೌಡ, ಪು–೪೫.

೭೮. ವಚನ ಚಳವಳಿ – ಡಾ॥ ಬಸವರಾಜ ಸಬರದ ಪು– ೧೫೮.

ಎಂದು ಸಾರಿದವರು, ವಾಸ್ತವಿಕ ಆಚರಣೆಯಲ್ಲಿ ಅವಳಿಂದ ಧರ್ಮ–ದೇವರು, ಅಧ್ಯಾತ್ಮ–ಮೋಕ್ಷ, ಪೂಜೆ–ಪುನಸ್ಕಾರಗಳನ್ನು ಕಿತ್ತುಕೊಂಡು ಅವಳನ್ನು ಕೇವಲ ತಮ್ಮ ಕಾಮದ ಬೊಂಬೆಯಾಗಿಸಿಕೊಂಡು, ತಮ್ಮ ಮಕ್ಕಳನ್ನು ಹೆರುವ ಯಂತ್ರವಾಗಿಸಿಕೊಂಡು, ತಮ್ಮ ಮನೆಯಲ್ಲಿ ಗಾಣದೆತ್ತಿನಂತೆ ದುಡಿಯುವ ದಾಸಿಯನ್ನಾಗಿಸಿಕೊಂಡರು. ಸತಿಯು ಪತಿಯ ದಾಸಿ, ಭೋಗವಸ್ತು ಎಂಬುದನ್ನು ಜಾರಿಗೆ ತಂದರು. ಇಂತಹ ಅಮಾನುಷವಾದ ದೌರ್ಜನ್ಯ, ದಬ್ಬಾಳಿಕೆ, ಶೋಷಣೆಯನ್ನು ತಾನು ಹುಟ್ಟಿದ ಸಮಾಜ–ಧರ್ಮದ ಪುರೋಹಿತ–ಪಂಡಿತರ ಸ್ವಾರ್ಥವನ್ನು ಮನಗಂಡ ಬಸವಣ್ಣನವರು 'ಕರ್ಮಲತೆಯಂತಿರ್ದ ಜನ್ನಿವಾರಮಂ' ಕಿತ್ತು ಬಿಸುಟು ಆ ಕರ್ಮಠ ಧರ್ಮ–ಸಮಾಜದಿಂದ ಸಿಡಿದು ಹೊರಬಂದರು.

> ಏನಯ್ಯಾ ವಿಪ್ರರು ನುಡಿದಂತೆ ನಡೆಯರು,
> ಇದೆಂತಯ್ಯಾ ?
> ತಮಗೊಂದು ಬಟ್ಟೆ, ಶಾಸ್ತ್ರಕೊಂದು ಬಟ್ಟೆ !
> ಕೂಡಲಸಂಗಮದೇವಯ್ಯಾ, ಹೊಲೆಯರ ಬಸುರಲ್ಲಿ
> ವಿಪ್ರರು ಹುಟ್ಟಿ ಗೋಮಾಂಸ ತಿಂಬುವರೆಂಬುದಕ್ಕೆ
> ಇದೇ ದೃಷ್ಟ.[೭೯]

ಎಂದು ಉಗ್ರವಾಗಿ ವಿಪ್ರರ ನುಡಿ – ನಡೆಗಳನ್ನು ಖಂಡಿಸಿದರು. ಅವರ ಹೋಮ – ಹವನ, ಯಜ್ಞ – ಯಾಗ, ಪ್ರಾಣಿಬಲಿ, ಕನ್ಯಾಬಲಿ, ನರಬಲಿ ಮುಂತಾದವನ್ನು ಪ್ರತಿಭಟಿಸಿದರು.

ವರ್ಣಭೇದ, ವರ್ಗಭೇದ, ಆಶ್ರಮಭೇದ, ಲಿಂಗಭೇದಗಳನ್ನು ತೊಡೆದು ಹಾಕಿ ಸ್ತ್ರೀ – ಪುರುಷರಿಬ್ಬರೂ ಸರ್ವರಂಗಗಳಲ್ಲಿ ಮುಕ್ತವಾಗಿ ಕ್ರಿಯಾಶೀಲರಾಗಿ ಕಾಯಕ ಮಾಡುತ್ತಾ ವ್ಯಷ್ಟಿ – ಸಮಷ್ಟಿಯ ಕಲ್ಯಾಣಕ್ಕೆ ಶ್ರಮಿಸಲು ಅವಕಾಶ ಕಲ್ಪಿಸಿದರು. ಸನಾತನ ವರ್ಣಾಶ್ರಮ ಸಮಾಜವನ್ನು ತಿರಸ್ಕರಿಸಿ, ವಿನೂತನವಾದ ಸಮತೆ – ಸ್ವಾತಂತ್ರ್ಯ–ಬಂಧುತ್ವದ ಲಿಂಗಾಯತ ಧರ್ಮ – ಸಮಾಜವನ್ನು ರೂಪಿಸಿದರು. 'ಅನುಭವ ಮಂಟಪ'ವೆಂಬ ಸಮಾಜೋ –ಧಾರ್ಮಿಕ ಸಂಸ್ಥೆಯೊಂದನ್ನು ಹುಟ್ಟು ಹಾಕಿ ಸರ್ವರಿಗೂ ಮುಕ್ತ ಪ್ರವೇಶಕ್ಕೆ ಅನುವು ಮಾಡಿ, ಚರ್ಚೆ – ಚಿಂತನೆ – ಅನುಭಾವಕ್ಕೆ ಅವಕಾಶವಿತ್ತರು.

ಇದರ ಪರಿಣಾಮವಾಗಿ ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆ, ಮುಕ್ತಾಯಕ್ಕ, ಅಕ್ಕಮಹಾದೇವಿ, ಹಡಪದ ಲಿಂಗಮ್ಮ, ಆಯ್ದಕ್ಕಿ ಲಕ್ಕಮ್ಮ, ಕಲ್ಯಾಣಮ್ಮ, ಸೂಳೆ ಸಂಕವ್ವೆ, ಸತ್ಯಕ್ಕ, ಅಕ್ಕಮ್ಮ, ಕಾಳವ್ವೆ, ಪಿಟ್ಟವ್ವೆ, ಮಸಣಮ್ಮ, ರಾಯಮ್ಮ, ಬೊಂತಾದೇವಿ, ಮುಂತಾದ ೩೬, ಕ್ಕೂ ಹೆಚ್ಚು ಹೆಣ್ಣುಮಕ್ಕಳು ವಚನಕಾರ್ತಿಯರಾಗಿ ಸ್ವಾನುಭಾವದ ವಚನಗಳನ್ನು ರಚಿಸಿದರು. ಸಾವಿರಾರು ವರುಷಗಳಿಂದ ಸಾಗಿಬಂದಿದ್ದ ಪಾರತಂತ್ರ್ಯದಿಂದ ಹೊರಬಂದು ಸ್ವಾತಂತ್ರ್ಯದ ಗಾಳಿಯನ್ನು ಉಸಿರಾಡಿದರು.

೭೯. ಬಸವಣ್ಣನವರ ವಚನ ಸಂಪುಟ – ಸಂ॥ ಡಾ. ಎಂ.ಎಂ. ಕಲಬುರ್ಗಿ ವ– ೫೭೫.

ಕರ್ಮಠ ವಿಪ್ರ – ಪುರೋಹಿತಶಾಹಿಗಳ ಕ್ರೂರ ಧರ್ಮಶಾಸನ – ಕಾನೂನು – ಶಾಸ್ತ್ರಗಳನ್ನು ಖಂಡಿಸಿದರು.

> ವೇದ ಶಾಸ್ತ್ರ ಆಗಮ ಪುರಾಣಗಳೆಲ್ಲವು
> ಕೊಟ್ಟಣವ ಕುಟ್ಟಿದ ನುಚ್ಚು ತೌಡು ಕಾಣಿಭೋ
> ಇವ ಕುಟ್ಟಲೇಕೆ ಕುಸುಕಲೇಕೆ ?
> ಅತ್ತಲಿತ್ತ ಹರಿವ ಮನದ ಶಿರವನರಿದಡೆ
> ಬಚ್ಚ ಬರಿಯ ಬಯಲು ಚೆನ್ನಮಲ್ಲಿಕಾರ್ಜುನ.[೮೦]

ಎಂದು ಅಕ್ಕಮಹಾದೇವಿಯು ಸಂಪ್ರದಾಯವಾದಿಗಳನ್ನು ಪ್ರಶ್ನಿಸಿದಳು. ಹೆಣ್ಣು – ಗಂಡು ಎಂಬ ಮೇಲು – ಕೀಳು ಭೇದ ಕಲ್ಪಿಸಿದ್ದ ಪುರುಷರ ಸ್ವಾರ್ಥಕ್ಕೆ ತಿರುಗೇಟು ನೀಡಿದರು ಶರಣೆಯರು.

ವಚನಕಾರ್ತಿ ಸತ್ಯಕ್ಕಳು–

> ಮೊಲೆ ಮುಡಿ ಇದ್ದುದೆ ಹೆಣ್ಣೆಂದು ಪ್ರಮಾಣಿಸಲಿಲ್ಲ.
> ಕಾಸೆ ಮೀಸೆ ಕಠಾರವಿದ್ದುದೆ ಗಂಡೆಂದು ಪ್ರಮಾಣಿಸಲಿಲ್ಲ.
> ಅದು ಜಗದ ಹಾಹೆ, ಬಲ್ಲವರ ನೀತಿಯಲ್ಲ,
> ಏತರ ಹಣ್ಣಾದರೂ ಮಧುರವೇ ಕಾರಣ,
> ಅಂದವಿಲ್ಲದ ಕುಸುಮಕ್ಕೆ ವಾಸನೆಯೆ ಕಾರಣ,
> ಇದರಂದವ ನೀನೇ ಬಲ್ಲೆ ಶಂಭು ಜಕ್ಕೇಶ್ವರಾ.[೮೧]

ಎಂಬ ವಚನದಲ್ಲಿ ಹೆಣ್ಣು – ಗಂಡು ಎಂದು ಭೇಧಭಾವ ಎಣಿಸುವುದು ಜಗದ ಅಜ್ಞಾನಿಗಳ ರೀತಿಯೇ ಹೊರತು, ಜ್ಞಾನಿಗಳ ನೀತಿಯಲ್ಲ ಎಂದು ಬುದ್ಧಿವಾದ ಹೇಳುತ್ತಾಳೆ.

> ಮೊಲೆ ಮುಡಿ ಬಂದಡೆ ಹೆಣ್ಣೆಂಬರು.
> ಮೀಸೆ ಕಾಸೆ ಬಂದಡೆ ಗಂಡೆಂಬರು
> ಈ ಉಭಯದ ಜ್ಞಾನ
> ಹೆಣ್ಣೋ ಗಂಡೋ ನಾಸ್ತಿನಾಥಾ?[೮೨]

ಎಂದು ಶರಣೆ ಗೊಗ್ಗವ್ವೆಯು ಪಂಡಿತೋತ್ತಮರಿಗೆ, ವಿಪ್ರೋತ್ತಮರಿಗೆ ಪ್ರಶ್ನಿಸುತ್ತಾಳೆ.

ಹೆಣ್ಣು ಮಾಯೆ, ಹೆಣ್ಣು ಪುರುಷನ ಧಾರ್ಮಿಕ ಆಧ್ಯಾತ್ಮಿಕ ಸಾಧನೆಗೆ ಅಡ್ಡಿಯಾಗಿದ್ದಾಳೆ ಎಂದು ಭಾವ ಭ್ರಮಿತರಾಗಿದ್ದ ಕರ್ಮಠ ಸಾಧು – ಸನ್ಯಾಸಿಗಳಿಗೆ ಅಕ್ಕಮಹಾದೇವಿಯು ವಾಸ್ತವಿಕ ಸ್ಥಿತಿ – ಸುಜ್ಞಾನವನ್ನು ಉಪದೇಶಿಸುತ್ತಾಳೆ. –

---

೮೦. ಶಿವಶರಣೆಯರ ವಚನ ಸಂಪುಟ – ಸಂ॥ ಡಾ. ವೀರಣ್ಣ. ರಾಜೂರ ವ – ೩೭೨.
೮೧. ಶಿವಶರಣೆಯರ ವಚನ ಸಂಪುಟ – ಸಂ॥ ಡಾ॥ ವೀರಣ್ಣ ರಾಜೂರ ವ– ೧೨೨೮.
೮೨. ಶಿವಶರಣೆಯರ ವಚನ ಸಂಪುಟ – ಸಂ॥ ಡಾ॥ ವೀರಣ್ಣ ರಾಜೂರ ವ – ೭೭೯.

ಪುರುಷನ ಮುಂದೆ ಮಾಯೆ
ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು
ಸ್ತ್ರೀಯ ಮುಂದೆ ಮಾಯೆ
ಪುರುಷನೆಂಬ ಅಭಿಮಾನವಾಗಿ ಕಾಡುವುದು.
ಲೋಕವೆಂಬ ಮಾಯೆಗೆ ಶರಣ ಚಾರಿತ್ರ್ಯ
ಮರುಳಾಗಿ ತೋರುವುದು
ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ
ಮಾಯೆಯಿಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ.[೮೩]

ಈ ರೀತಿಯಾಗಿ ಶರಣೆಯರು ಹಾಗೂ ಶರಣರು ಮಾನವನ ಮನದ ಮುಂದಣ ಆಸೆಯೇ ಮಾಯೆ ಎಂದು ತಿಳಿಸಿದರು.

ಆಯ್ದಕ್ಕಿ ಲಕ್ಕಮ್ಮ ತನ್ನ ಗಂಡ ಆಸೆಗೆ ಒಳಗಾಗಿ ಒಮ್ಮನ ಮೀರಿ ಇಮ್ಮನ ಅಕ್ಕಿ ತಂದಾಗ, ಬುದ್ಧಿ ಹೇಳಿ ಹೆಚ್ಚಿನದನ್ನು ತಿರುಗಿ ಅಲ್ಲಿಗೆ ಹೋಗಿ ಸುರಿದು ಬರಲು ತಿಳಿಸಿದ್ದು, ಮುಕ್ತಾಯಕ್ಕ ಅಲ್ಲಮ ಪ್ರಭುವಿನ ಜೊತೆಗೆ ಯೋಗದ ಆತ್ಯಂತಿಕ ಅವಸ್ಥೆಯ ಬಗ್ಗೆ ಚರ್ಚಿಸಿದ್ದು, ನೀಲಾಂಬಿಕೆ ಬಸವಣ್ಣನವರೊಂದಿಗೆ 'ವಿಚಾರ ಪತ್ನಿ' ಯಾಗಿ ಚಿಂತನ ನಡೆಸಿದ್ದು ನಮಗೆ ತಿಳಿದು ಬರುತ್ತದೆ.

ಸನಾತನ ಧರ್ಮ – ಸಮಾಜ ವ್ಯವಸ್ಥೆಯ ಕಾಲದಲ್ಲಿ – "ಹೆಣ್ಣು ಧಾರ್ಮಿಕ ನಾಯಕರಿಗೆ ಅಷ್ಟು ಭೀಕರಳಾಗಿ, ಭಯಾನಕಳಾಗಿ ಕಾಣಿಸಿದ್ದು ಏಕೆ ? ಎನ್ನುವುದು ಅತಿ ಮುಖ್ಯ ಪ್ರಶ್ನೆ. ಸ್ತ್ರೀಯರ ಬಗ್ಗೆ ಅಂದಿನ ವೈದಿಕರಿಗಿದ್ದ ಭೀತಿ ನೇರವಾದುದಲ್ಲ, ಅದು ಪರೋಕ್ಷವಾಗಿರುವುದರಿಂದಲೇ ಬರಹರೂಪಕ್ಕೆ ಇಳಿದಿದೆ. ತುಂಬಾ ಸಶಕ್ತವಾದ ಬುಡವನ್ನೇ ಅಲುಗಾಡಿಸಬಲ್ಲ ಭೀತಿ ಇದಾದುದರಿಂದ ಬಹುಕಾಲದ ತನಕ ಆಳಲು ಶಕ್ತವಾಗುವಂತಹ ಪ್ರತಿಭೀತಿಯ ಸೃಷ್ಟಿಯೇ ಮನುಸ್ಮೃತಿ ರೂಪದಲ್ಲಿ ಬೆಳೆಯಿತು"[೮೪]

ವ್ಯಕ್ತಿ – ಸಮಾಜ – ರಾಷ್ಟ್ರದ ಬೆಳವಣಿಗೆಯಲ್ಲಿ ಸ್ತ್ರೀ – ಪುರುಷರಿಬ್ಬರೂ ಸಮಾನರು. ಕುಟುಂಬ ಜೀವನದಲ್ಲಿ ಸತಿ– ಪತಿಗಳಿಬ್ಬರೂ ಗಾಡಿಯ ಎರಡು ಗಾಲಿಗಳಿದ್ದಂತೆ. ಎರಡೂ ಸಮಾನ ಮತ್ತು ಭದ್ರವಾಗಿದ್ದರೆ ಮಾತ್ರ ಬಾಳಿನ ಬಂಡಿಯು ಮುಂದೆ ಸಾಗುತ್ತದೆ. 'ಹೊಸ ಅಲೆಗಳು ಸಾಕಷ್ಟು ಮೊರೆಯುತ್ತಿರುವ ಈ ಕಾಲದಲ್ಲಿ ಇಂಥವುಗಳನ್ನು ಪ್ರಶ್ನಿಸುವ ಛಾತಿ ಹೆಣ್ಣುಗಳಲ್ಲಿ ಬೆಳೆಯುತ್ತಿದೆ. ಸಮಾನತೆಯವಾದಕ್ಕೆ ಇರುವ ಸಹಜ ಪರಿಮಿತಿಯನ್ನು ದಾಟಿಯೂ ಇಂಥ ಪ್ರಶ್ನೆಗಳು ಹುಟ್ಟುವುದು ಸುರಕ್ಷಿತವಲ್ಲ. ಎಂದರೆ ಗಂಡಿಗಿಂತ ಹೆಣ್ಣು ಕಡಿಮೆಯಲ್ಲವೆಂದು ಹೇಳುವುದು ಹೆಣ್ಣು ತ್ರಿವಿಕ್ರಮೆಯಾಗಲು ಪ್ರಯತ್ನಿಸಿದಂತೆ. ಇದರರ್ಥ ಹೆಣ್ಣು ದುರ್ಬಲಳು ಎಂದಲ್ಲ. ಹೆಚ್ಚು – ಕಡಿಮೆ ಎನ್ನುವ ಕಲ್ಪನೆಯೇ ಬುಡರಹಿತವಾದುದ್ದಾಗಿದೆ. ಇಲ್ಲಿ

೮೩. ಶಿವಶರಣೆಯರ ವಚನ ಸಂಪುಟ – ಸಂ. ಡಾ॥ ವೀರಣ್ಣ ರಾಜೂರ ವ – ೨೮೨.
೮೪. ಸ್ತ್ರೀವಾದ ಮತ್ತು ಭಾರತೀಯತೆ –ಧರಿಣೀದೇವಿ ಮಾಲಗತ್ತಿ ಪು. ೧೮–೧೯.

ಯಾರೂ ಹೆಚ್ಚಲ್ಲ, ಯಾರೂ ಕಡಿಮೆಯಲ್ಲ. ಹೆಣ್ಣು – ಗಂಡು ಒಂದೇ ನಾಣ್ಯದ ಎರಡು ಮುಖಗಳು. ಯಾವುದೇ ಒಂದು ಮುಖ ಇಲ್ಲವಾದರೂ ಆ ನಾಣ್ಯ ಖೊಟ್ಟಿಯಾಗುತ್ತದೆ."[೮೫]

ಈ ಹಿನ್ನೆಲೆಯಲ್ಲಿ ಕುಮಾರ ಕಕ್ಕಯ್ಯನ ವಚನಗಳು ತುಂಬಾ ವಿಚಾರಪೂರ್ಣ ಹಾಗೂ ಚಿಂತನಯುತವಾಗಿವೆ.

ಹೆಣ್ಣು ಮಾನವ ಜೀವಿ, ಗಂಡೂ ಮಾನವ ಜೀವಿ
ಸಂಭೋಗದಲಿ ಸರಿಸಮಾನ ಹೆಣ್ಣು – ಗಂಡು
ಗಂಡಿನ ಕಾಮಕ್ಕೆ ಪುರುಷಾರ್ಥವೆಂದು ಪುರಸ್ಕರಿಸುವರು
ಹೆಣ್ಣಿನ ಕಾಮಕ್ಕೆ ಹಾದರವೆಂದು ಬಹಿಷ್ಕರಿಸುವರು
ಅಪರಾಧಮಾಡುವದು ಗಂಡು, ಶಿಕ್ಷೆ ಅನುಭವಿಸುವದು ಹೆಣ್ಣು
ತೋಳಗಳ ಮುಂದೆ ಕುರಿಗಳದೇ ತಪ್ಪೆಂದ
ಕುಮಾರ ಕಕ್ಕಯ್ಯ.[೮೬]

ಈ ಜಗತ್ತಿನಲ್ಲಿ ಹೆಣ್ಣು ಗಂಡು ಇಬ್ಬರೂ ಮಾನವ ಜೀವಿಗಳೇ. ಪುರುಷಾರ್ಥಗಳಲ್ಲಿ ಕಾಮವೂ ಒಂದು. ಇದನ್ನು ಭೋಗಿಸುವ ಹಕ್ಕು ಇಬ್ಬರಿಗೂ ಸಮವಾಗಿದೆ. ಆದರೆ ಪುರುಷ ತನ್ನ ದೌರ್ಜನ್ಯದಿಂದ, ದೈಹಿಕ ಬಲದಿಂದ ಸ್ತ್ರೀಯನ್ನು ಬಲಾತ್ಕರಿಸುತ್ತಲೇ ಬಂದಿದ್ದಾನೆ. ಆತ ವ್ಯಭಿಚಾರ ಮಾಡಿದರೆ 'ಆತನೇನು ಗಂಡಸು, ಹತ್ತು ಹೆಣ್ಣುಗಳನ್ನು ಆಳುತ್ತಾನೆ ಎಂದು ಪುರುಷ ಪರ ಧ್ವನಿ ಎತ್ತುವವರು, ಅದೇ ಕಾರ್ಯವನ್ನು ಹೆಣ್ಣು ಮಾಡಿದರೆ, ಅವಳು ಜೀವನ ಪರ್ಯಂತರ ಹಾದರಗಿತ್ತಿ ಎಂದು ಪಟ್ಟ ಪಡೆಯಬೇಕಾಗುತ್ತದೆ. ಇಲ್ಲಿ ವ್ಯಭಿಚಾರ ಗಂಡಸು ಮಾಡಿದರೂ ಶಿಕ್ಷೆ ಮಾತ್ರ ಅನುಭವಿಸುವವಳು ಹೆಣ್ಣು ಮಾತ್ರ. ತೋಳಗಳ ಸಾಮ್ರಾಜ್ಯದಲ್ಲಿ ಕುರಿಗಳದೇ ತಪ್ಪು ಎಂಬಂತೆ ಸಮಾಜದಲ್ಲಿ ಕ್ರೂರ ಶಾಸನಗಳನ್ನು ಜಾರಿಗೆ ತಂದಿರುವುದನ್ನು ಕಾಣುತ್ತೇವೆ.

ಸವರ್ಣೀಯರು ಶೂದ್ರ ಮತ್ತು ದಲಿತರ ಹೆಣ್ಣು ಮಕ್ಕಳ ಮೇಲೆ ನಿರಂತರ ಅತ್ಯಾಚಾರ ಮಾಡುತ್ತ ಬಂದಿರುವದನ್ನು ಕಾಣುತ್ತೇವೆ. ಇದನ್ನು ಕಂಡು ಮನನೊಂದ ಕುಮಾರ ಕಕಯ್ಯನವರು ಮನುಸ್ಮೃತಿ ಮುಂತಾದ ಶಾಸ್ತ್ರ ಗ್ರಂಥಗಳನ್ನು ವಿಡಂಬಿಸುತ್ತಾರೆ–

ಕನ್ಯಾಂ ಭಜಂತೀ ಮುತ್ಕೃಷ್ಟಂ ಕಿಂಚದಪಿ ದಾಪಯೇತ್।
ಉತ್ತಮಾಂ ಸೇವಾ ಮಾನಸ್ತು ಜಘನ್ಯೋ ವಧಮರ್ಹತಿ॥
ಸವರ್ಣೀ ಶೂದ್ರಳನ್ನು ಭೋಗಿಸಿದರೆ ಏನೂ ದಂಡನೆಯಿಲ್ಲ.

---

೮೫. ಸ್ತ್ರೀ ವಾದ ಮತ್ತು ಭಾರತೀಯತೆ –ಧರಿಣೀದೇವಿ ಮಾಲಗತ್ತಿ ಪು–೮೮
೮೬. ಕುಮಾರ ಕಕ್ಕಯ್ಯನ ವಚನಗಳು –ಪು–೫೯ ವ –೨೨೮

ಶೂದ್ರ ಸವರ್ಣೀಯಳನ್ನು ಭೋಗಿಸಿದರೆ ಮರಣವೇ ದಂಡನೆಯಿ
ಸವರ್ಣೀಯರು ಶೂದ್ರರ ಹೆಣ್ಣಿಗಾಗಿ ಕೊಲೆಗೈದರೂ ಸುಮ್ಮನಿದ್ದು
ಶೂದ್ರರು ಅನ್ಯಾಯ ವಿರೋಧಿಸಿದರೆ ಜೀವಂತ ಸುಡುವದು
ಸವರ್ಣೀಯರಿಗೆ ಸ್ಮೃತಿ ಶಾಸ್ತ್ರಗಳು ಕೊಟ್ಟ ಧಾರ್ಮಿಕ ಹಕ್ಕೆಂದ
ಕುಮಾರ ಕಕ್ಕಯ್ಯ.[೮೭]

ಚಾತುರ್ವರ್ಣ ಧರ್ಮ–ಸಮಾಜವು ಸ್ತ್ರೀಕುಲಕ್ಕೆ ಎಂತಹ ಅನ್ಯಾಯ ಮಾಡಿದೆ ಎಂಬುದನ್ನು ಕಟುವಾಗಿ ತಿಳಿಸುತ್ತಾರೆ.

ಹೆಣ್ಣು ವಿಧವೆಯಾದಾಗ ತಲೆ
ಬೋಳಿಸಲೇ ಬೇಕಿಲ್ಲ, ಅದಕ್ಕೆ ಕಾರಣ ಸಮಾಜ.
ಹೆಣ್ಣು ಗಂಡಿಗಿಂತ ಕನಿಷ್ಠ
ಎನ್ನಲೇ ಬೇಕಿಲ್ಲ, ಅದಕ್ಕೆ ಕಾರಣ ಧರ್ಮ.
ಒಬ್ಬ ಇನ್ನೊಬ್ಬನಿಗೆ ಕೀಳಾಗಿ
ಭಾವಿಸಲೇ ಬೇಕಿಲ್ಲ, ಅದಕ್ಕೆ ಕಾರಣ ಜಾತಿ.
ಚಾತುರ್ವರ್ಣ ಸ್ತ್ರೀ ಕುಲಕ್ಕೆ
ದೀನದಲಿತರಿಗೆ ಬಡಕೊಂಡ ಭೂತವೆಂದ
ಕುಮಾರ ಕಕ್ಕಯ್ಯ[೮೮]

ಸ್ತ್ರೀಯರು ತಮ್ಮ ಪತಿ ನಿಧನವಾದಾಗ ವಿಧವೆ ಎನ್ನಿಸಿಕೊಳ್ಳುವರು. ವಿಧವೆಗೆ ಸಾಮಾಜಿಕವಾಗಿ ನೂರೆಂಟು ಕಟ್ಟುಪಾಡುಗಳು. ಅವಳ ತಲೆ ಬೋಳಿಸುವದು, ಕೈಬಳೆ ಒಡೆದು ಹಾಕುವದು, ಕುಂಕಮ ಅಳಿಸುವುದು, ಮಂಗಳಸೂತ್ರ ಹರಿದು ತೆಗೆಯುವುದು, ಅವಳು ಶಾಶ್ವತವಾಗಿ ವಿಧವಾಪಟ್ಟ ಪಡೆದುಕೊಂಡು ದು:ಖ ಅನುಭವಿಸುವುದು, ಇದಕ್ಕೆಲ್ಲ ಕಾರಣ ಚಾತುರ್ವರ್ಣ ಸಮಾಜದ ಕಟ್ಟಳೆಗಳು. ಅದೇ ಗಂಡಸು ತನ್ನ ಪತ್ನಿ ನಿಧನವಾದರೆ ವಿಧುರ ಎನಿಸಿಕೊಂಡರೂ ಮರುಮದುವೆಯಾಗುವುದು. ಗಂಡಿಗೊಂದು ನೀತಿ– ಹೆಣ್ಣಿಗೊಂದು ನೀತಿ ಇದು ಪುರೋಹಿತಶಾಹಿಗಳ ಹುನ್ನಾರವಾಗಿದೆ. ಗಂಡಿನ ದಬ್ಬಾಳಿಕೆಯನ್ನು ಕುರಿತು ಕುಮಾರಕಕ್ಕಯ್ಯ ಹೇಳುತ್ತಾರೆ–

ಗಂಡ ಹೆಂಡತಿಯನ್ನು ಬಿಟ್ಟರೆ ಕ್ಷಮ್ಯ
ಹೆಂಡತಿ ಗಂಡನನ್ನು ಬಿಟ್ಟರೆ ಅಕ್ಷಮ್ಯ
ಗಂಡ ಸತ್ತರೆ ಹೆಂಡತಿ ಆಗುವಳು ವಿಧವೆ
ಹೆಂಡತಿ ಸತ್ತರೆ ಗಂಡ  ಆಗುವನು ಮರು ಮದುವೆ

---

೮೭. ಕುಮಾರ ಕಕ್ಕಯ್ಯನ ವಚಣಗಳು. ಪು–೨೪೦ ವ– ೯೨೪
೮೮. ಕುಮಾರ ಕಕ್ಕಯ್ಯನ ವಚಣಗಳು ಪು. ೧೯೦ ವ– ೭೩೪

ಹೆಣ್ಣಿನ ಮೇಲೆ ಗಂಡು ಮಾಡುವ ದಬ್ಬಾಳಿಕೆ
ಅಮಾನುಷವೆಂದ ಕುಮಾರ ಕಕ್ಕಯ್ಯ[೮೯]

ಇಂತಹ ಅಮಾನುಷ ದಬ್ಬಾಳಿಕೆ ಇಷ್ಟಕ್ಕೆ ನಿಲ್ಲದೇ, ಹೆಣ್ಣನ್ನು ಕೈದಿಯಂತೆ ಮನೆಗಳಲ್ಲಿ ನಾಲ್ಕು ಗೋಡೆಗಳ ನಡುವೆ ಗೋಷಾದಲ್ಲಿಡುವುದು ಇನ್ನೂ ದುರಂತವಾಗಿದೆ.

ಕೊರಮನ ಕೋಡಗವು ಒಂದು ಕೈದಿಯಾದರೆ
ಹಾವಾಡಿಗನ ಸರ್ಪವೂ ಒಂದು ಕೈದಿಯೇ.
ಪಂಜರದ ಗಿಳಿಯೊಂದು ಕೈದಿಯಾದರೆ
ಬೋನಿನ ಹುಲಿಯೂ ಒಂದು ಕೈದಿಯೇ.
ಇವೆಲ್ಲಕ್ಕೂ ಮೀರಿ ಗೋಷಾದ ಹೆಣ್ಣೊಂದು
ಹೆಚ್ಚಿನ ಕೈದಿಯೆಂದ ಕುಮಾರ ಕಕ್ಕಯ್ಯ[೯೦]

ಇಂದಿನ ಆಧುನಿಕ ಯುಗದಲ್ಲಿ ವರದಕ್ಷಿಣೆಯ ಪೆಡಂಭೂತ ನರ್ತನ ಮಾಡುತ್ತಿದೆ. ಪ್ರತಿವರ್ಷ ಸಹಸ್ರಾರು ಹೆಣ್ಣು ಮಕ್ಕಳನ್ನು ಸಾವಿನ ದವಡೆಗೆ ನೂಕುತ್ತಿದೆ.. ವರದಕ್ಷಿಣೆಯ ಸಲುವಾಗಿ ಸ್ತ್ರೀಯರನ್ನು ಸುಡುವದು, ಕೊಲ್ಲುವದು, ತವರುಮನೆಗೆ ಅಟ್ಟುವದು ನಿರಂತರವಾಗಿ ನಡೆದಿದೆ. ಅತ್ತೆ-ಮಾವಂದಿರ, ಗಂಡ – ನಾದಿನಿಯರ ಕಿರುಕುಳ ತಾಳದೇ ಸೊಸೆಯಂದಿರು ಜೀವನದಲ್ಲಿ ರೋಸಿ ಹೋಗಿ ಅತ್ತ ತವರುಮನೆಗೂ ಹೋಗಲಾಗದೇ, ಇತ್ತ ಗಂಡನ ಮನೆಯಲ್ಲೂ ಬಾಳಲಾಗದೇ ಆತ್ಮಹತ್ಯೆಗೆ ಶರಣಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಈ ಮದುವೆಗಳ ವ್ಯಾಪಾರ ದನದ ವ್ಯಾಪಾರಕ್ಕಿಂತಲೂ ಕನಿಷ್ಟವೆಂದು ಕುಮಾರ ಕಕ್ಕಯ್ಯ ಜರೆಯುತ್ತಾರೆ –

ಕೇರಿಯಲ್ಲಿ ಕುರಿ ಕೋಳಿಯ ವ್ಯಾಪಾರ
ಊರಲ್ಲಿ ಕೋಣ ಎಮ್ಮೆಯ ವ್ಯಾಪಾರ
ಸಂತೆಯಲ್ಲಿ ಕತ್ತೆ ಕುದುರೆಯ ವ್ಯಾಪಾರ
ಮದುವೆಯಲ್ಲಿ ಹೆಣ್ಣು ಗಂಡಿನ ವ್ಯಾಪಾರ
ವರದಕ್ಷಿಣೆಗಾಗಿ ಮಾರಿಕೊಳ್ಳುವ ಗಂಡು
ಕೋಣ ಕತ್ತೆಗೂ ಕೀಳೆಂದ ಕುಮಾರ ಕಕ್ಕಯ್ಯ[೯೧]

ಹೆಣ್ಣು-ಗಂಡುಗಳು ಪಶು-ಪಕ್ಷಿಗಳಂತೆ ವ್ಯಾಪಾರದ ಸರಕುಗಳಾಗಿರುವುದು ದುರಂತವೇ ಸರಿ. ಸಿಪಾಯಿ ನೌಕರನಿಗೆ ಒಂದು ಲಕ್ಷ, ಕಾರಕೂನನಿಗೆ ಎರಡು ಲಕ್ಷ, ಶಿಕ್ಷಕನಿಗೆ ನಾಲ್ಕು ಲಕ್ಷ, ಉಪನ್ಯಾಸಕನಿಗೆ ಎಂಟು ಲಕ್ಷ, ಇಂಜಿನಿಯರನಿಗೆ ಹತ್ತು ಲಕ್ಷ, ಡಾಕ್ಟರನಿಗೆ ಹದಿನಾರು ಲಕ್ಷ, ಹೀಗೆಯೇ ಸರಕಾರದ ಉನ್ನತ ಹುದ್ದೆಗಳನ್ನು

೮೯. ಕುಮಾರ ಕಕ್ಕಯ್ಯನ ವಚನಗಳೂ – ಪು– ೬೮. ವ– ೨೬೪
೯೦. ಕುಮಾರ ಕಕ್ಕಯ್ಯನ ವಚನಗಳು – ಪು– ೭೬ ವ – ೨೯೬
೯೧. ಕುಮಾರ ಕಕ್ಕಯ್ಯನ ವಚನಗಳು – ಪು– ೨೩೫ ವ–೯೦೮.

ಹೊಂದಿರುವ ಅಧಿಕಾರಿಗಳ ರೇಟು. ಹೆಚ್ಚುತ್ತಲೇ ಸಾಗಿದೆ. ಒಂದು ಕಾಲಕ್ಕೆ ಹೆಣ್ಣಿಗೆ ಕನ್ಯಾಶುಲ್ಕ ಕೊಟ್ಟು, ಹೆಣ್ಣಿನ ತಂದೆ – ತಾಯಿಯರಿಂದ ಹೆಣ್ಣನ್ನು ಖರೀದಿಸಿ ತರುತ್ತಿದ್ದರೆ, ಇಂದಿನ ಕಾಲಕ್ಕೆ ಗಂಡುಗಳಿಗೆ ವರದಕ್ಷಿಣೆ – ವರೋಪಚಾರವೆಂದು ಹಣ – ಹೊನ್ನು ಸುರಿದು ಖರೀದಿಸುವ ದೊಡ್ಡಸ್ತಿಕೆ ಪೈಪೋಟಿಗೆ ಬಂದಿದೆ. ಒಟ್ಟಿನಲ್ಲಿ ನೋವು ಅನುಭವಿಸುವುದು ಮಾತ್ರ ಹೆಣ್ಣು.

ಸ್ತ್ರೀಯರ ಬಗ್ಗೆ ತುಂಬಾ ಗೌರವಯುತ ಭಾವನೆಗಳನ್ನು ಹೊಂದಿರುವ ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ಅವಳನ್ನು 'ಶ್ರೀದೇವಿ' ಎಂದು ಸ್ತುತಿಸಿದ್ದಾರೆ–

ಹೆತ್ತವರಿಗೆ ಮುದ್ದಿನ ಮಗಳಾಗಿ
ಕೊಟ್ಟವರಿಗೆ ಆದರ್ಶ ಸೊಸೆಯಾಗಿ
ಗಂಡನಿಗೆ ಪ್ರೇಮದ ಪತ್ನಿಯಾಗಿ
ಮಕ್ಕಳಿಗೆ ಅಕ್ಕರೆಯ ಮಾತೆಯಾಗಿ
ಮನೆಗೆ ಅಡಿಗಲ್ಲಾಗಿ
ಮೇಟಿ ಕಟ್ಟಿಗೆಯಾಗಿ ಶ್ರಮಿಸುವ
ನಾರಿ ಸಾಕ್ಷಾತ್ ಶ್ರೀದೇವಿಯೆಂದ
ಕುಮಾರ ಕಕ್ಕಯ್ಯ.[೯೨]

ಪ್ರಾಕೃತಿಕವಾಗಿ ಕೋಮಲ ಶರೀರ, ಸಮುಧುರ ಭಾವನೆಗಳು, ಪ್ರೇಮದ ರಸಗಂಗೆ, ವಾತ್ಸಲ್ಯದ ಅಮೃತಧಾರೆ ಸೂಸುವ ಹೆಣ್ಣುಮಕ್ಕಳ ಬಗ್ಗೆ ಮಾತೃಹೃದಯದ ಹೊನಲನ್ನೇ ಹರಿಸುತ್ತಾರೆ ಕುಮಾರ ಕಕ್ಕಯ್ಯ –

ಹೂಗಳಿಗೆ ಸೊಬಗು ಇದ್ದಂತೆ
ಅಂಗನೆಯರಿಗೆ ರೂಪು ಲಾವಣ್ಯ
ಹೂಗಳಿಗೆ ಸುಗಂಧವಿದ್ದಂತೆ
ಅಂಗನೆಯರಿಗೆ ಗುಣ ಸ್ವಭಾವ
ಹೂಗಳಿಂದ ಹಣ್ಣು – ಹಂಪಲದಂತೆ
ಅಂಗನೆಯರಿಂದ ಸಂತಾನ – ಸಂತತಿ
ಅಂಗನೆಯರು ಮನುಕುಲ ಬಳ್ಳಿಯಲಿ
ಅರಳಿದ ಹೂಗಳೆಂದ ಕುಮಾರ ಕಕ್ಕಯ್ಯ.[೯೩]

'ಮಾನವ ಕುಲದ ಬಳ್ಳಿಯಲ್ಲಿ ಅರಳಿದ ಸುಂದರ, ಕೋಮಲ ಹೂಗಳಿದ್ದಂತೆ ಸ್ತ್ರೀಯರು' ಎಂದು ನುಡಿಯುತ್ತಾರೆ. ಇಂತಹ ಸ್ತ್ರೀಯರು ಪುರುಷ ಸಮಾನವಾಗಿ ಎಲ್ಲ ರೀತಿಯ ಸೌಲಭ್ಯ –ಸವಲತ್ತುಗಳನ್ನು ಪಡೆಯಬೇಕು. ಅಂದರೆ ಸಮಾಜ– ರಾಷ್ಟ್ರಗಳು ಭದ್ರವಾಗಿರುತ್ತವೆ. ಆರೋಗ್ಯ ಪೂರ್ಣವಾಗಿರುತ್ತವೆ.

೯೨. ಕುಮಾರ ಕಕ್ಕಯ್ಯನ ವಚನಗಳು ಪು–೩೦೯ ವ–೧೧೯೪.
೯೩. ಕುಮಾರ ಕಕ್ಕಯ್ಯನ ವಚನಗಳು ಪು – ೧ ವ–೨

ಸ್ತ್ರೀಅಬಲೆ, ಸ್ತ್ರೀ ಅಭಾಗಿನಿ, ಸ್ತ್ರೀ ಅಸಹಾಯಕಳು, ಸ್ತ್ರೀ ಕೀಳು ಎಂಬ ಭಾವನೆ ದೂರಾಗಬೇಕು "ಕ್ರೂರ ಸಮಾಜ ಘಾತಕರ ಬಗ್ಗೆ ತಿರಸ್ಕಾರ ತಾಳಬೇಕೆ ವಿನಃ ಅಭಾಗಿನಿಯರ ಬಗ್ಗೆ ಮರುಕಪಡಬೇಕು, ಅಸಹಾಯಕ ಹೆಣ್ಣಿನ ಬಗ್ಗೆ ಯೋಗ್ಯಹಾದಿಕಲ್ಪಿಸಿ ಸಮಾಜದಲ್ಲಿ ಬಾಳಲು ಆಸ್ಪದ ಮಾಡಿಕೊಡಬೇಕು"[೯೪] ಎಂದು ಕಳಕಳಿ ವ್ಯಕ್ತಪಡಿಸಿದ್ದಾರೆ.

**v) ಜಾತ್ಯಾತೀತ–ಜಾತಿರಹಿತ ಸಮಾಜ ನಿರ್ಮಾಣ**

ಭಾರತದೇಶ ಪ್ರಾಚೀನ ಕಾಲದಿಂದ ಜ್ಞಾನ–ಸಂಸ್ಕೃತಿಯ ದೃಷ್ಟಿಯಿಂದ ಎಷ್ಟೊಂದು ವೈಭವಪೂರ್ಣವೋ ಅಷ್ಟೇ ಅದರ ಅಂತರಂಗದಲ್ಲಿ ಜಾತಿವ್ಯವಸ್ಥೆಯ ವಿಕೃತಿಯೂ ತುಂಬಿಕೊಂಡಿದೆ. 'ನೀತಿ ಸಂಹಿತೆಯ ವ್ಯವಸ್ಥೆಯಲ್ಲಿ ಯಾವಾಗಲೂ ಬುದ್ಧಿಜೀವಿಗಳದೇ ಮೇಲುಗೈ ತಾನೆ, ಅದರಲ್ಲಿಯೂ ಸಾಮಾನ್ಯಜನ ಅಜ್ಞಾನಾಂಧಕಾರದಲ್ಲಿ ಮುಳುಗಿರುವಾಗ ಅವರು ಮಾಡಿದ್ದೇ ಶಾಸನ. ಅಂದಮೇಲೆ ಆ ಶಾಸನ ಬುದ್ಧಜೀವಿಗಳ ಹಿತಾಸಕ್ತಿ ರಕ್ಷಣೆಗೆ ಮಾತ್ರ ಸೀಮಿತವಾಗಿರುತ್ತದೆ. ಅದನ್ನೇ ಧರ್ಮದ ಹೆಸರಿನಲ್ಲಿ ಚಾಲು ಮಾಡುತ್ತಾರೆ. ಹೀಗಾಗಿ ಸಮಾಜ–ಧರ್ಮದ ಕಲ್ಪನೆಯೂ ವಿಕಾರ ಗೊಳ್ಳುತ್ತದೆ. ಆ ವಿಕಾರ ಅತಿರೇಕಕ್ಕೆ ಹೋದಾಗ, ಅಂದರೆ ಧರ್ಮಕ್ಕೆ ಗ್ಲಾನಿಯೊದಗಿದಾಗ ಸಾಮಾಜಿಕ ವ್ಯವಸ್ಥೆ ಶಿಥಿಲಗೊಳ್ಳುತ್ತದೆ. ನಾನಾ ರೀತಿಯ (ಸಾಮಾಜಿಕ) ರೋಗ ರುಜಿನಗಳಿಗೆ ಗುರಿಯಾಗಿ ವಿನಾಶದ ದಡವನ್ನು ಮುಟ್ಟುತ್ತದೆ. ಅಂಥ ಸಮಾಜವನ್ನು ಪುನರುಜ್ಜೀವನಗೊಳಿಸಬೇಕಾದರೆ ಕಾಯಕಲ್ಪ ಚಿಕಿತ್ಸೆ, ಶಸ್ತ್ರಚಿಕಿತ್ಸೆಗಳಲ್ಲಿ ಪಾರಂಗತನಾದ ಮಹಾವೈದ್ಯನೇ ಬೇಕು. ಅಲ್ಲಿ ಆಗಬೇಕಾದದ್ದು ತೇಪೆ ಹಾಕುವ ಜೀರ್ಣೋದ್ಧಾರ ಕಾರ್ಯವಲ್ಲ, ನವೀಕರಣ. ಅಂದರೆ ನವಸಮಾಜ ಸೃಷ್ಟಿಯೇ ನಡೆಯಬೇಕು.'[೯೫]

ವರ್ಣಾಶ್ರಮ ಧರ್ಮ–ಸಮಾಜ ವ್ಯವಸ್ಥೆಯು ಅತಿಬುದ್ಧಿವಂತರೆನಿಸಿದ ಪಂಡಿತ–ಪುರೋಹಿತರ ಸ್ವಾರ್ಥ–ಸ್ವಹಿತಾಸಕ್ತಿಯಿಂದಾಗಿ ಸಾವಿರಾರು ಜಾತಿಗಳನ್ನು ಹುಟ್ಟು ಹಾಕಿ, ಪ್ರತಿಯೊಂದನ್ನೂ ಶ್ರೇಣೀಕೃತಗೊಳಿಸಿಬಿಟ್ಟಿತ್ತು. ಸಮಾಜದ ಅತಿ ಉಚ್ಚ ಜಾತಿಯೆನಿಸಿದ ಬ್ರಾಹ್ಮಣರಲ್ಲಿಯೇ ಹಲವಾರು ಜಾತಿ ಪ್ರಭೇದಗಳು, ಕ್ಷತ್ರಿಯ, ವೈಶ್ಯ, ಶೂದ್ರ, ಪಂಚಮರಲ್ಲಿ ಸಾವಿರಾರು ಉಪಜಾತಿಗಳು ನಿರ್ಮಾಣಗೊಂಡಿದ್ದವು. 'ಅಂದಿನ ಸಮಾಜದಲ್ಲಿ ವ್ಯಕ್ತಿಯ ಪೂರ್ಣವಿಕಾಸಕ್ಕೆ ಅಡ್ಡಿಯಾಗಿ ನಿಂತಿರುವ ಈ ಕೃತಕ ವಿಭಜನೆಗಳನ್ನು ಕಂಡು (ಶರಣರು) ಸಿಡಿದು ನಿಂತಿರುವುದನ್ನು ಕಾಣುತ್ತೇವೆ.'[೯೬]

ಅನಂತ ಕೃತಕ ವಿಭಜನೆಗಳ ಕರ್ಮಠ ಜಾತಿವ್ಯವಸ್ಥೆಯ ಕುರಿತು, ಮಾನವ ಶೋಷಣೆಯ ಕುರಿತು. ಸೌಮ್ಯರೂಪದಲ್ಲಿ ಗೌತಮ ಬುದ್ಧ ವಿರೋಧಿಸಿದರೆ,

---

೯೪. ಧರ್ಮಕ್ರಾಂತಿ – ಶ್ರೀ ಬಿ.ಎಸ್. ಪೋಳ ಪು–೫೦–೫೧.

೯೫. ಬಸವ ಸಂಹಿತೆ–ದೇಜಗೌ ಪು–೪೦

೯೬. ಶರಣರ ಅನುಭಾವ ಸಾಹಿತ್ಯ–ಡಾ. ಎಚ್. ತಿಪ್ಪೇರುದ್ರಸ್ವಾಮಿ ಪು–೧೬೫

ಉಗ್ರ ರೂಪದಲ್ಲಿ ಬಸವಣ್ಣ ಹಾಗೂ ಶರಣರು ಪ್ರತಿಭಟಿಸಿದರು. ಅಂದಿನ ಕಾಲದಲ್ಲಿ ಒಂದೆಡೆ ವಿಪ್ರಕುಲದವರ ಮನುಸ್ಮೃತಿ ಮುಂತಾದ ಕ್ರೂರ ಶಾಸನಗಳು, ಇನ್ನೊಂದೆಡೆ ಕ್ಷತ್ರಿಯ ರಾಜ–ಮಹಾರಾಜ ಆಳರಸರ ಸರ್ವಾಧಿಕಾರೀ ಆಡಳಿತ ಶಾಸನಗಳು, ಮತ್ತೊಂದೆಡೆ ವೈಶ್ಯ ಬಣಂಜುಗಳ ಹಣಗಳಿಕೆ ದಾಹದ ತಂತ್ರ–ಕುತಂತ್ರಗಳ ವ್ಯಾಪಾರೀ ಮನೋಭಾವದ ಅರ್ಥಸೂತ್ರಗಳು ಜನಸಾಮಾನ್ಯರನ್ನು ನಿರಂತರವಾಗಿ ಶೋಷಣೆಗೆ ಒಳಗುಮಾಡಿದ್ದವು.

ಈ ಸವರ್ಣೀಯರ ಸುಲಿಗೆ ಶೋಷಣೆಯ 'ಈ ಶಕ್ತಿ ಸೂತ್ರಗಳನ್ನು ಜನರು, ದಲಿತರು., ಮೂಕ ಬಲಿ–ಪಶುಗಳಾಗಿ ಹೆಜ್ಜೆ ಹೆಜ್ಜೆಗೂ ಕಣ್ಣೀರು ಸುರಿಸುತ್ತಿದ್ದ[೯೭] ಪರಿಸ್ಥಿತಿಯು ಅಂದಿನ ದಿನಮಾನದಲ್ಲಿ ಸರ್ವೇಸಾಮಾನ್ಯವಾಗಿತ್ತು.

'ದಲಿತರ ಬದುಕು ಆಗಲೂ ಅಸಹನೀಯವೇ ಆಗಿತ್ತು. ಅವರನ್ನು ಯಾರೂ ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಅವರು ದೇವಾಲಯವನ್ನು ಪ್ರವೇಶಿಸುವಂತಿರಲಿಲ್ಲ. ಸಾರ್ವಜನಿಕ ಬಾವಿಯಿಂದ ನೀರು ಸೇದುವಂತಿರಲಿಲ್ಲ. ಅವರು ದುರಾದೃಷ್ಟದ ಸಂಕೇತಗಳಾದರು. ಅವರ ಮುಖವನ್ನು ಕಂಡರೆ ಭೂತದರ್ಶನವಾದಂತೆ ಸವರ್ಣೀಯರು ವರ್ತಿಸಲಾರಂಭಿಸಿದರು. ಈ ಜನರ ಬಾಳು ನರಕಕ್ಕಿಂತಲೂ ಭೀಕರವಾಯಿತು.'[೯೮]

ವರ್ಣ–ಜಾತಿ ವ್ಯವಸ್ಥೆಯನ್ನು ಹುಟ್ಟುಹಾಕಿದ್ದ ಸ್ವಾರ್ಥಿ ವೈದಿಕ ಪುರೋಹಿತ ಪಂಡಿತರು ತಮ್ಮ ಕುಲದ ಶ್ರೇಷ್ಠತೆಗಾಗಿ, ಗೋತ್ರಗಳನ್ನು ಹಾಗೂ ಗೋತ್ರ ಪುರುಷರನ್ನು ಕಲ್ಪಿಸಿಕೊಂಡಿದ್ದರು. ಆ ಗೋತ್ರಪುರುಷರ ಶ್ರೇಷ್ಠತ್ವದ ಹೆಸರಿನಲ್ಲಿ ತಮ್ಮ ಮೇಲ್ಮೆಯನ್ನು ಹೇಳಿಕೊಳ್ಳುತ್ತಾ ಮೆರೆಯುತ್ತಿದ್ದರು. ವೇದ, ಆಗಮ, ಸ್ಮೃತಿಶಾಸ್ತ್ರ, ಪುರಾಣ, ರಾಮಾಯಣ, ಮಹಾಭಾರತ, ಷಡ್ದರ್ಶನಗಳನ್ನು ಆಳವಾಗಿ ಅಧ್ಯಯನ, ಮಾಡಿದ ಬಸವಾದಿ ಶರಣರು ಈ ಜಾತಿವಾದಿ ಪಾಖಂಡಿಗಳ ಗೋತ್ರ ಪುರುಷರ ಮೂಲವನ್ನು ಜಾಲಾಡಿ, ಅವರ ಹುಟ್ಟಿನ ಕುಲಗಳನ್ನು ಬಿಚ್ಚಿಟ್ಟರು.

ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ,
ದೂರ್ವಾಸ ಮಚ್ಚಿಗ, ದಧೀಚಿ ಕೀಲಿಗ,
ಕಶ್ಯಪ ಕಮ್ಮಾರ, ರೋಮಜ ಕಂಚುಗಾರ,
ಕೌಂಡಿಲ್ಯ ನಾವಿದನೆಂಬುದನರಿದು
ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ?
ಇಂತೀ ಸಪ್ತ ಋಷಿಯರುಗಳೆಲ್ಲರೂ
ಸತ್ಯದಿಂದ ಮುಕ್ತರಾದುದನರಿಯದೇ
ಅಸತ್ಯದಲ್ಲಿ ನಡೆದು, ವಿಪ್ರರು ನಾವು ಘನವೆಂದು

---

೯೭. ಬಸವ ಮತ್ತು ದಲಿತೋದಯ – ಅಂಬಿಗಚೌಡಯ್ಯ–ಡಾ॥ ದೇವೇಂದ್ರಕುಮಾರ ಹಕಾರಿ ಪುಟ – ೮೧.

೯೮. ಶರಣರ ಬಂಡಾಯ – ಡಾ. ಸರಜೂ ಕಾಟಕರ ಪು–೬೬

ಹೋರುವ ಹೊತ್ತುಹೋಕರ ಮಾತೇತಕ್ಕೆ?
ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ,
ಅರಿ ನಿಜಾತ್ಮಾರಾಮರಾಮನ[೯೯]

ಎಂದು ಹಿರಿಯ ಶರಣ ಮಾದಾರ ಚೆನ್ನಯ್ಯ ಆ ವಿಪ್ರಕುಲದವರಿಗೆ ಅವರವರ ಗೋತ್ರ ಪುರುಷರ ಕುಲಗಳನ್ನು ಎತ್ತಿ ಹೇಳಿ, ವ್ಯಕ್ತಿಯ ಶ್ರೇಷ್ಠತೆಗೆ ಜನನದ ಜಾತಿ ಮಹತ್ವವಲ್ಲ, ಅವರು ಸಾಧಿಸುವ ಸಾಧನೆ ಮಹತ್ವವೆಂದು ತೋರಿಸಿಕೊಟ್ಟರು.

ಬಸವಾದಿ ಶರಣರಿಗೆ ಅಂದಿನ ವರ್ಣವ್ಯವಸ್ಥೆಯ ದುರಂತದಿಂದ ಶೋಷಣೆಗೊಳಗಾಗಿದ್ದ ಜನಸಮುದಾಯಗಳನ್ನು ಮೇಲೆತ್ತಬೇಕಾಗಿತ್ತು. ಮೇಲ್ಜಾತಿಯವರಲ್ಲಿದ್ದ ಮೇಲರಿಮೆಯನ್ನು (Superiority Complex) ಹಾಗೂ ಕೇಳಜಾತಿಯವರಲ್ಲಿದ್ದ ಕೀಳರಿಮೆಯನ್ನು (Inferiority Complex) ಏಕಕಾಲಕ್ಕೆ ತೆಗೆದುಹಾಕಬೇಕಾಗಿತ್ತು 'ನಮ್ಮನ್ನು ಮುಟ್ಟಬೇಡಿ' ಎಂಬ ವರ್ಗ ಒಂದೆಡೆಯಾದರೆ, 'ನಮ್ಮನ್ನು ಮುಟ್ಟಿಸಿಕೊಳ್ಳಬೇಡಿ ಎಂಬ ವರ್ಗ ಇನ್ನೊಂದೆಡೆಯಿತ್ತು. ಒಂದು ವರ್ಗ ಸ್ಪೃಶ್ಯರೆನಿಸಿಕೊಂಡಿದ್ದರೆ ಇನ್ನೊಂದು ವರ್ಗ ಅಸ್ಪೃಶ್ಯರೆನಿಸಿಕೊಂಡಿತ್ತು. ಸ್ಪೃಶ್ಯ ವರ್ಗದಲ್ಲಿ ನೂರಾರು ಜಾತಿ–ಉಪಜಾತಿಗಳಾಗಿದ್ದರೆ, ಅಸ್ಪೃಶ್ಯ ವರ್ಗದಲ್ಲಿಯೂ ನೂರಾರು ಜಾತಿ–ಪಂಗಡಗಳು ಹುಟ್ಟಿ ಕೊಂಡಿದ್ದವು. ಪ್ರತಿಯೊಂದು ಜಾತಿಗಳು ತಮ್ಮ ತಮ್ಮಲ್ಲಿಯೇ ಮೇಲು–ಕೀಳು ಎಂದು ಭೇಧ–ಭಾವ ಕಲ್ಪಿಸಿಕೊಂಡು ಪರಸ್ಪರ ಕಚ್ಚಾಡುತ್ತಿದ್ದವು.

ಇಂತಹ ಸಂದರ್ಭದಲ್ಲಿ ಬಸವಣ್ಣನವರು **ಜಾತಿರಹಿತ ಸಮಾಜ** ನಿರ್ಮಿಸುವ ಮಹಾ ಸಾಹಸಕ್ಕೆ ಕೈಹಾಕಿದರು. ಹುಟ್ಟಿನಿಂದ ಜಾತಿಗಳು ಬರುವದಿಲ್ಲ, ಹುಟ್ಟಿನಿಂದ ಎಲ್ಲರೂ ಸಮಾನರು . 'ಹೊಲೆಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲ, ಜಲಬಿಂದುವಿನ ವ್ಯವಹಾರ ಒಂದೇ'[೧೦೦] ಎಂದು ಸ್ಪಷ್ಟಪಡಿಸಿ, ಮಾನವ ಕಲ್ಪಿತವಾದ ಜಾತಿ ವ್ಯವಸ್ಥೆಯನ್ನು ನಿರಾಕರಿಸಿದರು. ಜಾತಿರಹಿತವಾದ ಧರ್ಮಸಹಿತವಾದ ಅರಿವಿನ ಶರಣ ಸಮಾಜವನ್ನು ಹುಟ್ಟು ಹಾಕಿದರು. ಅಂದಿನ ಚಾತುರ್‌ವರ್ಣ ಸಮಾಜವು ಸುಧಾರಣೆ ಮಾಡಲಾಗದಷ್ಟು ಹದಗೆಟ್ಟಿತ್ತು .ಹೊಳೆಯ ನೀರೆಲ್ಲ ಹೆಂಡವಾದಾಗ ಅದನ್ನು ಶುದ್ಧಮಾಡಲು ಸಾಧ್ಯವೇ? ಅದನ್ನು ತಿರಸ್ಕರಿಸಿ ಹೊಸ ಸಮಾಜ ವ್ಯವಸ್ಥೆಯನ್ನು ಅವರು ಜಾರಿಗೆ ತಂದರು. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನು ಒಂದೇ' ಎಂದು ಸಮತಾ ಸಮಾಜಕ್ಕೆ ಅಡಿಪಾಯಹಾಕಿದರು. 'ಶರಣರದು ಇಂದಿನ ಯುಗಧರ್ಮಕ್ಕೂ ಅನುಗುಣವಾದ ಸಮತಾಮಾರ್ಗ, ಸಮನ್ವಯ ಮಾರ್ಗ. ಇಹ ಪರಗಳ ಸಮನ್ವಯ,ಆಚಾರ ವಿಚಾರಗಳ ಸಮನ್ವಯ, ಭಕ್ತಿ ಜ್ಞಾನ ಕರ್ಮಗಳ ಸಮನ್ವಯ, ವ್ಯಷ್ಟಿ ಸಮಷ್ಟಿಗಳಲ್ಲಿ, ವ್ಯಕ್ತಿ ಸಮಾಜದಲ್ಲಿಯೂ

---

೯೯. ಸಂಕೀರ್ಣ ವಚನ ಸಂಪುಟ ೮–ಸಂ.ಡಾ. ಬಿ.ಆರ್. ಹಿರೇಮಠ ಪು–೪೦೮, ವ ೧೧೬೪

೧೦೦ ಬಸವಣ್ಣನವರ ವಚನ ಸಂಪುಟ – ಸಂ. ಡಾ.ಎಂ.ಎಂ.ಕಲಬುರ್ಗಿ ಪು ೧೪೭ ವ- ೫೯೦.

ಸಮನ್ವಯ-ಹೀಗೆ ಎಲ್ಲವನ್ನೂ ಸಮಗ್ರ ದೃಷ್ಟಿಯಿಂದ ನೋಡಿದ ಶರಣರು ವ್ಯಕ್ತಿಯ ಮತ್ತು ಸಮಾಜದ ಜೀವನದಲ್ಲಿ ಪರಿಪೂರ್ಣತೆಯನ್ನು ಸಾಧಿಸುವ ಮಾರ್ಗವನ್ನು ರೂಪಿಸಿದರು.[೧೦೧]

ಬಸವಾದಿ ಶರಣರು ಸ್ಥಾಪಿಸಿದ ಸಮಾಜದಲ್ಲಿ ವಿಪ್ರ-ಅಂತ್ಯಜ ಎಂಬ ವರ್ಣಭೇದ, ಬಡವ-ಬಲ್ಲಿದ ಎಂಬ ವರ್ಗಭೇದ, ಗೃಹಸ್ಥ-ಸನ್ಯಾಸಿ ಎಂಬ ಆಶ್ರಮ ಭೇದ, ಸ್ತ್ರೀ-ಪುರುಷ ಎಂಬ ಲಿಂಗಭೇದ, ಬಲಿತ-ದಲಿತ ಎಂಬ ಮನೋಭೇದಗಳಿರಲಿಲ್ಲ. ಆದ್ದರಿಂದ ಬಸವಾದಿ ಶರಣರು ಮರೆವಿನ ಮಾನವ ಕಲ್ಪಿಸಿದ ಜಾತಿ ವ್ಯವಸ್ಥೆಯನ್ನು ತೊಡೆದು ಹಾಕಿ. ಅರಿವಿನ ಶರಣತ್ವದ ಲಿಂಗಾಯತ ಸಮಾಜವನ್ನು ಹುಟ್ಟು ಹಾಕಿದರು. 'ಸ್ವಾತಂತ್ರ್ಯ ಸಮಾನತೆ, ಸೋದರತ್ವಗಳ ಸಿದ್ಧಿಗಾಗಿ, ಪ್ರಜಾಪ್ರಭುತ್ವ ತತ್ವದ ಆಧಾರದ ಮೇಲೆ, ಸರ್ವರಿಗೂ ಲೇಸನ್ನುಂಟುಮಾಡುವ ಸರ್ವೋದಯ ಸಮಾಜವನ್ನು ನಿರ್ಮಿಸಬೇಕೆಂಬುದೇ ಅವರ ಸರ್ವತ್ಯಾಗ ಸಾಹಸಗಳ ಪರಮಗಂತವ್ಯ, ಅಸ್ಪೃಶ್ಯತೆ ನಿರ್ಮೂಲನೆ, ಜಾತಿ ವಿನಾಶಗಳಿಂದಲ್ಲದೆ ಸಮಾನತೆ ಸಾಧ್ಯವಿಲ್ಲ. ಸುಲಿಗೆ ನಿಲ್ಲುವದಿಲ್ಲ, ಪ್ರಜಾಸತ್ತೆಯು ಲಭಿಸುವುದಿಲ್ಲ. ಸಾಮಾಜಿಕ ಪುನರ್ ನಿರ್ಮಾಣ ಸಂಘಟಿಸುವುದಿಲ್ಲ. ರಾಷ್ಟ್ರ ಪ್ರಗತಿ ಕೈಗೂಡುವುದಿಲ್ಲವೆಂಬುದು ಅವರ ಅಚಲ ನಿಲವು'[೧೦೨] ಆಗಿತ್ತು ಎಂಬುದನ್ನು ಕಾಣುತ್ತೇವೆ. 'ಬಸವಾದಿ ಶರಣರಿಗೆ ಹಿಂದೂ ಸಮಾಜ ಧರ್ಮಕ್ಕೆ ಪರ್ಯಾಯವಾಗಿ ಒಂದು ಹೊಸ ಧರ್ಮ ಸಮಾಜವನ್ನು ಕಟ್ಟಬೇಕಾಗಿತ್ತು. ಈ ಹೊಸ ಸಮಾಜವು ಜಡ ಸಂಸ್ಕೃತಿಯಿಂದ ಚೈತನ್ಯ ಸಂಸ್ಕೃತಿಯನ್ನು ಒಳಗೊಂಡ ಸಮಾಜವು[೧೦೩] ಬಸವಣ್ಣನವರ ಹೊಸ ಸಮಾಜವು ಕಾಯಕ-ದಾಸೋಹ ತತ್ವ ಸಿದ್ಧಾಂತಗಳ ಮೇಲೆ ರಚಿತವಾಗಿತ್ತು. ಕಾಯಕ ಸಿದ್ಧಾಂತದಿಂದಾಗಿ ದುಡಿಯುವ ವರ್ಗ ಹಾಗೂ ದುಡಿಸಿಕೊಳ್ಳುವ ವರ್ಗಭೇದ ನಿರಸನವಾಯ್ತು. 'ಕಾಯಕ, ಹೊಸಮತ ಮತ್ತು ಜೀವನದ ಹೊಸ ನುಡಿಗೆ ನಾಯಕರೆನಿಸಿದ ಬಸವಣ್ಣನವರು ಈ ಮೂರೂ ಮಾಧ್ಯಮಗಳ ಮೂಲಕ ಒಂದು ಹೊಸ ಸಮಾಜ ರಚನೆಯ ಹೊಳಹು ಹಾಕಿಕೊಂಡರು.'[೧೦೪] ಬಸವಾದಿ ಶರಣರ ತತ್ವ-ಸಿದ್ಧಾಂತ-ಹೊಸಧರ್ಮ-ಹೊಸಸಮಾಜ ಪರಂಪರೆಯ ವಿಚಾರಗಳನ್ನು ಅರಿತು, ಕುಮಾರ ಕಕ್ಕಯ್ಯ ಪೋಳ ಅವರು ಇಂದಿನ ಕರ್ಮಠ ಜಾತಿವ್ಯವಸ್ಥೆಯನ್ನು ಕಟುವಾಗಿ ವಿಡಂಬಿಸುತ್ತಾರೆ.

ವೇದಾಗಮ ಶಿಷ್ಟಾಚಾರ ಬಿಡದೆ
ಪ್ರಗತಿ ಪರ ಸಮಾಜ ನಿರ್ಮಿಸುವದು
ಜಾತಿ, ಧರ್ಮಸಂಪ್ರದಾಯ ಬಿಡದೆ

---

೧೦೧ ವಚನಗಳಲ್ಲಿ ವೀರಶೈವ ಧರ್ಮ – ಡಾ.ಎಚ್. ತಿಪ್ಪೇರುದ್ರಸ್ವಾಮಿ ಪು ೨೯೦.
೧೦೨ ಶರಣಪಥ- ದೇ. ಜವರೇಗೌಡ ಪು-೮೦
೧೦೩ ಶರಣರ ಬಂಡಾಯ –ಡಾ. ಸರಜೂ ಕಾಟಕರ ಪು-೭೦
೧೦೪ ಇಲ್ಲಿ ಸಲ್ಲುವರು- ಬಿ.ಎ. ಸನದಿ ಪು-೬೨

ಜಾತ್ಯಾತೀತ ರಾಷ್ಟ್ರ ಕಟ್ಟುವದು
ಕರಿನಾಯಿಯನು ಬೆಳ್ಳಗೆ ಮಾಡಿದಂತೆಂದ
ಕುಮಾರ ಕಕ್ಕಯ್ಯ[೧೦೫])

ಭಾರತದೇಶವು ಇಂದು ಸಂವಿಧಾನಾತ್ಮಕವಾಗಿ ಜಾತ್ಯಾತೀತ ದೇಶ ಎಂದು ಘೋಷಿಸಿಕೊಂಡಿದೆ. ಆದರೆ ವಾಸ್ತವಿಕವಾಗಿ ಇಂದಿಗೂ ಕೂಡ ಜಾತಿ-ಜಾತಿಗಳ ತಿಕ್ಕಾಟ, ದಲಿತರ ಶೋಷಣೆ ನಡೆಯುತ್ತಲೇ ಇದೆ. ಪ್ರಾಚೀನ ಕಾಲದಲ್ಲಿ ಎಲ್ಲ ಋಷಿ ಮುನಿಗಳು ಯಾವ ಕುಲ-ಮೂಲದಲ್ಲಿ ಹುಟ್ಟಿದ್ದರು ಎಂಬುದನ್ನು ಅರಿಯಿರಿ ಎಂದು ಬಸವಾದಿ ಶರಣರಂತೆಯೇ ಆಧುನಿಕ ವಚನಕಾರ ಕುಮಾರ ಕಕ್ಕಯ್ಯ ಹೇಳುತ್ತಾರೆ.

ಸಾಂಖ್ಯ ಶ್ವಪಚ, ವಾಲ್ಮೀಕಿ ಬೇಡ,
ವಶಿಷ್ಟ ಊರ್ವಶಿಯೆಂಬ ಗಣಿಕೆಯ ಮಗ,
ಅಗಸ್ತ್ಯ ಕಬ್ಬಿಲ, ದೂರ್ವಾಸ ಮೊಚ್ಚಿಗ,
ವ್ಯಾಸ ಸತ್ಯವತಿಯೆಂಬ ಬೋಯಿತಿಯ ಮಗ,
ರಾಮಾಯಣ ಮಹಾಭಾರತ ಗೀತೆಯ ಮೊದಲು,
ವಂಶಭೇದ ಜಾತಿ ಪ್ರಭೇದ ಇರಲಿಲ್ಲವೆಂದ
ಕುಮಾರ ಕಕ್ಕಯ್ಯ[೧೦೬]

ಋಷಿ - ಮುನಿಗಳೆಲ್ಲ ಅಂತ್ಯಜರು, ಅಸ್ಪೃಶ್ಯ ಜನಾಂಗದವರೇ ಇದ್ದರೂ ಕೂಡ; ಅಂದಿನ ಕಾಲದಲ್ಲಿ ಅವರು ಸಾಧನೆಯಿಂದ ಗೌರವಿಸಲ್ಪಡುತ್ತಿದ್ದರು. ಇದನ್ನು ಜಾತಿವಾದಿಗಳು ಅರಿತುಕೊಳ್ಳಬೇಕು ಎಂದು ತಿಳಿಸುತ್ತಾರೆ.

ಶೈವರು ಮತ್ತು ವೈಷ್ಣವರು ತಮ್ಮ ತಮ್ಮ ಮತ-ಪಂಥಗಳಲ್ಲಿ, ಶೈವ ಹಾಗೂ ವೈಷ್ಣವ ಧರ್ಮಗಳಲ್ಲಿ ಪರಸ್ಪರ ಪೈಪೋಟಿಗೆ ಬಿದ್ದಂತೆ ಜಾತಿಗಳನ್ನು ಅಂದರೆ ಚಾತುರ್ವರ್ಣಗಳನ್ನು ಹುಟ್ಟು ಹಾಕಿದರು. ಇದನ್ನು ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ಆಧಾರಸಹಿತವಾಗಿ ಹೇಳುತ್ತಾರೆ.

ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾಹಿ ದ್ವಿಧಾಮತಾ।
ಏಕ ಶಿವೇನ ನಿರ್ದಿಷ್ಟಾ, ಬ್ರಾಹ್ಮಣಾ ಕತಿಥಾ ಪರಾ॥
ಅವರ ಬ್ರಹ್ಮನ ದೇಹದಿಂದ ನಾಲ್ಕು ಜಾತಿಗಳು ಹುಟ್ಟಿದರೆ
ಇವರ ಶಿವನ ದೇಹದಿಂದ ಐದು ಜಾತಿಗಳು ಹುಟ್ಟಿದವು.
ಅವರ ಗೋತ್ರ ಪುರುಷರು ಸಪ್ತರ್ಷಿಗಳಾದರೆ.
ಇವರ ಗೋತ್ರ ಪುರುಷರು ಪಂಚಾಚಾರ್ಯರು

---

೧೦೫. ಕುಮಾರ ಕಕ್ಕಯ್ಯನ ವಚನಗಳು - ಪು-೪೪, ವ-೧೬೬

೧೦೬. ಕುಮಾರ ಕಕ್ಕಯ್ಯನ ವಚನಗಳು ಪು - ೮೯ ವ- ೩೪೩

ಸಪ್ತರ್ಷಿಗಳ ವೈದಿಕ, ಪಂಚಾಚಾರ್ಯರ ವೀರಶೈವ
ಒಂದೇ ನಾಣ್ಯದ ಎರಡು ಮುಖಗಳೆಂದ
ಕುಮಾರ ಕಕ್ಕಯ್ಯ[೧೦೭]

ಬ್ರಾಹ್ಮಣರು ಹಾಗೂ ಶೈವರು ಸ್ಪರ್ಧೆಗೆ ಇಳಿದವರಂತೆ ಎರಡು ಪ್ರಕಾರದಲ್ಲಿ ಜಾತಿ ವ್ಯವಸ್ಥೆಯನ್ನು ಹುಟ್ಟು ಹಾಕಿದರು. ವರ್ಣಾಶ್ರಮ ಧರ್ಮವು ಎರಡು ಪ್ರಕಾರವಾಗಿದೆ. ಶಿವನಿಂದ ಬೋಧಿಸಲ್ಪಟ್ಟದ್ದು ಒಂದು ಪ್ರಕಾರವಾದರೆ, ಬ್ರಹ್ಮನಿಂದ ಬೋಧಿಸಲ್ಪಟ್ಟದ್ದು ಮತ್ತೊಂದು ಪ್ರಕಾರವಾಗಿದೆ. ಬ್ರಹ್ಮನ ದೇಹದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಜಾತಿಗಳು ಹುಟ್ಟಿದರೆ, ಶಿವನ ದೇಹದ ಪಂಚಮುಖಗಳಿಂದ ಲಿಂಗಿ ಬ್ರಾಹ್ಮಣ, ಲಿಂಗಿಕ್ಷತ್ರಿಯ, ಲಿಂಗಿವೈಶ್ಯ, ಲಿಂಗಿಶೂದ್ರ, ಲಿಂಗಿ ಪಂಚಮ ದಲಿತ ಹುಟ್ಟಿದವು. ವೈದಿಕರ ಗೋತ್ರ ಪುರುಷರು ಕಶ್ಯಪ, ಕೌಂಡಿಣ್ಯ, ವ್ಯಾಸ, ದೂರ್ವಾಸ, ವಶಿಷ್ಟ, ಅಗಸ್ತ್ಯ, ಸಾಂಖ್ಯವೆಂದು ಏಳು ಋಷಿಗಳಿಂದ ಸಪ್ತಗೋತ್ರಗಳನ್ನು, ವೀರಶೈವರು (ಶೈವದ ಪ್ರಭೇದ) ವೀರ, ಭೃಂಗಿ, ಷಣ್ಮುಖ, ವೃಷಭ, ಸ್ಕಂದ ಎಂದು ಐದು ಗಣಾಧೀಶ್ವರ ಹೆಸರಿನಲ್ಲಿ ಪಂಚಗೋತ್ರಗಳನ್ನು ಸೃಷ್ಟಿಸಿದರು. ಈ ವೈದಿಕ ಹಾಗೂ ಶೈವರ ವರ್ಣ ವ್ಯವಸ್ಥೆಯು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಈ ಎರಡೂ ಸಂಪ್ರದಾಯಗಳು ಜಾತಿವ್ಯವಸ್ಥೆಯನ್ನು ಭದ್ರಗೊಳಿಸುತ್ತಲೇ ಸಾಗಿದವು. ಇದರ ಪರಿಣಾಮವಾಗಿ ಹದಿನೆಂಟು ಕುಲ, ನೂರೆಂಟು ಜಾತಿಗಳು, ಸಾವಿರಾರು ಉಪಜಾತಿಗಳು ನಿರ್ಮಾಣವಾದವು. ಅವುಗಳಲ್ಲಿಯೇ ಮೇಲು – ಕೀಳು ಪೈಪೋಟಿ ಪ್ರಾರಂಭವಾಯ್ತು. ಭಾರತದಲ್ಲಿ ಇಂದು ಪ್ರಪಂಚದ ಬಹುತೇಕ ಧರ್ಮಗಳು, ಧರ್ಮಗಳ ಅನುಯಾಯಿಗಳು, ಧರ್ಮಕೇಂದ್ರಗಳು ಅಸ್ತಿತ್ವದಲ್ಲಿವೆ. ಕ್ರಿಶ್ಚಿಯನ್, ಮುಸ್ಲಿಮರಲ್ಲಿ ಒಕ್ಕಟ್ಟಿದೆ, ಹಿಂದುಗಳೆನ್ನುವವರಲ್ಲಿ ಒಕ್ಕಟ್ಟಿಲ್ಲ, ಯಾಕೆಂದರೆ ಇವರು ಜಾತಿಯ ಒಣ ಪ್ರತಿಷ್ಠೆಗೆ ಒಳಗಾಗಿದ್ದಾರೆ.

ಮುಸ್ಲಿಂ ಮುಸ್ಲಿಮನ ಮನೆಗೆ ಹೋದರೆ,
ಜಾತಿ ಕೇಳುವ ಪ್ರಸಂಗ ಬರುವದಿಲ್ಲ.
ಕ್ರಿಶ್ಚಿಯನ್ ಕ್ರಿಶ್ಚಿಯನ್‌ನ ಮನೆಗೆ ಹೋದರೆ
ಜಾತಿ ಕೇಳುವ ಪ್ರಸಂಗ ಉದ್ಭವಿಸುವದಿಲ್ಲ.
ಹಿಂದು ಹಿಂದುವಿನ ಮನೆಗೆ ಹೋದರೆ
ಮೊದಲು ಜಾತಿ ಕೇಳುವದು ಹಿಂದುಗಳ
ಪ್ರತಿಷ್ಠೆಯ ಪ್ರಶ್ನೆಯೆಂದ ಕುಮಾರ ಕಕ್ಕಯ್ಯ[೧೦೮]

ಹಿಂದುಗಳಲ್ಲಿ ಕುಲಜ – ಅಂತ್ಯಜ ಎಂಬ ಮಹಾನ್ ಕಂದಕ ನಿರ್ಮಾಣವಾಗಿರುವುದರಿಂದ ಇದರ ನಿರ್ಮೂಲನೆ ಸಾಧ್ಯವಾಗಬಹುದೇ? ಎಂಬ

---

೧೦೭. ಕುಮಾರ ಕಕ್ಕಯ್ಯನ ವಚನಗಳು ಪು – ೮೮ ವ– ೩೭.
೧೦೮ ಕುಮಾರ ಕಕ್ಕಯ್ಯನ ವಚನಗಳು ಪು – ೧೮೦ ವ – ೬೯೩

ಪ್ರಶ್ನೆಯು ಸಮಾಜ ವಿಜ್ಞಾನಿಗಳನ್ನು ಕಾಡುತ್ತಲೇ ಬಂದಿದೆ. ಅಂತೆಯೇ ಕುಮಾರ ಕಕ್ಕಯ್ಯನವರು ಸ್ಪಷ್ಟವಾಗಿ ತಮ್ಮ ವಚನದಲ್ಲಿ ಪ್ರಶ್ನಿಸಿದ್ದಾರೆ-

ಜಾತಿ ಜಂತುಗಳಿರುವಾಗ
ಆಯಾ ಜಾತಿಯ ಗುರುಗಳೂ ಇರುವಾಗ
ಜಾತಿಯ ಮೃಗಗಳೂ ಇರುವಾಗ
ಆಯಾ ಜಾತಿಯ ಜಗದ್ಗುರುಗಳೂ ಇರುವಾಗ
ಹೋಗು ಹೋಗೆಂದರೆ ಜಾತಿಯು
ಅದ್ಹೇಗೆ ಹೋಗಬೇಕೆಂದ ಕುಮಾರ ಕಕ್ಕಯ್ಯ[೧೦೯]

ಇತ್ತೀಚೆಗೆ 'ಜಾತಿಯ ಗೋಡೆಯನ್ನು ಕೆಡವಿ' ಎಂಬ ವಿಶ್ವ ಸಂಸ್ಥೆಯ ಮಾನವ ಹಕ್ಕುಗಳ ಹೈಕಮೀಶನರ ಶ್ರೀ ನವಿ ಪಿಳ್ಳೆ ಹೊರಡಿಸಿರುವ ಪತ್ರವು ಕಠಿಣ ಶಬ್ದಗಳಿಂದ ಕೂಡಿದ್ದು ಹಲವಾರು ದೇಶಗಳಲ್ಲಿ ಸಂಚಲನ ಮೂಡಿಸಿದೆ. ಜಾತಿ ಪದ್ಧತಿಯಿಂದುಂಟಾಗುವ ಮಾನವ ಹಕ್ಕು ಉಲ್ಲಂಘನೆಯನ್ನು ಅವರು ಗುಲಾಮಗಿರಿ ಹಾಗೂ ವರ್ಣದ್ವೇಷಕ್ಕೆ (ಅಪಾರ್ಥಿಡ್)ಗೆ ಹೋಲಿಸಿದ್ದಾರೆ. ಮಾನವ ಜನಾಂಗದ ಈ ಎರಡು ಕಪ್ಪು ಚುಕ್ಕೆಗಳನ್ನು ಹೋಗಲಾಡಿಸಿದಂತೆಯೇ ಜಾತಿ ಪದ್ಧತಿಯನ್ನು ಸಹ ನಿರ್ಮೂಲನಗೊಳಿಸಬೇಕು, ಎಂದು ಕರೆ ನೀಡಿದ್ದಾರೆ. ಅದಕ್ಕಾಗಿ ಎಲ್ಲ ದೇಶಗಳ ಸಹಕಾರವನ್ನು ಅವರು ಬಯಸುತ್ತಾರೆ. ಒಂದು ಅಂದಾಜಿನ ಪ್ರಕಾರ ಸುಮಾರು ೨೬೦ ದಶಲಕ್ಷ ಜನ ಪ್ರಪಂಚದಾದ್ಯಂತ ಜಾತಿ ಪದ್ಧತಿಯ ದೌರ್ಜನ್ಯಗಳಿಂದ ಬಳಲುತ್ತಿದ್ದಾರೆ. ಭಾರತದಲ್ಲಿ ಪ್ರಮುಖವಾಗಿ ಕಾಣಿಸಿಕೊಂಡರೂ ನೇಪಾಳ, ಬಾಂಗ್ಲಾದೇಶ, ಪಾಕಿಸ್ತಾನ, ದಕ್ಷಿಣ ಆಫ್ರಿಕಾದ ಕೆಲವು ಪ್ರದೇಶಗಳಲ್ಲಿ ವಿಶೇಷವಾಗಿ ಭಾರತೀಯ ವಸಾಹತು ಸ್ಥಳಗಳಲ್ಲಿ ಜಾತಿಭೇದ ನೀತಿಯು ಇನ್ನೂ ಚಲಾವಣೆಯಲ್ಲಿದೆ ಎಂದು ನವಿ ಪಿಳ್ಳೆ ಬರೆಯುತ್ತಾರೆ[೧೧೦] ವರ್ಣಾಶ್ರಮ ಧರ್ಮ 'ವ್ಯವಸ್ಥೆಯ ಬೇರಿನಿಂದ ಟಿಸಿಲುಗಳವರೆಗೆ ಮಿಳಿತವಾಗಿರುವ ಜಾತಿಬಳ್ಳಿಗಳು ಕುಣಿಕೆಯಾಗುತ್ತಿರುವ ಜೀವಗಳ ಸಂಖ್ಯೆ ನಮ್ಮ ದೇಶದಲ್ಲಿ ದೊಡ್ಡದಿದೆ. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಹೈಕಮೀಶನರ ಜಾತಿ ಗೋಡೆಯನ್ನು ಕೆಡವಿ ಎಂದು ಪತ್ರ ಹೊರಡಿಸಿದ್ದಾರೆ.'

'ದೇಶದಲ್ಲಿ ಇಂದಿಗೂ ಬರಿಗೈಯಲ್ಲಿ ಕಕ್ಕಸು ತೊಳೆಯುವ, ತಲೆಯ ಮೇಲೆ ಮಲ ಹೊರುವವರ ಸಂಖ್ಯೆ ೩.೪೦ ಲಕ್ಷಕ್ಕೂ ಅಧಿಕವಾಗಿದೆ ಎಂದು ಹೇಳಲಾಗಿದೆ. ನಮ್ಮ ದೇಶದ ರಾಜಧಾನಿಯೂ ಸೇರಿದಂತೆ ಮುಂದುವರೆದ ಅನೇಕ ರಾಜ್ಯಗಳಲ್ಲಿ ಈ ಪದ್ಧತಿ ಇನ್ನೂ ಜಾರಿಯಲ್ಲಿದೆ. ಸತ್ತ ದನವನ್ನು ಸುಲಿಯುವದಕ್ಕೆ, ಚರ್ಮ ಹದಮಾಡುವದಕ್ಕೆ, ಚಪ್ಪಲಿ ಹೊಲಿಯುವದಕ್ಕೆ (ಹೊಲೆಯ,ಡೋಹರ, ಸಮಗಾರ, ಮಾದಿಗ) ಒಂದೊಂದು ಜಾತಿಗಳಿರುವುದು, ಅವು ಇನ್ನೂ ಅನೂಚಾನವಾಗಿ

---

೧೦೯ ಕುಮಾರ ಕಕ್ಕಯ್ಯನ ವಚನಗಳು ಪು - ೩೭೬ ವ -೧೪೬೦
೧೧೦ ಪ್ರಜಾವಾಣಿ - ಸಾಪ್ತಾಹಿಕ ಪುರವಣಿ (೧೫-೧೧-೨೦೦೯) ಪು-೧.

ಮುಂದುವರೆದಿರುವುದು ಗುಟ್ಟಿನ ವಿಷಯಗಳಲ್ಲ. ನೇಪಾಳದಂತಹ (ಹಿಂದೂರಾಜ್ಯ) ನೆರೆ ರಾಜ್ಯವು ಸಮಿತಿಯ ಠರಾವನ್ನು ಬೆಂಬಲಿಸಿರುವುದು ಭಾರತಕ್ಕೆ ನುಂಗಲಾರದ ತುತ್ತಾಗಿದೆ. ಬೆಂಬಲ ನೀಡದಿರುವುದಕ್ಕೆ ಕಾರಣರಹಿತವಾಗಿರುವ ಭಾರತ ವಿಶ್ವದ ಇತರ ರಾಷ್ಟ್ರಗಳ ಎದುರು ತಲೆ ತಗ್ಗಿಸುವಂತಾಗುತ್ತದೆ. ಜಾತಿಪದ್ಧತಿಯ ಮೂಲ ಹಿಂದೂ ಧರ್ಮವೇ ಎಂಬುದು ಕಹಿಯಾದರೂ ಸತ್ಯ. ಒಂದು ಜಾತಿ ಇನ್ನೊಂದು ಜಾತಿಯ ಮೇಲೆ ಅಥವಾ ಕೆಳಗೆ ಇರುವುದರಿಂದ ಭೇದ ನೀತಿಯನ್ನು ಅಲ್ಲಗಳೆಯಲು ಸಾಧ್ಯವಾಗುವುದಿಲ್ಲ!

'ಜಾತಿ ಪದ್ಧತಿಯ ಎಲ್ಲಾ ಅವಘಡಗಳನ್ನು ಭಾರತ ದಿನ ನಿತ್ಯ ಅನುಭವಿಸುತ್ತಲೇ ಸಾಮಾಜಿಕವಾಗಿ, ರಾಜಕೀಯವಾಗಿ ಕುಬ್ಜವಾಗಿದೆ. ದೇಶ ಆರ್ಥಿಕವಾಗಿ ಬಲಿಷ್ಠವಾಗಿದೆ ಎಂದು ಯಾವ ಸಮಾಜವಾದಿಯೂ ಹೇಳಲಾರ. ಅಂಬೇಡ್ಕರರನ್ನು ಬಿಟ್ಟರೆ ಜಾತಿ ಪದ್ಧತಿಯ ಅನಿಷ್ಟಗಳನ್ನು ತಳಸ್ಪರ್ಶಿಯಾಗಿ ಅಭ್ಯಸಿಸಿದವರು ರಾಮಮನೋಹರ ಲೋಹಿಯಾ. ಜಾತಿ ಪದ್ಧತಿಯಿಂದ ಆಡಳಿತರಂಗ ಕಲುಷಿತಗೊಳ್ಳುತ್ತಿದೆ ಎಂಬ ಒಳನೋಟವಿದ್ದ ಲೋಹಿಯಾ, ಶೂದ್ರ–ದ್ವಿಜರ ನಡುವೆ ಮದುವೆಯಾಗುವುದು, ಆಡಳಿತರಂಗ, ಸಶಸ್ತ್ರಪಡೆಗಳ ನೇಮಕಾತಿಗೆ ಉಳಿದವುಗಳೊಂದಿಗೆ ಒಂದು ಅರ್ಹತೆಯೆಂದೂ, ಜೊತೆಗೂಡಿ ಊಟ ಮಾಡಲು ನಿರಾಕರಿಸುವುದನ್ನು ಒಂದು ಅನರ್ಹತೆಯೆಂದೂ ಕಟ್ಟಳೆಯಾದ ದಿನವೇ ಜಾತಿಯ ವಿರುದ್ಧ ಪ್ರಾಮಾಣಿಕ ಹೋರಾಟ ಪ್ರಾರಂಭವಾಗುತ್ತದೆ. ಆ ದಿನ ಇನ್ನೂ ಬರಬೇಕಿದೆ ಎಂದು ಬರೆಯುತ್ತಾರೆ.

ಜಾತಿಯು ಶ್ರಮವನ್ನು ಮಾತ್ರ ವಿಭಜಿಸುವದಿಲ್ಲ, ಶ್ರಮಿಕರನ್ನೂ ವಿಭಜಿಸುತ್ತದೆ ಎಂದು ಅಂಬೇಡ್ಕರರು ಹೇಳುತ್ತಾರೆ, ಇದು ಅಕ್ಷರಶಃ ಸತ್ಯ. ವಿಭಜಿತ ಜಾತಿಗಳು ತಮ್ಮದೇ ಗೋಡೆಗಳನ್ನು ನಿರ್ಮಿಸಿಕೊಂಡು ಕೂಪಮಂಡೂಕಗಳಾಗಿವೆ.'

ಶೋಷಣೆಯೇ ಜಾತಿಪದ್ಧತಿಯ ಜೀವಾಳ. ಸಾಮಾಜಿಕ ಅಸಮಾನತೆಯಿಂದ ಅವಮಾನವನ್ನೂ ಆರ್ಥಿಕ ಅಸಮಾನತೆಯಿಂದ ಹಸಿವನ್ನು ಕೆಳಜಾತಿಗಳು ಅನುಭವಿಸುತ್ತಿವೆ."[೧೧೧]

ಇಂತಹ ದಯನೀಯ, ಭೀಭತ್ಸ ಪರಿಸ್ಥಿತಿಯಲ್ಲಿ ಜಾತ್ಯಾತೀತ, ಜಾತಿರಹಿತ ಸಮಾಜವನ್ನು ಭಾರತದಲ್ಲಿ ನಿರ್ಮಾಣ ಮಾಡುವದು ಈ ದೇಶದ ಪ್ರಜ್ಞಾವಂತರೆಲ್ಲರ ಮುಂದಿರುವ ಬಹು ದೊಡ್ಡ ಸವಾಲಾಗಿದೆ. ಜಾಗೃತಿಯೊಂದೇ ಈ ಸಮಸ್ಯೆಗೆ ಸಧ್ಯದ ಪರಿಹಾರವೆಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ–

ಹೆತ್ತವರು ಅತೀವ ಭಾವುಕರಾದರೆ
ಮಕ್ಕಳು ಅತೀವ ಮೂಢರಾಗಬಹುದು.
ಹಿರಿಯರು ಅತೀವ ಧರ್ಮಾಂಧರಾದರೆ

---

೧೧೧. ಜಾತಿಗೋಡೆಯ ಆಕಡೆ – ಈಕಡೆ – ಡಾ॥ ಮುಡ್ನಾಕೂಡು ಚಿನ್ನಸ್ವಾಮಿ ಪ್ರಜಾವಾಣಿ ಸಾಪ್ತಾಹಿಕ ಪುರವಣಿ (೧೫–೧೧–೨೦೦೯) ಪು– ೧.

ಕಿರಿಯರು ಅತೀವ ಜಾತ್ಯಾಂಧರಾಗಬಹುದು.
ಜಾಗೃತಿಯ ಭದ್ರ ಅಡಿಪಾಯ ಹಾಕದೆ
ಭದ್ರ ಸಮಾಜವ ಕಟ್ಟಲಿಕ್ಕಾಗದೆಂದ
ಕುಮಾರ ಕಕ್ಕಯ್ಯ[೧೧೨]

ಇಂತಹ ಜಾಗೃತಿ ಯಾರು ಮಾಡಬೇಕು ? ಈ ದೇಶದ ವಿದ್ಯಾವಂತರು, ಸುಶಿಕ್ಷಿತರು, ಪಂಡಿತರು, ಶಿಕ್ಷಕರು ಈ ಕಾರ್ಯ ನಿರಂತರವಾಗಿ ಮಾಡಬೇಕು. 'ಶತಮಾನಗಳಿಂದ ಅವಕಾಶ ವಂಚಿತ ಜಾತಿಗಳಿಗೆ ಕಾನೂನಿನ ಮೂಲಕ ನೀಡಿರುವ ಮೀಸಲಾತಿಯನ್ನು ಮೆರಿಟ್ ನೆಪವೊಡ್ಡುತ್ತಾ ವಿರೋಧಿಸುವ ದೇಶದ ಪ್ರತಿಷ್ಠಿತ ವಿಶ್ವವಿದ್ಯಾಲಯಗಳ ಪಂಡಿತರು ಜಾತಿ ಪದ್ಧತಿಯಿಂದ ನಿರಂತರವಾಗಿ ಹತವಾಗುತ್ತಿರುವ ಪ್ರತಿಭೆಯ ಬಗ್ಗೆ ಮಾತಾಡುವದಿಲ್ಲ, ಜಾಣ ಮೌನ ವಹಿಸುತ್ತಾರೆ'

'ಇಂಥ ವ್ಯವಸ್ಥೆಯಲ್ಲಿ ಬಹುಸಂಖ್ಯಾತರಾಗಿರುವ ಅಸಂಘಟಿತ ಸಣ್ಣ ಜಾತಿಗಳಿಗೆ ಆಗುತ್ತಿರುವ ಅನ್ಯಾಯ ಹೇಳತೀರದು.

'ಸ್ವಾತಂತ್ರ್ಯ ನಂತರದ ೬೨ ವರ್ಷಗಳಲ್ಲಿ ದಲಿತ, ಹಿಂದುಳಿದ ಜಾತಿಗಳು ಬಂಡವಾಳಶಾಹಿ ಪಟ್ಟಿಯಲ್ಲಿ ಹೆಸರು ದಾಖಲಿಸಲು ಸಾಧ್ಯವಾಗದಿರುವುದಕ್ಕೆ ಕಾರಣ ಜಾತಿಪದ್ಧತಿಯೆಂಬ ದುರಂತ ವ್ಯವಸ್ಥೆ. ಈ ಭಸ್ಮಾಸುರ ಸ್ವರೂಪಿ ಜಾತಿಯ ಸೃಷ್ಟಿಗೆ ಕಾರಣವಾದ 'ವೈದಿಕತೆ' ಇಂದು ಎಷ್ಟು ಅಸಹಾಯಕವಾಗಿದೆ ಎಂದರೆ ತನ್ನನ್ನು ಓಲೈಸಿ ಬಂದ ಕಾರಣಗಳಿಗೆ ಬೇಡಿದ ವರವನ್ನು ದಯಪಾಲಿಸಿ, ತಾನೇ ಪೇಚಿಗೆ ಸಿಕ್ಕಿ ಪರದಾಡುವ ಪರಶಿವನಂತಾಗಿದೆ."[೧೧೩]

ಕುಲಜ – ಅಂತ್ಯಜರೆಲ್ಲ ಅರಿವನ್ನು ಅಂಗವಿಸಿಕೊಂಡು, ಜೀವನದ ಅಂತಿಮ ಸತ್ಯವನ್ನು ಅರಿತು ಸಮಾನರಾಗಬೇಕೆಂಬ ಕಳಕಳಿಯ ಆಶಯವನ್ನು ಕುಮಾರ ಕಕ್ಕಯ್ಯ ವ್ಯಕ್ತಪಡಿಸುತ್ತಾರೆ–

ಅಂತ್ಯಜ ಜನಿಸುವದು ಯೋನಿಯಲಿ,
ಕುಲಜ ಜನಿಸುವದೂ ಯೋನಿಯಲಿ.
ಅಂತ್ಯಜನ ಶರೀರ ಮಲ ಮೂತ್ರ ಚರಂಡಿ.
ಕುಲಜನ ಶರೀರವೂ ಮಲ ಮೂತ್ರ ಚರಂಡಿ
ಅಂತ್ಯಜ ಊರ ಹೊರಗೆ ಸತ್ತರೆ ಹೆಣ,
ಕುಲಜ ಊರ ಒಳಗೆ ಸತ್ತರೂ ಹೆಣ.
ಜನನ–ಮರಣ ಎಲ್ಲರನ್ನೂ
ಸಮ ಮಾಡಿತ್ತೆಂದ ಕುಮಾರ ಕಕ್ಕಯ್ಯ.[೧೧೪]

---

೧೧೨. ಕುಮಾರ ಕಕ್ಕಯ್ಯನ ವಚನಗಳು – ಪು – ೨೨೧, ವ – ೮೫೧.
೧೧೩. ಜಾತಿ ಗೋಡೆಯ ಆಕಡೆ – ಈಕಡೆ – ಡಾ॥ ಮೂಡ್ನಾಕೂಡು ಚಿನ್ನಸ್ವಾಮಿ.
ಪ್ರಜಾವಾಣಿ ಸಾಪ್ತಾಹಿಕ ಪುರವಣಿ (೧೫ – ೧೧ – ೨೦೦೯) ಪು – ೧.
೧೧೪. ಕುಮಾರ ಕಕ್ಕಯ್ಯನ ವಚನಗಳು – ಪು – ೩೭ ವ – ೧೪೨.

'ಕೀಳು ಕುಲದವರು, ಅಸ್ಪೃಶ್ಯರು, ದೀನ – ದಲಿತರು ಎಂದು ಅಂದಿನ ಸಾಂಪ್ರದಾಯಿಕ ಸಮಾಜವು ತಿರಸ್ಕರಿಸಿದ್ದ ಜನರಲ್ಲಿ ಬಸವಣ್ಣನವರು ಆತ್ಮವಿಶ್ವಾಸ ತುಂಬಿ ಅವರಲ್ಲಿದ್ದ ಕೀಳರಿಮೆಯನ್ನು ಹೋಗಲಾಡಿಸಿ ಅವರಿಗೆ ಹೊಸ ಚೈತನ್ಯ ತುಂಬಿದರು. ಇಂತಹ ಜಾತಿರಹಿತ ಒಂದು ಕಲ್ಯಾಣರಾಜ್ಯ (ಇಂದಿನ ಆಧುನಿಕ ಯುಗದಲ್ಲಿ) ಇನ್ನೂ ಸ್ಥಾಪನೆಯಾಗಬೇಕಾಗಿದೆ'[೧೧೫]

ಒಟ್ಟಿನಲ್ಲಿ ಸ್ವಾತಂತ್ರ್ಯಾನಂತರದ ಭಾರತವು 'ಜಾತಿ – ಭೇದಗಳಿಂದ ಹರಿದು ಹಂಚಿ ಹೋಗದೆ, ಸಹಜೀವನದ ಮಾರ್ಗದಿಂದ ಕೂಡಿದ, ತ್ಯಾಗ – ಭೋಗಗಳ ಸಮನ್ವಯದ ಸಮಾಜ, ವ್ಯಷ್ಟಿಯಿಂದ ಸೃಷ್ಟಿಯಾದ ಈ ಸಮಷ್ಟಿಯು ವ್ಯಷ್ಟಿ ಹಿತವನ್ನು ಸಂಪೂರ್ಣವಾಗಿ ಸಾಧಿಸಿಕೊಡಲು ಸಹಾಯಕವಾಗಬೇಕು... ಜೀವನ ರಂಗದಲ್ಲಿ ವ್ಯಕ್ತಿ ಎಲ್ಲಿಯೇ ಇರಲಿ, ಬಡವ – ಬಲ್ಲಿದನೆಂಬ ಭೇದವಿಲ್ಲದೆ, ಸ್ತ್ರೀ ಪುರುಷರೆಂಬ ತಾರತಮ್ಯವಿಲ್ಲದೆ ಎಲ್ಲರೂ ಜೀವನದ ಗುರಿಯನ್ನು ಕಂಡುಕೊಳ್ಳುವ ಸಮಾಜ, ಸರ್ವರ ಉದಯವಾಗುವ ಸಮಾಜ, ಅದು ಪೂರ್ಣ ಸಮಾಜ.[೧೧೬] ಇಂತಹ ಜಾತ್ಯಾತೀತ – ಜಾತಿರಹಿತ ಸಮಾಜ ಈ ದೇಶದಲ್ಲಿ ಮೂಡಿ ಬರಬೇಕೆಂಬುದೇ ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರ ವಚನಗಳಲ್ಲಿಯ ಆಶಯವಾಗಿದೆ.

ಅಂತೆಯೇ ಕುಮಾರ ಕಕ್ಕಯ್ಯ ಪೋಳ ಅವರು ಸ್ಪಷ್ಟವಾಗಿ ಹೇಳುತ್ತಾರೆ – 'ನಾವೆಲ್ಲರೂ ಒಂದೇ ಉಸುರಿನ, ಒಂದೇ ರಕ್ತದ, ಒಂದೇ ದೇಶದ, ಒಂದೇ ಭಾರತ ಮಾತೆಯ ಪುತ್ರರು. ನಾವೆಲ್ಲರೂ ಖಾಸ ಅಣ್ಣ ತಮ್ಮಂದಿರು, ಸಹೋದರು – ಸಹೋದರಿಯರು'[೧೧೭]

ಇಂತಹ ಒಂದು ಮಾನವೀಯತೆಯ, ಸಮತೆ, ಸ್ವಾತಂತ್ರ್ಯ, ಬಂಧುತ್ವದ ಶರಣಸಮಾಜವು ಸಾಧ್ಯವಾಗಬೇಕು. ಕುಮಾರ ಕಕ್ಕಯ್ಯನವರ ವಚನಗಳಲ್ಲಿ ನಿರಂತರವಾಗಿ ಮಿಡಿಯುವ ಹೃದಯ ಕಳಕಳಿಯನ್ನು ಕಾಣುತ್ತೇವೆ.

---

೧೧೫. ಶರಣರು ತೋರಿದ ದಾರಿ ಮತ್ತು ಗುರಿ – ಬಿ.ಎಸ್. ಪಾಟೀಲ. ಪು–೧೮ –೧೯.
೧೧೬. ಶರಣರ ಅನುಭಾವ ಸಾಹಿತ್ಯ – ಡಾ. ಎಚ್. ತಿಪ್ಪೇರುದ್ರಸ್ವಾಮಿ ಪು – ೧೪೭.
೧೧೭. ಇದು ನನ್ನ ಸಮಾಜ – ಭೀಮರಾವ ಎಸ್. ಪೋಳ ಪು– ೬೧.

## ಆ).ಕುಮಾರ ಕಕ್ಕಯ್ಯನ ವಚನಗಳಲ್ಲಿ ಧಾರ್ಮಿಕ ವಿಚಾರಗಳು:

### (i) ವರ್ಣಾಶ್ರಮ ಧರ್ಮ ಹಾಗೂ ಬಸವಣ್ಣನವರ ಧರ್ಮ:

'ಭಾರತವು ಏಷ್ಯಾಖಂಡದ ಇಟಲಿ, ಅಷ್ಟೇ ಅಲ್ಲದೆ ಅದೊಂದು ಅದ್ಭುತಗಳ ನಾಡು, ಕಲೆಯ ನೆಲೆ, ಚೆಲುವಿನ ಬೀಡು. ಧರ್ಮ ಕ್ಷೇತ್ರದಲ್ಲಿ ಅದು ಪ್ರಪಂಚದ ಗರ್ಭಗುಡಿ, ಭಾರತ ಎಂದರೆ ಧರ್ಮ ಎಂದೇ'.[೧]

ವಿಶಾಲವಾದ ಈ ಉಪಖಂಡದ ಧಾರ್ಮಿಕ ಇತಿಹಾಸವನ್ನು ಪರಿಶೀಲಿಸಿದರೆ ಕ್ರೌಂಬ್ ಎಂಬಾತನ ಮೇಲಿನ ಮಾತುಗಳು ಸತ್ಯವೆಂದು ಅರಿವಾಗುತ್ತದೆ. ಸಿಂಧೂ ಕಣಿವೆಯ ನಾಗರಿಕತೆಯ ಶೋಧನೆಯು ಭಾರತೀಯ ಸಂಸ್ಕೃತಿಯ ಇತಿಹಾಸವನ್ನು ಹಿಂದಕ್ಕೆ ನೂಕಿ ಅದು ವೇದಗಳ ಯುಗಕ್ಕಿಂತ ಹಿಂದಿನದೆಂಬುದನ್ನೂ ಈ ಸಂಸ್ಕೃತಿಯಲ್ಲಿ ಲೌಕಿಕವಾದ ನಾಗರಿಕತೆಯಷ್ಟೇ ಅಲ್ಲದೇ'ಅಧ್ಯಾತ್ಮಿಕವಾದ ಸಾಧನೆಗಳೂ ಸೇರಿವೆ ಎಂಬುದನ್ನು ತೋರಿಸಿಕೊಟ್ಟಿದೆ.

ಕ್ರಿಸ್ತಪೂರ್ವ ೫೦೦೦ ವರುಷಗಳಗಿಂತಲೂ ಹಿಂದೆ ಭಾರತದಲ್ಲಿ ಅತಿ ಪ್ರಾಚೀನವಾದ ದ್ರಾವಿಡ ಜನಾಂಗದ ಧರ್ಮವೊಂದು ಇತ್ತು. ಅದರ ಐತಿಹ್ಯಗಳು ಹರಪ್ಪ–ಮಹೆಂಜೊದಾರೋ ಉತ್ಖನನದ ಸಂದರ್ಭದಲ್ಲಿ ದೊರೆತಿವೆ. ಸಿಂಧೂ ಕಣಿವೆಯ ಪ್ರಾಂತದಲ್ಲಿ ಉಗಮಗೊಂಡು ಇಡೀ ಭರತಖಂಡವನ್ನು ವ್ಯಾಪಿಸಿದ್ದ ಧರ್ಮವೇ ಶೈವಧರ್ಮವಾಗಿದೆ. ಶಿವ ಎಂಬ ಯೋಗಿ ಪುರುಷನಿಂದ ಬೋಧಿಸಲ್ಪಟ್ಟ ಈ ಧರ್ಮವು ಪ್ರಪಂಚದಲ್ಲಿಯೇ ಅತಿ ಪ್ರಾಚೀನ ಧರ್ಮವೆಂದು ಇತಿಹಾಸಕಾರರು, ತಜ್ಞರು ನಿರ್ಧರಿಸಿದ್ದಾರೆ. ಈ ಧರ್ಮವು 'ವೇದಗಳಿಗಿಂತ ಪ್ರಾಚೀನವಾದುದು. ಸಿಂಧು ಸಂಸ್ಕೃತಿಯಲ್ಲಿಯೇ ಶಿವನ ಉಪಾಸನೆಯ ಬೇರುಗಳಿವೆ. ಪಶುಜೀವರುಗಳಿಗೆ ಒಡೆಯನಾದ ಪಶುಪತಿ ಆತನೆಂಬ ಸಾಂಕೇತಿಕ ಕಲ್ಪನೆಯು ಆಗಲೇ ತಲೆದೋರಿರಬಹುದೆಂಬುದಕ್ಕೆ ಸಿಂಧು ಸಂಸ್ಕೃತಿಯಲ್ಲಿ ದೊರೆತ ಶಿವನ ಚಿತ್ರವೇ ಸಾಕ್ಷಿ. ತ್ರಿಶೂಲದ ಆಕಾರವನ್ನುಳ್ಳ ತಲೆಯುಡಿಗೆಯನ್ನು ಧರಿಸಿದ ಶಿವ ಎತ್ತರವಾದ ಪೀಠದ ಮೇಲೆ ಯೋಗಮುದ್ರೆಯಲ್ಲಿ ಕುಳಿತಿದ್ದಾನೆ, ಸುತ್ತಲೂ ಕೆಲವು ಪ್ರಾಣಿಗಳಿವೆ. ಈ ಪಶುಪತಿಯ ಕಲ್ಪನೆಯು ಮುಂದೆ ಶೈವ ಧರ್ಮದಲ್ಲಿ ಪ್ರಧಾನವಾಗಿ ಬೆಳೆದುಬಂದಿತು. ವೇದದಲ್ಲಿ ರುದ್ರ ಎಂಬ ಹೆಸರಿನಿಂದ ಗೋಚರಿಸುವ ಉಗ್ರದೇವತೆ, ಕ್ರಮೇಣ ಪಶುಪತಿ ಎಂಬ ಹೆಸರನ್ನು ಪಡೆಯುತ್ತಾನೆ, ಭಯಂಕರನಾಗಿದ್ದವನು ಶಂಭುವಾಗುತ್ತಾನೆ. ಶಿವನಾಗುತ್ತಾನೆ, ಶಂಕರನಾಗುತ್ತಾನೆ, ಗಿರೀಶ, ಕಪರ್ದಿ, ಮೃಡ, ಶರ್ವ – ಎಂಬೆಲ್ಲಾ ಹೆಸರುಗಳನ್ನು ಪಡೆಯುತ್ತಾನೆ. ವೇದ ಪೂರ್ವದ ಶಿವ, ವೈದಿಕ ದೇವತೆಯಾಗಿ ಹಿಂದೂ ಧರ್ಮದ ವಿಕಾಸದಲ್ಲಿ ಪ್ರಧಾನ ಪಾತ್ರ ವಹಿಸಿದನೆಂಬುದನ್ನು ಗಮನಿಸಿದರೆ ಸಾಕು'[೨]

---

೧ ಯುಗಯಾತ್ರೀ ಭಾರತೀಯ ಸಂಸ್ಕೃತಿ–ಸಂ. ಹರಿದಾಸ ಭಟ್ಟಾಚಾರ್ಯ ಪು–೧

೨ ವಚನಗಳಲ್ಲಿ ವೀರಶೈವಧರ್ಮ (ಭಾರತೀಯ ಧರ್ಮ ಪರಂಪರೆ)– ಡಾ. ಎಚ್ ತಿಪ್ಪೇರುದ್ರಸ್ವಾಮಿ ಪು–೫೩

ಭಾರತದ ಅತಿ ಪ್ರಾಚೀನಕಾಲದಲ್ಲಿ ಮೂಲನಿವಾಸಿಗಳಾಗಿದ್ದ ಆದಿ ದ್ರಾವಿಡರ ಸಂಸ್ಕೃತಿ – ನಾಗರಿಕತೆಯ ಉಚ್ಛ್ರಾಯಕಾಲದಲ್ಲಿದ್ದ ಶೈವ ಧರ್ಮ – ಸಂಸ್ಕೃತಿಯು ಮಧ್ಯಏಶಿಯಾದಿಂದ ಭಾರತಕ್ಕೆ ಬಂದ ಅಲೆಮಾರಿ ಆರ್ಯರಿಂದ, ಅವರ ಹೋರಾಟ – ಸಂಘರ್ಷದಿಂದಾಗಿ ಪತನಗೊಳ್ಳುವದರ ಜೊತೆಗೆ ಆರ್ಯರ ವೈದಿಕ ಧರ್ಮದಲ್ಲಿ ಸೇರ್ಪಡೆಯಾಗಿ ಹೋಯಿತು. 'ಇಂದು ನಾವು ಯಾವುದನ್ನು ಹಿಂದೂ ಧರ್ಮ ಎಂದು ಗುರುತಿಸುತ್ತೇವೆಯೋ ಅದು ವೇದೋಪನಿಷತ್ತುಗಳ ಧರ್ಮವೆಂದು ಕೆಲವರು ಹೇಳುತ್ತಾರೆ, ಅದು ನಿಜವಲ್ಲ. ವೇದಗಳ ಕಾಲಕ್ಕಿಂತಲೂ ಹಿಂದೆ ಸಿಂಧೂನದಿಯ ಬಯಲಲ್ಲಿ ಕೃಷಿ, ವಾಣಿಜ್ಯ, ಕುಶಲ ಕರ್ಮಗಳ ತಳಹದಿಯನ್ನು ಹೊಂದಿದ್ದ ನಾಗರಿಕ ಸಂಸ್ಕೃತಿಯೊಂದು ಅಸ್ತಿತ್ವದಲ್ಲಿತ್ತು'[೩]

ಆರ್ಯರ ಆಗಮನದಿಂದಾಗಿ, ಅವರು ಉತ್ತರಭಾರತವನ್ನು ಕ್ರಮೇಣವಾಗಿ ವ್ಯಾಪಿಸಿಕೊಂಡು ತಮ್ಮದೇ ಆದ ಧರ್ಮ ಸಂಸ್ಕೃತಿಯ ವ್ಯವಸ್ಥೆಯನ್ನು ಹುಟ್ಟುಹಾಕಿದರು. ಇದರಲ್ಲಿ ಪ್ರಾಚೀನವಾದ ಶೈವ ಧರ್ಮ ಸಂಸ್ಕೃತಿಯು ಮಿಶ್ರಣವಾಯಿತು. ಅಂತೆಯೇ ಆರ್ಯರ ಧರ್ಮವನ್ನು ಆರ್ಯಧರ್ಮ, ಸನಾತನಧರ್ಮ ಎಂದು ಕರೆಯಲಾಯಿತು. ವೇದಗಳೂ ರಚನೆಯಾದವು. ಸಮಾಜೋ – ಧಾರ್ಮಿಕ ವ್ಯವಸ್ಥೆಗಾಗಿ ವರ್ಣಾಶ್ರಮಗಳನ್ನು ಹುಟ್ಟು ಹಾಕಲಾಯಿತು. ಋಗ್ವೇದದ ೧೦ ನೇ ಮಂಡಲದ ೯೦ ನೇ ಶ್ಲೋಕದಲ್ಲಿ ಇದಕ್ಕೆ ಉಲ್ಲೇಖವಿದೆ. ' ವಿರಾಟ್ ಪುರುಷನ ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ತೊಡೆಯಿಂದ ವೈಶ್ಯ, ಪಾದದಿಂದ ಶೂದ್ರನೂ ಹುಟ್ಟಿದರು'[೪]

ಈ ವಿಚಾರಧಾರೆಯೇ ವೇದಗಳು, ಆಗಮಗಳು, ಭಗವದ್ಗೀತೆ, ಬ್ರಹ್ಮಸೂತ್ರಗಳಲ್ಲಿ ಮುಂದುವರೆದು ಸನಾತನ ಆರ್ಯಧರ್ಮವೇ ವೈದಿಕ ಧರ್ಮವೆನಿಸಿತು. ಈ ಚಾತುರ್‌ವರ್ಣದಲ್ಲಿ ಬ್ರಾಹ್ಮಣ ಅತಿ ಉಚ್ಚ ಸ್ಥಾನದಲ್ಲಿದ್ದುದರಿಂದ ಆತನೇ ಧಾರ್ಮಿಕ ವಿಧಿ–ವಿಧಾನಗಳನ್ನು ರೂಪಿಸಿ, ಕ್ರಿಯಾಕರ್ಮಗಳನ್ನು ನೆರವೇರಿಸುವುದರಿಂದ ಆತನಿಂದ ಪ್ರತಿಪಾದಿಸಲ್ಪಟ್ಟ ಧರ್ಮವಾದ್ದರಿಂದ ಇದನ್ನು ' ಬ್ರಾಹ್ಮಣಧರ್ಮ' ವೆಂದೇ ಕರೆಯಲಾಯಿತು. ಅನಂತರ ಉತ್ತರಭಾರತವನ್ನು ಆರ್ಯಾವರ್ತ ಎಂದು ಸಂಬೋಧಿಸಿಕೊಂಡು ಬರಲಾಯಿತು. ದಕ್ಷಿಣಭಾರತವನ್ನು ದ್ರಾವಿಡನಾಡು ಎಂದು ಪ್ರಚುರಪಡಿಸಲಾಯಿತು.

ಪರ್ಶಿಯನ್ನರು ಉತ್ತರಭಾರತದ ಮೇಲೆ ದಾಳಿ ಮಾಡಿದಾಗ, ಅವರು 'ಸಿಂಧು' ನದಿಯ ಭೂಪ್ರದೇಶವನ್ನು 'ಹಿಂದು' ಸ್ಥಾನವೆಂದು ಕರೆದರು. ಈ ಹಿಂದುಸ್ಥಾನದವರ ಧರ್ಮವೇ ಅಂದರೆ ಸನಾತನ ವೈದಿಕ, ಬ್ರಾಹ್ಮಣ ಧರ್ಮವು 'ಹಿಂದೂಧರ್ಮ' ಎಂಬ ಹೆಸರಿನಲ್ಲಿ ಪ್ರಚಾರಕ್ಕೆ ಬಂದಿತು. "ಹಿಂದು ಎಂಬ ಪದವು ಮೂಲತಃ ಪ್ರದೇಶವಾಚಕವಾಗಿದ್ದು ಧರ್ಮವಾಚಕವಾಗಿರಲಿಲ್ಲ. ಭಾರತಕ್ಕೆ

---

೩ ಭಾರತೀಯ ಚಿಂತನೆ ಹಿಂದೂಧರ್ಮ ಕಮ್ಯುನಿಸಂ–ಬಿ.ವಿ. ಕಕ್ಕಿಲ್ಲಾಯ ಪು–೫೦

೪. ಋಗ್ವೇದ ೧೦ನೇ ಮಂಡಲ, ೯೦ನೇ ಸೂಕ್ತ ಶ್ಲೋಕ ೧೨.

ಹೊರಗಿನಿಂದ ಬಂದವರು – ಪರ್ಶಿಯಾ, ಗ್ರೀಸ್, ಅರೇಬಿಯಾ ನಿವಾಸಿಗಳು ಸಿಂಧುನದಿಯ ಪ್ರದೇಶವನ್ನು 'ಹಿಂದು' ಎಂದು ಕರೆಯತೊಡಗಿದರು. ನಾವು ಯಾವುದನ್ನು 'ಸ' ಎನ್ನುತ್ತೇವೆಯೋ ಪರ್ಶಿಯನ್ನರು ಅದನ್ನು 'ಹ' ಎಂದು ಉಚ್ಚರಿಸುತ್ತಾರೆ .ಉದಾಹರಣೆಗೆ 'ಅಸುರ' ಎಂಬ ಪದವನ್ನು ಅವರು 'ಅಹುರ' ಎಂದು ಉಚ್ಚರಿಸುತ್ತಾರೆ. ಅದೇ ರೀತಿ 'ಸಿಂಧು' ಎಂಬುದನ್ನು ಅವರು 'ಹಿಂದು' ಎಂದು ಉಚ್ಚರಿಸತೊಡಗಿದರು. ಉಳಿದವರು ಅವರನ್ನೇ ಅನುಕರಣೆ ಮಾಡಿದರು.

ಆ ಮೇಲೆ ಅವರು ಸಿಂಧೂ ನದಿಯ ದಕ್ಷಿಣಕ್ಕೂ, ಪೂರ್ವಕ್ಕೂ, ಪಶ್ಚಿಮಕ್ಕೂ ಇದ್ದ ಭೂಭಾಗವನ್ನೆಲ್ಲ 'ಹಿಂದು' ಎಂದೇ ಕರೆಯತೊಡಗಿದರು. ಅರ್ಥಾತ್ ಯಾವುದನ್ನು ನಾವು ಇಂದು ಭಾರತ ಎನ್ನುತ್ತೇವೆಯೋ ಅದು ಅವರಿಗೆ ಹಿಂದೂಸ್ಥಾನವಾಯಿತು. ಮುಸ್ಲಿಮರು ಇಲ್ಲಿ ತಳವೂರಿದ ನಂತರ ಇಲ್ಲಿಯ ನಿವಾಸಿಗಳನ್ನೆಲ್ಲ ಅವರು ಹಿಂದುಗಳೆಂದು ಕರೆಯತೊಡಗಿದರು."[೫]

ಈ ರೀತಿಯಾಗಿ ವೇದಕಾಲೀನ ಚಾತುರ್ವರ್ಣದ ವೈದಿಕ, ಬ್ರಾಹ್ಮಣಧರ್ಮವೇ ಹಿಂದೂಧರ್ಮ, ಹಿಂದೂ ಜನಾಂಗ, ಹಿಂದೂಸ್ಥಾನದವರ ಧರ್ಮ ಎಂದು ವ್ಯಾಪಕವಾಗಿ ಪ್ರಚಾರಕ್ಕೆ ಬಂದಿತು. ಈ ಧರ್ಮದ ಆಧಾರಗ್ರಂಥಗಳಾದ ವೇದಗಳು, ಉಪನಿಷತ್ತುಗಳು, ಭಗವದ್ಗೀತೆ ಮುಂತಾದವುಗಳನ್ನು ಆಧರಿಸಿ ಧಾರ್ಮಿಕ ಕಾನೂನು – ಕಟ್ಟಳೆಗಳ ಸ್ಮೃತಿ ಗ್ರಂಥಗಳ ರಚನೆಯಾಯಿತು. ಮನುಸ್ಮೃತಿಯು ಚಾತುರ್ವರ್ಣ ಧರ್ಮ – ಸಮಾಜ ವ್ಯವಸ್ಥೆಯನ್ನು ಗಟ್ಟಿಗೊಳಿಸಿ, ಶ್ರೇಣೀಕೃತವಾದ ಶೋಷಣೆಯನ್ನೇ ಹುಟ್ಟು ಹಾಕಿತು. "ಬ್ರಾಹ್ಮಣರೆಂದು ಕರೆಯಲಾದ ಪುರೋಹಿತ ಜಾತಿಯ ಉದಯವಾಯಿತು. ಅದರ ಜೊತೆಗೆ ಎಲ್ಲಾ ಮೌಢ್ಯಗಳು, ಸಮಾಜದ ವಿಚ್ಛಿದ್ರೀಕರಣ, ಕ್ರೂರ ಸಂಪ್ರದಾಯಗಳು, ನಿರ್ಜಿವ ಆಚರಣೆಗಳು ಬಂದವು. ಇವು ಎಲ್ಲಾ ದೇಶಗಳಲ್ಲಿಯೂ 'ಪುರೋಹಿತರಿಗೆ ಪ್ರಾಬಲ್ಯ ಒದಗಿಸಿವೆ. ಇವೇ ಅಂತಿಮವಾಗಿ ಭಾರತದ ಸ್ವಾತಂತ್ರ್ಯವನ್ನು ಹಾಳು ಮಾಡಲೂ, ಹಿಂದೂ ಜನಾಂಗಗಳನ್ನು ಗುಲಾಮರನ್ನಾಗಿಸಲೂ ಕಾರಣವಾದವು."[೬]

ಶ್ರೇಣೀಕೃತ ಹಿಂದೂ ಧರ್ಮವು ಜನರನ್ನು ಹುಟ್ಟಿನ ಜಾತಿಗಳಿಂದ, ಮಾಡುವ ವೃತ್ತಿ ಕಸಬುಗಳಿಂದ ಮೇಲು – ಕೀಳು, ಉಚ್ಚ – ನೀಚ, ಸ್ಪೃಶ್ಯ – ಅಸ್ಪೃಶ್ಯ, ವಿಪ್ರ –ಶೂದ್ರ ಎಂದು ವಿಂಗಡಿಸಿತು. ವರ್ಣಭೇದ, ವರ್ಗಭೇದ, ಆಶ್ರಮಭೇದ, ಲಿಂಗಭೇದ, ಜಾತಿಭೇದಗಳಿಂದಾಗಿ ಶೂದ್ರ ಹಾಗೂ ದಲಿತ ಪಂಚಮರ, ಎಲ್ಲ ಜಾತಿಗಳ ಸ್ತ್ರೀಯರು ಶೋಷಣೆಗೆ ಒಳಗಾದರು. ಸ್ವಾಮಿ ವಿವೇಕಾನಂದರು ಇಂತಹ ಕರ್ಮಠ ಧರ್ಮವ್ಯವಸ್ಥೆಯನ್ನು ಅತಿ ನಿಷ್ಠುರವಾಗಿ ಖಂಡಿಸುತ್ತಾರೆ – 'ಭರತಖಂಡದಲ್ಲಿ ಧರ್ಮವೇನಾದರೂ ಉಳಿದುಕೊಂಡಿರುವುದೆಂದು ತಿಳಿದುಕೊಂಡಿರುವಿಯೇನು? ಜ್ಞಾನ, ಭಕ್ತಿ, ಯೋಗಗಳ ಮಾರ್ಗವೆಲ್ಲ ಹೋಯಿತು. ಈಗ ಉಳಿದಿರುವುದು

೫. ಲಿಂಗಾಯತರು ಹಿಂದೂಗಳಲ್ಲ – ಡಾ. ಎನ್.ಜಿ. ಮಹಾದೇವಪ್ಪ ಪು–೧೩. ೧೪.
೬ ಹಿಂದೂ ಸಾಮ್ರಾಜ್ಯ ಶಾಹಿಯ ಇತಿಹಾಸ – ಡಾ॥ ಕೆ.ಎಸ್. ಭಗವಾನ ಪು– ೪೧

ಒಂದೇ ಧರ್ಮ. ಅದೇ ಮುಟ್ಟಬೇಡ, ಮುಟ್ಟಬೇಡ ಎಂಬುದು. ಪ್ರಪಂಚವೆಲ್ಲಾ ಮೈಲಿಗೆ, ನಾನೊಬ್ಬನೇ ಮಡಿ! ಆಹಾ! ಎಷ್ಟು ತಿಳಿಯಾದ ಬ್ರಹ್ಮಜ್ಞಾನ' (೭) 'ನಾನೇ ಶುದ್ಧ ಉಳಿದವರೆಲ್ಲ ಅಶುದ್ಧರೆಂಬುದು. ಇದು ಮೃಗೀಯ ರಾಕ್ಷಸೀ ಧರ್ಮ. ನರಕ ಸದೃಶವಾದ ಧರ್ಮ. ಸ್ಪಾರ್ಟನರು ಹೆಲಾಟರನ್ನೂ, ಅಮೇರಿಕಾದವರು ನೀಗ್ರೋಗಳನ್ನು ತುಳಿದುದಕ್ಕಿಂತಲೂ ಹೆಚ್ಚಾಗಿ ಕೆಲವು ವೇಳೆ ದೇಶದ ಶೂದ್ರರು ತುಳಿಯಲ್ಪಟ್ಟಿದ್ದಾರೆ.[೮]

ಇಂತಹ ಕ್ರೂರ ಕರ್ಮಠ ಧರ್ಮ ಸಮಾಜ ವ್ಯವಸ್ಥೆಯಲ್ಲಿ ದಲಿತನಾಗಿ ಹುಟ್ಟಿ, ಯಮಯಾತನೆಗಳನ್ನು ಅನುಭವಿಸಿದ ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ವಚನಗಳಲ್ಲಿ ಹಿಂದೂ ಧರ್ಮದ ಹೆಗ್ಗಳಿಕೆಯನ್ನು ವಿಡಂಬಿಸಿದ್ದಾರೆ –

ವಿಶಾಲ ಸಮುದ್ರ ಜಲವೋ ಜಲ
ಆದರೆ ಕುಡಿಯಲು ಗುಟುಕು ನೀರಿಲ್ಲ.
ಹಿಂದೂ ಧರ್ಮದ ಹೆಗ್ಗಳಿಕೆಯೋ ಹೆಗ್ಗಳಿಕೆ
ದೀನ ದಲಿತ ಶೂದ್ರರ ಬಾಳಿಗೆ ಬೆಲೆಯೇ ಇಲ್ಲ.
ಬಂಧುಗಳಲ್ಲಿ ಭೇದ ಕಲ್ಪಿಸಿ ಹೊರಗಿಟ್ಟದ್ದು
ಜಗದಲಿ ಹಿಂದೂ ಧರ್ಮವೊಂದು
ಅಪವಾದವೆಂದ ಕುಮಾರ ಕಕ್ಕಯ್ಯ.[೯]

ವಿಶಾಲ ಸಮುದ್ರ ಜಲವೋ ಜಲ! ಕುಡಿಯಲು ಗುಟುಕು ನೀರಿಲ್ಲ. ಹಿಂದೂ ಧರ್ಮದ ಹೆಗ್ಗಳಿಕೆಯೋ ಹೆಗ್ಗಳಿಕೆ! ದಲಿತರ ಬಾಳಿಗೆ ಬೆಲೆಯೇ ಇಲ್ಲ. ಪರದೇಶಗಳ ವೇದಿಕೆಗಳ ಮೇಲೆ ನಿಂತು ತಮ್ಮ ಧರ್ಮದ ಘನತೆಯ ಬಗ್ಗೆ ಭಾಷಣ ಬಿಗಿಯುವ ಈ ಹಿಂದೂ ಧರ್ಮದ ಗುರುಗಳು, ಧರ್ಮದ ಹೆಸರಿನಲ್ಲಿ ದಲಿತರಿಗೆ ಬಹಿಷ್ಕಾರ ಹಾಕಿ ಊರ ಹೊರಗಿಟ್ಟದ್ದನ್ನು ಹೇಳುವದಿಲ್ಲ. ಹೆತ್ತ ತಾಯಿ, ಒಡಹುಟ್ಟಿದ ಸಹೋದರಿಯರು ವಿಧವೆಯರಾದಾಗ ತಲೆ ಬೋಳಿಸುವದನ್ನು ಸಮರ್ಥಿಸುವದಿಲ್ಲ. ಸವರ್ಣೀಯನಾದ ದ್ರೋಣಾಚಾರಿಯು ಶೂದ್ರನಾದ ಏಕಲವ್ಯನ ಹೆಬ್ಬೆರಳನ್ನು ಗುರುದಕ್ಷಿಣೆಯ ಹೆಸರಿನಲ್ಲಿ ಕತ್ತರಿಸಿಕೊಂಡಿದ್ದನ್ನು ವಿವರಿಸುವದಿಲ್ಲ. ಶಂಭೂಕ ಋಷಿಯನ್ನು ಅವನು ಶೂದ್ರನೆಂಬ ಒಂದೇ ಒಂದು ಕಾರಣದಿಂದ ದೇವಾಂಶ ಸಂಭೂತನೆನ್ನಲ್ಪಡುವ ರಾಮನು ಕೊಂದು ಹಾಕಿದ ಘೋರ ಕೃತ್ಯದ ಬಗ್ಗೆ ಚಕಾರ ಶಬ್ದ ಎತ್ತುವದಿಲ್ಲ. ಹಲವಾರು ಧರ್ಮಗ್ರಂಥಗಳನ್ನು ಗೋಖಿಂಪಟ್ಟಿ ಹೊಡೆದ ಈ ಸ್ವಾಮಿಗಳು, ಜಗತ್ತಿನಲ್ಲಿ ಒಳ್ಳೆಯದೆನ್ನುವದೇನಿದೆಯೋ ಅದೆಲ್ಲವನ್ನೂ ವೈದಿಕ ಧರ್ಮಕ್ಕೆ

---

೭. ಸ್ವಾಮಿ ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು – ಸಂ. ಜ. ಹೋ.ನಾರಾಯಣಸ್ವಾಮಿ ಪು–೨೩.

೮. ಸ್ವಾಮಿ ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು – ಸಂ. ಜ. ಹೋ.ನಾರಾಯಣಸ್ವಾಮಿ ಪು–೨೪.

೯. ಕುಮಾರ ಕಕ್ಕಯ್ಯನ ವಚನಗಳು ಪು – ೧೯೬, ವ – ೭೫೪.

ತಳಕುಹಾಕಿ ಅಹುದೆನಿಸಿಕೊಂಡು ಬರುತ್ತಾರೆ. ಹಂದಿ, ನಾಯಿ, ಕುರಿ, ಕೋಣ, ಎತ್ತು, ಎಮ್ಮೆಗಳು ಹೊಕ್ಕು ಬರುವ ಸಾರ್ವಜನಿಕ ಬಾವಿಗಳಿಗೆ, ಸ್ವಾತಂತ್ರ್ಯ ಸಿಕ್ಕು ಕೆಲವೊಂದು ದಶಕಗಳೇ ಕಳೆದರೂ ಇನ್ನೂವರೆಗೆ ದೀನ ದಲಿತರಿಗೆ, ಬಹಿಷ್ಕಾರ ಇರುವಾಗ, ನಮ್ಮ ಶ್ರೇಷ್ಠ ಧರ್ಮವೆಂದು ಹೇಳಿಕೊಳ್ಳಲು ಇವರಿಗೆ ಮನಸ್ಸಾದರೂ ಹೇಗೆ ಒಪ್ಪುವದೋ ನಾನು ಕಾಣೆ.[೧೦]

> ಅನಾರ್ಯಮಾರ್ಯ ಕರ್ಮಾಣಮಾರ್ಯಂ ಚಾನಾರ್ಯ।
> ಕರ್ಮಿಣಂ ಸಂಪ್ರದಾರ್ಯಾಬ್ರವಿದ್ಧಾತಾ ನ ಸಮೌ ನಾ ಸಮಾವಿತಿ॥
> ಆರ್ಯ ಕೆಟ್ಟ ಕೆಲಸ ಮಾಡಿದರೂ ಅನಾರ್ಯನೆನಿಸುವದಿಲ್ಲ
> ಅನಾರ್ಯ ಒಳ್ಳೆಯ ಕೆಲಸ ಮಾಡಿದರೂ ಆರ್ಯನೆನಿಸುವದಿಲ್ಲ.
> ಖೂಳ ಖಳನಾದರೂ ಕುಲಜನಿಗುಂಟು ಧರ್ಮದ ಕವಚ
> ಸತ್ಯ ಸಜ್ಜನನಾದರೂ ಅಂತ್ಯಜನಿಗಿಲ್ಲ ಮಾನಮರ್ಯಾದೆ ಸಾಯುವತನಕ.
> ಜಾತಿ ಪ್ರತಿಷ್ಠೆ ಜನ್ಮಸಿದ್ಧ ಹಕ್ಕೆಂದು ಸಾಧಿಸುವ ಈ
> ಧಾರ್ಮಿಕ ಶಾಸನಕೆ ಭೂತಗಳೂ ನಾಚಬೇಕೆಂದ
> ಕುಮಾರ ಕಕ್ಕಯ್ಯಾ.[೧೧]

ಮನಸ್ಮೃತಿಯಂತಹ ಸ್ಮೃತಿಗ್ರಂಥಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದ್ದ ಕುಮಾರ ಕಕ್ಕಯ್ಯನವರು ಅದರ ಒಳಸುಳಿಗಳನ್ನೆಲ್ಲ ಅರಿತಿದ್ದರು. ಅಂತೆಯೇ ಉಗ್ರವಾಗಿ ಆ ಕೃತಿಯನ್ನು ಖಂಡಿಸಿದ್ದಾರೆ.

> ಸವರ್ಣೀಯರ ಪ್ರತಿಷ್ಠೆಗಾಗಿ ಧರ್ಮ
> ಶೂದ್ರರ ಶೋಷಣೆಗಾಗಿ ಜಾತಿಮತ.
> ರಾಜ ಮಹಾರಾಜರ ಪ್ರಭುತ್ವಕ್ಕಾಗಿ ದೇಶ.
> ಪುರೋಹಿತರ ಹಿರಿಮೆಗಾಗಿ ಪಾರಮಾರ್ಥ
> ಇಂತೀ ಸ್ಮೃತಿ ಶಾಸ್ತ್ರ ಜಾತಿ ಧರ್ಮಗಳು
> ಭಾರತ ಹಾಳು ಮಾಡಿದವೆಂದ
> ಕುಮಾರ ಕಕ್ಕಯ್ಯ.[೧೨]

ಚಾತುರ್ವರ್ಣ ಧರ್ಮ – ಸಮಾಜ ವ್ಯವಸ್ಥೆಯನ್ನು ರೂಪಿಸಿರುವುದರ ಹಿಂದೆ ಪುರೋಹಿತಶಾಹಿಯ ವಿಕೃತ ಮನ, ಬುದ್ಧಿ, ಅಹಂಕಾರ, ಸ್ವಾರ್ಥಗಳು ಕೆಲಸ ಮಾಡಿವೆಯೆಂಬುದನ್ನು ಎತ್ತಿ ತೋರಿಸುತ್ತಾರೆ–

> ತಮ್ಮವರ ಆಶೆ, ತಮ್ಮವರ ದುರಾಶೆ
> ತಮ್ಮವರ ಸೋಮ, ತಮ್ಮವರ ಕಾಮ

---

೧೦. ಮೂಕನ ಭಾಷಣ – ಶ್ರೀ ಬಿ.ಎಸ್. ಪೋಳ ಪು– ೯೨–೯೩.
೧೧. ಕುಮಾರ ಕಕ್ಕಯ್ಯನವಚನಗಳು – ಪು –೨೩೯ ವ – ೯೨೩.
೧೨. ಕುಮಾರ ಕಕ್ಕಯ್ಯನ ವಚನಗಳು ಪು – ೩೪೩, ವ – ೧೩೩೦.

ತಮ್ಮವರ ಆಸ್ತಿ, ತಮ್ಮವರ ಸಂಪತ್ತು
ತಮ್ಮವರ ಪ್ರತಿಭೆ, ತಮ್ಮವರ ಪ್ರಭುತ್ವ
ಧರ್ಮದ ಹೆಸರಲ್ಲಿ ಭದ್ರಪಡಿಸುವದೇ
ಚಾತುರ್ವರ್ಣದ ಗುಟ್ಟೆಂದ ಕುಮಾರ ಕಕ್ಕಯ್ಯ[೧೩]

ಭಾರತದಲ್ಲಿರುವ ಜನಾಂಗ, ಸರ್ವರಿಗೂ ಒಂದೇ ರೀತಿಯ ಹಸಿವು, ತೃಷೆ, ಜನನ, ಮರಣಗಳು ಇರುವಾಗ, ಸವರ್ಣೀಯರು ತಮ್ಮವರನ್ನು ತಾವೇ ಕೀಳು ಎಂದು ಕಾಣುವುದು ಅಧರ್ಮ, ಅನ್ಯಾಯವಾಗಿದೆ. ಇಂಥವರಿಗೆ ಅಧರ್ಮಿಗಳೆನ್ನಬಹುದು. ಇವರು ಪರಿಪಾಲಿಸುವ ಧರ್ಮ ಅಧರ್ಮವಾಗಿದೆಯಂದು ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ತಿಳಿಯಪಡಿಸುತ್ತಾರೆ–

ಅನ್ನ ಆಹಾರ ಒಂದೇ, ಹಸಿವು ತೃಷೆಯೊಂದೇ
ಬಾಳು ಬದುಕು ಒಂದೇ, ಜನನ ಮರಣವೊಂದೇ
ವೇಷ ಭಾಷೆಯೊಂದೇ, ಆಚಾರ ವಿಚಾರವೊಂದೇ
ಹಿಂದೂ ಜನಾಂಗವೊಂದೇ, ದೈವ ಧರ್ಮವೊಂದೇ
ತಮ್ಮವರಿಗೆ ತಾವೇ ಕೀಳೆನ್ನುವ ವರ್ಣಾಶ್ರಮ
ಅಧರ್ಮ ಅಲ್ಲೆಂದರೆ ಇವರಿಗೆ ಧರ್ಮವೇ
ಇಲ್ಲೆಂದ ಕುಮಾರ ಕಕ್ಕಯ್ಯ[೧೪]

ಭಾರತದ ಸನಾತನ ಪರಂಪರೆಯ ಕರ್ಮಠರು ಎಷ್ಟು ವಿದ್ಯಾವಂತರು, ಬುದ್ಧಿವಂತರು,ಜ್ಞಾನಿಗಳು, ವಿಜ್ಞಾನಿಗಳಾದರೂ ಕೂಡ ಈ ಮಹಾನುಭಾವರು ತಮ್ಮ ಮನುಶಾಸ್ತ್ರ ಪರಂಪರೆಯ ಮೌಢ್ಯಕ್ಕೆ ಇವರೆಲ್ಲ ಒಳಗಾಗಿದ್ದಾರೆ. ವ್ಯಷ್ಟಿ ಸಮಷ್ಟಿಯ ಪ್ರಗತಿಗೆ, ತಮ್ಮ ಪ್ರಗತಿಗೆ ತಾವೇ ಕಂಟಕರಾಗಿದ್ದಾರೆಂದು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ಹೇಳುತ್ತಾರೆ–

ಕಾಲುಗಳಿದ್ದರೂ ಮುಂದಕ್ಕೆ ಹೋಗದ ಹೆಳವರು
ಕಣ್ಣುಗಳಿದ್ದರೂ ಮತ್ತೊಂದನ್ನೂ ನೋಡದ ಕುರುಡರು
ಸುಶಿಕ್ಷಿತರಾದರೂ ಸಂಪ್ರದಾಯ ಬಿಡದ ಶಿಷ್ಟಾಚಾರಿಗಳು
ವಿಜ್ಞಾನಿಗಳಾದರೂ ಪಂಚಾಂಗ ತ್ಯಜಿಸದ ಪಾಮರರು
ಶಾಸ್ತ್ರ ಪರಂಪರೆ ಬಿಡಲಿಕ್ಕಾಗದೆನ್ನುವ ಸನಾತನಿಗಳು
ತಮ್ಮ ಪ್ರಗತಿಗೆ ತಾವೇ ಕಂಟಕರೆಂದ
ಕುಮಾರ ಕಕ್ಕಯ್ಯ.[೧೫]

---

೧೩. – ಅದೇ – ಪು – ೮೦, ವ – ೩೧೨,
೧೪. – ಅದೇ – ಪು – ೮, ವ– ೨೯.
೧೫. ಕುಮಾರ ಕಕ್ಕಯ್ಯನ ವಚನಗಳು –ಪು ೧೭೬ ವ–೬೮೦

ವೈದಿಕ ಧರ್ಮದ ಕರ್ಮಕಾಂಡವು ಯಜ್ಞ-ಯಾಗ, ಹೋಮ-ಹವನಗಳ ಆಚರಣೆಯಲ್ಲಿ ಪ್ರಾಣಿಬಲಿ ಕೊಡುವದನ್ನು ಕುಮಾರ ಕಕ್ಕಯ್ಯನವರು ಖಂಡಿಸುತ್ತಾರೆ. ದಯಾ ಹಿ ಧರ್ಮಸ್ಯ ಮೂಲಂ' ಅಹಿಂಸಾ ಪರಮೋಧರ್ಮಎಂದು ಸಂಸ್ಕೃತ ಶ್ಲೋಕಗಳನ್ನು ಉಚ್ಚರಿಸುವ ವೈದಿಕರು ಯಜ್ಞ ಯಾಗ ಮಾಡಿ ಬಲಿ ಕೊಡುವದು ಯಾವ ನ್ಯಾಯವೆಂದು ಕೇಳುತ್ತಾರೆ. ಸಕಲ ಪ್ರಾಣಿಗಳಲ್ಲಿ ಭಗವಂತನ ಆತ್ಮಚೈತನ್ಯವೇ ಇರುವಾಗ ಚಾತುರ್ವರ್ಣದ ಹೆಸರಿನಲ್ಲಿ ಸ್ಪೃಶ್ಯ -ಅಸ್ಪೃಶ್ಯ ಎಂದು ಪ್ರಶ್ನಿಸುತ್ತಾರೆ. ಇಂಥವರು ಕಲ್ಪಿಸಿಕೊಂಡಿರುವ ಧರ್ಮಾಚರಣೆಗಳು ದುರಾಚಾರಗಳಿಂದ ಕೂಡಿವೆ ಎಂದು ಜನಸಾಮಾನ್ಯರಿಗೆ ಮನವರಿಕೆ ಮಾಡಿಕೊಡುತ್ತಾರೆ-

ಅಹಿಂಸಾ ಪರಮೋಧರ್ಮವೆನ್ನುವಾಗ
ಯಜ್ಞಯಾಗಾದಿಗಳ ಹೆಸರಿನಲ್ಲಿ ಬಲಿದಾನವೇಕೆ ?
ಮಮಾತ್ಮಾ ಸರ್ವಭೂತಾತ್ಮಾವೆನ್ನುವಾಗ
ಚಾತುರ್ವರ್ಣದ ಹೆಸರಲ್ಲಿ ಅಸ್ಪೃಶ್ಯತೆಯೇಕೆ ?
ಮಾನವ ಕಲ್ಪಿತ ಧರ್ಮಗಳಲ್ಲಿ ಸದಾಚಾರಕ್ಕಿಂತ ದುರಾಚಾರಗಳೇ ಹೆಚ್ಚೆಂದ
ಕುಮಾರ ಕಕ್ಕಯ್ಯ[೧೬]

ಈ ರೀತಿಯಾಗಿ ವರ್ಣಭೇದ, ವರ್ಗಭೇದ, ಆಶ್ರಮಭೇದ, ಜಾತಿಭೇದ, ಲಿಂಗಭೇದವುಳ್ಳ, ಪೂಜಾರಿ- ಪುರೋಹಿತರ ಶೋಷಣೆಯ ವರ್ಣಾಶ್ರಮಧರ್ಮವನ್ನು ತಿರಸ್ಕರಿಸಿ, ವರ್ಣಾನಾಂ ಕಿಂ ಪ್ರಯೋಜನಂ? ಎಂದು ಪ್ರಶ್ನಿಸಿ, ಸಕಲಜೀವಾತ್ಮರಿಗೆ ಲೇಸು, ಮಾನವ ಕುಲದ ಕಲ್ಯಾಣ ಬಯಸಿದ, ಸಮತೆ-ಸ್ವಾತಂತ್ರ್ಯ - ಬಂಧುತ್ವದ ಮಾನವತಾವಾದಿ ಧರ್ಮ ಬಸವಧರ್ಮವಾಗಿದೆ.

ಕುಮಾರ ಕಕ್ಕಯ್ಯ ಪೋಳ ಅವರು ಭಾರತದ ಶೈವ, ವೈದಿಕ, ಜೈನ, ಬೌದ್ಧ, ಶಿಖ್. ಲಿಂಗಾಯತ ಧರ್ಮಗಳನ್ನೆಲ್ಲ ಆಳವಾಗಿ ಅಧ್ಯಯನಮಾಡಿದವರು. ವರ್ಣವ್ಯವಸ್ಥೆಯ ಕರ್ಮಠ ಸಂಪ್ರದಾಯಗಳ, ದೀನ-ದಲಿತರ ಉದ್ಧಾರಕ್ಕೆ ಕುಠಾರಪ್ರಾಯವಾದ ಚಾತುರ್ವರ್ಣ ಹಿಂದೂ ಧರ್ಮವನ್ನು ತಿರಸ್ಕರಿಸಿದವರು. ಡಾ॥ ಬಾಬಾಸಾಹೇಬ ಅಂಬೇಡ್ಕರರು 'ಹಿಂದೂ ಆಗಿ ಹುಟ್ಟಿದ್ದೇನೆ, ಹಿಂದೂ ಆಗಿ ಸಾಯಲಾರೆ ' ಎಂದು ನಿರ್ಣಯಿಸಿ ಕೊನೆಗೆ ಹಿಂದೂ ಧರ್ಮ ತ್ಯಜಿಸಿ ಬೌದ್ಧ ಧರ್ಮವನ್ನು ಅಪ್ಪಿಕೊಂಡಂತೆ, ಶ್ರೀ ಕುಮಾರ ಕಕ್ಕಯ್ಯ ಪೋಳ ಅವರು ವರ್ಣಶ್ರಮ ಹಿಂದೂಧರ್ಮ ತಿರಸ್ಕರಿಸಿ ಸಮಾನತೆಯು ಬಸವಧರ್ಮವನ್ನು ಅಪ್ಪಿಕೊಂಡರು."ಬಸವಣ್ಣನವರ ಧರ್ಮ 'ಉಳ್ಳವರ' ಧರ್ಮವಲ್ಲ, ಇಲ್ಲದವರ ಧರ್ಮ. ಸ್ಥಾವರದೇವಾಲಯಗಳ ಧರ್ಮವಲ್ಲ, ಜಂಗಮದೇವಾಲಯಗಳ ಧರ್ಮ. ನಿರ್ಜೀವಕ್ಕೆ ಜೀವ ಬಲಿಯಾಗುವ ಧರ್ಮವಲ್ಲ, ಜೀವಿ ಕರೆದರೆ ದೇವ ಓ ಎಂದು ಓಡಿ ಬರುವ ಧರ್ಮ. ಪ್ರಾಯಶ್ಚಿತ್ತಗಳ ದುಬಾರಿ ಧರ್ಮವಲ್ಲ, ಪಶ್ಚಾತ್ತಾಪದ

೧೬. ಅದೇ - ಪು-೧೧೧ ವ -೪೨೫

ಸರಳಧರ್ಮ, ಅಯ್ಯೋಪಾಪಿ ಎನ್ನುವ ಧರ್ಮವಲ್ಲ, ಅಯ್ಯೋ ಪಾಪ, ಎನ್ನುವ ಧರ್ಮ. ಪಂಡಿತರ ಪುರೋಹಿತರ ಕಪಿಮುಷ್ಠಿಯಲ್ಲಿರುವ ಧರ್ಮವಲ್ಲ, ಕಾಯಕಯೋಗಿಗಳ ಬಾಳ ದೇಗುಲದಲ್ಲಿ ಬೆಳಗುವ ಧರ್ಮ. ಸತ್ತ ಮೇಲೆ ಸ್ವರ್ಗ ನರಕಗಳನ್ನು ತೋರಿಸುವ ಧರ್ಮವಲ್ಲ, ಅಯ್ಯಾ ಎಂದೊಡೆ ಸ್ವರ್ಗ, ಎಲ್ಲವೋ ಎಂದೊಡೆ ನರಕ, ಆಚಾರವೇ ಸ್ವರ್ಗ,, ಅನಾಚಾರವೇ ನರಕವೆಂದು ಸಾರಿ ಇದೇ ಲೋಕದಲ್ಲಿ ಸ್ವರ್ಗವನ್ನು ತೋರಿಸಬಲ್ಲ ಧರ್ಮ. ದೇವಲೋಕ ಮರ್ತ್ಯಲೋಕವೆಂಬ ಸೀಮೆಗಳ ರಚಿಸುವ ಧರ್ಮವಲ್ಲ, ಸತ್ಯನುಡಿವುದೇ ದೇವಲೊಕ, ಮಿಥ್ಯವ ನುಡಿವುದೇ ಮರ್ತ್ಯಲೋಕವೆಂದು ಘೋಷಿಸಿ ದೇವಲೋಕವನ್ನು ಮರ್ತ್ಯಲೋಕದಲ್ಲಿಯೇ ಮೂಡಿಸಬಲ್ಲ ಧರ್ಮ. ಜಗತ್ತು ಮಿಥ್ಯ, ಮಾಯೆ, ದುಃಖದಾಗರ, ಭವದ ಸಾಗರ, ಕಂಬನಿಯ ಕಣಿವೆ, ಬಂಧನದ ಬಲೆ ಎನ್ನುವ ಧರ್ಮವಲ್ಲ., ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಎಂದು ಉಗ್ಘಡಿಸಿ ಈ ಜಗತ್ತಿನಲ್ಲಿಯೇ ಜೀವನಕ್ಕೆ ಮಹಾಮೌಲ್ಯವನಿತ್ತ ಧರ್ಮ. ಕಲ್ಲನಾಗರ ಕಂಡರೆ ಹಾಲನೆರೆಯೆಂಬ, ದಿಟನಾಗರ ಕಂಡರೆ ಕೊಲ್ಲೆಂಬ, ಉಣ್ಣುವ ಜಂಗಮ ಬಂದರೆ ನಡೆಯೆಂಬ, ಉಣ್ಣದಲಿಂಗಕ್ಕೆ ಬೋನವ ಹಿಡಿಯೆಂಬ ಧರ್ಮವಲ್ಲ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು, ಜಂಗಮಪ್ಯಾಯನವಾದರೆ ಲಿಂಗ ಸಂತುಷ್ಟಿ ಎಂದು ಬೋಧಿಸಿ, ಕಲ್ಲದೇವರಿಗಿಂತ ಜೀವಂತದೇಹಿಗಳಿಗೆ ಪ್ರಾಧಾನ್ಯವಿತ್ತ ಉದಾತ್ತಧರ್ಮ; ಪೂಜೆಗೆ ಆ ಫಲವುಂಟು, ಈ ಲಾಭವುಂಟು ಎಂದು ವಂಚಿಸಿ ದೇವ ಪೂಜೆ ಮಾಡಹಚ್ಚಿದ ಧರ್ಮವಲ್ಲ, ಭಕ್ತಿಗೆ ಭಕ್ತಿಯೇ ಫಲ, ಅದಕ್ಕೆ ಫಲಬೇಡಿದರೆ ಕೂಲಿಬೇಡಿದಂತೆ! ಚಂದ್ರನ ಶೈತ್ಯದಲ್ಲಿ ಬೆಳೆದಕಾಯಕ್ಕೆ ಬೆಳದಿಂಗಳ ಬಯಸುವ ಹಂಗೇಕಯ್ಯಾ? ಶರಣರ ಸಂಗದಲ್ಲಿರ್ದು ಶಿವನ ಬೇಡುವ ಹಂಗೇಕಯ್ಯಾ? ಕೂಡಲಸಂಗನ ಶರಣರು ಬಂದು ತಮ್ಮವನೆಂದರೆ ಸಾಲದೆ ಅಯ್ಯಾ? ಎಂದು ಪ್ರಶ್ನಿಸಿ ಶಿವನನ್ನೇ ಬೇಡದಂತೆ ಮಾಡಿ ಶಿವನಿಂದ ಅದನ್ನು ಕೊಡಿಸುವೆ, ಇದನ್ನು ಕೊಡಿಸುವೆನೆಂಬ ಆಸೆ ಹಚ್ಚಿ ದುಡ್ಡು ದೋಚುತ್ತಿದ್ದವರ ಸುಲಿಗೆ ನಿಲ್ಲಿಸಿದ ಧರ್ಮ. ದೇವರ ಲೋಕದಲ್ಲಿ ಸ್ಥಳ ಸಿಕ್ಕಲು ಪುರೋಹಿತರ ಪರ್ಮಿಟ್ ಪಡೆಯಲು ಹಚ್ಚಿದ ಧರ್ಮವಲ್ಲ,. ಲಿಂಗದಲ್ಲಿ ಸಮ್ಯಕ್ಕರು, ಲಿಂಗದಲ್ಲಿ ಸಮರ್ಥರು, ಲಿಂಗದಲ್ಲಿ ಸೊಮ್ಮ ಸಂಬಂಧವರಿತ ಸ್ವಾಮಿ ಭೃತ್ಯರೆಲ್ಲರೂ ನಿಮ್ಮ ಬೇಡೆ, ಅಂಜದಿರಿ! ಎನಗೆ ಮರ್ತ್ಯಲೋಕದ ಮಹಾಗಣಂಗಳುಂಟು, ಇದು ಕಾರಣ ಕೂಡಲಸಂಗಮದೇವರ ಲೋಕವ ಹಂಚಿಕೊಳ್ಳಿ ನಿಮನಿಮಗೆ ಎಂದು ಡಂಗುರ ಹೊಯ್ಸಿದ ಧರ್ಮ; ಆಜ್ಞಾ ಪ್ರಧಾನ ಅಧಿಕಾರಿ ಧರ್ಮವಲ್ಲ, ಅನುಭವ ಪ್ರಧಾನ ಜನತಾಂತ್ರಿಕ ಧರ್ಮ; ಸ್ವಮುಕ್ತಿಸಾಧನೆಯನ್ನು ಸಾಧಿಸಲು, ಸ್ವವಿಮೋಚನೆಯೊಡನೆ ಸಾಮೂಹಿಕ ವಿಮೋಚನೆ ಪೋಷಿಸುವ, ಪ್ರೋತ್ಸಾಹಿಸುವ ಧರ್ಮವಲ್ಲ, ಸ್ವಾವಲಂಬನವನ್ನು ಬೀಜಮಂತ್ರವನ್ನಾಗಿ ಮಾಡಿದ ವ್ಯಾವಹಾರಿಕ ಧರ್ಮ. ;ಕುಲ–ಹೊಲೆ–ಹೆಣ್ಣು–

ಗಂಡು–ಕೀಳು–ಮೇಲುಗಳ ಜಾಲವನ್ನು ಹೆಣೆದ ಧರ್ಮವಲ್ಲ, ಕುಲ–ಲಿಂಗ–ವಯ–ವೃತ್ತಿ ಜನಿತ ಎಲ್ಲ ಭೇದಗಳನ್ನು ನಿರ್ಮೂಲನಗೊಳಿಸಿ ಸಾಮಾಜಿಕ ಆರ್ಥಿಕ ಸಮಾನತೆಯನ್ನು ಸಾಧಿಸಿದ ಧರ್ಮ;ಯಜ್ಞ–ಯಾಗ–ಹೋಮ–ಹವನ–ಸೂತಕ–ಗೋತ್ರ–ಸೂತ್ರಗಳ, ತೀರ್ಥ ಕ್ಷೇತ್ರಾದಿಗಳ ಜಂಜಡದ ಧರ್ಮವಲ್ಲ; ಕಾಯವೇ ಕೈಲಾಸ, ಜೀವನೇ ಶಿವನೆಂದು ನಂಬಿ ನಡೆಯ ಹಚ್ಚಿದ ಧರ್ಮ; ಕುಲ– ಪದವಿ ಸಿರಿ–ಸಂಪದಗಳ ಹಮ್ಮು ಹಿಡಿಸಿ ಬಿಮ್ಮನೆ ಬಿರಿಯ ಹಚ್ಚಿ ಸೊಕ್ಕಿನಿಂದ ನುಡಿಯಲು ಕಲಿಸಿದ ಧರ್ಮವಲ್ಲ, ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು ಎಂದು ಬೋಧಿಸಿ ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನಂತೊಲಿವನಯ್ಯಾ ಎಂದು ಪ್ರಶ್ನಿಸಿದ ಧರ್ಮ. ನಾನು ಜ್ಞಾನಿ, ನೀನು ಜ್ಞಾನಿ ಎಂದು ವಾದಿಸ ಹಚ್ಚಿದ ಧರ್ಮವಲ್ಲ, ನಿಮ್ಮನರಿಯದ ಜ್ಞಾನವೆಲ್ಲ ಅಜ್ಞಾನ ಎಂದು ಸಾರಿ ಹೇಳಿದ ಧರ್ಮ; ವಜ್ರಕಾಯ ಸಾಧಿಸಿ ಕಾಗೆ ಗೂಗೆಗಳಂತೆ ನೂರು ವರುಷ ಬದುಕಲು ಕಲಿಸಿದ ಧರ್ಮವಲ್ಲ, ಲೇಸೆನಿಸಿಕೊಂಡು ಮೂರು ದಿನ, ಒಂದು ದಿನ ಬದುಕಿದರೂ ಸಾಕು ಎಂಬುದನ್ನು ಎತ್ತಿ ಹಿಡಿದ ಧರ್ಮ; ಮಾಡಿದ ಒಳಿತಿಗೆ ಮುಂದೆ ಎಂದೋ ದೊರೆಯುವ ಫಲದ ಮುಂದಿನ ತೇದಿಯ ಚೆಕ್ಕು ಕೊಡದೆ, ಹೊಯ್ದರೆ ಹೊಯ್ಗಳು ಕೈಯಮೇಲೆ, ಬಯ್ದರೆ ಬಯ್ಗಳು ಕಯ್ಯಮೇಲೆ, ಹಿಂದಣ ಜನನವೇನಾದೊಡಾಗಲಿ – ಇಂದಿನ ಬೋಗವು ಕೈಯ ಮೇಲೆ ಕೂಡಲಸಂಗಮದೇವಯ್ಯಾ ನಿಮ್ಮ ಪೂಜಿಸಿದ ಫಲ ಕೈಯ ಮೇಲೆ ಎಂದು ಸಾರಿ, ಪೂಜಿಸಿದುದಕ್ಕೆ ಪೂಜಿಸಿದುದೇ ಫಲವೆಂದು ತಿಳಿಸಿ, ಬೆರಣಿವುಳ್ಳಲ್ಲಿ ಹೊತ್ತು ಹೋಗದ ಮುನ್ನ ಅಟ್ಟುಣ್ಣವೋ! ಮರಳಿ ಭವಕ್ಕೆ ಬರೆ – ಬಾರದಿಹೆ ಕರ್ತೃ ಕೂಡಲಸಂಗನಿಗೆ ಶರಣೆನ್ನುವೋ! ಎಂದು ತಿಳಿಸಿ ಹೇಳಿದ ಧರ್ಮ"[೧೭]

ಇಂತಹ ವಿಶ್ವವಿನೂತನವಾದ ದೀನ ದಲಿತೋದ್ಧಾರದ ಧರ್ಮವನ್ನು ವಿಶ್ವಗುರು ಬಸವಣ್ಣನವರು ೧೨ ನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಪ್ರಾರಂಭಿಸಿದರು. ವರ್ಣಾಶ್ರಮ ಧರ್ಮವು ಹೊಲೆಯ, ಮಾದಿಗ, ಸಮಗಾರ, ಡೋಹರ, ಚಂಡಾಲ, ಅಂಬಿಗ ಎಂದು ಮುಂತಾಗಿ ಅಂತ್ಯಜರೆಂದು ಕರೆದು ಸಮಾಜದಿಂದ ಯಾರನ್ನು ಬಹಿಷ್ಕರಿಸಿತ್ತೋ ಅಂತಹ ಅಸ್ಪೃಶ್ಯರನ್ನು ಜಗಜ್ಯೋತಿ ಬಸವಣ್ಣನವರು– 'ಅಪ್ಪನು ನಮ್ಮ ಮಾದರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಚಿಕ್ಕಯ್ಯ ನಮ್ಮಯ್ಯ'[೧೮] ಎಂದು ಎಲ್ಲರನ್ನು ಅಪ್ಪಿಕೊಂಡರು.

ಜಗತ್ತಿನ ಧರ್ಮಗಳನ್ನು ಅಧ್ಯಯನ ಮಾಡಿದ ಕುಮಾರ ಕಕ್ಕಯ್ಯ ಪೋಳ ಅವರು ಕಾಲಕಾಲಕ್ಕೆ ನಡೆದ ಬಂಡಾಯದ ಹೋರಾಟವನ್ನು ತೌಲನಿಕವಾಗಿ ಗ್ರಹಿಸಿ, ಬಸವಾದಿ ಶರಣರ ಕ್ರಾಂತಿಯ ಮಹತ್ವವನ್ನು ತಿಳಿಸುತ್ತಾರೆ–

---

೧೭. ಬಸವಣ್ಣನವರ ಜೀವನ ಹಾಗೂ ಸಂದೇಶ – ಡಾ॥ ಸಿದ್ದಯ್ಯ ಪುರಾಣಿಕ ಪು – ೬೭ – ೬೯.

೧೮. ಬಸವಣ್ಣನವರ ವಚನ ಸಂಪುಟ – ಡಾ॥ ಎಂ.ಎಂ. ಕಲಬುರ್ಗಿ ಪು – ೮೪, ವ – ೩೪೯.

ವೈದಿಕರ ವಿರುದ್ಧ ಉದ್ಭವಿಸಿ ಬಂತು ಬೌದ್ಧ ಧರ್ಮ
ಯಹೂದಿಯರ ವಿರುದ್ಧ ಹುಟ್ಟಿ ಬಂತು ಕ್ರೈಸ್ತಧರ್ಮ
ವಜೀರರ ವಿರುದ್ಧ ಗೆದ್ದು ಬಂತು ಇಸ್ಲಾಂ ಧರ್ಮ
ವರ್ಣಾಶ್ರಮದ ವಿರುದ್ಧ ಬಂಡೆದ್ದು ಬಂತು ಬಸವಧರ್ಮ
ವೇದಕ್ಕೆ ಒರೆಯ ಕಟ್ಟಿ, ಶಾಸ್ತ್ರಕ್ಕೆ ನಿಗಳನಿಕ್ಕಿ,
ಆಗಮದ ಮೂಗುಕೊಯ್ದ ವಚನಧರ್ಮ
ಬಸವಾದಿ ಶರಣರ ಬಂಡಾಯವೆಂದ
ಕುಮಾರ ಕಕ್ಕಯ್ಯ.[೧೯]

ಬಸವಣ್ಣನವರು ಮೇಲ್ಜಾತಿಯವರ ಸಲುವಾಗಿಯಾಗಲೀ, ಪುರೋಹಿತ ಪಂಡಿತರ ಸಲುವಾಗಿಯಗಲೀ, ಮಠ ಮಾನ್ಯ ಜಗದ್ಗುರುಗಳಿಗಾಗಿಯಾಗಲೀ ಧರ್ಮಕಟ್ಟಲು ಹೋಗಲಿಲ್ಲ. ವರ್ಣಾಶ್ರಮ ಧರ್ಮವು ಸಮಾಜದಲ್ಲಿ ದಲಿತ, ಅಸ್ಪೃಶ್ಯರು ಎಂದು ಯಾರನ್ನು ದೂರವಿಟ್ಟಿತ್ತೋ, ಬಹಿಷ್ಕರಿಸಿತ್ತೋ ಅಂತಹವರಿಗಾಗಿ, ಅವರ ಉದ್ಧಾರಕ್ಕಾಗಿ ಬಸವಧರ್ಮ ಉದಿಸಿಬಂದಿತು.

ಪುರೋಹಿತ ಪಂಡಿತರಲ್ಲಿ ಹೋಗಲಿಲ್ಲ
ಮಠ ಮಾನ್ಯ ಜಗದ್ಗುರುಗಳಲ್ಲಿ ಸುಳಿಯಲಿಲ್ಲ
ದೀನ ದಲಿತ ಜನಸಾಮಾನ್ಯರ ಬರಸೆಳೆದು
ಮಾದಾರ ಚೆನ್ನಯ್ಯನ ಮನೆಯ ಮಗ ನಾನು
ವಿಪ್ರಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರೆಲ್ಲ ಒಂದೇ ಎಂದ ಬಸವಂಗೆ
ಧರ್ಮ ತಳದಿಂದಲೇ ಕಟ್ಟಬೇಕಿತ್ತೆಂದ
ಕುಮಾರ ಕಕ್ಕಯ್ಯ.[೨೦]

ಬಸವಧರ್ಮದ ಶಕ್ತಿಗಳು, ಅನುಭವಮಂಟಪದ ಆಧಾರ ಸ್ತಂಭಗಳೆಂದರೆ ಕಾಯಕ ಜೀವಿಗಳು. ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಕಿನ್ನರಿ ಬೊಮ್ಮಯ್ಯ, ಸಮಗಾರ ಹರಳಯ್ಯ, ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ಹಾಗೂ ಸಮಾಜದ ಕೆಳಸ್ತರದ ಎಲ್ಲ ಜನಸಾಮಾನ್ಯರು ಬಸವಧರ್ಮವನ್ನು ಅಪ್ಪಿಕೊಂಡು ಮೇಲೆ ಬಂದರು. ಬಸವ ಚಳುವಳಿಯ, ಕಲ್ಯಾಣಕ್ರಾಂತಿಯ ಸ್ಫೂರ್ತಿಗಳಾದರೆಂಬುದನ್ನು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ಸುಂದರವಾಗಿ ವಿವರಿಸುತ್ತಾರೆ –

ಹಡಪದ ಅಪ್ಪಯ್ಯ, ನುಲಿಯ ಚಂದಯ್ಯ
ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ

---

೧೯. ಕುಮಾರ ಕಕ್ಕಯ್ಯನ ವಚನಗಳು – ಪು– ೨೦೨, ವ–೬೭೮,
೨೦. – ಅದೇ – ಪು – ೧೯೯, ವ– ೬೬೮

ಕಿನ್ನರಿಯ ಬೊಮ್ಮಯ್ಯ, ಸಮಗಾರ ಹರಳಯ್ಯ
ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ
ಜನಸಾಮಾನ್ಯರೆಲ್ಲರೂ ಅನುಭವ ಮಂಟಪದ
ರೂವಾರಿಗಳು, ಬಸವ ಚಳುವಳಿಯ ಶಕ್ತಿಗಳು
ಕಲ್ಯಾಣ ಕ್ರಾಂತಿಯ ಸ್ಫೂರ್ತಿಗಳೆಂದ
ಕುಮಾರ ಕಕ್ಕಯ್ಯ.[೨೧]

ಬಸವಣ್ಣನವರ ಧರ್ಮದ ಧ್ಯೇಯವನ್ನು ಸರಿಯಾಗಿ ಗುರುತಿಸುವ ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ಅದ್ಭುತವಾಗಿ ವ್ಯಕ್ತಗೊಳಿಸಿದ್ದಾರೆ –

ದಯವೇ ಧರ್ಮದ ಮೂಲವೆಂದ ಬಸವಂಗೆ
ಅಹಿಂಸೆ ಕರುಣೆ ಪ್ರೇಮ ಪ್ರತಿಪಾದಿಸಬೇಕಿತ್ತು
ಕಾಯಕವೇ ಕೈಲಾಸವೆಂದು ಸಾರಿದ ಬಸವಂಗೆ
ಶೋಷಣೆ ರಹಿತ ಸ್ವಾವಲಂಬಿ ಸಮಾಜ ಕಟ್ಟಬೇಕಿತ್ತು.
ಕ್ಷೌರಿಕನನ್ನು ಕಾರ್ಯದರ್ಶಿಯಾಗಿ ಮಾಡಿದ ಬಸವಂಗೆ
ಬಂಡೆಗಲ್ಲಾಗಿದ್ದ ಕಂದಾಚಾರವನ್ನು ಹೊಡೆದು ಓಡಿಸಬೇಕಾಗಿತ್ತು.
ಸ್ಪೃಶ್ಯ ಅಸ್ಪೃಶ್ಯರಿಗೆ ಮದುವೆ ಮಾಡಿದ ಬಸವಂಗೆ
ಮಾನವಧರ್ಮ ಸ್ಥಾಪಿಸಬೇಕಿತ್ತೆಂದ
ಕುಮಾರ ಕಕ್ಕಯ್ಯ[೨೨]

ಬಸವಣ್ಣನವರಿಗೆ 'ಸಾಮಾಜಿಕ ಪ್ರಜಾಪ್ರಭುತ್ವದ ತಳಹದಿಯ ಮೇಲೆ ಧರ್ಮದ ಸೌಧ ನಿರ್ಮಾಣವಾಗಬೇಕೆಂಬುದು ಅವರ ಖಚಿತ ಮತ. ಸ್ತ್ರೀಯಾಗಲಿ, ಪುರುಷನಾಗಲಿ, ಜನ ಜನರ ನಡುವೆ ತಾರತಮ್ಯವನ್ನು ಬಳಸುವ, ಕೋಟಿ ಕೋಟಿ ಜನರನ್ನು ನಾಯಿಗಳಿಗಿಂತ, ಅಪರಾಧಿಗಳಿಗಿಂತ ಕಡೆಯಾಗಿ ಕಾಣುವ, ಅವರ ಮೇಲೆ ದಾಸ್ಯದ ಹೊರೆಯನ್ನು ಹೇರಿ, ಅವರನ್ನು ನರಕಯಾತನೆಗೆ ಗುರಿಮಾಡುವ ಧರ್ಮ ನಿಜವಾದ ಧರ್ಮವಲ್ಲ, ಅಸಮಾನತೆಯನ್ನು, ಅನ್ಯಾಯವನ್ನು, ಅಸ್ಪೃಶ್ಯತೆನ್ನು ಪೋಷಿಸುವ ಧರ್ಮ ಉತ್ತಮಧಮ್.ವಲ್ಲ ಎಂಬುದು ಅವರ ಅಚಲ ನಿಲವು. ಸಾಮಾಜಿಕ ನೀತಿ ಧರ್ಮದ ತಿರುಳಾಗಬೇಕು. ಜಾತಿ ವರ್ಗಭೇಧವಿಲ್ಲದ ಸುಸಂಸ್ಕೃತ ಸಾಮಾಜಿಕ ಜೀವನದ ಪೋಷಣೆಯೇ ಧರ್ಮದ ಗುರಿಯಾಗಬೇಕು[೨೩] ಅಂತೆಯೇ ಬಸವಧರ್ಮದಲ್ಲಿ 'ಕರಿಯರು ಬೇರೆ, ಬಿಳಿಯರು ಬೇರೆ ಎಂಬ ವರ್ಣಭೇದವಿಲ್ಲ ; ಸ್ತ್ರೀಯರು ಬೇರೆ, ಪುರುಷರು ಬೇರೆ ಎಂಬ ಲಿಂಗಭೇದವಿಲ್ಲ. ಧನಿಕರು ಬೇರೆ ಬಡವರು ಬೇರೆ ಎಂಬ ವರ್ಗಭೇದವಿಲ್ಲ,

೨೧. ಕುಮಾರ ಕಕ್ಕಯ್ಯನ ವಚನಗಳು – ಪು – ೧೯೮, ವ–೭೬೫.
೨೨. ಕುಮಾರ ಕಕ್ಕಯ್ಯನ ವಚನಗಳು ಪು – ೨೦೧ ವ – ೭೭೬.
೨೩. ಬಸವೇಶ್ವರ – ಅಂಬೇಡ್ಕರ – ಡಾ. ದೇ. ಜವರೇಗೌಡ ಪು – ೫೯

ಭಕ್ತರು ಬೇರೆ ಗುರುಗಳು ಬೇರೆ ಎಂಬ ವಂಶಭೇದಗಳಿಲ್ಲ, ಒಳಜಾತಿ ಹೊರಜಾತಿಗಳೆಂಬ ಭೇದವಿಲ್ಲ'[೨೪] ಎಂದು ಕುಮಾರ ಕಕ್ಕಯ್ಯನವರು ತಿಳಿಸುತ್ತಾರೆ. ಬಸವಧರ್ಮದಲ್ಲಿ ಅಸ್ಪೃಶ್ಯರು, ಅಂತ್ಯಜರು ಶತಶತಮಾನಗಳ ದಾಸ್ಯದಿಂದ, ಗುಲಾಮಗಿರಿಯಿಂದ ಸಿಡಿದು ಮೇಲೆದ್ದರು, ಅದ್ಭುತವಾದ ಸಾಧನೆಗೈದರು–

ಹೊಲೆಯರ ಶಿವನಾಗಮಯ್ಯ ಯೋಗಿಯೆನಿಸಿದರೆ
ಸತ್ಯ ಶರಣನೆನಿಸಿದ ಸಮಗಾರ ಹರಳಯ್ಯ.
ಮಾದಾರ ಚೆನ್ನಯ್ಯ ಕುಲಕ್ಕೆ ತಿಲಕನೆನಿಸಿದರೆ
ಗೋತ್ರ ಪುರುಷನೆನಿಸಿದ ಡೋಹಾರ ಕಕ್ಕಯ್ಯ.
ಮಾನವಕುಲವೆಲ್ಲ ಒಂದೇ ಎಂದ ಬಸವಧರ್ಮ
ವಿಶ್ವಧರ್ಮವೇ ಹೊರತು, ಜಾತಿ ಅಲ್ಲೆಂದ
ಕುಮಾರ ಕಕ್ಕಯ್ಯ.[೨೫]

ಈ ರೀತಿಯ ಚಿಂತನೆ – ಕ್ರಿಯಾಚರಣೆಗಳ ಮೂಲಕ ಬಸವಧರ್ಮವು ಒಂದು ಜಾತಿಯಾಗಿರದೇ, ಸರ್ವರನ್ನೂ ಅಪ್ಪಿಕೊಂಡ ಒಂದು ವಿಶ್ವಧರ್ಮವೆಂದು ಕುಮಾರ ಕಕ್ಕಯ್ಯನವರು ಪ್ರತಿಪಾದಿಸಿದ್ದಾರೆ.

**(ii) ಧರ್ಮ–ಧರ್ಮಗುರುಗಳು–ಮಠಗಳು–ಶೋಷಣೆ :**

ಪ್ರಾಚೀನಕಾಲದಿಂದಲೂ 'ಧರ್ಮ' ಎಂಬುದು ಜನಮಾನಸವನ್ನು ಭಾವನಾತ್ಮಕವಾಗಿ ಬಂಧನದಲ್ಲಿಡುತ್ತಾ ಬಂದಿದೆ. ವಾಸ್ತವಿಕವಾಗಿ 'ಧರ್ಮ' ಎಂಬ ಪದವು 'ಧೃ' ಎಂಬ ಸಂಸ್ಕೃತ ಧಾತುವಿನಿಂದ ಉತ್ಪತ್ತಿಯಾಗಿದೆ. "ಧೃ" ಎಂದರೆ ಮೇಲೆತ್ತು, ಉದ್ಧಾರಮಾಡು ಎಂದು ಅರ್ಥ. ಯಾರು ಧಾರ್ಮಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ನೈತಿಕವಾಗಿ ಕೆಳಗೆ ಬಿದ್ದಿದ್ದಾರೆಯೋ, ಪತಿತರಾಗಿದ್ದಾರೆಯೋ ಅವರನ್ನು ಮೇಲೆತ್ತುವುದು, ಅವರ ಉದ್ಧಾರಮಾಡುವುದು ಧರ್ಮದ ಮೂಲ ಆಶಯವಾಗಿದೆ.

ಈ ಮೂಲ ಉದ್ದೇಶವನ್ನು ಬದಿಗೆ ಸರಿಸಿ, ತಮ್ಮ ಸ್ವಾರ್ಥಕ್ಕಾಗಿ ಧರ್ಮವನ್ನು ವಿಕೃತಗೊಳಿಸಿ, ಅದರ ಹೆಸರಿನಲ್ಲಿ ನಿರಂತರವಾಗಿ ಶೋಷಣೆ ಸಾಗಿಬಂದಿದೆ. ಧರ್ಮದ ಹೆಸರಿನಲ್ಲಿ ಧರ್ಮಗುರುಗಳು ಜನರಿಗೆ ಸರಿಯಾದ ಜ್ಞಾನದ ಮಾರ್ಗವನ್ನು ತೋರಿಸಬೇಕಾಗಿತ್ತು. ಅಜ್ಞಾನ ಕಳೆದು ಸುಜ್ಞಾನವನ್ನು, ದುರ್ಗುಣಗಳನ್ನು,ತೊಡೆದು ಸದ್ಗುಣಗಳನ್ನು, ದುರಾಚಾರವನ್ನು ದೂರ ಮಾಡಿ ಸದಾಚಾರವನ್ನು, ದುರ್ಭಾವನೆಗಳನ್ನು ನಿರಸನಗೊಳಿಸಿ ಸದ್ಭಾವನೆಗಳನ್ನು, ಜಾತಿಯ ಭ್ರಮೆಗಳನ್ನು ಬಿಡಿಸಿ ಜ್ಯೋತಿಯ ಸನ್ಮಾರ್ಗವನ್ನು ಬೋಧಿಸಬೇಕಾಗಿದ್ದ ಧರ್ಮಗುರುಗಳು ಕಾಲಾನಂತರದಲ್ಲಿ ಸ್ವಾರ್ಥಿಗಳಾದರು.

೨೪. ಕುಮಾರ ಕಕ್ಕಯ್ಯನ ವಚನಗಳು – ಪು–೨೦೦, ವ–೭೭೧.
೨೫. – ಅದೇ – ಪು – ೨೦೦, ವ – ೭೭೦

ಧರ್ಮ ಚಲನಶೀಲವಾಗಿತ್ತು. ಅದನ್ನು ಸಾಂಸ್ಥೀಕರಣಗೊಳಿಸಿ ಸ್ಥಾವರ ಮಾಡಲಾಯ್ತು. ಧರ್ಮಕೇಂದ್ರಗಳೆಂದು ಮಠಗಳ ನಿರ್ಮಾಣಮಾಡಲಾಯಿತು. ಈ 'ಮಠಗಳ ಮುಖ್ಯಸ್ಥರನ್ನು ಆಚಾರ್ಯ, ಕುಲಪತಿ. ಗುರು, ಜಗದ್ಗುರು, ಸ್ವಾಮಿ,ಯತಿ,ಯತೀಂದ್ರ, ದೇಶಿಕ, ದೇಶಿಕೇಂದ್ರ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಕಾವಿ,.ಹಳದಿ, ಕೇಸರಿ,ಬಿಳಿ, ಉಡುಪು ಧರಿಸುತ್ತಾರೆ. ಜೈನರಲ್ಲಿ ದಿಗಂಬರರು, ಶೈವರಲ್ಲಿ ಶಿರೋವೇಷ್ಟಿನ (ರುಮಾಲೆ), ಉದ್ದನೆಯ ನಿಲುವಂಗಿ, ಉತ್ತರೀಯ ಇರುತ್ತದೆ. ಆಯಾಯ ಧರ್ಮಕ್ಕನುಗುಣವಾಗಿ ಗಂಧ, ವಿಭೂತಿ, ಕುಂಕುಮ ಇತ್ಯಾದಿಗಳನ್ನು ಹಚ್ಚಿಕೊಳ್ಳುತ್ತಾರೆ. ಪೀಠ, ಹುಲಿಚರ್ಮ, ಕಮಂಡಲು, ಸಿಂಹಾಸನ, ಗಾದಿ, ಕಿರೀಟ, ಜರತಾರಿ, ರೇಷ್ಮೆ ವಸ್ತ್ರ, ರುದ್ರಾಕ್ಷಿ, ಮಣಿಸರಗಳನ್ನು ಧರಿಸುತ್ತಾರೆ, ಅಲಂಕರಿಸುತ್ತಾರೆ.

ಭಾರತೀಯ ವಿವಿಧ ಧರ್ಮಗಳಲ್ಲಿರುವಂತೆ ಅನ್ಯಧರ್ಮೀಯರಲ್ಲೂ ಇಂಥ ಮಠಗಳಿವೆ. ಪ್ರಪಂಚದ ಎಲ್ಲ ಮಠಗಳೂ ಉದಾತ್ತ ದೃಷ್ಟಿಯಿಂದ ಉನ್ನತಗುರಿಯನ್ನು ಹೊಂದಿ ಹೊರಟಿದ್ದರೂ ಕಾಲ ಕ್ರಮೇಣ ತಮ್ಮ ಜಂಗಮ ಸ್ಥಿತಿಯಿಂದ ಹೊರಗುಳಿದು ಸ್ಥಾವರಗೊಂಡು ಪ್ರಮುಖವಾಗಿ ಎರಡು ರೋಗಗಳನ್ನು ಜಗತ್ತಿನಾದ್ಯಂತ ಬಿತ್ತುತ್ತಿವೆ. ಅವುಗಳೆಂದರೆ ಒಂದು ಮತಾಂಧತೆ, ಮತ್ತೊಂದು ಜಾತೀಯತೆ.[೨೬]

ಇಂದು ಧರ್ಮವೆಂಬುದು, ಧರ್ಮಕೇಂದ್ರಗಳೆಂಬವು ಶೋಷಣೆಯ ಅಡ್ಡೆಗಳಾಗಿವೆ. ಧರ್ಮವು ಧರ್ಮಗುರುಗಳಿಗೆ ಭಾಷಣದ, ಪ್ರವಚನ ವಿಷಯವಾಗಿದೆ. ವ್ಯಾಪಾರದ ಸರಕಾಗಿದೆ. ಅದರಿಂದ ನಿರಂತರ ಧನದ ಗಳಿಕೆ, ಭೋಗಕ್ಕೆ ದಾರಿಯಾಗಿದೆ. 'ನಮ್ಮ ಭಾರತದಲ್ಲಿ ಇರುವಷ್ಟು ಪಟ್ಟಭದ್ರ ಪುರೋಹಿತಶಾಹಿಗಳು, ಸ್ವಾಮಿಗಳು, ಗುರುಗಳು, ಧರ್ಮಗುರುಗಳು, ಜಗದ್ಗುರುಗಳು ಮತ್ತು ಧರ್ಮಗ್ರಂಥಗಳು ಮತ್ತಾವ ಬೇರೆ ದೇಶಗಳಲ್ಲಿ ಕಾಣಸಿಗುವುದಿಲ್ಲ. ಇವರಲ್ಲಿ ಬಹುತೇಕ ಜನ ಧರ್ಮಗುರುಗಳು ದೇವರ ಸಾಕ್ಷಾತ್ಕಾರ ಮತ್ತು ಮೋಕ್ಷದ ಹೆಸರಿನಲ್ಲಿ ಜನತೆಯ ಮೌಢ್ಯದ (ಅಜ್ಞಾನ) ದುರುಪಯೋಗ ಮಾಡಿಕೊಂಡು ಹಣೆ ಹಚ್ಚಿ ತಮ್ಮ ಪಾದಕ್ಕೆ ನಮಸ್ಕಾರ ಹಾಕಿಸಿಕೊಳ್ಳುತ್ತಾರೆ. ಭಕ್ತರ ಮನೆಯಲ್ಲಿ ತಮ್ಮ ಪಾದಪೂಜೆ ಮಾಡಿಸಿಕೊಂಡು ಮೃಷ್ಟಾನ್ನ ಉಂಡು ಬರುತ್ತಾರೆ. ರತ್ನಖಚಿತ ಕಿರೀಟ ಧರಿಸಿ ಸಿಂಹಾಸನದ ಮೇಲೆ ಕೂಡ್ರುತ್ತಾರೆ. ಪಟ್ಟಾಭಿಷೇಕ ಮಾಡಿಸಿಕೊಳ್ಳುತ್ತಾರೆ. ಅಡ್ಡಪಲ್ಲಕ್ಕಿಯಲ್ಲಿ ಮೆರೆಯುತ್ತಾರೆ. ನಾಲ್ಕು ಜನ ಮಾನವರ ಹೆಗಲ ಮೇಲೆ ಕುಳಿತು ಮಾನವ ಕುಲಕ್ಕೆ ಜಯವಾಗಲಿ ಎಂದು ತಮ್ಮ ಜಯ ಜಯಕಾರ ಮಾಡಿಸಿಕೊಳ್ಳುತ್ತಾರೆ. ದೊಡ್ಡ ದೊಡ್ಡ ಆಳರಸರು ಹೇಳ ಹೆಸರಿಲ್ಲದೆ ಉರುಳಿ ಹೋದ ಇಂದಿನ ಪ್ರಜಾಪ್ರಭುತ್ವ ಮತ್ತು ವೈಜ್ಞಾನಿಕ ಯುಗದಲ್ಲಿ ಇವರು ರಾಜರ ರಾಜರಾಗಿದ್ದಾರೆ![೨೭]

ಭಾರತೀಯ ಸನಾತನ ಪರಂಪರೆಯ ಶೈವ ಮತ್ತು ವೈದಿಕ ಧರ್ಮಗಳಲ್ಲಿ ಶಿವಾಚಾರ್ಯ ಹಾಗೂ ಶ್ರೀಪಾದಂಗಳವರು, ಧರ್ಮಾಧಿಕಾರಿಗಳು ಮತ್ತು

---

೨೬. ಬ್ರಾಹ್ಮಣ್ಯದ ತಂತ್ರಗಳು–ಜ.ಹೊ. ನಾರಾಯಣಸ್ವಾಮಿ. ಪು–೩೯.

೨೭. ಧರ್ಮಗುರುಗಳ ಅವಾಂತರ –ಕುಮಾರ ಕಕ್ಕಯ್ಯ ಪೋಳ ಪು–೨–೩.

ಧರ್ಮಗುರುಗಳವರು, ಮಠಾಧೀಶರು ಹಾಗೂ ಪೀಠಾಧೀಶರು, ಸಾಧು ಹಾಗೂ ಸನ್ಯಾಸಿಗಳು ಎಂದು ಮುಂತಾಗಿ ತಮಗೆ ತಾವೇ ವಿವಿಧ ರೀತಿಯಲ್ಲಿ ಕರೆದುಕೊಳ್ಳುತ್ತಾರೆ. ಧರ್ಮಗಳ ಹೆಸರಿನಲ್ಲಿ ತಮ್ಮದೇ ಆದ ಒಂದು ಆನುವಂಶಿಕ ವರ್ಗ–ವರ್ಣವ್ಯವಸ್ಥೆಯನ್ನು ಹುಟ್ಟು ಹಾಕಿ ಮುಂದುವರೆಸಿಕೊಂಡು ಬಂದರು. ಸ್ವಾಮಿ ವಿವೇಕಾನಂದರು ಹೇಳುವಂತೆ– 'ಧರ್ಮ ದೇವಸ್ಥಾನ ಕಟ್ಟುವುದರಲ್ಲಿ ಇಲ್ಲ ಅಥವಾ ಸಾಮಾಜಿಕ ಪೂಜೆಗೆ ಹೋಗುವುದರಲ್ಲಿ ಇಲ್ಲ. ಅದು ಗ್ರಂಥದಲ್ಲಿಲ್ಲ, ಮಾತಿನಲ್ಲಿಯೂ ಇಲ್ಲ, ಉಪವಾಸದಲ್ಲಿಯೂ ಇಲ್ಲ. ಅಥವಾ ಸಂಸ್ಥೆಯಲ್ಲಿಯೂ ಇಲ್ಲ'[೨೮] ಎಂಬುದನ್ನು ಮನಗಾಣಬೇಕಿದೆ. ಧರ್ಮಗುರುಗಳಾದವರು ಸತ್ಯಶುದ್ಧಕಾಯಕ, ನಿತ್ಯಲಿಂಗಾರ್ಚನೆ, ಭಕ್ತಿಯ ದಾಸೋಹವನ್ನು ತಮ್ಮ ಮಠಗಳಲ್ಲಿ ಮಾಡುತ್ತಾ, ಭಕ್ತರ ಉದ್ಧಾರ, ಜನರ ಸೇವೆ ಮಾಡಬೇಕು. ಗುರು ಎಂದರೆ ಅಜ್ಞಾನವೆಂಬ ಕತ್ತಲೆ ತೊಡೆದು ಜ್ಞಾನದ ಬೆಳಕು ನೀಡುವವನಾಗಿರಬೇಕು. ಅಕ್ಕಮಹಾದೇವಿಯವರು ಹೇಳುವಂತೆ–'ನರಜನ್ಮವ" ತೊಡೆದು ಹರಜನ್ಮವ ಮಾಡಬೇಕು, ಭವಿಯೆಂಬುದ ತೊಡೆದು ಭಕ್ತರನ್ನಾಗಿಸಬೇಕು, ಭವಬಂಧನವ ಬಿಡಿಸಿ ಪರಮಸುಖವ ತೋರಬೇಕು, ವಿಶ್ವದ ಒಳಹೊರಗೆಲ್ಲ ತುಂಬಿರುವ ಪರಮಚೇತನ ದೇವರನ್ನು ಭಕ್ತರ ಕರಸ್ಥಲಕೆ ತಂದು ಕೊಡಬೇಕು'[೨೯] ಇದು ಗುರುವಿನ ಪರಮ ಕರ್ತವ್ಯ. ಆದರೆ ಇಂದಿನ ಗುರುಗಳಾದವರು ಧರ್ಮವನ್ನೇ ಹಾಳುಮಾಡುತ್ತಿದ್ದಾರೆ.

> ತಂಬಾಕಿನ ಮೇಲೇ ಬೆಳೆದ ಬಂಬಾಕ
> ಕ್ರಮೇಣ ತಂಬಾಕನ್ನೇ ಕಮರಿಸುವಂತೆ
> ಗಿಡದ ಮೇಲೆ ಹಬ್ಬಿದ ಕಾಡುಬಳ್ಳಿ
> ಕ್ರಮೇಣ ಗಿಡವನ್ನೇ ಒಣಗಿಸುವಂತೆ
> ಧರ್ಮದ ಮೇಲೆ ಬದುಕಿದ ಧರ್ಮಗುರುಗಳು
> ಕ್ರಮೇಣ ಧರ್ಮವನ್ನೇ ತಿಂದು ಹಾಕಿದರೆಂದ
> ಕುಮಾರಕಕ್ಕಯ್ಯ.[೩೦]

ಸಮಾಜಸೇವೆಗಾಗಿ ಸಂಸಾರ ತ್ಯಾಗ ಮಾಡಿ, ಸ್ವಾಮಿಗಳಾದವರು, ಸನ್ಯಾಸಿಗಳಾದವರು ಇಂದು ವಿಕೃತ ಭೋಗಿಗಳಾಗುತ್ತಿದ್ದಾರೆ. ದುಡಿದು ತಿನ್ನದೇ ದುಡಿದವರ ಗಳಿಕೆಯ ಮೇಲೆ ಜೀವನ ಮಾಡುತ್ತಾ ಪರಾವಲಂಬಿ ಜೀವಿಗಳಾಗಿದ್ದಾರೆ. ಇವರು ಕಾಲ, ಕರ್ಮ, ಮಾಯೆಯನ್ನು ಗೆದ್ದವರೆನ್ನಲಾಗದು. ಅಂತೆಯೇ ಕುಮಾರಕಕ್ಕಯ್ಯ ಇಂಥವರನ್ನು ಕುರಿತು ವಿಡಂಬನೆಗೈದಿದಾರೆ–

---

೨೮. ಸ್ವಾಮಿ ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು – ಸಂ.ಜ.ಹೊ. ನಾರಾಯಣಸ್ವಾಮಿ ಪು–೫೦.

೨೯. ಶಿವಶರಣೆಯರ ವಚನ ಸಂಪುಟ – ಸಂ. ಡಾ॥ ವೀರಣ್ಣ ರಾಜೂರ ವ – ೨೫೧

೩೦. ಕುಮಾರ ಕಕ್ಕಯ್ಯನ ವಚನಗಳು ಪು–೧೩೩ ವ – ೫೧೩.

ಸನ್ಯಾಸಿ ಸೋಮಾರಿಯ ಸೋದರ,
ಅಲೆಮಾರಿಯ ಮಗ, ಭಿಕ್ಷುಕನ ತಂದೆ
ಮಾನವಜನ್ಮ ಹಾಳು ಮಾಡಿ ನಷ್ಟ ಸಂತಾನವಾಗಿ
ಕಾವಿ ಹಾಕಿದಾಗೊಮ್ಮೆ, ಜೀವಹೋದಾಗೊಮ್ಮೆ.
ಹೀಗೆ ಎರಡು ಸಲ ಸಾವ ಸನ್ಯಾಸಿ
ಸಾವಗೆದ್ದವನೆನ್ನುವುದು ದೊಡ್ಡ ಹೆಡ್ಡತನವೆಂದ
ಕುಮಾರ ಕಕ್ಕಯ್ಯ.[೩೧]

ಇಂದು ಧರ್ಮಕೇಂದ್ರಗಳೆನಿಸಿಕೊಂಡಿರುವ ಮಠಮಾನ್ಯಗಳು ಅಧರ್ಮದ ಕಾರ್ಯಗಳಲ್ಲಿ ನಿರತವಾಗಿವೆ. ಈಗಿನ ಮಠಗಳು ಏನು ಮಾಡುತ್ತಿವೆ? ೧) ಕಪ್ಪು ಹಣದ ಕಾವಲುಗಾರರಾಗಿ ಕೂತಿವೆ. ೨) ರಾಜಕೀಯ ತಂತ್ರಗಾರಿಕೆಯ ತಾಣಗಳಾಗಿವೆ. ೩) ಜಾತಿಯನ್ನು ಪೋಷಿಸುವ ಪ್ರಧಾನ ಕೇಂದ್ರಗಳಾಗಿವೆ. ೪) ಶ್ರಮರಹಿತ ಗಳಿಕೆಯನ್ನು ಪಡೆದು, ತೃಪ್ತಿಯ ತೇಗು ಹಾಕಿ ಕೊಬ್ಬುತ್ತಿವೆ. ೫) ವರ್ಗಹಿತಾಸಕ್ತಿಯನ್ನು ಬೆಂಬಲಿಸಿ ಬಲಗೊಳಿಸುತ್ತಿವೆ. ೬) ಮೇಲು – ಕೀಳು, ಸ್ಪಶ್ಯ – ಅಸ್ಪಶ್ಯತೆಯ ನಿರಂತರ ಆಚರಣೆಯಲ್ಲಿ ನಿರತವಾಗಿವೆ. ೭) ಬಟ್ಟೆ ಬಿಚ್ಚಿಸುವುದು, ಜಾತಿವಾರು ಭೋಜನ ಕ್ರಿಯೆ ಮಾಡಿಸುವ ಕಾರ್ಯದಲ್ಲಿ ಎಚ್ಚರದಿಂದಿವೆ. ೮) ಮಠಾಧೀಶರ ನೇಮಕಗಳಲ್ಲಿ ಸ್ವಜನ ಪಕ್ಷಪಾತ ಕಾರ್ಯದಲ್ಲಿ ರಾಜಕೀಯ ರಂಗಕ್ಕಿಂತ ರಂಗಾಗಿ ತೊಡಗಿಸಿಕೊಂಡಿವೆ. ೯) ಯಾಗ, ಯಜ್ಞ, ಜಪ, ಗಾಯತ್ರಿಪಠಣ, ದೀಪೋತ್ಸವ ಎಂದು ದೇವರು ಧರ್ಮದ ಹೆಸರಿನಲ್ಲಿ ಜನರನ್ನು ಮರುಳು ಮಾಡುತ್ತಾ ಶಾಂತಿಯ ನಾಟಕವಾಡುತ್ತಾ ನಿರರ್ಥಕ ಕ್ರಿಯೆಯಲ್ಲಿ ತೊಡಗಿಕೊಂಡಿವೆ.[೩೨]

ಕುಮಾರ ಕಕ್ಕಯ್ಯನವರು ಸಮಾಜ ಶೋಷಣೆ ಮಾಡುತ್ತಿರುವ ಇಂತಹ ಮಠಮಂದಿರಗಳ ಒಳಹೂರಣವನ್ನು ತಮ್ಮ ವಚನಗಳಲ್ಲಿ ಕಟುವಾಗಿ ವಿಮರ್ಶಿಸಿದ್ದಾರೆ–

ಕೋಟಿ ಕೋಟಿ ಜನರಿಗೆ ಗುಡಿಸಲುಗಳೂ ಇಲ್ಲದಾಗ
ದೇವಾನುದೇವತೆಗಳಿಗೆ ಆಕಾಶದೆತ್ತರ
ಗುಡಿಗೋಪುರಗಳು ಬೇಕೆ ?
ದಶಕ ದಶಕಗಳವರೆಗೆ ಸಹಸ್ರ ಸಹಸ್ರ ಗುಲಾಮರು
ಕಣ್ಣೀರಿಡುತ್ತಾ ಕಟ್ಟಿದ ಅದ್ಭುತ ಕ್ಷೇತ್ರಗಳು ಪುಣ್ಯಸ್ಥಳಗಳೇ ?
ಮಠಮಂದಿರಗಳು ಕಳ್ಳ ಕುಬೇರರನ್ನು ಸ್ವರ್ಗಕ್ಕೊಯ್ಯುವ
ಸತ್ಯ ಶ್ರಮಿಕರನ್ನು ನರಕಕ್ಕೆ ನೂಕುವ ಮಾಧ್ಯಮಗಳೆಂದ
ಕುಮಾರ ಕಕ್ಕಯ್ಯ.[೩೩]

---

೩೧. ಕುಮಾರ ಕಕ್ಕಯ್ಯನ ವಚನಗಳು – ಪು –೩೫, ವ –೧೩೫.
೩೨. ಬ್ರಾಹ್ಮಣ್ಯದ ತಂತ್ರಗಳು – ಜ. .ಹೊ. ನಾರಾಯಣಸ್ವಾಮಿ ಪು – ೪೨.
೩೩. ಕುಮಾರ ಕಕ್ಕಯ್ಯನ ವಚನಗಳು ಪು–೨೩೨ ವ–೮೯೩.

ಕಪಟಿಗಳೂ, ಧೂರ್ತರೂ, ಆಷಾಡಭೂತಿಗಳೂ ಆಗಿರುವ ಸೋಗಿನ ಧರ್ಮ ಗುರುಗಳು ಧರ್ಮವನ್ನು ತಮ್ಮ ಸ್ವಾರ್ಥ ಸಾಧನೆಗೆ ಬಹುದೊಡ್ಡ ಬಂಡವಾಳ ಮಾಡಿಕೊಂಡು ವ್ಯವಸ್ಥಿತವಾಗಿ ಶೋಷಣೆ ಮಾಡುತ್ತಿದ್ದಾರೆ.

ಧರ್ಮದ ಹೆಸರಿನಲ್ಲಿ ಅಸ್ಪೃಶ್ಯತೆ,<br>
ಧರ್ಮದ ಹೆಸರಿನಲ್ಲಿಯೇ ಶೋಷಣೆ,<br>
ಧರ್ಮದ ಹೆಸರಲ್ಲಿ ದಬ್ಬಾಳಿಕೆ,<br>
ಧರ್ಮದ ಹೆಸರಲ್ಲಿಯೇ ವ್ಯಭಿಚಾರ,<br>
ಧೂರ್ತರಿಗೆ ಧರ್ಮವೊಂದು ದೊಡ್ಡ<br>
ಬಂಡವಾಳವೆಂದ ಕುಮಾರ ಕಕ್ಕಯ್ಯ.[೩೪]

ಅಂತೆಯೇ ಸ್ವಾಮಿ ವಿವೇಕಾನಂದರು ಇಂತಹ ಕಪಟ ವೇಷದ ಧಾರ್ಮಿಕರನ್ನು ಕುರಿತು ಹೇಳರುವ ಮಾತುಗಳು ನಿಷ್ಠುರ, ಕಠೋರ ಸತ್ಯವಾಗಿವೆ – 'ವರ್ತಮಾನ ಕಾಲದ ಹಿಂದೂಗಳ ಧರ್ಮ ವೇದದಲ್ಲಿಲ್ಲ, ಪುರಾಣದಲ್ಲಿಲ್ಲ, ಭಕ್ತಿಯಲ್ಲಿಲ್ಲ ಅಥವಾ ಮುಕ್ತಿಯಲ್ಲಿಲ್ಲ. ಆ ಧರ್ಮವೆಲ್ಲಾ ಅಡಿಗೆ ಮಾಡುವ ಪಾತ್ರೆಯೊಳಗೆ ಪ್ರವೇಶಿಸಿದೆ. ಇಂದಿನ ಹಿಂದೂ ಧರ್ಮ ಜ್ಞಾನಮಾರ್ಗವೂ ಅಲ್ಲ, ಭಕ್ತಿಮಾರ್ಗವೂ ಅಲ್ಲ. ಅದರ ಧರ್ಮವೇ ಅಸ್ಪೃಶ್ಯತೆ. ಅಸ್ಪೃಶ್ಯತೆ ಎಂಬ ಕುರುಡು ಧರ್ಮದಲ್ಲಿ ನಿಮ್ಮ ಜೀವನ ಹಾಳಾಗದಿರಲಿ. ಜೋಪಾನವಾಗಿ ನೋಡಿಕೊಳ್ಳಿ. ಆತ್ಮವನ್ನು ನೋಡಬೇಕೆಂಬ ಉಪದೇಶ ಗ್ರಂಥದಲ್ಲೇ ಕೊನೆಗಾಣಬೇಕೆ? ಮತ್ತೊಬ್ಬರ ಉಸಿರಿನ ಸೋಂಕಿನಿಂದಲೇ ಇವರು ಪಾಪಿಗಳಾದರೆ ಇನ್ನೊಬ್ಬರನ್ನು ಹೇಗೆ ಶುದ್ಧಿ ಮಾಡುವರು ?'[೩೫]

ಸ್ವಾಮಿಗಳು, ಸನ್ಯಾಸಿಗಳು, ಧರ್ಮಗುರುಗಳು ಎನ್ನಿಸಿಕೊಂಡವರು ಮುಗ್ಧ ಜನರನ್ನು ಅತಿ ಜಾಣ್ಮೆಯಿಂದ ಮೋಸಗೊಳಿಸುತ್ತ ಹೋಗುತ್ತಿರುವುದನ್ನು ಕಾಣುತ್ತೇವೆ. 'ಜನರನ್ನು ವಂಚಿಸುವ ಸಾಧನಗಳಲ್ಲಿ ಸನ್ಯಾಸವನ್ನು ಮೀರಿಸುವುದು ಪ್ರಪಂಚದಲ್ಲಿ ಮತ್ತೊಂದು ಇಲ್ಲ. ಸನ್ಯಾಸಿಗಳ ವೇಷಕ್ಕೆ ಜನರು ಹೆದರುತ್ತಾರೆ. ಅವರಿಂದ ಬರಬಹುದಾದ ಶಾಪಕ್ಕೆ ಅಂಜುತ್ತಾರೆ. ಜನತೆಯ ಅಜ್ಞಾನವನ್ನು ಸನ್ಯಾಸಿಗಳು ತಮ್ಮ ಸ್ವಾರ್ಥಕ್ಕೆ, ಕೀರ್ತಿಲಾಭಕ್ಕೆ ಬಳಸಿಕೊಳ್ಳುತ್ತಾರೆ. ಅವರ ರಹಸ್ಯಜೀವನ ಜನರಿಗೆ ಗೊತ್ತಿದ್ದರೂ ಸುಮ್ಮನಿದ್ದು ಬಿಡುತ್ತಾರೆ'[೩೬]

ಇಂತಹ ಸ್ವಾರ್ಥಿ, ವಂಚಕ ಧರ್ಮಗುರುಗಳು ಮಾಡುವ ಧಾರ್ಮಿಕ ಸಭೆ, ಸಮಾರಂಭ, ಉತ್ಸವ, ಸಮ್ಮೇಳನಗಳು ಜನರನ್ನು ಮರುಳು ಮಾಡಿ ಅವರ ಸಂಪತ್ತನ್ನು ಕೊಳ್ಳೆಹೊಡೆಯುವ ಸಾಧನಗಳಾಗಿವೆ.

ಜಾತಿಯ ಸೂತಕ ಬಿಡದ ಶಾಸ್ತ್ರಗೋಷ್ಠಿ<br>
ಬದಲಾವಣೆಗೆ ಆಸ್ಪದವಿಲ್ಲದ ಸಮಾಜಗೋಷ್ಠಿ

---

೩೪ ಕುಮಾರ ಕಕ್ಕಯ್ಯನ ವಚನಗಳು – ಪು–೧೨೯ ವ–೪೯೭.

೩೫. ಸ್ವಾಮಿ ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು – ಸಂ. ಜ. ಹೊ. ನಾ. ಪು–೨೭.

೩೬. ಬಸವಣ್ಣನವರು – ಡಾ. ಎಂ. ಚಿದಾನಂದಮೂರ್ತಿ ಪು – ೧೫೫.

ಸತ್ಯಕ್ಕೆ ಅವಕಾಶಕೊಡದ ತತ್ವಗೋಷ್ಠಿ
ಕಂದಾಚಾರದಿಂದ ಹೊರಬರದ ವಚನಗೋಷ್ಠಿ
ಪಾದಪೂಜೆಯ ಜಾಡ್ಯ ಬಿಡದವರ ಧರ್ಮಗೋಷ್ಠಿ
ಕಂದಕದಲ್ಲಿ ಕಪ್ಪೆಗಳು ಕಿರುಚಿದಂತೆಂದ
ಕುಮಾರ ಕಕ್ಕಯ್ಯ.[೩೭]

ಇಂತಹ ವ್ಯವಸ್ಥಿತವಾದ ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಶೋಷಣೆಯಿಂದ ಜನಸಾಮಾನ್ಯರು ಮುಕ್ತರಾಗಬೇಕಾದರೆ ತಮ್ಮಂತರಂಗದಲ್ಲಿರುವ ಅರಿವಿನ ಗುರುವಿಗೆ ಶರಣಾಗಬೇಕು. ಅಂದರೆ ಅಂತರಂಗದಲ್ಲಿ ಪ್ರತಿಯೊಬ್ಬರೂ ಅರಿವನ್ನು ಜಾಗೃತಗೊಳಿಸಿಕೊಳ್ಳಬೇಕು. ಸ್ವತಃ ಅನುಭಾವಿಗಳಾಗಬೇಕು. 'ಅನುಭಾವ ಕಲಿಸಿಕೊಡುವಷ್ಟು ಯಾವ ಧರ್ಮಗ್ರಂಥವೂ ಕಲಿಸಿಕೊಡುವದಿಲ್ಲ. ಅನುಭಾವ ಹೇಳಿಕೊಡುವಷ್ಟು ಯಾವ ದೊಡ್ಡ ಗುರುವೂ ಹೇಳಿಕೊಡುವದಿಲ್ಲ. ಅನುಭಾವದಿಂದಲೇ ಪ್ರಪಂಚ, ಪಾರಮಾರ್ಥ, ಅನುಭಾವದಿಂದಲೇ ಸಾಕ್ಷ ಮೋಕ್ಷ'[೩೮]ವೆಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ. ಇಂತಹ ಅನುಭಾವ ಎಲ್ಲಿದೆ ಎಂಬುದನ್ನು ತುಂಬಾ ಮಾರ್ಮಿಕವಾಗಿ ತೋರಿಕೊಡುತ್ತಾರೆ –

ಅನುಭಾವ ಜುಟ್ಟಿನಲ್ಲಿಲ್ಲ, ಜನಿವಾರದಲ್ಲಿಲ್ಲ,
ವೇದ ಆಗಮಗಳಲ್ಲಿಲ್ಲ, ಪುರಾಣ ಪ್ರವಚನಗಳಲ್ಲಿಲ್ಲ.
ಅನುಭಾವ ವಿಭೂತಿಯಲ್ಲಿಲ್ಲ, ರುದ್ರಾಕ್ಷಿಯಲ್ಲಿಲ್ಲ,
ಸ್ಮೃತಿ ಶಾಸ್ತ್ರಗಳಲ್ಲಿಲ್ಲ ಸಾಹಿತ್ಯ ಧರ್ಮಗ್ರಂಥಗಳಲ್ಲಿಲ್ಲ.
ಅನುಭಾವವೆಂಬುದು ಅಂತರಂಗದ ಅರಿವೇ ಹೊರತು
ಹೊರ ವಸ್ತುವಲ್ಲ, ಪರಾಶಕ್ತಿಯಲ್ಲವೆಂದ
ಕುಮಾರ ಕಕ್ಕಯ್ಯ.[೩೯]

'ಮಾನವನಲ್ಲಿಯ ಪಶು ಅಂಶಗಳನ್ನು ನೀತಿ ನಿಯಮಗಳಿಂದ, ಶಮ – ದಮಾದಿಗಳಿಂದ ಸ್ವತಃ ನಿಯಂತ್ರಿಸಿ, ದೇವಾಂಶಗಳನ್ನು ಆತ್ಮಾನುಸಂಧಾನದಿಂದ ವಿಕಸಿತಗೊಳಿಸುವುದೇ ಧರ್ಮ. ಆದರೆ ಸಾಮಾನ್ಯವಾಗಿ ಧರ್ಮವೆಂಬ ಶಬ್ದ ಉಚ್ಚರಿಸಿದಾಕ್ಷಣ ನಮ್ಮ ಕಣ್ಣೆದುರು ಕಾಣುವವರು ದಕ್ಷಿಣೆ ಕೇಳುವ ಗುರುಗಳು, ಪೂಜಾರಿಗಳು, ಪುರೋಹಿತರು, ಮಠ – ಮಂದಿರ, ಯಜ್ಞಶಾಲೆ, ಹೋಮಕುಂಡಾದಿಗಳು. ಜೀವ – ದೇವರ ನಡುವಿನ ಸಂಬಂಧ ಸುಲಿಗೆಯ ಸೂತ್ರವಾಗಿ ಹೋಗಿದೆ.' ಧರ್ಮದ ಹೆಸರಿನಲ್ಲಿ ನಡೆವ ಶೋಷಕ ಸಂಸ್ಕಾರಗಳಲ್ಲಿ ಬಡವರ ಕೈಗಳಲ್ಲಿ ಉಳಿಯುವ ಬಿಡಿಕಾಸುಗಳು ಈ ಮಠ–ಮಂದಿರಗಳಲ್ಲಿದ್ದು

---

೩೭. ಕುಮಾರ ಕಕ್ಕಯ್ಯನ ವಚನಗಳು – ಪು–೪೩. ವ–೧೬೫.
೩೮. □ ಅದೇ □ ಪು – ೧೦, ವ – ೩೬.
೩೯. ಕುಮಾರ ಕಕ್ಕಯ್ಯನ ವಚನಗಳು – ಪು – ೧೦, ವ–೩೮.

ರಿಣಗೂಳು ತಿನ್ನುತ್ತಾ ಜಿಗಣಿಗಳಂತೆ ಜೀವಿಸುತ್ತಿರುವ ಗುರು – ಪೂಜಾರಿ – ಪುರೋಹಿತರಿಂದ ಲೀಲಾಜಾಲವಾಗಿ ಲೂಟಿಯಾಗುತ್ತಿವೆ."[೪೦]

ಒಟ್ಟಿನಲ್ಲಿ ಧರ್ಮದ ಹೆಸರಿನಲ್ಲಿ ಮಠಮಾನ್ಯಗಳಲ್ಲಿ ಭದ್ರವಾಗಿ ನೆಲೆಯೂರಿರುವ ಧರ್ಮಗುರುಗಳು ತಮ್ಮ ನಿಜ ಕಾಯಕವನ್ನು ಮರೆತು, ಸ್ವಾರ್ಥಿಗಳಾಗಿ ಭಕ್ತರ ಶೋಷಣೆ ಮಾಡುತ್ತಿರುವುದು, ಜನರೂ ಕೂಡ ಅಂಥವರ ಬೆನ್ನುಹತ್ತಿರುವುದು ತುಂಬಾ ಶೋಚನೀಯವಾಗಿದೆ. ಕುಮಾರ ಕಕ್ಕಯ್ಯ ತಮ್ಮ ವಚನಗಳಲ್ಲಿ ಇಂತಹ ಶೋಷಣೆಯ ವಿರುದ್ಧ ಧ್ವನಿ ಎತ್ತಿರುವುದನ್ನು ಕಾಣುತ್ತೇವೆ.

**(iii) ದೇವರು – ದೇವಾಲಯ – ಪೂಜಾರಿ – ಪುರೋಹಿತರು :**

'ದೇವರು' ಎಂಬ ವಿಷಯ ಈ ಪೃಥ್ವಿಯ ಮೇಲೆ ಮಾನವನು ಎಂದು ಸೃಷ್ಟಿಯಾದನೋ ಅಂದಿನಿಂದಲೇ ಒಂದಿಲ್ಲೊಂದು ರೀತಿಯಲ್ಲಿ ಚರ್ಚಿತ ವಿಷಯವಾಗುತ್ತಲೇ ಬಂದಿದೆ. ' ಶತ ಶತಮಾನಗಳ ಹಿಂದೆ ಮಾನವನಲ್ಲಿ ಆತ್ಮಪ್ರಜ್ಞೆ ಅರಳಿ ಅವನು ತನ್ನ ಸುತ್ತಲ ಪ್ರಪಂಚವನ್ನು ಕುತೂಹಲದಿಂದ ನೋಡಲಾರಂಭಿಸಿದಾಗ ಅವನಿಗೆ ಕಂಡದ್ದೇನು? ಅಗ್ನಿಪರ್ವತಗಳಿಂದ ಭುಗಿಲೆದ್ದು ಗಗನಕ್ಕೆ ಏರುತ್ತಿರುವ ಜ್ವಾಲೆ, ಕಾದು ಕರಗಿ ಉಕ್ಕಿ ತನ್ನ ದಾರಿಯಲ್ಲಿ ಸಿಕ್ಕಿದ್ದನ್ನೆಲ್ಲ ಸುಟ್ಟು ಹರಿಯುತ್ತಿರುವ ಲಾವಾರಸ; ಮೋಡದ ದಟ್ಟಣೆಯನ್ನು ಇರಿದಿರಿದು ಕಣ್ಣು ಕೋರೈಸುವ ಮಿಂಚು, ಕಾಳ್ಗಿಚ್ಚಿನಿಂದ ಭಸ್ಮವಾಗುತ್ತಿರುವ ಕಾಡು, ಕ್ಷುಬ್ಧವಾದ ಸಮುದ್ರ, ಅದರ ತೀರದ ಮೇಲೆ, ಅಪ್ಪಳಿಸುವ ಅಲೆಗಳು; ಇವುಗಳ ಜೊತೆಗೆ ಗುಡುಗಿನ ಆರ್ಭಟ, ಸಿಡಿಲಿನ ಹೊಡೆತ'[೪೧]

ಇಂತಹ ಭಯಾನಕ, ಭೀಭತ್ಸ,, ರೌದ್ರವಾಗಿರುವ ಪ್ರಕೃತಿಯನ್ನು ಅದರ ಪರಿಣಾಮಗಳನ್ನು ಕಂಡ ಆದಿಮಾನವ ಅಂಜಿಕೆ, ಭಯ, ವಿಸ್ಮಯಗಳಿಗೆ ಒಳಗಾಗಿರಬೇಕು. ಇಂತಹ ಭಯಾನಕತೆಯ ಹಿಂದೆ ಯಾವುದೋ ಒಂದು ಶಕ್ತಿ ಇದ್ದಿರಲೇಬೇಕು. ಅದನ್ನೇ ಕಾಲಾನಂತರದಲ್ಲಿ ಭಯ–ಭಕ್ತಿಯಿಂದ ಆರಾಧಿಸಲು ಪ್ರಾರಂಭಿಸಿರಬೇಕು. ಅದುವೇ ಆತನ 'ಕಲ್ಪನೆಯ ದೇವ'ರಾಗಿರಬಹುದೆಂದು ಹೇಳಬಹುದು.

ಆಕಾಶ, ವಾಯು, ಅಗ್ನಿ, ನೀರು, ಭೂಮಿಗಳು, ದೇವರು ಎಂಬ ಕಲ್ಪನೆ; ಗಿಡ,ಮರ, ಪ್ರಾಣಿ, ಪಶು, ಪಕ್ಷಿಗಳು ದೇವರು ಎಂಬ ಕಲ್ಪನೆ, ಬೆಳೆದು ಬಂದಿತೆಂದು ಕಾಣುತ್ತದೆ. ಮಾನವನ ಬುದ್ಧಿ ವಿಕಾಸವಾದಂತೆ ದೇವ ಕಲ್ಪನೆಯಲ್ಲಿಯೂ ಪರಿವರ್ತನೆಯಾಯಿತು. ಮಾನವ ಜನಾಂಗವು ಕಾಲಗತಿಸಿದಂತೆ ನೂರಾರು ಸಮುದಾಯಗಳಾಗಿ ವಿಭಜನೆಗೊಂಡು ಭೂಮಿಯ ಮೇಲೆ ಅಲ್ಲಲ್ಲಿ ಹರಿದು–ಹಂಚಿ ಹೋಗಿ ಭಿನ್ನ ಭಿನ್ನವಾದ ಸಂಸ್ಕೃತಿ–ನಾಗರಿಕತೆಗಳು ರೂಪತಾಳಿದವು. ತಮ ತಮಗೆ ಅನುಕೂಲವಾದ ರೀತಿಯಲ್ಲಿ ದೇವರುಗಳನ್ನು ಕಲ್ಪಿಸಿಕೊಂಡರು.

---

೪೦. ಬಸವಣ್ಣನವರ ಜೀವನ ಸಂದೇಶ – ಡಾ॥ ಸಿದ್ದಯ್ಯ ಪುರಾಣಿಕ ಪು –೬೫
೪೧. ದೇವರು–ಎ.ಎನ್. ಮೂರ್ತಿರಾವ್ ಪು–೧೧

ಭಾರತದಲ್ಲಿ ದ್ರಾವಿಡರು-ಆರ್ಯರು ತಮ ತಮಗೆ ಬೇಕಾದ ರೀತಿಯಲ್ಲಿ ದೇವಾನು-ದೇವತೆಗಳನ್ನು ಕಲ್ಪಿಸಿಕೊಂಡರು.ಅವರುಗಳಿಗಾಗಿ ಕಾವ್ಯ-ಪುರಾಣಗಳನ್ನು ಬರೆದರು, ಕತೆಗಳನ್ನು ಹುಟ್ಟು ಹಾಕಿದರು. ಚಾತುರ್ವರ್ಣಕ್ಕನುಸರಿಸಿ ಬ್ರಹ್ಮ-ವಿಷ್ಣು-ಮಹೇಶ-ಇಂದ್ರಾದಿ ದೇವತೆಗಳನ್ನು ಸೃಜಿಸಿದರು. ಬ್ರಹ್ಮನಿಗೆ-ಸರಸ್ವತಿಯನ್ನು, ವಿಷ್ಣುವಿಗೆ ಲಕ್ಷ್ಮಿಯನ್ನು, ಮಹೇಶನಿಗೆ ಪಾರ್ವತಿಯನ್ನು ಮದುವೆಮಾಡಿದರು. ಮದುವೆ ಮಾಡಿದರೆಂದ ಮೇಲೆ ಅವರಿಗೆ ಮಕ್ಕಳನ್ನೂ ಹುಟ್ಟಿಸಿದರು. ಹೀಗೆ ದೇವಾನು-ದೇವತೆಗಳ ಸಂತತಿ ಬೆಳೆದು ಬೆಳೆದು ಅಸಂಖ್ಯ ದೈವಂಗಳು ಕಲ್ಪಿತವಾದವು. ಈ ದೇವಾನು- ದೇವತೆಗಳಿಗೆ ಕಾರ್ಯಗಳನ್ನು ವಹಿಸಲಾಯಿತು. ಬ್ರಹ್ಮನದು ಜೀವಿಗಳನು ಹುಟ್ಟಿಸುವ ಕೆಲಸ, ವಿಷ್ಣುವಿನದು ರಕ್ಷಿಸುವ ಕೆಲಸ, ಮಹೇಶ್ವರನದು ಲಯ ಮಾಡುವ ಕೆಲಸ ಎಂದು ನಿರ್ಧರಿಸಲಾಯಿತು. ಈ ತ್ರಿಮೂರ್ತಿಗಳಿಗೆ ಸೃಷ್ಟಿ-ಸ್ಥಿತಿ-ಲಯ ಕರ್ತೃಗಳು ಎಂದು ಕರೆಯಲಾಯಿತು. ಇವರ ಪತ್ನಿಯರಾದ ಸರಸ್ವತಿಗೆ ವಿದ್ಯಾದೇವತೆ ಲಕ್ಷ್ಮೀಗೆ ಹಣಕಾಸು ವಿಭಾಗದ ದೇವತೆ, ಪಾರ್ವತಿಗೆ ದುಷ್ಟ ಸಂಹಾರದ ದೇವತೆ ಎಂದು ಶ್ರಮವಿಭಜನೆ ಮಾಡಿ ಕರ್ತವ್ಯಗಳನ್ನು ಹಂಚಲಾಯಿತು. ಇಂದ್ರನನ್ನು ದೇವಲೋಕದ ರಾಜನನ್ನಾಗಿಸಿ., ದೇವತೆಗಳ ಲೋಕದ ಅಧಿಕಾರ ನೀಡಲಾಯಿತು. ಈ ದೇವಾನುದೇವತೆಗಳಿಗೆ ವಾಹನಗಳ ವ್ಯವಸ್ಥೆಯನ್ನೂ ಮಾಡಲಾಯಿತು. ಶಿವ-ಪಾರ್ವತಿಯರಿಗೆ ವೃಷಭ(ನಂದಿ,ಎತ್ತು), ವಿಷ್ಣು-ಲಕ್ಷ್ಮಿಯರಿಗೆ ಗರುಡ (ಹದ್ದು), ಬ್ರಹ್ಮ-ಸರಸ್ವತಿಯರಿಗೆ ನವಿಲುಗಳನ್ನು ವಾಹನಗಳನ್ನಾಗಿ ಕೊಡಲಾಯಿತು. ಇನ್ನು ಇವರುಗಳ ಸಂತಾನಕ್ಕೆ ಹುಲಿ,ಸಿಂಹ, ಆನೆ, ಇಲಿ, ಕೂರ್ಮ, ಮುಂತಾದ ಪಶು-ಪಕ್ಷಿಗಳನ್ನು ವಾಹನವಾಗಿ ಕಲ್ಪಿಸಲಾಯಿತು.

ಭಾರತವನ್ನು ಉತ್ತರಭಾರತ, ಮಧ್ಯಭಾರತ, ದಕ್ಷಿಣಭಾರತ ಎಂದು ವಿಭಜಿಸಿ 'ಉತ್ತರಭಾರತಕ್ಕೆ ದೇವಲೋಕವೆಂದೂ, ಮಧ್ಯಭಾರತಕ್ಕೆ ಭೂಲೋಕವೆಂದೂ, ದಕ್ಷಿಣಭಾರತಕ್ಕೆ ಪಾತಾಳಲೋಕವೆಂದೂ ನಾಮಕರಣ ಮಾಡಲಾಯಿತು'[೪೨] ದೇವಲೋಕದವರನ್ನು ದೇವತೆಗಳೆಂದು, ಭೂಲೋಕದವರನ್ನು ಮಾನವರೆಂದು, ಪಾತಾಳಲೋಕದವರನ್ನು ರಾಕ್ಷಸ(ದಾನವ)ರೆಂದು ಹೆಸರಿಸಲಾಯಿತು.

ಶಿವ-ಪಾರ್ವತಿಯರಿಗೆ ಕೈಲಾಸಪರ್ವತ (ಗೌರಿ-ಶಂಕರ ಪರ್ವತ) ವನ್ನು, ವಿಷ್ಣು ಲಕ್ಷ್ಮಿಯರಿಗೆ ವೈಕುಂಠ (ಕ್ಷೀರ ಸಮುದ್ರ)ವನ್ನು ಹಾಗೂ ಬ್ರಹ್ಮ-ಸರಸ್ವತಿಯರಿಗೆ 'ಬ್ರಹ್ಮಲೋಕ' ವೆಂದು ಅಂತರಿಕ್ಷದಲ್ಲಿ ವಾಸಸ್ಥಾನಗಳನ್ನು ಕಲ್ಪಿಸಿದರು. ಇವರುಗಳಿಗೆಲ್ಲ ಭೋಗ-ಭಾಗ್ಯಗಳನ್ನು ಕಲ್ಪಿಸಲಾಯಿತು. ವರ ಹಾಗೂ ಶಾಪಗಳನ್ನು ನೀಡುವ ಶಕ್ತಿಯನ್ನೂ ಒದಗಿಸಲಾಯಿತು.

ಈ ದೇವಾನುದೇವತೆಗಳಲ್ಲಿ ಪರಸ್ಪರ ಶ್ರೇಷ್ಠತೆಗಾಗಿ ಯುದ್ಧಗಳು ಜರುಗುವಂತೆ ಮಾಡಲಾಯಿತು. ಶಿವಸರ್ವೋತ್ತಮತ್ವ, ವಿಷ್ಣು ಸರ್ವೋತ್ತಮತ್ವ ಎಂದು ತಿಕ್ಕಾಟ ಹಚ್ಚಲಾಯಿತು. ದೇವ-ದೇವತೆಗಳ ನಡುವೆ ಯುದ್ಧ, ದೇವ-ಮಾನವರ ನಡುವೆ

---

೪೨. ಚಾತುರ್ವರ್ಣ ಧರ್ಮದರ್ಶನ-ಕುಮಾರಕಕ್ಕಯ್ಯ ಪೋಳ ಪು-೪೦-೪೧

ಯುದ್ಧ, ದೇವ-ದಾನವರ ನಡುವೆ ಯುದ್ಧಗಳು ನಡೆಯುವಂತೆಯೂ ಮಾಡಲಾಯಿತು.

ಹೀಗೆ ಒಂದೇ, ಎರಡೇ, ಅನಂತ ರೀತಿಯಲ್ಲಿ ಪೌರಾಣಿಕ ಕಲ್ಪನೆಗಳನ್ನು ಹುಟ್ಟುಹಾಕಲಾಯಿತು. ಈ ದೇವರುಗಳಿಗಾಗಿ ಭೂಲೋಕದಲ್ಲಿ ದೇವಾಲಯ-ಮಂದಿರಗಳನ್ನು ನಿರ್ಮಿಸಲಾಯಿತು. ದೇವಾನು-ದೇವತೆಗಳ ವಿಗ್ರಹಗಳನ್ನು ಕೆತ್ತಿಸಿ, ಗರ್ಭಗುಡಿಗಳಲ್ಲಿ ಪ್ರತಿಷ್ಠಾಪಿಸಲಾಯಿತು. ಅವುಗಳ ಪೂಜೆಗಾಗಿ ಪೂಜಾರಿಗಳನ್ನು, ಭಕ್ತರ ಎಲ್ಲಾ ಧಾರ್ಮಿಕ ವಿಧಿ-ವಿಧಾನ, ಕ್ರಿಯಾ-ಕರ್ಮಗಳಿಗಾಗಿ 'ಪುರೋಹಿತ'ರನ್ನು ನೇಮಿಸಲಾಯಿತು.

ಚಾತುರ್ವರ್ಣ ಧರ್ಮ ವ್ಯವಸ್ಥೆಯಲ್ಲಿ "ಪೌರೋಹಿತ್ಯ ನಾನಾ ರೂಪಗಳನ್ನು ತಾಳಿತು. ಪ್ರಾಣಿವಧೆಯನ್ನು ಅನುಸರಿಸಿದ ದುಬಾರಿ ವೆಚ್ಚದ ಯಜ್ಞ-ಯಾಗಗಳು, ಕುಡಿತ,ನೃತ್ಯ ಮತ್ತು ಅನ್ನಸಂತರ್ಪಣೆಗಳು ಅದರ ಮೊದಲ ಹಂತದ ಲಕ್ಷಣವಾಯಿತು... ಅನಂತರ ಅದು ನಾನಾ ಬಗೆಯ ರಹಸ್ಯ ವಿಧಿಗಳನ್ನೂ, ವಿಗ್ರಹಾರಾಧನೆಯ ಆಚರಣೆಗಳನ್ನೂ, ಪವಾಡಗಳನ್ನೂ ಅತೀಂದ್ರಿಯ ತಂತ್ರಗಳನ್ನೂ ಹುಟ್ಟು ಹಾಕಿತು. ಅವುಗಳಲ್ಲಿ ಕೆಲವು ಹೇಳಬಾರದಷ್ಟು ಭಯಂಕರವಾಗಿವೆ. ಆ ಮೇಲೆ ಅದು ದೇವಸ್ಥಾನ ವೃತ್ತಿ ಎಂಬ ಜನಪ್ರೀಯ ರೂಪ ಪಡೆಯಿತು. ಅದು ಈಗಲೂ ಶೋಷಣೆಯ ಪ್ರಧಾನ ಮಾರ್ಗವಾಗಿದೆ."[೪೩]

ವೇದೋಪನಿಷತ್ತುಗಳ ಋಷಿಗಳು ಪ್ರತಿಪಾದಿಸಿದ ಜ್ಞಾನಕಾಂಡವನ್ನು ಮರೆಮಾಚಿ, ವೇದ-ಶಾಸ್ತ್ರ-ಆಗಮ-ಪುರಾಣ-ಸ್ಮೃತಿಗಳ ಹೆಸರಿನಲ್ಲಿ ಕರ್ಮಕಾಂಡಕ್ಕೆ ಪ್ರಾಧಾನ್ಯತೆ ನೀಡಿದ ಪುರೋಹಿತಶಾಹಿಯು ವ್ಯವಸ್ಥಿತವಾಗಿ ದೇವರು-ದೇವಾಲಯಗಳ ಹೆಸರಿನಲ್ಲಿ ನೂರೆಂಟು ವಿಧವಾದ ಯಜ್ಞಗಳು, ಯಾಗಗಳು, ಹೋಮ-ಹವನಗಳು, ಅಭಿಷೇಕಗಳು, ಅರ್ಚನೆ-ಪೂಜನೆಗಳು, ವ್ರತ-ನಿಯಮಗಳು, ಹೀಗೆ ವಿಧ-ವಿಧವಾದ ರೀತಿಯಲ್ಲಿ ಆಚರಣೆಗಳನ್ನು ಹುಟ್ಟು ಹಾಕಿತು.

ಪುರೋಹಿತರು ಬಹುದೇವೋಪಾಸನೆಯನ್ನು, ಬಹುವಿಧದ ಕರ್ಮಠ ವಿಧಿಗಳನ್ನು ಹುಟ್ಟುಹಾಕಿ, ನಿರಂತರವಾಗಿ ಎಲ್ಲ ವರ್ಣಗಳ, ವರ್ಗಗಳ ಜನರನ್ನು ಶೋಷಣೆ ಮಾಡತೊಡಗಿದರು. ಸ್ವಾಮಿ ವಿವೇಕಾನಂದರು ಈ ಪುರೋಹಿತಶಾಹಿಗಳನ್ನು ಕಂಡು ತುಂಬಾ ನಿಷ್ಠುರವಾಗಿ ನುಡಿದಿದ್ದಾರೆ- "ನೀಚರೂ,ಕುತಂತ್ರಿಗಳೂ ಆದ ಪುರೋಹಿತರು ಎಲ್ಲಾ ವಿಧದ ಮೂಢನಂಬಿಕೆಗಳನ್ನು ವೇದ ಮತ್ತು ಹಿಂದೂ ಧರ್ಮದ ಸಾರ ಎಂದೇ ಬೋಧಿಸುತ್ತಾರೆ. ಈ ಠಕ್ಕುಗಾರರಾದ ಪುರೋಹಿತರಾಗಲೀ, ಅಥವಾ ಅವರ ತಾತ ಮುತ್ತಾತಂದಿರಾಗಲೀ ಕಳೆದ ೪೦೦ ತಲೆಮಾರುಗಳಿಂದಲೂ ವೇದದ ಒಂದು ಭಾಗವನ್ನು ನೋಡಿಲ್ಲ. ಮೂಢಾಚಾರಗಳನ್ನು ಅನುಸರಿಸಿ ಹೀನಸ್ಥಿತಿಗೆ ಬರುತ್ತಾರೆ. ಕಲಿಯುಗದಲ್ಲಿ ಬ್ರಾಹ್ಮಣ ವೇಷದಲ್ಲಿರುವ ಈ ರಾಕ್ಷಸರಿಂದ ಮುಗ್ಧಜನರನ್ನು ಆ ದೇವರೇ ಕಾಪಾಡಬೇಕು"[೪೪]

---

೪೩. ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ-ಭಗವಾನ್ ಪು-೧೦.

೪೪. ಸ್ವಾಮಿ ವಿವೇಕಾನಂದರ ಕೃತಿ ಶ್ರೇಣಿ ಸಂಪುಟ - ೬, ಪುಟ-೬೬

ಇಂತಹ ಕರ್ಮಠ ಪುರೋಹಿತಶಾಹಿ ವ್ಯವಸ್ಥೆಯಿಂದ ಪಾರಾಗಲು ಹನ್ನೆರಡನೆಯ ಶತಮಾನದಲ್ಲಿ ಸ್ವತ: ಬ್ರಾಹ್ಮಣ ವರ್ಣದ ಮಾದರಸ ಮೊದಲಾಂಬಿಕೆಯರ ಪುತ್ರನಾಗಿ ಇಂಗಳೇಶ್ವರ-ಬಾಗೇವಾಡಿಯ ಅಗ್ರಹಾರದಲ್ಲಿ ಜನಿಸಿದ್ದ ಬಸವಣ್ಣನವರು ತಮ್ಮ ಎಂಟನೆಯ ವಯಸ್ಸಿನಲ್ಲಿಯೇ ಬ್ರಾಹ್ಮಣ್ಯದ ಉಪನಯನ ಸಂಸ್ಕಾರವನ್ನು ವಿರೋಧಿಸಿ, ಕರ್ಮಲತೆಯಂತಿರ್ದ ಜನ್ನಿವಾರವನು ಕಿತ್ತು ಬಿಸುಟಿದಾಗ, ಆ ಸಮಾಜದಿಂದ ಹೊರಹಾಕಲ್ಪಟ್ಟರು. ಮುಂದೆ ಕಪ್ಪಡಿಸಂಗಮದ ಈಶಾನ್ಯಗುರುಗಳ ಗುರುಕುಲದಲ್ಲಿ ಸನಾತನ ಧರ್ಮದ ಎಲ್ಲಾ ವೇದಾಗಮ-ಶಾಸ್ತ್ರಪುರಾಣ, ಸ್ಮೃತಿ-ದರ್ಶನಗಳನ್ನು ಆಳವಾಗಿ ಅಧ್ಯಯನಗೈದು ಸಮಾನತೆ-ಸ್ವಾತಂತ್ರ್ಯ-ಬಂಧುತ್ವದ, ಪೂಜಾರಿ-ಪುರೋಹಿತರಿಲ್ಲದ ಲಿಂಗಾಯತ ಧರ್ಮವನ್ನು ಸ್ಥಾಪಿಸಿದರು.

ಬಹುದೇವೋಪಾಸನೆ, ಗುಡಿಗುಂಡಾರಗಳ ವಿಗ್ರಹ ಆರಾಧನೆಯನ್ನು ನಿರಸನ ಗೈದು, ಪ್ರತಿಯೊಬ್ಬರ ಅಂಗದ ಮೇಲೆ 'ಇಷ್ಟಲಿಂಗ' ವನ್ನು ನೀಡಿದರು. ಇಷ್ಟಲಿಂಗವು ವಿಶ್ವದ ಆಕಾರದಲ್ಲಿ ವಿಶ್ವಚೈತನ್ಯದ-ತನ್ನಂತರಂಗದ 'ಅರಿವಿನ ಕುರುಹು ಆಗಿರುವ ಪರವಸ್ತುವಾಗಿದೆ. 'ಲಿಂಗ ಶಬ್ದದ ಅರ್ಥವು ಬಹಳ ವ್ಯಾಪಕವಾದುದು...ಚರ-ಅಚರಾತ್ಮಕವಾದ ಸಮಸ್ತವೂ ಎಲ್ಲ ಯಾವುದರಿಂದ ಉದಿಸಿ, ಯಾವುದರಲ್ಲಿ ಅಡಗುತ್ತದೆಯೋ, ಅಂದರೆ ಯಾವ ಮೂಲ ವಸ್ತುವಿನಿಂದ ಈ ವಿಶ್ವವು ಅವಿರ್ಭವಿಸಿ ಮತ್ತೆ ಅಲ್ಲಿಯೇ ವಿಲೀನವಾಗುವುದೋ ಅದು ಲಿಂಗ ಎನ್ನುತ್ತಾರೆ.'[೪೫]

'ಯಾವುದರಿಂದ ಎಲ್ಲವೂ ಉದ್ಭವಿಸುವುದೋ ಮತ್ತು ಯಾವುದರಲ್ಲಿ ಎಲ್ಲವೂ ಲೀನವಾಗುವುದೋ ಅದೇ ಶೂನ್ಯ, ಅದೇ ಅನಂತ. ಅದರ ಇನ್ನೊಂದು ಹೆಸರು ಲಿಂಗ. ಲಿಂಗವೆಂಬುದೊಂದು ಅನಂತದ ಹೆಸರು ಎಂದು ಪ್ರಭುದೇವರು ಹೇಳಿದ್ದಾರೆ. ಅದರಲ್ಲಿ ಅನಂತ ಕೋಟಿ ಬ್ರಹ್ಮಾಂಡಗಳು ಅಡಗಿವೆ. ಅಲ್ಲದೆ ಅದರಾಚೆಗಿರುವ ಎಲ್ಲವೂ ಅಡಗಿದೆ. ಅದು ಜಡವಲ್ಲ, ಅದು ಸತ್, ಚಿತ್, ಆನಂದ ಸ್ವರೂಪ'[೪೬]

ಬಸವಾದಿ ಶರಣರು 'ದೇವ'ರನ್ನು ಬಯಲು, ಚಿದ್ಬಯಲು, ಶೂನ್ಯ, ಮಹಾ ಶೂನ್ಯ, ಮಹದಾಕಾಶ, ಚಿದಾಕಾಶ ಮುಂತಾಗಿ ಕರೆದಿದ್ದಾರೆ.[೪೭]

ಬಸವಣ್ಣನವರು ಭಕ್ತ ಮತ್ತು ದೇವರ ನಡುವೆ ಇರುವ, ಪೂಜಾರಿ-ಪುರೋಹಿತರೆಂಬ ದಲ್ಲಾಳಿಗಳನ್ನು ದೂರ ಮಾಡುವ ಸಲುವಾಗಿ 'ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲ, ಪಾತಾಳದಿಂದತ್ತತ್ತ ಚರಣವುಳ್ಳ, ಬ್ರಹ್ಮಾಂಡದಿಂದತ್ತತ್ತ ಶ್ರೀಮಕುಟವುಳ್ಳ, ಅಗಮ್ಯ, ಅಗೋಚರ, ಅಪ್ರಮಾಣ, ಅಪ್ರತಿಮ ಲಿಂಗವನ್ನು ಚುಳುಕಾಗಿಸಿ'[೪೮] ಕರಸ್ಥಲಕೆ ತಂದುಕೊಂಡು ಲೋಕದ ಜನರಿಗೆ ನೀಡಿ ಮಹದುಪಕಾರಮಾಡಿದರು.

---

೪೫. ಇಷ್ಟಲಿಂಗ ವಿಜ್ಞಾನ-ಜಿ.ಟಿ.ಅಕ್ಕುಲಯ್ಯ ದೀಕ್ಷಿತ ಪು ೧-೨

೪೬. ಶರಣದೀಪಿಕೆ-ಪ್ರೊ.ಬಿ.ವಿರೂಪಾಕ್ಷಪ್ಪ ಪು-೫

೪೭. ವಚನಗಳಲ್ಲಿ ತತ್ವ ಮೀಮಾಂಸೆ-ಡಾ। ಎನ್.ಜಿ. ಮಹಾದೇವಪ್ಪ ಪು-೩೯

೪೮. ಬಸವಣ್ಣನವರ ವಚನ ಸಂಪುಟ-ಡಾ॥. ಎಂ.ಎಂ ಕಲಬುರ್ಗಿ ಪು. ೧೮೬ ವ-೭೪೪

ಇದರಿಂದ ಸ್ಥಾವರ ದೈವಗಳನ್ನು, ಪೂಜಾರಿ-ಪುರೋಹಿತ ವ್ಯವಸ್ಥೆಯನ್ನು ನಿರಾಕರಿಸುವಂತಾಯಿತು. ಶೋಷಣೆ ತಪ್ಪಿತು ತಾನುಂಬ ಊಟವನು, ತನ್ನ ರತಿಸುಖವನು ತಾನೇ ಮಾಡಬೇಕಲ್ಲದೆ, ಬೇರೆ ಮತ್ತೊಬ್ಬರ ಕೈಯಿಂದ ಮಾಡಿಸಬಹುದೇ? ಎಂದು ಕೇಳಿ ದೇವಪೂಜೆಯನ್ನು ತಾನೇ ಮಾಡಿಕೊಳ್ಳಬೇಕು. ಲಿಂಗವ ಪೂಜಿಸಿ ಲಿಂಗವೇ ಆಗಬೇಕು ಎಂದು ತಿಳಿಸಿ, 'ಮಾನವನೇ ದೇವ' ಎಂಬ ಹೊಸ ಸಿದ್ಧಾಂತವನ್ನು ಪ್ರತಿಪಾದಿಸಿದರು.

ಕುಮಾರ ಕಕ್ಕಯ್ಯ ಪೋಳ ಅವರು ಬಸವಪರಂಪರೆಯಲ್ಲಿ ಬಂದವರಾದ್ದರಿಂದ ವೈದಿಕ ಪರಂಪರೆಯ ಪುರೋಹಿತಶಾಹಿ ವ್ಯವಸ್ಥೆಯನ್ನು ವಿಡಂಬಿಸಿದರು. ಪುರೋಹಿತಶಾಹಿಯು ಹುಟ್ಟು ಹಾಕಿದ ದೇವರುಗಳ ಕಲ್ಪನೆಯನ್ನು ಖಂಡಿಸಿದರು.

ಶೂದ್ರರ ಶೋಷಣೆಗಾಗಿಯೇ ಸೃಷ್ಟಿಸಿದ
ಮನುಸ್ಮೃತಿಯೊಂದು ಧರ್ಮಗ್ರಂಥವಂತೆ!
ಚಾತುರ್ವರ್ಣ ಗಟ್ಟಿಗೊಳಿಸಲು ಕಾಲಕಾಲಕ್ಕೆ
ಹುಟ್ಟಿ ಬರುವವನೊಬ್ಬ ದೇವನ ಅವತಾರವಂತೆ
ಪಾಖಂಡಿಗಳಿಗೆ ಸತ್ಯ, ಧರ್ಮ, ದೇವರೊಂದು
ದೊಡ್ಡ ಬೂಟಾಟಿಕೆಯೆಂದ ಕುಮಾರ ಕಕ್ಕಯ್ಯ.[೪೯]

'ಈಶಾವಾಸ್ಯಮಿದಂ ಜಗತ್ ಸರ್ವಂ, ತೇನವಿನಃ ತೃಣಮಪಿ ನ ಚಲತಿ, ಈಶ್ವರ ವ್ಯಾಪಿಯಾದ ಈ ಜಗದಲ್ಲಿ ಅವನಿಲ್ಲದೇ ಹುಲ್ಲುಕಡ್ಡಿಯೂ ಅಲುಗಾಡದು ಎಂದು ಹೇಳುವ ಪುರೋಹಿತಶಾಹಿಗಳ ದೇವರು-ಮತಾಂಧರ ದೊಂಬಿ, ರಾಜಕಾರಣಿಗಳ ಕೋಲಾಹಲ, ಅಣುಬಾಂಬುಗಳಿಂದ ಜನಸ್ತೋಮ ಚಡಪಡಿಸಿ ಸುಡುತ್ತಿರುವಾಗ, ಎಲ್ಲಿದ್ದಾನೆ ಎಂದು ಪುರೋಹಿತ, ಪೂಜಾರಿಗಳ ಕೈಹಿಡಿದು ಕೇಳಬೇಕೆಂದು'[೫೦] ಒತ್ತಾಯಿಸುತ್ತಾರೆ.

ಸ್ವಾರ್ಥ ಪುರೋಹಿತ-ಪೂಜಾರಿಗಳು ಎಷ್ಟೊಂದು ರೀತಿಯಲ್ಲಿ ದೇವರುಗಳನ್ನು ಸೃಷ್ಟಿ ಮಾಡಿದ್ದಾರೆಂಬುದನ್ನು ಎಳೆ ಎಳೆಯಾಗಿ ಬಿಡಿಸಿ ಹೇಳಿದ್ದಾರೆ-

ನೀರಿಗೆ ಕರಗುವ ಮಣ್ಣಿನ ದೇವರು
ಜಂಗು ತಿನ್ನುವ ತಗಡಿನ ದೇವರು
ಬೆಂಕಿಗೆ ಬೂದಿಯಾಗುವ ಕಟ್ಟಿಗೆ ದೇವರು
ಎಡೆ ಬೋನಕ್ಕೆ ಶೃಂಗಾರವಾಗುವ ಸೆಗಣಿಯ ದೇವರು
ಕಳ್ಳರಿಗಂಜಿ ಬೀಗ ಹಾಕಿಸಿಕೊಳ್ಳುವ ಚಿನ್ನದ ದೇವರು
ಅಜ್ಞಾನಿಗಳ ದುರ್ದೈವವೆಂದ ಕುಮಾರ ಕಕ್ಕಯ್ಯ[೫೧]

---

೪೯. ಕುಮಾರ ಕಕ್ಕಯ್ಯ ವಚನಗಳು-ಪು-೨೧೨ ವ-೮೧೬
೫೦. -ಅದೇ- ಪು-೧೮ ವ-೬೮
೫೧. ಕುಮಾರ ಕಕ್ಕಯ್ಯನ ವಚನಗಳು- ಪು-೧೧೨ ವ-೪೨೦

ಇಂದು ಎಷ್ಟೊಂದು ಪ್ರಕಾರಗಳಲ್ಲಿ ದೇವರುಗಳ ಪ್ರತಿಮೆ, ವಿಗ್ರಹ, ಪಟ, ಮೂರ್ತಿಗಳನ್ನು ತಯಾರಿಸಿದ್ದಾರಂದರೆ–' ಮಣ್ಣಿನದೇವರು,ಕಲ್ಲು ಕಬ್ಬಿಣದ ದೇವರು, ಕಟ್ಟಿಗೆ ದೇವರು, ಕಂಚು ಪಂಚಲೋಹದ ದೇವರು, ಬೆಳ್ಳಿ ಬಂಗಾರದ ದೇವರು, ಕೊನೆಗೆ ಫೈಬರ್ ಹಾಗೂ ಪ್ಲಾಸ್ಟಿಕ್ ದೇವರುಗಳೂ ಬಂದವು'[೫೨] ಎಂದು ತಿಳಿಸುತ್ತಾರೆ. ಈ ದೇವರುಗಳಿಗಾಗಿ ಕಟ್ಟಿಸಿರುವ ದೇವಾಲಯಗಳಲ್ಲಿ ಪೂಜಾರಿಗಳು ರೇಟ್‌ಬೋರ್ಡ ತೂಗು ಹಾಕಿರುತ್ತಾರೆ.

ದೇವಾಲಯ ದ್ವಾರ ಪ್ರವೇಶಕ್ಕೆ ಐದು ರೂಪಾಯಿ
ಕಾಯಿ ಕರ್ಪೂರ ನೈವೇದ್ಯಕ್ಕೆ ಹತ್ತು ರೂಪಾಯಿ
ಅಭಿಷೇಕ ರುದ್ರಾಭಿಷೇಕಕ್ಕೆ ನೂರು ರೂಪಾಯಿ
ದೇವ ದೇವಿಯರ ಮದುವೆಗೆ ಸಾವಿರ ರೂಪಾಯಿ
ವಾರಾಂಗನೆಯರ, ಹಾಡು ನೃತ್ಯ ಕಾಮಾದಿಗಳಂತೆ
ದೇವರ ದರ ನಿಗದಿ ಮಾಡಿದ ಪೂಜಾರಿಗಳು
ಜಾಣರೆಂದ ಕುಮಾರ ಕಕ್ಕಯ್ಯ[೫೩]

ದೇವಾಲಯಗಳಲ್ಲಿ ಪೂಜಾರಿಗಳು ಭಕ್ತರಿಗೆ ಹಲವಾರು ರೀತಿಯ ಪೂಜಾ–ವಿಧಿ ವಿಧಾನಗಳಿಂದ ಯಾವ ರೀತಿಯಲ್ಲಿ ಸುಲಿಗೆ ಮಾಡುತ್ತಾರೆಂಬುದುದನ್ನು ಈ ವಚನದ ಮೂಲಕ ತಿಳಿಯಪಡಿಸುತ್ತಾರೆ. ಅಜ್ಞಾನಿಗಳ ಶೋಷಣೆ ಮಾಡುವವರನ್ನು ಕದೀಮರೆಂದು ಕರೆಯುತ್ತಾರೆ–

ತನಗಾಗಿ ಪುರೋಹಿತ
ಯಾವ ಶಾಸ್ತ್ರವನ್ನೂ ಓದುವದಿಲ್ಲ.
ತನಗಾಗಿ ಪೂಜಾರಿ
ಯಾವ ದೇವರಲ್ಲಿಯೂ ಬೇಡಿಕೊಳ್ಳುವದಿಲ್ಲ.
ತನಗಾಗಿ ವಕೀಲ
ಯಾವ ಕೋರ್ಟಿಗೂ ಹೋಗುವುದಿಲ್ಲ.
ಈ ಕದೀಮರು ಮಾಡುವದೆಲ್ಲವೂ
ಅಜ್ಞಾನಿಗಳ ಶೋಷಣೆಗೆಂದ
ಕುಮಾರ ಕಕ್ಕಯ್ಯ[೫೪]

ಲೋಕಾನುಭವ–ಶಿವಾನುಭವಗಳನ್ನು ಅಂಗವಿಸಿಕೊಂಡ ವಚನಕಾರ ಕುಮಾರ ಕಕ್ಕಯ್ಯನವರು ತಮ್ಮ ಇನ್ನೊಂದು ವಚನದಲ್ಲಿ ಹೇಳುತ್ತಾರೆ–

---

೫೨. –ಅದೇ– ಪು–೧೯೦ ವ–೭೩೧
೫೩. ಕುಮಾರ ಕಕ್ಕಯ್ಯನ ವಚನಗಳು ಪು–೧೧೯ ವ–೪೫೮
೫೪. –ಅದೇ– ಪು–೫ ವ–೧೯

ದಲಾಲರಿರುವಲ್ಲಿ ವಿಶ್ವಾಸವಿಲ್ಲ
ವಕೀಲರಿರುವಲ್ಲಿ ನ್ಯಾಯವಿಲ್ಲ
ಕಟುಕರಿರುವಲ್ಲಿ ಕರುಣೆಯಿಲ್ಲ
ರಾಜಕಾರಣಿಗಳಿರುವಲ್ಲಿ ಶಾಂತಿಯಿಲ್ಲ
ಪುರೋಹಿತರಿರುವಲ್ಲಿ ಧರ್ಮವಿಲ್ಲ
ಪೂಜಾರಿಗಳಿರುವಲ್ಲಿ ದೇವರೇ ಇಲ್ಲವೆಂದ
ಕುಮಾರ ಕಕ್ಕಯ್ಯ.[೫೫]

ಈ ಪೂಜಾರಿ – ಪುರೋಹಿತರು ಮುಗ್ಧ ಹಾಗೂ ಮೂಢ ಭಕ್ತರಿಗೆ ಶಿವಲೋಕ ವಿಷ್ಣುಲೋಕ, ಬ್ರಹ್ಮಲೋಕಗಳ ಆಸೆ ಹಚ್ಚಿ ಧನ – ಕನಕಗಳನ್ನು ಯಾವ ರೀತಿಯಾಗಿ ಸುಲಿಗೆ ಮಾಡುತ್ತಾರೆಂಬುದನ್ನು ತುಂಬಾ ಮಾರ್ಮಿಕವಾಗಿ ವಚನದ ಮೂಲಕ ತಿಳಿಸುತ್ತಾರೆ –

ಶಿವಲೋಕಕ್ಕಾಗಿ, ವಿನಾಯಕನ ವ್ರತ ಮಾಡಿ
ಚಿನ್ನದ ಆನೆಯನ್ನು ಪುರೋಹಿತರಿಗೆ ದಾನಮಾಡಬೇಕು.
ವಿಷ್ಣುಲೋಕಕ್ಕಾಗಿ, ನೀಲ ವ್ರತಮಾಡಿ
ಚಿನ್ನದ ಕಮಲವನ್ನು ಪುರೋಹಿತರಿಗೆ ಕೊಡಬೇಕು.
ಬ್ರಹ್ಮಲೋಕಕ್ಕಾಗಿ, ಆನಂದ ವ್ರತ ಮಾಡಿ
ಚಿನ್ನದ ಗೋವನ್ನು ಪುರೋಹಿತರಿಗೆ ನೀಡಬೇಕು.
ದೇವಲೋಕದ ಹೆಸರಲ್ಲಿ ಚಿನ್ನ ದರೋಡೆ ಮಾಡುವ
ಪುರೋಹಿತರ ಮನೀಷೆ ನೋಡೆಂದ
ಕುಮಾರ ಕಕ್ಕಯ್ಯ.[೫೬]

ಈ ದೇಶದಲ್ಲಿ ದೇವರ ಹೆಸರಲ್ಲಿ ನಡೆದಷ್ಟು ಶೋಷಣೆ ಬಹುಶಃ ಮತ್ತಾವ ದೇಶದಲ್ಲಿಯೂ ನಡೆದಿರಲಿಕ್ಕಿಲ್ಲ. ಶ್ರೀಮಂತರು ಬಡವರನ್ನು ಆರ್ಥಿಕವಾಗಿ ಶೋಷಿಸುತ್ತಿದ್ದರೆ, ಪುರೋಹಿತರು ಬಡವರನ್ನೂ ಶ್ರೀಮಂತರನ್ನೂ ಕೂಡಿಯೇ ಶೋಷಿಸುತ್ತಿದ್ದರು, ಶೋಷಿಸುತ್ತಿದ್ದಾರೆ. ಈ ಶೋಷಣೆಗಾಗಿ ಅವರಿಗೆ ಸುಲಭದಲ್ಲಿ ಸಿಕ್ಕ ಬಹುದೊಡ್ಡ ಅಸ್ತ್ರ ದೇವರಾಗಿತ್ತು. 'ದೇವರುಗಳನ್ನು ಸೃಷ್ಟಿಸಿ, ಆತನ ಹೆಸರಿನಿಂದ ಜನರ ಮನಸ್ಸಿನಲ್ಲಿ ಭಯವನ್ನು ಬಿತ್ತಿ ಜನಸಮೂಹವನ್ನು ತಮ್ಮ ಕೈಗೆ ತೆಗೆದುಕೊಂಡ ಪುರೋಹಿತ ವರ್ಗ ಇಡೀ ಸಮಾಜವನ್ನು ನಿರ್ವೀರ್ಯವನ್ನಾಗಿ ಮಾಡಿದರು.'[೫೭]

ಡಾ॥ ಸಿದ್ದಯ್ಯ ಪುರಾಣಿಕರ ಮಾತುಗಳಲ್ಲಿ ನೋಡುವದಾದರೆ – "ಹಿಂದೂ ಧರ್ಮದಲ್ಲಿಯೋ ಹೆಜ್ಜೆ ಹೆಜ್ಜೆಗೆ ಲೂಟಿ, ದಕ್ಷಿಣೆಯೆಂದು ಗುರುಗಳೂ, ಪೂಜಾರಿ ಪುರೋಹಿತರು; ದಾನವೆಂದು ಭಿಕ್ಷುಕರು, ಜಾತ್ರೆ – ಜಯಂತಿ ಅಷ್ಟಮಿ

೫೫. ಕುಮಾರ ಕಕ್ಕಯ್ಯನ ವಚನಗಳು – ಪು–೧೭೩ ವ–೬೬೮
೫೬. ಕುಮಾರ ಕಕ್ಕಯ್ಯನ ವಚನಗಳು ಪು–೨೩೭, ವ–೯೧೫.
೫೭. ಶರಣರ ಬಂಡಾಯ – ಡಾ॥ ಸರಜೂ ಕಾಟ್ಕರ ಪು – ೨೦

ನವಮಿಗಳೆಂದು ಸಾವಿರಾರು (ರೂಪಾಯಿ) ಸೇರಿಸಿ, ನೂರಾರು ಖರ್ಚು ಮಾಡಿ, ಉಳಿದುದನ್ನು ಕಬಳಿಸುವ ಉತ್ಸವೋದ್ಯೋಗಿಗಳು ಒಬ್ಬರೇ, ಇಬ್ಬರೇ, ದುಡಿಯುವ ಒಬ್ಬೊಬ್ಬನಿಗೂ ದುಡಿಯದ ಒಬ್ಬೊಬ್ಬನು ಗಂಟು ಬಿದ್ದಿರುವನೇನೋ ಎನ್ನುವಷ್ಟರ ಮಟ್ಟಿಗೆ ಸರ್ವವ್ಯಾಪಿಯಾಗಿ ನಡೆದಿದೆ ಸುಲಿಗೆ, ಚರ್ಮ ಸುಲಿಯುವವರೆಗೆ ಸುಲಿಗೆ.'[೫೮] ಅಂತೆಯೇ ಧೀರ – ವೀರ ಸನ್ಯಾಸಿ ಸ್ವಾಮಿ ವಿವೇಕಾನಂದರು ಯುವಜನಾಂಗಕ್ಕೆ ಕರೆಕೊಟ್ಟಿದ್ದಾರೆ 'ಮುಂದೆ ಬನ್ನಿ, ಪುರುಷಸಿಂಹರಾಗಿ! ಪುರೋಭಿವೃದ್ಧಿಗೆ ಯಾವಾಗಲೂ ಕಂಟಕಪ್ರಾಯರಾದ ಪುರೋಹಿತರನ್ನು ಹೊಡೆದು ಅಟ್ಟಿ. ಅವರೆಂದಿಗೂ ತಿದ್ದಿಕೊಳ್ಳಲಾರರು.

ಅವರ ಹೃದಯ ವಿಶಾಲವಾಗಲಾರದು. ಅನೇಕ ಶತಮಾನಗಳಿಂದ ಬಂದ ಮೂಢನಂಬಿಕೆ ಮತ್ತು ಕಿರುಕುಳದ ಮಕ್ಕಳವರು. ಮೊದಲು ಅವರನ್ನು ಆಚೆಗೆ ಅಟ್ಟಿ. ಬನ್ನಿ ಮುಂದೆ, ಧೀರರಾಗಿ.,[೫೯] ಬಡವರಿಗೆ ದಯೆ ತೋರಿ, ಸಹಾಯ ಮಾಡಿ, ಮಾನವನೇ ದೇವರು.'[೬೦]

ಇದೇ ತೆರನಾಗಿ ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ವಚನದ ಮೂಲಕ ಜನಾಂಗಕ್ಕೆ ಕರೆಕೊಡುತ್ತಾರೆ –

> ಬೆಣ್ಣೆಗಾಗಿ ಕೆಸರು ಕಡೆಯಬೇಡ,
> ಕೆನೆ ಮೊಸರು ಕಡೆದು ಪಡೆದು ಕೋ.
> ಅಕ್ಕಿಗಾಗಿ ಮರಳು ಕುಟ್ಟಬೇಡ.
> ಉತ್ತಮ ಭತ್ತ ಕುಟ್ಟಿ ಶೇಖರಿಸಿಕೋ.
> ದೇವನಿಗಾಗಿ ಹೊರಗೆ ಹುಡುಕಬೇಡ
> ನಿನ್ನಲ್ಲಿಯೇ ನೀ ನೋಡಿಕೊಳ್ಳೆಂದ
> ಕುಮಾರ ಕಕ್ಕಯ್ಯ.[೬೧]

ಮನುಷ್ಯ ಎಲ್ಲಿಯವರೆಗೆ ನಿಜವಾದ ಅರಿವು ಹೊಂದುವದಿಲ್ಲವೋ ಅಲ್ಲಿಯವರೆಗೆ ಶೋಷಣೆ ತಪ್ಪಿದ್ದಲ್ಲ. ಆದ್ದರಿಂದ ಅಂತರಂಗದಲ್ಲಿ ಅರಿವು ಜಾಗೃತಮಾಡಿಕೊಂಡಾಗ ಬಹಿರಂಗದಲ್ಲಿ ಸದಾಚಾರ ಅಳವಡುತ್ತದೆ. ತನ್ನನ್ನು ತಾನು ಅರಿತರೆ 'ತಾನೇ ದೇವ' ಎಂಬ ಪ್ರಜ್ಞೆ ಮೂಡುತ್ತದೆ ಎಂದು ಕುಮಾರ ಕಕ್ಕಯ್ಯನವರು ತುಂಬಾ ಕಳಕಳಿಯಿಂದ ಹೇಳುತ್ತಾರೆ.

### iv) ಗುರು–ವಿರಕ್ತರು, ಭಕ್ತ – ಜಂಗಮರು, ಭಕ್ತ–ಮಾಹೇಶ ಪ್ರಭೇದಗಳು:

ಹನ್ನೆರಡನೆಯ ಶತಮಾನದಲ್ಲಿ ಚಾತುರ್‌ವರ್ಣ ಧರ್ಮ–ಸಮಾಜ ವ್ಯವಸ್ಥೆಯನ್ನು ನಿರಾಕರಿಸಿ ವರ್ಣಭೇದವಿಲ್ಲದ, ಆಶ್ರಮಭೇದವಿಲ್ಲದ, ವರ್ಗಭೇದವಿಲ್ಲದ,

---

೫೮. ಬಸವಣ್ಣನವರ ಜೀವನ ಸಂದೇಶ – ಡಾ॥ ಸಿದ್ದಯ್ಯ ಪುರಾಣಿಕ ಪು –೬೫.
೫೯. ಪತ್ರಮಾಲೆ – ಸ್ವಾಮಿ ವಿವೇಕಾನಂದ ಪು – ೬೫
೬೦. ಪತ್ರಮಾಲೆ – ಸ್ವಾಮಿ ವಿವೇಕಾನಂದ ಪು – ೨೨೫.
೬೧. ಕುಮಾರ ಕಕ್ಕಯ್ಯನ ವಚನಗಳು – ಪು–೧೪೭ ವ – ೫೬೬.

ಲಿಂಗಭೇದವಿಲ್ಲದ, ಜಾತಿಭೇದವಿಲ್ಲದ ಸಮತೆ–ಸ್ವಾತಂತ್ರ್ಯ ಬಂಧುತ್ವದ ತಳಹದಿಯಮೇಲೆ ಜಾತಿರಹಿತ ಧರ್ಮಸಹಿತವಾದ ಒಂದು ವಿನೂತನ ಇಷ್ಟಲಿಂಗಪರಂಪರೆಯ ಲಿಂಗಾಯತಧರ್ಮವನ್ನು ವಿಶ್ವಗುರು ಬಸವಣ್ಣನವರು ಅಂದಿನ ಕಲ್ಯಾಣದ ಅನುಭವಮಂಟಪದಲ್ಲಿ ಸ್ಥಾಪಿಸಿದರು. ಇಂತಹ ಧರ್ಮದ ಅರಿವು –ಆಚಾರ–ಅನುಭಾವಗಳು ಅಖಂಡ ೩೬ ವರುಷಗಳ ಕಾಲ ಕಲ್ಯಾಣದಲ್ಲಿ ನಡೆದವು. 'ಅಯ್ಯಾ ಭಕ್ತಿಗೆ ಬೀಡಾಗಿತ್ತು ಕಲ್ಯಾಣ ೩೬ ವರುಷ, ಅನುಭಾವಕ್ಕೆ ಶಿವಸದನವಾಗಿತ್ತು ೨೭ ವರುಷ' ಎಂದು ಬಸವಣ್ಣನವರ ವಚನವಾಣಿ ಹೇಳುವಂತೆ ಅಂದಿನ ಕಲ್ಯಾಣದ ಅನುಭವ ಮಂಟಪ ವ್ಯವಸ್ಥೆಯು ಉಗಮಗೊಂಡು ಇಡೀ ಭರತಖಂಡದಾದ್ಯಂತ ಪ್ರಸಿದ್ಧಿಗೆ ಬಂದಿತು.

ಮುಂದೆ ಪಟ್ಟಭದ್ರ ಕರ್ಮಠ ವರ್ಣವಾದಿಗಳ ತಂತ್ರ–ಕುತಂತ್ರಗಳಿಂದಾಗಿ, ರಾಜಕೀಯ ಅಧಿಕಾರದಾಹದಿಂದಾಗಿ ಪುರೋಹಿತಸತ್ತೆ ಹಾಗೂ ರಾಜಸತ್ತೆ ಒಂದಾಗಿ ಪ್ರಜಾಹಿತದ ಬಸವಾದಿ ಶರಣರ ಧರ್ಮ – ಸಾಹಿತ್ಯ ಸಂಸ್ಕೃತಿಯನ್ನು ನಾಶಪಡಿಸಲು ಮುಂದಾದಾಗ ಅವರಿಗೊಂದು ನೆಪದೊರೆಯಿತು. ಸಮಗಾರ ಹರಳಯ್ಯ ಬ್ರಾಹ್ಮಣರ ಮಧುವರಸರು ತಮ್ಮ ತಮ್ಮ ಪೂರ್ವಾಶ್ರಮ ತೊರೆದು ಬಸವಧರ್ಮ ಸ್ವೀಕರಿಸಿ, ತಮ್ಮ ಮಕ್ಕಳ ಕಲ್ಯಾಣಮಹೋತ್ಸವ ನೆರವೇರಿಸಿದ್ದು ವರ್ಣವಾದಿಗಳಿಗೆ 'ವರ್ಣಸಂಕರ' ಎಂದು ಹುಯಿಲೆಬ್ಬಿಸಲು ಕಾರಣವಾಯ್ತು. ಇದರ ಪರಿಣಾಮಸ್ವರೂಪವೇ ಹರಳಯ್ಯ–ಮಧುವರಸರಿಗೆ ಎಳಹೂಟಿ ಶಿಕ್ಷೆ, ಶೀಲವಂತ–ಲಾವಣ್ಯರ ಶಿರಚ್ಛೇದ, ಬಸವಣ್ಣನವರಿಗೆ ಗಡಿಪಾರು ಆಜ್ಞೆ, ಕಲ್ಯಾಣಕ್ರಾಂತಿ–ಶಿವಶರಣರ ಕಗ್ಗೊಲೆ, ನಂತರ ಅಳಿದುಳಿದ ವಚನಸಾಹಿತ್ಯ ಗೌಪ್ಯವಾಗಿ ಸಂರಕ್ಷಣೆ, ಉಳವಿಯ ಘನಘೋರಾರಣ್ಯದಲ್ಲಿ ಶರಣರ ಕೊನೆಯ ದಿನಗಳು, ಬಯಲಿನಲ್ಲಿ ಬಯಲಾದದ್ದು.

ಇಡೀ ಜಗತ್ತಿಗೆ ಒಂದು ಸುಂದರ ಆದರ್ಶವನ್ನು, ಧರ್ಮ, ಸಮಾಜವನ್ನು ನೀಡಿದ್ದ ಬಸವಾದಿ ಶರಣರ ಕಾರ್ಯ ಸಾಧನೆಯು ಮರೆಯಾಯ್ತು. ಇದಾದ ಮೂರುನೂರು ವರುಷಗಳ ತರುವಾಯ ಶರಣರ ಧರ್ಮ ಸಂಸ್ಕೃತಿಯ ಪುನರುಜ್ಜೀವನಗೊಳಿಸುವ ಕಾರ್ಯವು ೧೫ ನೇ ಶತಮಾನದಲ್ಲಿ ಪ್ರಾರಂಭವಾಯಿತು. ಅನಂತರ ಲಿಂಗಾಯತ ಎಂಬುದು ಯಾರು ಎಷ್ಟೇ ಪ್ರಯತ್ನಿಸಿದರೂ ಅದೊಂದು ಸ್ವತಂತ್ರ ಧರ್ಮವೆಂದು ಪರಿಗಣಿಸಲ್ಪಡದೇ ಸನಾತನ ಶೈವ ವೈದಿಕ ಹಿಂದೂ ಧರ್ಮದ ಒಂದು ಪಂಗಡ, ಜಾತಿ ಎಂಬಂತೆಯೇ ಸಾಗಿಬರುತ್ತಿದೆ.

ಗುರು –ವಿರಕ್ತರೆಂಬ ವರ್ಗ, ಭಕ್ತ ಮಾಹೇಶ ಎಂಬ ವರ್ಗ, ಭಕ್ತ–ಜಂಗಮ ಎಂಬ ವರ್ಗಗಳೂ ಲಿಂಗಾಯತರಲ್ಲಿ ಪ್ರಾರಂಭಗೊಂಡವು ಭಾರತದ ಯಾವುದೇ ವರ್ಣ–ಜಾತಿಗಳವರು 'ಇಷ್ಟಲಿಂಗ ದೀಕ್ಷೆಯನ್ನು ಹೊಂದಿ, ಅತಿವರ್ಣಾಶ್ರಮಿಗಳಾಗಿ, ಸ್ವತಂತ್ರ ಲಿಂಗಾಯತ ಧರ್ಮಾನುಯಾಯಿಗಳಾದರೂ ಸಹ ಅವರಲ್ಲಿ ಭೇದ–ಪ್ರಭೇದಗಳು, ಒಡಕು–ತೊಡಕುಗಳು ಉಂಟಾದವು. 'ಲಿಂಗಾಯತ ಜಾತಿ, ಉಪಜಾತಿಗಳ ನಿರ್ಮಾಣಕ್ಕೆ ಮೂಲಕಾರಣರಾದವರೆಂದರೆ ಜಂಗಮರು.ಜಾತಿ ನಿರ್ಮೂಲನವನ್ನೆ . ತಮ್ಮ ಮೂಲಧ್ಯೇಯವಾಗಿರಿಸಿಕೊಂಡ

ಜಂಗಮರೇ ಜಾತಿ ನಿರ್ಮಾಣಕ್ಕೆ ಕಾರಣರಾದರೆನ್ನುವ ಪ್ರಶ್ನೆಗೆ ಐತಿಹಾಸಿಕ ಸಮಕಾಲೀನ ಕರ್ನಾಟಕದಲ್ಲಿ ಪ್ರಮಾಣಬದ್ಧವಾದ ವಿವರಗಳು ದೊರೆಯುತ್ತವೆ'[೬೨]

ಹನ್ನೆರಡನೆಯ ಶತಮಾನದಲ್ಲಿ 'ಜಂಗಮ' ಎನ್ನುವುದು ಜಾತಿಯಾಗಿರಲಿಲ್ಲ, ಅದೊಂದು ಅನುಭಾವದ ಸ್ಥಿತಿಯಾಗಿತ್ತು. ಅರಿವೇ ಗುರು, ಆಚಾರವೇ ಲಿಂಗ, ಅನುಭಾವವೇ ಜಂಗಮವಾಗಿತ್ತು .ಗುರುವಿನಲ್ಲಿ ಕುಲವಿಲ್ಲ, ಜಂಗಮದಲ್ಲಿ ಜಾತಿ ಇಲ್ಲ ಎಂಬ ಸಿದ್ಧಾಂತ ಶರಣರಲ್ಲಿತ್ತು. ಯಾರು ಅನುಭಾವ ಸಂಪನ್ನರಾಗಿದ್ದರೋ ಅವರು ಜಂಗಮ ಕಾರ್ಯ ನಿರ್ವಹಿಸುತ್ತಿದ್ದರು. ಜಂಗಮ ಎನ್ನುವದು ಜನ್ಮದಿಂದ ಬರುತ್ತಿರಲಿಲ್ಲ. ಲಿಂಗಾಯುತ ಸದ್ಭಕ್ತರೇ ಕ್ರಿಯಾಮೂರ್ತಿಯಾಗಿ ಗುರುವೆನಿಸಿಕೊಳ್ಳುತ್ತಿದ್ದರು, ಅನುಭಾವ ಮೂರ್ತಿಯಾಗಿ ಅಂದರೆ ಜ್ಞಾನಮೂರ್ತಿಯಾಗಿ ಜಂಗಮವೆನಿಸಿಕೊಳ್ಳುತ್ತಿದ್ದರು. ಲಿಂಗಾಯತರೆಲ್ಲ ಒಂದೆ. ವ್ಯಕ್ತಿ ಹಾಗೂ ಸಮಾಜದ ಉದ್ಧಾರಕ್ಕಾಗಿ ಹಲವಾರು ಕಾಯಕಗಳನ್ನು ಕೈಕೊಳ್ಳುತ್ತಿದ್ದರು. ಕಾಯಕಗಳಲ್ಲಿ ಮೇಲು-ಕೀಳು ಎಂಬ ಭೇದಭಾವವಿರಲ್ಲಿಲ್ಲ. ಎಲ್ಲ ಕಾಯಕಗಳಿಗೂ ಸಮಾನ ಗೌರವವಿತ್ತು .ಅಂತೆಯೇ ಜಂಗಮಕಾರ್ಯ ಎನ್ನುವುದೂ ಕಾಯಕವಾಗಿತ್ತು. ಜಂಗಮ ಕಾಯಕ ಕೈಕೊಂಡವರನ್ನು ಜಂಗಮ ಎಂದು ಪರಿಗಣಿಸಲ್ಪಡುತ್ತಿತ್ತು. 'ಬಸವಣ್ಣನ ಕಾಲದಲ್ಲಿ ಜಂಗಮರು ಧರ್ಮ ಬೋಧನೆಗೆ ಕಾರಣರಾದಂತೆ, ಧಾರ್ಮಿಕ ಶಿಸ್ತು ಪರಿಪಾಲನೆಗೂ ಕಾರಣರಾಗಿದ್ದರು. ಹಳ್ಳಿಯಿಂದ ಹಳ್ಳಿಗೆ ತಿರುಗುತ್ತ ಕಾಯಕ ಜಂಗಮರು ಧರ್ಮಾಚರಣೆಯ ಮೇಲ್ವಿಚಾರಣೆ ಮಾಡುತ್ತಾ, ದಾರಿ ತಪ್ಪಿದವರನ್ನು ದಾರಿಗೆ ಹಚ್ಚಿ, ತಮ್ಮ ಬದುಕನ್ನೇ ಲಿಂಗಾಯತ ನಂಬುಗೆಗಳ ಪ್ರಸಾರಕ್ಕಾಗಿ ತ್ಯಾಗ ಮಾಡಿದರು. ಕ್ರಮೇಣವಾಗಿ ವಿಸ್ತೃತವಾಗುತ್ತಿದ್ದ ತಮ್ಮ ಕಾರ್ಯಕ್ಷೇತ್ರವನ್ನು ಹಂಚಿಕೊಂಡು ಗಂಟೆ ಕಾಯಕ, ಗದ್ದುಗೆ ಕಾಯಕ, ಮಂಗಳ ಕಾಯಕ, ಮುಳ್ಳಾವಿಗೆ ಕಾಯಕ ಎಂಬ ನಾಲ್ಕು ತೆರನಾದ ಕಾಯಕಗಳನ್ನು ನಿರ್ಮಿಸಿ ಸಮಾಜ ಕಾರ್ಯದಲ್ಲಿ ನಿರತರಾದರು. ಅವರೆಲ್ಲರ ಉದ್ದೇಶ ಲಿಂಗಾಯತಧರ್ಮದ ನೈರಂತರ್ಯದ ಪಾಲನೆಯೊಂದೇ ಆಗಿದ್ದಿತು.[೬೩]

ಬಸವಾದಿ ಶರಣರ ಕಲ್ಯಾಣ ಕ್ರಾಂತಿಯ ತರುವಾಯ ಶ್ರೇಣಿಪದ್ಧತಿಯ ಜಾತಿ ವ್ಯವಸ್ಥೆಯು ಲಿಂಗಾಯತ ಧರ್ಮದಲ್ಲಿ ನುಸುಳಿತು. ವೈದಿಕದಲ್ಲಿ ಬ್ರಾಹ್ಮಣ ಪುರೋಹಿತಶಾಹಿ ಬೆಳೆದುಬಂದಂತೆ ಲಿಂಗಾಯುತದಲ್ಲಿಯೂ ಜಂಗಮ ಪುರೋಹಿತಶಾಹಿಯು ಪ್ರಾರಂಭವಾಯಿತು. 'ಶ್ರೇಣಿ ರಚನೆಗೆ ವಿರೋಧವಾಗಿರುವ ಲಿಂಗಾಯತ ಸಮಾಜದಲ್ಲಿ ಶ್ರೇಣಿ(ರಚನೆಗೆ) ಭಾವಕ್ಕೆ ಅವಕಾಶವಿತ್ತವರೇ ಜಂಗಮರು. ಸಂಸ್ಥಾನಮಠ, ಹಿರೇಮಠ, ಚಿಕ್ಕಮಠ ಎಂಬ ಮಠಗಳನ್ನು ಶ್ರೇಣಿಪದ್ಧತಿಯ

೬೨. ಲಿಂಗಾಯತ ಧರ್ಮ-ಸಂಸ್ಕೃತಿ ಮತ್ತು ಸಮಾಜ –ಡಾ॥ಹಿರೇಮಲ್ಲೂರ ಈಶ್ವರನ್ ಪು-೧೬೮.

೬೩. A Comparative study of two Virasaiva Monasteries - H.M. Sadashivayya. p-62.

ಮೇಲೆ ರಚಿಸಿಕೊಂಡು ದೊಡ್ಡಮಠಗಳು ಶಾಖಾಮಠಗಳನ್ನು ತಮ್ಮ ಪ್ರಭುತ್ವಕ್ಕೀಡುಮಾಡಿವೆ"[೬೪]

ಲಿಂಗಾಯತ ಧರ್ಮತತ್ವಗಳಾದ ಅಷ್ಟಾವರಣ, ಪಂಚಾಚಾರ, ಷಟಸ್ಥಲಗಳನ್ನು ಮನಬಂದಂತೆ ಅರ್ಥೈಸಿ ವಿಭಜಿಸಲಾಯಿತು. ಗುರು ಲಿಂಗ ಜಂಗಮ–ಪಾದೋದಕ–ಪ್ರಸಾದ–ವಿಭೂತಿ–ರುದ್ರಾಕ್ಷಿ–ಮಂತ್ರ ಎಂಬ ಅಷ್ಟಾವರಣಗಳಲ್ಲಿ ಮೊದಲ ಮೂರು ಪೂಜ್ಯರೆಂದೂ, ನಂತರದೆರಡು ಪೂಜೆಯ ಫಲಗಳೆಂದೂ, ಅನಂತದ ಮೂರು ಪೂಜೆಯ ಸಾಧನಗಳೆಂದು ವೀರಶೈವ ಪುರೋಹಿತಶಾಹಿ ಶಾಸ್ತ್ರಿ ಪಂಡಿತರುಗಳು ವಿಭಜಿಸಿದರು. ಗುರು–ಲಿಂಗ–ಜಂಗಮದಲ್ಲಿ ಗುರು ಹಾಗೂ ಜಂಗಮ ಎರಡು ತತ್ವಗಳನ್ನು ಅಷ್ಟಾವರಣದಿಂದ ಹೊರತೆಗೆದು ವ್ಯಕ್ತೀಕರಿಸಿ ಗುರುವರ್ಗ ಹಾಗೂ ವಿರಕ್ತವರ್ಗವೆಂದೂ ವಿಂಗಡಿಸಿ ಗುರುವರ್ಗಕ್ಕೆ ಮೂಲ ಪಂಚಪೀಠಗಳ ಪಂಚಾಚಾರ್ಯರು, ವಿರಕ್ತವರ್ಗದವರು ಐದು ಸಮಯಗಳನ್ನು ಮಾಡಿಕೊಂಡು ವಿರಕ್ತ ಜಗದ್ಗುರುಗಳೆಂದೂ ಪೀಠ–ಮಠಗಳನ್ನು ಸಂಸ್ಥಾಪಿಸಿಕೊಂಡು ಬಂದರು. **ಗುರುವರ್ಗ :** "ಶಿವನ ಪಂಚ ಮುಖಗಳಿಂದ ಹುಟ್ಟಿದರೆಂದು ನಂಬಲಾದ ಐವರು ಪಂಚಾಚಾರ್ಯರು ಕಲಿಯುಗದಲ್ಲಿ ಐದು ಪೀಠಗಳನ್ನು ಸ್ಥಾಪಿಸಿದರು. ಅವರ ಅವತಾರದ ಉದ್ದೇಶ ವೀರಶೈವ ಮತದ ಉದ್ಧಾರ. (ವೀರಶೈವ ಮತೋದ್ಧಾರ ಹೇತವೇ) ಅವರ ಪಟ್ಟಿ ಹೀಗಿದೆ–

| **ಶಿವನ ಮುಖ** | **ಪಂಚಾಚಾರ್ಯ** | **ಪೀಠಸ್ಥಾಪನೆ** |
|---|---|---|
| ಸದ್ಯೋಜಾತ | ರೇವಣಾರಾಧ್ಯ | ಬಾಳೆಹಳ್ಳಿ (= ರಂಭಾಪುರಿ) |
| ವಾಮದೇವ | ಮರುಳಾರಾಧ್ಯ | ಉಜ್ಜಯನಿ (=ಬಳ್ಳಾರಿ ಜಿಲ್ಲೆ) |
| ಅಘೋರ | ಏಕೋರಾಮಾರಾಧ್ಯ | ಕೇದಾರ |
| ತತ್ಪುರುಷ | ಪಂಡಿತಾರಾಧ್ಯ | ಶ್ರೀಶೈಲ |
| ಈಶಾನ | ವಿಶ್ವಾರಾಧ್ಯ | ವಾರಣಾಸಿ |

ಒಬ್ಬೊಬ್ಬ ಪಂಚಾಚಾರ್ಯರಿಗೂ ಪ್ರತ್ಯೇಕ ಗೋತ್ರ,ಸೂತ್ರ,ವರ್ಣ, ಮಂತ್ರ ಇತ್ಯಾದಿಗಳುಂಟು."[೬೫]

ಇವರ ಹೆಸರುಗಳೇ ಸೂಚಿಸುವಂತೆ ಇವರು ಆಂಧ್ರಮೂಲದ ಆರಾಧ್ಯ ಬ್ರಾಹ್ಮಣ ಪರಂಪರೆಯ ಮೂಲದಿಂದ ಬಂದವರಾಗಿರಬೇಕು. ಈ ಪಂಚಾಚಾರ್ಯ ಪರಂಪರೆಯ ಪೀಠಾಧಿಪತಿಗಳು ತಮಗೆ ಅಧೀನರಾಗಿ ಉಪಾಚಾರ್ಯರು, ಪಟ್ಟದ್ದೇವರು, ಹಿರೇಮಠದವರು, ಗಣಾಚಾರಿಗಳು, ಮಠಪತ್ತಿಗಳು, ಎಂದು ಶ್ರೇಣೀಕೃತ ಅಂತಸ್ತುಗಳನ್ನು ಮಾಡಲಾಯಿತು. 'ಮಠಪತ್ತಿಗಳಿಗಿಂತ ಇನ್ನೂ ಕೆಳಗಿನ

೬೪. ಲಿಂಗಾಯತ ಧರ್ಮ, ಸಂಸ್ಕೃತಿ ಮತ್ತು ಸಮಾಜ –ಡಾ॥ಹಿರೇಮಲ್ಲೂರ ಈಶ್ವರನ್‌ಪು–೧೭೦.

೬೫. ಲಿಂಗಾಯತ ಅಧ್ಯಯನಗಳು :ಜಂಗಮಜಾತಿಯಲ್ಲಿ ಅನುಶ್ರೇಣಿ ಡಾ॥ ಎಂ ಚಿದಾನಂದ ಮೂರ್ತಿ ಪು–೪೭೧.

ಜಂಗಮಜಾತಿಗಳಿವೆ. ಅವರೆಲ್ಲ ಶ್ರಮದ, ಕೈಕೊಳಕಾಗುವ, ಆದರೆ ಮಠಕ್ಕೆ ಅಗತ್ಯವಾದ ಉದ್ಯೋಗಗಳನ್ನು ಕೈಕೊಂಡವರು. ವಿಭೂತಿ ತಯಾರಿಸುವ ಭಸ್ಮದಯ್ಯ, (ಇವರನ್ನು ಬೂದಿ ಐಗಳು ಎಂದು ಮಠಸ್ತರು ಕೀಳಾಗಿ ನೋಡುತ್ತಾರೆ.) ಪುಟ್ಟ ಶಿವಲಿಂಗ ತಯಾರಿಸುವ ಮತ್ತು ಅವಕ್ಕೆ ಕಂತೆ ಬಿಗಿಯುವ (ಲೇಪಿಸುವ) ಕಂತೆ ಐಗಳು, ಶಿವದಾರ ಮತ್ತು ಪೂಜಾವಸ್ತ್ರ ತಯಾರಿಸುವ ವಸ್ತ್ರದವರು ಅಥವಾ ವಸ್ತ್ರದ ಐಗಳು ಇವರೆಲ್ಲ ಒಳ ವಿವಾಹ ವ್ಯವಸ್ಥೆಯ ಚಿಕ್ಕ ಚಿಕ್ಕ ಉಪಜಾತಿಗಳು. ಹಿರೇಮಠರನ್ನು ಬಿಟ್ಟರೆ ಇವರಾರೂ ಮಠಸ್ಥರಲ್ಲ. ಮಠ ಎಂದು ಕೊನೆಯಾಗುವ ವಂಶನಾಮವನ್ನು ಬಳಸಲು ಅರ್ಹರಲ್ಲ. ಮೇಲೆ ತಿಳಿಸಿದಂತೆ ಇವರೂ ಗಣಾಚಾರಿ, ಮಠಪತ್ತಿಗಳಂತೆ ಹೆಸರಿನ ಬದಲಾವಣೆ ಮೂಲಕ (ಮಠ ಎಂಬ ಪದ ಸೇರಿಸಿಕೊಂಡು ವಿಭೂತಿಮಠ, ಕಂತಿಮಠ, ವಸ್ತ್ರದಮಠ, ಇತ್ಯಾದಿ) ಸಮಾಜೋ ಧಾರ್ಮಿಕವಾಗಿ ಆದಷ್ಟು ಮೇಲೇರುವ ಹವಣಿಕೆಯಲ್ಲಿದ್ದಾರೆ."[೬೬]

ಈ ಪಂಚಪೀಠಾಧೀಶ್ವರರು ಹಾಗೂ ಅವರ ಎಲ್ಲ ಜಾತಿ ಉಪಜಾತಿ ಶ್ರೇಣೀಕೃತ ಅಯ್ಯಗಳವರು ತಮ್ಮ ಮೂಲ ಪುರುಷರಾದ ಪಂಚಾಚಾರ್ಯ ಗುರುಗಳನ್ನು ನಾಲ್ಕು ಯುಗಯುಗಗಳಲ್ಲಿ ಹುಟ್ಟಿದ್ದಾರೆಂದು ಪ್ರತಿಪಾದಿಸುತ್ತಾರೆ.

'ಕೃತಯುಗದಲ್ಲಿ –

ಘಂಟಾಕರ್ಣ, ಗಜಕರ್ಣ, ರೇಣುಕ, ದಾರುಕ, ವಿಶ್ವಕರ್ಣ.

ತ್ರೇತಾಯುಗದಲ್ಲಿ–

ಏಕಾಕ್ಷರ, ದ್ವೈಅಕ್ಷರ, ತ್ರೈಅಕ್ಷರ, ಚತುರಾಕ್ಷರ, ಪಂಚಾಕ್ಷರ.

ದ್ವಾಪರಯುಗದಲ್ಲಿ–

ಏಕಮುಖ, ದ್ವಿಮುಖ, ತ್ರಿಮುಖ, ಚತುರಮುಖ, ಪಂಚಮುಖ.

ಕಲಿಯುಗದಲ್ಲಿ –

ಏಕೋರಾಮ, ಪಂಡಿತರಾದ್ಯ, ರೇವಣಸಿದ್ಧ, ಮರುಳಸಿದ್ಧ, ವಿಶ್ವಾರಾದ್ಯ.

ಇಲ್ಲಿ ಗಮನಿಸಬೇಕಾದ ಮುಖ್ಯ ವಿಷಯವೆಂದರೆ ಪ್ರತಿಯುಗದಲ್ಲಿ ಐದು ಜನರಂತೆ ನಾಲ್ಕು ಯುಗಗಳಲ್ಲಿ ಒಟ್ಟು ಇಪ್ಪತ್ತು ಜನರು ವೀರಶೈವ ಧರ್ಮಸ್ಥಾಪಕ ಪಂಚಾಚಾರ್ಯರು ಹುಟ್ಟಿ ಬಂದಂತಾಯಿತು.'[೬೭]

ಈ ಪರಂಪರೆಯ ವೀರಶೈವ ಗುರುವರ್ಗದವರು ಕೃತಯುಗದಲ್ಲಿಯ ತಮ್ಮ ಆದಿಗುರು ರೇಣುಕರು ಅಗಸ್ತ್ಯಋಷಿಗೆ ಬೋಧಿಸಿದರೆಂದು ಹೇಳುವ 'ಸಿದ್ಧಾಂತ ಶಿಖಾಮಣಿ' ಎಂಬ ತಮ್ಮ ಗ್ರಂಥದಲ್ಲಿ–

'ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾಹಿ ದ್ವಿಧಾಮತಾ।
ಏಕ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕತಿಥಾ ಪರಾ॥[೬೮]

---

೬೬. ಲಿಂಗಾಯತ ಅಧ್ಯಯನಗಳು: ಡಾ॥ ಎಂ.ಚಿದಾನಂದಮೂರ್ತಿ ಪು–೪೮೨.
೬೭. ಧರ್ಮಗುರುಗಳ ಅವಾಂತರ ಕುಮಾರ ಕಕ್ಕಯ್ಯ ಪೋಳ ಪು– ೧೮.
೬೮. ವೀರಶೈವ ಸಿದ್ಧಾಂತ ಶಿಖಾಮಣಿ ಸಂ॥ಸಂ.ಶಿ.ಭೂಸನೂರಮಠ ಅ–೧೦ ಶ್ಲೋ–೩೫.

ಅಂದರೆ ವರ್ಣಾಶ್ರಮ ಚಾತುರ್ವರ್ಣ ಜಾತಿಪದ್ಧತಿ ಧರ್ಮಗಳಲ್ಲಿ ಎರಡು ಪ್ರಕಾರಗಳು. ಒಂದು ಶಿವನು ನಿರ್ಮಿಸಿದ್ದಾನೆ. ಇನ್ನೊಂದು ಬ್ರಹ್ಮನು ಹೇಳಿದ್ದಾನೆ. ಅರ್ಥಾತ್ ವೈದಿಕ ಧರ್ಮದಲ್ಲಿ–ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ, ಹೀಗೆ ನಾಲ್ಕು ಪ್ರಕಾರಗಳಿದ್ದರೆ, ಇವರ ವೀರಶೈವ ಧರ್ಮದಲ್ಲಿಯೂ ಸಹ ವೀರಶೈವ ಬ್ರಾಹ್ಮಣ, ವೀರಶೈವ ಕ್ಷತ್ರೀಯ, ವೀರಶೈವ ವೈಶ್ಯ, ಶೂದ್ರ ಹೀಗೆ ನಾಲ್ಕು ಭೇದಗಳೆಂದು ಇದರ ಅರ್ಥವು.[೧೯]

ಈ ಪ್ರಕಾರ ಗುರುವರ್ಗದವರು ಬೋಧಿಸುವ ವೀರಶೈವ ಧರ್ಮವು ಶ್ರೇಣಿಕೃತ ವರ್ಣವ್ಯವಸ್ಥೆಯನ್ನು ಒಪ್ಪಿಕೊಂಡಿರುವುದನ್ನು ಕಾಣುತ್ತೇವೆ.

**ವಿರಕ್ತವರ್ಗ :** ವಿರಕ್ತವರ್ಗವು ೧೫ ನೆಯ ಶತಮಾನದಲ್ಲಿ ಎಡೆಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರರಿಂದ ಪ್ರಾರಂಭವಾಗಿದ್ದರೂ ಸಹ, ಈ ಪರಂಪರೆಯವರು ೧೨ ನೇ ಶತಮಾನದ ಅನುಭವ ಮಂಟಪದ ಶೂನ್ಯ ಸಿಂಹಾಸನ ಪರಂಪರೆ ತಮ್ಮ ಮೂಲವೆಂದು ಹೇಳುತ್ತಾರೆ.

'ಶ್ರೀ ಗುರು ಬಸವಲಿಂಗಾಯ ನಮಃ ಶ್ರೀ ಮನ್ಮಹಾಶೂನ್ಯ ಸಿಂಹಾಸನಾಧಿಶ್ವರ ಜಗದ್ಗುರುಗಳಾದ ಅಲ್ಲಮ ಪ್ರಭು, ಚೆನ್ನಬಸವರಾಜೇಂದ್ರ ಸ್ವಾಮಿಗಳವರ ಶಿಷ್ಯ ಪರಂಪರೆ ವಂಶರತ್ನಾಕರ ಪ್ರಭುವಂಶೋದ್ಭವರಾದ ಗುರುಗಳವರ ವಿವರವು'[೨೦] ಎಂದು ಮುಂದುವರೆಯುತ್ತದೆ.

೧೯೩೨ ರಲ್ಲಿ ಡಾ॥ ಫ.ಗು.ಹಳಕಟ್ಟಿಯವರು ಸಂಪಾದಿಸಿ ಪ್ರಕಟಿಸಿರುವ 'ನಿರಂಜನ ವಂಶ ರತ್ನಾಕರ' ಎಂಬ ಕೃತಿಯಲ್ಲಿ – (೧) ಅಲ್ಲಮಪ್ರಭು (೨) ಚೆನ್ನಬಸವ (೩) ಶಿದ್ಧರಾಮೇಶ್ವರ (೪) ಅನಾದಿಗಣನಾಥ (೫) ಆದಿ ಗಣೇಶ್ವರ (೬) ನಿರ್ಮಾಯ ಗಣೇಶ್ವರ (೭) ನಿರಂಜನ ಸ್ವಾಮಿಗಳು (೮) ಜ್ಞಾನಾನಂದ ಸ್ವಾಮಿಗಳು (೯) ಆತ್ಮಗಣವರ (೧೦) ಅಧ್ಯಾತ್ಮ ಗಣನಾಥ (೧೧) ರುದ್ರಮುನಿಸ್ವಾಮಿಗಳು (೧೨) ಬಸವ ಪ್ರಭುಸ್ವಾಮಿಗಳು (೧೩) ಆದಿಲಿಂಗಸ್ವಾಮಿಗಳು (೧೪) ಚನ್ನವೀರಸ್ವಾಮಿಗಳು (೧೫) ಗೋಸಲಸಿದ್ದೇಶ್ವರ ಸ್ವಾಮಿಗಳು (೧೬) ಶಂಕರಾಚಾರ್ಯ ಸ್ವಾಮಿಗಳು (೧೭) ದಿವ್ಯಲಿಂಗೇಶ್ವರ ಸ್ವಾಮಿಗಳು (೧೮) ಚೆನ್ನಬಸವರಾಜೇಂದ್ರರು (೧೯) ತೋಂಟದ ಸಿದ್ಧಲಿಂಗರು (೨೦) ನಿರಕ್ಷರ ಬೋಳಬಸವೇಶ್ವರ (೨೧) ಸಿದ್ಧವೀರೇಶ ಸ್ವಾಮಿಗಳು (೨೨) ಗುರುಸಿದ್ಧ ದೇಶಿಕೇಂದ್ರ ಸ್ವಾಮಿಗಳು (೨೩) ಗಗನದಾರ್ಯ (೨೪) ಸಿದ್ಧವೀರಸ್ವಾಮಿಗಳು (೨೫) ನೋಡಸಿದ್ಧಲಿಂಗ ದೇಶಿಕೇಂದ್ರ ಸ್ವಾಮಿಗಳವರು ಈ ರೀತಿಯಾಗಿ ವಿರಕ್ತ ಪರಂಪರೆಯವರ ಹೆಸರುಗಳು ಉಲ್ಲೇಖವಾಗಿವೆ.

ಅನಂತರದಲ್ಲಿ ವಿರಕ್ತರಲ್ಲಿಯೂ ಗುರುವರ್ಗದವರಂತೆ ಐದು ಸಮಯ ಭೇದಗಳನ್ನು ಹುಟ್ಟುಹಾಕಿಕೊಂಡರೆಂದು ಕಾಣುತ್ತದೆ (೧) ಚೀಲಾಳ (೨) ಕುಮಾರ (೩) ಮುರುಗಾ (೪) ಕೆಂಪಿನ (೫) ಶೀಲ ಸಂಪಾದನೆ. ಈ ಸಮಯಂಗಳಿಗೆ

---

೧೯. ಚಾತುರ್ವರ್ಣ ಧರ್ಮದರ್ಶನ – ಕುಮಾರ ಕಕ್ಕಯ್ಯ ಪೋಳ ಪು–೮೪.
೨೦. ನಿರಂಜನ ವಂಶ ರತ್ನಾಕರ– ಸಂ. ಫ.ಗು. ಹಳಕಟ್ಟಿ ಪು–೧

ಒಂದೊಂದು ಜಗದ್ಗುರು ಶೂನ್ಯಸಿಂಹಾಸನ ಮಠ ಪೀಠಗಳ ಪರಂಪರೆ ಪ್ರಾರಂಭಿಸಿ ಮುನ್ನಡೆಸಿಕೊಂಡು ಬಂದರು. ಗದಗ. ಹುಬ್ಬಳ್ಳಿ, ಚಿತ್ರದುರ್ಗ, ಉರುವಕೊಂಡ, ಚಿಕ್ಕೋಡಿಗಳಲ್ಲಿ ಬೃಹನ್ಮಠಗಳಿವೆ.

ಈ ಗುರು–ವಿರಕ್ತರಲ್ಲದೇ, ೧೯ ನೇ ಶತಮಾನದ ಕೊನೆಯಲ್ಲಿ **ಭಕ್ತ–ಮಹೇಶ** ಎಂಬ ಎರಡು ವರ್ಗಗಳನ್ನು ಮಾಡಿಕೊಂಡರು. ಮಾಹೇಶ್ವರ ಎಂದರೆ ಜಂಗಮರು, ಭಕ್ತರೆಂದರೆ ಮಾಹೇಶ್ವರರನ್ನು ಹೊರತುಪಡಿಸಿ ಉಳಿದೆಲ್ಲ ಕಾಯಕಗಳ ಲಿಂಗಾಯತರು ಎಂದು ಭೇದ ಹುಟ್ಟು ಹಾಕಿದರು. ಮಾಹೇಶ್ವರ ವರ್ಗದಲ್ಲಿ – ಹಿರೇಮಠ, ಚರಂತಿಮಠ, ಚಿಕ್ಕಮಠ,ಸಾಲಿಮಠ, ಸ್ಥಾವರಮಠ, ಓದಿಸುವ ಮಠ, ಗಣಾಚಾರಿ, ಮಠಪತ್ತಿ, ವಿಭೂತಿಮಠ, ವಸ್ತ್ರದಮಠ, ಕಂತಿಮಠ, ರುದ್ರಾಕ್ಷಿಮಠ, ಪತ್ರಿಮಠ ಮುಂತಾದ ಅನೇಕ ಕಾಯಕದ ಪಂಗಡಗಳು ಒಳಪಂಗಡಗಳು ಉಪಜಾತಿಗಳಾಗಿ ಮಾರ್ಪಾಟಾದವು.

ಭಕ್ತವರ್ಗದಲ್ಲಿ –ಪಂಚಮಸಾಲಿ, ಆದಿಬಣಜಿಗ, ಬಣಜಿಗ, ಕುಡು ಒಕ್ಕಲಿಗ, ಕುರುಹಿನಶೆಟ್ಟಿ, ಗಾಣಿಗ, ನೀಲಗಾರ, ನೇಕಾರ, ನೊಣಬ, ಬಣಗಾರ, ಗೌಡ, ಮಾಳಿ, ರೆಡ್ಡಿ, ಲಾಳಗೊಂಡ, ಶಿವಸಿಂಪಿ, ಸಾದರ, ಹೂಗಾರ, ಹಡಪದ, ಪಾಂಚಾಳ, ತಮ್ಮಡಿ, ಕುಂಬಾರ, ಅಗಸ, ಅಂಬಿಗ, ಉಪ್ಪಾರ, ಕುರುಬ, ಗೌಳಿ, ಮೇದಾರ, ಹೆಳವ, ಡೋಹರ, ಸಮಗಾರ, ಕೊರಮ, ಮಾದಿಗ, ಹೊಲೆಯ–ಲಿಂಗಾಯತರೆಂದು ೩೫ ಕ್ಕೂ ಮೇಲ್ಪಟ್ಟು ಲಿಂಗಾಯತ ಒಳಪಂಗಡಗಳು[೨೧] ಕಾಯಕಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡವು.

ಜಂಗಮರು ಸ್ವಯಜಂಗಮ, ಚರಜಂಗಮ, ಪರಜಂಗಮ ಎಂದು ಮತ್ತೆ ಮೂರು ರೀತಿಯಲ್ಲಿ ಶಿವಾನುಭವ ಉಪದೇಶ ಮಾಡುವ ಕಾಯಕ ಕೈಗೊಂಡರು. ಭಕ್ತ ಪಂಗಡದವರು ಸಾದರು, ನೊಣಬರು, ಗೌಡರು, ಪಂಚಮಸಾಲಿಗಳು, ಪಟ್ಟಸಾಲಿ, ಗಾಣಿಗ ಪಂಗಡಗಳವರು ತಮ್ಮವೇ ಆದ ಸ್ವತಂತ್ರ ಜಗದ್ಗುರು ಪೀಠಗಳನ್ನು ಮಾಡಿಕೊಂಡು ಬಸವಾದಿ ಶರಣರ ತತ್ತ್ವ ಪ್ರಸಾರದೊಂದಿಗೆ ತಮ್ಮ ತಮ್ಮ ಜನಾಂಗಗಳ ಉದ್ಧಾರಕ್ಕಾಗಿ ಹಲವಾರು ಯೋಜನೆಗಳನ್ನು ರೂಪಿಸಿ ಶ್ರಮಿಸತೊಡಗಿದ್ದಾರೆ.

ಬಸವಾದಿ ಶರಣರ ಕ್ರಾಂತಿಯ ನಂತರ–ಲಿಂಗಾಯತ ಧರ್ಮ– ಸಮಾಜ –ಸಂಸ್ಕೃತಿಯಲ್ಲಿ ಲಕುಲೀಶ, ಪಾಶುಪತ, ಕಾಳಾಮುಖ, ಆರಾಧ್ಯರು, ವೈದಿಕ ಶೈವರು ಬಸವಧರ್ಮದಲ್ಲಿ ಸೇರಿ, ಅದನ್ನು ಹಾಳು ಮಾಡಿ ಶೋಷಣೆ ಪ್ರಾರಂಭಿಸಿದರು. ಇದನ್ನು ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ನಿರೂಪಿಸಿದ್ದಾರೆ –

ಕಲ್ಯಾಣಕ್ರಾಂತಿಯಾಯಿತು ಮಾರಣ ಹೋಮ
ಬಸವಾದಿ ಶರಣರು ಹರಣಹಾರಿ ಕಳೆದುಕೊಂಡರು ಪ್ರಾಣ.
ಹೆಣ ಬಿದ್ದಾಗ ರಣಹದ್ದುಗಳೂ ತಿಂದು ತೇಗುವಂತೆ

---

೨೧. ಲಿಂಗಾಯತ ಉಪಪಂಗಡಗಳ ದಾಖಲೀಕರಣ– ಪ್ರಧಾನ ಸಂಪದಕರು– ಡಾ॥ ಎಂ.ಎಂ.ಕಲಬುರ್ಗಿ ಪು–xxxi xxxii

ಶಾಕ್ತ್ಯ ಕಾಪಾಲಿ ಲಕುಲೀಶ ಕಾಳಾಮುಖಿಗಳೆರಗಿ
ವಿಶ್ವಧರ್ಮವಾಗಬೇಕಿದ್ದ ನೂತನ ಬಸವಧರ್ಮ
ಮೊಳಕೆಯಲ್ಲಿಯೇ ಕೊಚ್ಚಿ ಹಾಕಿದರೆಂದ
ಕುಮಾರ ಕಕ್ಕಯ್ಯ.[೭೨]

ಜಂಗಮ ಎಂಬುದನ್ನು ಇಂದು ಜಾತಿವಾಚಕವಾಗಿಸಿಕೊಂಡಿದ್ದರಿಂದ, ಅದರ ಮೂಲ ಧ್ಯೇಯವೇ ವಿಕೃತಗೊಂಡಿದೆ. ಈ ಕುರಿತು ಕುಮಾರ ಕಕ್ಕಯ್ಯನವರು ಸ್ಪಷ್ಟವಾಗಿ ಜಂಗಮದ ನಿಲವನ್ನು ಅರುಹಿದ್ದಾರೆ.

ಜಂಗಮವೆಂಬುದೊಂದು ಗೋತ್ರವಲ್ಲ
ಜಂಗಮವೆಂಬುದೊಂದು ಮತವೂ ಅಲ್ಲ
ಜಂಗಮವೆಂಬುದೊಂದು ಜಾತಿಯೂ ಅಲ್ಲ
ಜಂಗಮವೆಂಬುದೊಂದು ಧರ್ಮವೂ ಅಲ್ಲ
ಜಂಗಮವೆಂಬುದೊಂದು ದೇವರೂ ಅಲ್ಲ
ಅದು ಷಟಸ್ಥಲ ಶಿಖರವೆಂದ
ಕುಮಾರ ಕಕ್ಕಯ್ಯ.[೭೩]

ಇಂದು 'ಜಂಗಮ' ಎನ್ನುವದಕ್ಕೆ ಗೋತ್ರಗಳನ್ನು ಕಲ್ಪಿಸಿ ಹಲವಾರು ಮತಪ್ರಭೇದಗಳನ್ನು ಮಾಡಿಕೊಂಡು ಮೇಲು-ಕೀಳು ಎಂದು ವಾದ-ವಿವಾದ ಮಾಡುತ್ತಿರುವುದನ್ನು ಕಾಣುತ್ತೇವೆ. ಜಂಗಮ ಎಂದರೆ ಷಟ್‌ಸ್ಥಲ ಸಾಧನೆಯ ಕೊನೆಯ ಅವಸ್ಥೆಯಾದ ಲಿಂಗಾನುಭಾವ ಎಂಬುದನ್ನು ತಿಳಿಸಿ ಹೇಳುತ್ತಾರೆ.

ಗುರುವರ್ಗದ ಕೆಲವರು ಜನಿವಾರ ಹಾಗೂ ಲಿಂಗಧಾರಣೆ ಎರಡನ್ನೂ ಧರಿಸಿಕೊಂಡು ಲಿಂಗಿಬ್ರಾಹ್ಮಣ, ಆರಾಧ್ಯರು ಎಂದು ಕರೆದುಕೊಳ್ಳುತ್ತ, ಅತ್ತ ಪೂರ್ಣವಾಗಿ ವೈದಿಕವನ್ನು ಅನುಸರಿಸದೇ, ಇತ್ತ ಪೂರ್ಣವಾಗಿ ಲಿಂಗತತ್ವವನು ಆಚರಿಸದೇ ಕಲಸುಮೇಲೋಗರದ 'ವೈದಿಕ-ವೀರಶೈವ' ರಾಗಿ ವರ್ತಿಸುತ್ತಾ, ತಾವೇ ಶ್ರೇಷ್ಠರೆಂದು ಹೇಳಿಕೊಳ್ಳುತ್ತಾ ಬಂದರು. ಅಂಥವರನ್ನು ಕಂಡು ಕುಮಾರ ಕಕ್ಕಯ್ಯನವರು ನಿಷ್ಠುರವಾಗಿ ನುಡಿಯುತ್ತಾರೆ –

ಎದೆಯ ಮೇಲೆ ಲಿಂಗ, ಮನದಲ್ಲಿ ಮಂಗ
ಕೊರಳಲಿ ಜನಿವಾರ, ಮನದಲಿ ಮುಡುದಾರ
ಮೈ ಮೇಲೆ ಕಾವಿ, ಮನದಲಿ ಭವಿ
ಕೈಯಲ್ಲಿ ಧರ್ಮಗ್ರಂಥ, ಮಾಡುವದು ಕುತಂತ್ರ
ಹೊರಗೆ ತೋರುವದು ಮಡಿ
ಒಳಗೆ ತುಂಬಿಹುದು ಹುಡಿ

೭೨. ಕುಮಾರ ಕಕ್ಕಯ್ಯನ ವಚನಗಳು -ಪುಟ- ೨೦೦ ವ-೭೭೨.
೭೩. ಕುಮಾರ ಕಕ್ಕಯ್ಯನ ವಚನಗಳು -ಪು-೨೦೦ ವ-೭೭೩

ಡಾಂಭಿಕರಿಗೆ ಧಾರ್ಮಿಕತೆಯೊಂದು
ಮುಖವಾಡವೆಂದ ಕುಮಾರ ಕಕ್ಕಯ್ಯ.[೭೪]

ವಿರಕ್ತವರ್ಗದ ಕೆಲವರು ಹೆಸರಿಗೆ 'ನಿರಂಜನ' ರೆಂದು ಕರೆದುಕೊಳ್ಳುತ್ತಾ, ಹೆಣ್ಣು-ಹೊನ್ನು-ಮಣ್ಣು ತೊರೆದವರೆಂದು ಹೇಳಿಕೊಳ್ಳುತ್ತಾ, ಭೋಗದಲ್ಲಿ ತೇಲಿ-ಮುಳುಗುವದನ್ನು ಕಂಡು, ಅವರನ್ನೂ ವಿಡಂಬಿಸುತ್ತಾರೆ –

ತಾವರೆ ಬೆಳೆಯುವದು ಕೆಸರಿನಲಿ
ಗುಲಾಬಿ ಅರಳುವದು ಮುಳ್ಳಿನಲಿ
ಹೊಳೆ ಹುಟ್ಟುವದು ಕೊಳೆಯಲ್ಲಿ
ಮಹಾತ್ಮರು ಆವಿರ್ಭವಿಸುವುದು ಕಷ್ಟದಲಿ
ಸಿರಿಸಂಪತ್ತಿನಲಿ ತೇಲಿ ಮುಳುಗುವವರು
ನಿರಂಜನರಾಗಲಾರರೆಂದ ಕುಮಾರ ಕಕ್ಕಯ್ಯ.[೭೫]

ಈ ಗುರುವಿರಕ್ತರೆಂಬುವವರು ಸಮಾಜ ಸೇವಾ ದೀಕ್ಷೆ ಎಂಬ ಹೆಸರಿನಲ್ಲಿ ಸಂಸಾರತ್ಯಾಗ ಮಾಡಿ, ಕಾವಿ-ಕಪನಿ ಹಾಕಿ ಸ್ವಾಮಿ, ಸನ್ಯಾಸಿ, ಗುರು, ಜಗದ್ಗುರು ಆಗುತ್ತಾರೆ. ಇವರ ತೋರಿಕೆ ಒಂದಾದರೆ, ಇರುವಿಕೆ ಮತ್ತೊಂದಾಗಿದೆ. ಇಂಥವರನ್ನು ಒರೆಗೆ ಹಚ್ಚಿ ನೋಡಬೇಕೆಂದು ಕುಮಾರ ಕಕ್ಕಯ್ಯನವರು ತಿಳಿಸುತ್ತಾರೆ-

ಸನ್ಯಾಸಿಗೆ ಮಂಚ ಗಾದಿ ಲೋಡ.
ಯೋಗಿಗೆ ಬೆಳ್ಳಿ ಬಂಗಾರ ತಿಜೋರಿಯೇಕೆ?
ಬ್ರಹ್ಮಚಾರಿಗೆ ಮುತ್ತೈದೆಯರ ಸೇವೆ
ಗುರುವಿಗೆ ಅಡ್ಡಪಲ್ಲಕ್ಕಿ ಮೆರವಣಿಗೆಯೇಕೆ?
ಮಿಂಚುವದೆಲ್ಲ ಚೊಕ್ಕ ಚಿನ್ನವಲ್ಲ,
ಒರೆಗೆ ಹಚ್ಚಿ ನೋಡಬೇಕೆಂದ
ಕುಮಾರ ಕಕ್ಕಯ್ಯ[೭೬]

ಗುರು-ಜಗದ್ಗುರುಗಳೆಂಬವರು 'ಭಕ್ತರ ಸೇವೆಯೇ ಪರಮಾತ್ಮನ ಸೇವೆ' ಎಂದು ಹೇಳುತ್ತಾ, ಕನಕ-ಕಾಮಿನಿ-ಕೀರ್ತಿ ತ್ಯಾಗ ಮಾಡಿ ಸ್ವಾಮಿಯಾಗಿದ್ದೇವೆ ಎಂದು ನುಡಿಯುತ್ತಲೇ ಭಕ್ತರ ತಲೆಯ ಮೇಲೆ ಅಡ್ಡಪಲ್ಲಕ್ಕಿಯಲಿ ಕುಳಿತು, ಬೆಳ್ಳಿ, ಬಂಗಾರ, ವಜ್ರದ ಉಂಗುರ, ಕಿರೀಟ ಧರಿಸಿ ಮೆರೆಯುವದನ್ನು ತುಂಬಾ ಸ್ವಾರಸ್ಯಪೂರ್ಣವಾಗಿ, ವ್ಯಂಗ್ಯವಾಗಿ ನುಡಿಯುತ್ತಾರೆ ಕುಮಾರ ಕಕ್ಕಯ್ಯ. –

---

೭೪. ಕುಮಾರ ಕಕ್ಕಯ್ಯನ ವಚನಗಳು – ಪು-೯೫ ವ – ೩೬೪.
೭೫. ಕುಮಾರ ಕಕ್ಕಯ್ಯನ ವಚನಗಳು – ಪು-೧೪೭ ವ-೫೬೭
೭೬. ಕುಮಾರ ಕಕ್ಕಯ್ಯನ ವಚನಗಳು ಪು-೨೮೬. ವ-೧೧೦೩

ಶಿಲ್ಪಿ ಮೂರ್ತಿ ಮಾಡುವದು ಹಣಕ್ಕಾಗಿ
ಉಪ್ಪಾರ ಗುಡಿ ಕಟ್ಟುವದು ಕೂಲಿಗಾಗಿ
ಪೂಜಾರಿ ಪೂಜೆ ಮಾಡುವದು ದಕ್ಷಿಣೆಗಾಗಿ
ಪುರೋಹಿತ ಪುರಾಣ ಹೇಳುವದು ಹೊಟ್ಟೆಗಾಗಿ
ಜಗದ್ಗುರು ಪಲ್ಲಕ್ಕಿ ಏರುವುದು ಪ್ರತಿಷ್ಠೆಗಾಗಿ
ವಿವೇಕಿಗಳಿಗೆ ಇವಾವುಗಳ ಜಂಜಾಟವೇ
ಬೇಡೆಂದ ಕುಮಾರ ಕಕ್ಕಯ್ಯ.[೨೭]

ವಿವೇಕಿಗಳಾದವರು ವೇಷಧಾರಿಗಳಾಗುವದಿಲ್ಲ, ಕೀರ್ತಿ–ವಾರ್ತೆ–ಪ್ರತಿಷ್ಠೆಗಾಗಿ ಹಂಬಲಿಸುವದಿಲ್ಲ. ಅವಿವೇಕಿಗಳು, ದಡ್ಡರು, ಮೂಢಮತಿಗಳು ಮೆರವಣಿಗೆ ಉರವಣಿಗೆಗಳಲ್ಲಿಯೇ ಕಾಲಕಳೆಯುತ್ತಾರೆ. 'ಇತ್ತೀಚೆಗೆ ಎಲ್ಲ ಜಾತಿಯ ಮಠಗಳೂ ಸ್ವಜಾತಿ ಮತ್ತು ಸ್ವಪ್ರತಿಷ್ಠೆಯ ಕಣಗಳಾಗುತ್ತಿವೆ. ಮಠಾಧೀಶರುಗಳಂತೂ ಜನಸಾಮಾನ್ಯರಿಂದ ದೂರವಾಗಿ ಹೆಲಿಕ್ಯಾಪ್ಟರಗೆ ಜೋತುಬೀಳುತ್ತಿದ್ದಾರೆ. ನೆಲಬಿಟ್ಟು ಹಾರುವ ಆತುರದಲ್ಲಿದ್ದಾರೆ. ತಲೆಗೆ ಚಿನ್ನ, ಬೆಳ್ಳಿ, ಕಿರೀಟ, ಎದೆಗೆ ವಜ್ರದಹಾರ. ಎಲ್ಲ ಬೆರಳುಗಳಿಗೂ ಬಹುಬಣ್ಣದ ಉಂಗುರಗಳು. ಕುಳಿತುಕೊಳ್ಳಲು ಬೆಳ್ಳಿ ಸಿಂಹಾಸನ, ಮಿರು ಮಿರನೆ ಮಿರುಗುವ ಜರತಾರಿ ಪಂಚೆ, ಶಲ್ಯಗಳು, ಅದ್ದೂರಿ ಪೀಠಗಳು, ಫಾರಿನ್ ಕಾರುಗಳು; ಹಣ, ಆಸ್ತಿ, ಅಂತರಂಗದ ಲೋಲುಪತೆಗಳು ಒಂದೆ, ಎರಡೇ ! ಅಡ್ಡಪಲ್ಲಕ್ಕಿ ಉತ್ಸವದ ನೆಪದಲ್ಲಿ ಭಕ್ತರ (ಈಗ ಭಕ್ತರಾರು ಹೊರುವದಿಲ್ಲ, ಹೊರುವವರು ಕೂಲಿಗಳು) ಹೆಗಲೇರಿ ವಿಜೃಂಭಿಸುವ ಈ ಮಠಾಧಿಶರು ಗತಕಾಲದ ಮೌಢ್ಯದಲ್ಲಿ ಮುಳುಗಿ ಮೆರೆಯುತ್ತಿದ್ದಾರೆ.'[೨೮]

ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ವಚನದಲ್ಲಿ ತುಂಬಾ ವ್ಯಂಗ್ಯವಾಗಿ ಇಂಥವರನ್ನು ಕುರಿತು ವಿಡಂಬಿಸಿದ್ದಾರೆ. –

ಗೊಡ್ಡ ಆಕಳ ಧರ್ಮಕ್ಕೆ ಕೊಟ್ಟಾರ
ಧಡ್ಡ ಮಗನೀಗಿ ಮಠಕ್ಕೆ ಬಿಟ್ಟಾರ,
ಮಹಾರಾಯ ಪಲ್ಲಕ್ಕಿ ಏರಿ
ಮೆರೆದಾನೆಂದ ಕುಮಾರ ಕಕ್ಕಯ್ಯ[೨೯]

ದೇಶಕ್ಕೆ 'ಸ್ವಾತಂತ್ರ್ಯ ಬಂದು ಸಂವಿಧಾನವನ್ನು ಅಳವಡಿಸಿಕೊಂಡು ಸಮಾನತೆಯನ್ನು ಒಪ್ಪಿಕೊಂಡಿರುವ ಭಾರತೀಯ ಸಮಾಜಕ್ಕೆ ಅಡ್ಡಪಲ್ಲಕ್ಕಿ ಸಮಾನತೆಯ ವಿರೋಧಿಯಾಗಿದ್ದು ಅಹಂಕಾರದ ಪ್ರತೀಕವಾಗಿದೆ. ಇಂಥ ಮಠಾಧೀಶರಿಂದ ಮೌಢ್ಯ ವಿಜೃಂಭಿಸುತ್ತದೆಯೇ ಹೊರತು ಅರಿವಲ್ಲ. ವಿಚಾರಕ್ಕೆ

---

೨೭. – ಅದೇ – ಪು–೧೬೩ ವ–೬೨೮.
೨೮. ಬ್ರಾಹ್ಮಣ್ಯದ ತಂತ್ರಗಳು –ಅಡ್ಡಪಲ್ಲಕ್ಕಿ ಅಹಂಕಾರದ ಪ್ರತೀಕ: ಜ.ಹೋ.ನಾ.ಪು–೫೦–೫೧.
೨೯. ಕುಮಾರ ಕಕ್ಕಯ್ಯನ ವಚನಗಳು – ಪು–೨೪೭ ವ–೯೫೪.

ಬೆನ್ನು ಮಾಡಿ, ಆಚಾರವನ್ನು ಆತ್ಮವಾಗಿಸಿಕೊಂಡಿರುವವರಿಂದ ಹೆಚ್ಚಿನದನ್ನು ನಿರೀಕ್ಷಿಸುವುದು ಹುಂಬತನವಾಗುತ್ತದೆ'[೮೦]

ಇಂಥ ಡಾಂಭಿಕ, ಆಡಂಬರದ ಗುರು–ವಿರಕ್ತ, ಸ್ವಾಮಿ–ಸನ್ಯಾಸಿ, ಮಠಾಧೀಶ –ಪೀಠಾಧೀಶರು ಮಾಡುವ ಧರ್ಮಗೋಷ್ಠಿ, ಶಾಸ್ತ್ರಗೋಷ್ಠಿ, ತತ್ವಗೋಷ್ಠಿ, ಸಮಾಜಗೋಷ್ಠಿಗಳು, ಸಭೆ–ಸಮಾರಂಭ–ಸಮ್ಮೇಲನಗಳು ಅರ್ಥಹೀನವೆನಿಸುತ್ತವೆ 'ಮಣ ಮಾತಿಗಿಂತ ಕಣ ಕೃತಿ ಲೇಸು' ಎಂಬುದನ್ನು ಅರಿಯಬೇಕಿದೆ. ಇಲ್ಲದಿದ್ದರೆ ಇಂಥವರ 'ಮಾತು ಮನಾರ, ಕೃತಿ ಸುಮಾರ' ಎನ್ನುವಂತಾಗುತ್ತದೆ.

ಜಾತಿಯ ಸೂತಕ ಬಿಡದ ಶಾಸ್ತ್ರ ಗೋಷ್ಠಿ
ಬದಲಾವಣೆಗೆ ಆಸ್ಪದವಿಲ್ಲದ ಸಮಾಜಗೋಷ್ಠಿ
ಸತ್ಯಕ್ಕೆ ಅವಕಾಶಕೊಡದ ತತ್ವಗೋಷ್ಠಿ
ಕಂದಾಚಾರದಿಂದ ಹೊರಬರದ ವಚನಗೋಷ್ಠಿ
ಪಾದಪೂಜೆಯ ಜಾಡ್ಯ ಬಿಡದವರ ಧರ್ಮಗೋಷ್ಠಿ
ಕಂದಕದಲ್ಲಿ ಕಪ್ಪೆಗಳು ಕಿರಿಚಿದಂತೆಂದ
ಕುಮಾರ ಕಕ್ಕಯ್ಯ.[೮೧]

'ಗುರುವಿನಲ್ಲಿ ಕುಲವಿಲ್ಲ, ಜಂಗಮದಲ್ಲಿ ಜಾತಿ ಇಲ್ಲ', 'ಬೇಡುವಾತ ಜಂಗಮವಲ್ಲ' 'ಬೇಡಲಾಗದು ಜಂಗಮ' ಎಂಬ ಬಸವಾದಿ ಶರಣರ ವಚನ ಸಂಹಿತೆಯನ್ನು ನಿರಾಕರಿಸಿ ಇತ್ತೀಚೆಗೆ ಜಂಗಮ ಜಾತಿಯನ್ನಾಗಿಸಿಕೊಂಡ ವೀರಶೈವ ಜಂಗಮರು ಬುಡ್ಗ ಜಂಗಮ, ಮಾಲಾ ಜಂಗಮ ಎಂಬ ಪರಿಶಿಷ್ಟಜಾತಿಯ ಜಂಗಮದಲ್ಲಿ ತಾವೂ ಬರುತ್ತೇವೆ ಎಂದು ವಾದವನ್ನು ಮಂಡಿಸುತ್ತಾ, ಸರಕಾರದ ಸೌಲಭ್ಯಗಳಿಗಾಗಿ ಪ್ರಯತ್ನಿಸುತ್ತಿರುವುದು ರಾಜ್ಯಾದ್ಯಂತ ಚರ್ಚೆಯ ವಿಷಯವಾಗಿದೆ.

ವೀರಶೈವ ಜಂಗಮ ಬೇರೆ, ಬುಡ್ಗ ಜಂಗಮ ಬೇರೆ ಎಂದು ಡಾ॥ ಎಂ.ಚಿದಾನಂದ ಮೂರ್ತಿ ಹಾಗೂ ಡಾ॥ ಎಚ್.ಎಂ. ಮರುಳಸಿದ್ದಯ್ಯನವರು ಹೇಳುತ್ತಾರೆ – 'ದಲಿತವರ್ಗದ ಬುಡ್ಗ ಜಂಗಮರು ಹಾಗೂ ತಾವೂ ಒಂದೇ ಎಂದು ಹೇಳಿಕೊಂಡು ಕೆಲ ವೀರಶೈವ ಜಂಗಮರು ಪರಿಶಿಷ್ಟ ಜಾತಿಯ ಮೀಸಲಾತಿ ಸೌಲಭ್ಯವನ್ನು ಬಳಸಿಕೊಳ್ಳಲು ಯತ್ನಿಸುತ್ತಿರುವುದು ಈಚೆಗೆ ವರದಿಯಾಗಿದೆ. ಇದು ತೀವ್ರ ಖಂಡನೀಯ. ಬುಡ್ಗ ಜಂಗಮ, ಮಾಲಾ ಜಂಗಮ ಎಂಬ ಹೆಸರಿನ ಪರಿಶಿಷ್ಟ ಜಾತಿಯ ಜನರು ಬಳ್ಳಾರಿ, ರಾಯಚೂರ, ಗುಲ್ಬರ್ಗಾ, ಬೀದರ ಜಿಲ್ಲೆ ಮತ್ತು ಆಂಧ್ರಪ್ರದೇಶದ ಕೆಲವೆಡೆ ಇದ್ದಾರೆ. ಇವರು ದಲಿತ ವರ್ಗದ ಹೊಲೆಯರು, ಮಾದಿಗರಿಗೆ ಪುರೋಹಿತರು, ಭವಿಷ್ಯ ಹೇಳುವವರು. ಇವರಿಗೆ ಮಾಂಸಾಹಾರ ನಿಷಿದ್ದವಲ್ಲ ಆದರೆ ವೀರಶೈವರಿಗೆ ಪುರೋಹಿತರಾಗಿರುವ ಲಿಂಗಾಯತ ಜಂಗಮರು

---

೮೦. ಬ್ರಾಹ್ಮಣ್ಯದ ತಂತ್ರಗಳು –ಜ,ಹೊ. ನಾರಾಯಣಸ್ವಾಮಿ ಪು–೫೧.
೮೧. ಕುಮಾರ ಕಕ್ಕಯ್ಯನ ವಚನಗಳು – ಪು–೪೩, ವ–೧೬೫.

ಸಸ್ಯಹಾರಿಗಳು ಮತ್ತು ಮೇಲು ವರ್ಗಕ್ಕೆ ಸೇರಿದವರು. ತಾವೂ ಬೇಡುವ ಜಂಗಮರೆ ಆದುದರಿಂದ ತಾವೂ ಬುಡ್ಗ ಜಂಗಮರೂ ಒಂದೇ ಎಂದು ಹೇಳಿಕೊಳ್ಳುತ್ತಿರುವದನ್ನು ನಾವು ವೀರಶೈವ ಜಂಗಮರಾಗಿ ಖಂಡಿಸುತ್ತೇವೆ. ಹಾಗೆ ಸುಳ್ಳುಹೇಳಿ ಬುಡ್ಗ ಜಾತಿಯ ಮೀಸಲಾತಿಯನ್ನು ಪಡೆದುಕೊಂಡಿರುವ ವೀರಶೈವ ಜಂಗಮರನ್ನು ಸರಕಾರವು ಶಿಕ್ಷೆಗೆ ಗುರಿಪಡಿಸಬೇಕೆಂದು ಒತ್ತಾಯಿಸುತ್ತೇವೆ.[೮೨]

ಈ ವಾದಕ್ಕೆ ಪ್ರತಿಕ್ರಿಯೆಯಾಗಿ ಡಾ॥ ಶಾಂತವೀರ ಮಹಾಸ್ವಾಮಿ, ಡಾ॥ ಎಸ್.ಎಂ ವೃಷಭೇಂದ್ರ ಸ್ವಾಮಿ, ಡಾ॥ ಪಂಚಾಕ್ಷರಿ ಹಿರೇಮಠ, ಡಾ॥ ಡಿ.ಎಂ. ಹಿರೇಮಠ, ಡಾ॥ ಎಸ್.ಬಿ. ಪುರಾಣಿಕ ಡಾ॥ ಕೆ.ಸಿ. ಹಿರೇಮಠ, ಡಾ॥ ಬಿ.ವ್ಹಿ. ಮಲ್ಲಾಪುರ, ಡಾ॥ ಎಸ್.ಎಂ. ನಾಗಭೂಷಣ, ಪ್ರೊ.ಸಿ. ಆರ್. ಯರವಿನತೆಲಿಮಠ, ಪ್ರೊ. ಗಂಗಾಧರಯ್ಯ ಕಲ್ಲೂರ, ಶ್ರೀ ಎ.ಎಂ. ಚನ್ನಬಸವಸ್ವಾಮಿ, ಡಾ॥ ಸಾ.ಶಿ. ಮರುಳಯ್ಯ, ಡಾ॥ ಬಿ.ಎಸ್. ಸ್ವಾಮಿ, ಶ್ರೀ ಎನ್.ಬಸವಾರಾಧ್ಯ, ಶ್ರೀ ಹೀ.ಚಿ. ಶಾಂತವೀರಯ್ಯ ಎಂಬ ಕರ್ನಾಟಕದ ಘಟಾನುಘಟಿ ವಿದ್ವಾಂಸರುಗಳು – 'ಶತ ಶತಮಾನದಿಂದ ಅಯ್ಯಾಚಾರ ದೀಕ್ಷಾ ಸಂಪ್ರದಾಯ, ಜೋಳಿಗೆ ಕಾಯಕ ಪರಂಪರೆಯಿಂದ ಜನ್ಮವೆತ್ತಿರುವ ಬೇಡಜಂಗಮರ ಪರಿಕಲ್ಪನೆಯ ಹೊತ್ತಿಗೆಯನ್ನು ಅಖಿಲಭಾರತ ಬೇಡಜಂಗಮ, ಬುಡ್ಗಜಂಗಮ, ಮಾಲಜಂಗಮ ಸಮಾಜ ಸಂಸ್ಥೆ(ರಿ) ಕೊಳದಮಠ ಮಹಾಸಂಸ್ಥಾನ ಬಿಡುಗಡೆ ಮಾಡಿದ್ದು ಅದರಲ್ಲಿ ಈ ಜಂಗಮರ ಹಿನ್ನೆಲೆ ಬಗ್ಗೆ ವಿವರಣೆಯನ್ನು ನೀಡಲಾಗಿದೆ.

೧೯ ನೇ ಶತಮಾನದಲ್ಲಿ ಹೈದರಾಬಾದ ಪ್ರಾಂತ್ಯದ ನಿಜಾಮ್ ಆಳ್ವಿಕೆಯಲ್ಲಿ ಜಂಗಮರನ್ನು ಕೆಳದರ್ಜೆ ಧಾರ್ಮಿಕ ಭಿಕ್ಷುಕರೆಂದು ಪರಿಗಣಿಸಲಾಗಿತ್ತು. ಆಗ ಮಾಡಿದ ಜನಗಣತಿ ಪ್ರಕಾರ ೬೨೧೧೧ ಜಂಗಮರಿದ್ದರು. ಅಂದು ಜಾರಿಯಲ್ಲಿದ್ದ ದಿ ಡಿಪ್ರೆಸ್ಡ್ ಕ್ಲಾಸ್ (ದಲಿತವರ್ಗ) ಪಟ್ಟಿಯಲ್ಲಿ ಇತರೆ ೩೩ ಜಾತಿಗಳ ಜೊತೆಗೆ ಜಂಗಮರನ್ನು ಸೇರಿಸಿ, ಸಮರ್ಥಿಸುವ ವಿವರಣೆಯೊಂದಿಗೆ ಸರ್ಕಾರದ ಸವಲತ್ತು ಮತ್ತು ಸೌಲಭ್ಯಗಳನ್ನು ಪಡೆಯಲು ಅವರು ಅರ್ಹರು ಎಂದು ತಿಳಿಸಲಾಗಿತ್ತು. ಇದನ್ನು ಸೆನ್ಸಸ್ ಆಫ್ ಇಂಡಿಯಾ ೧೯೨೧ ರ ದಾಖಲೆಗಳು ಹೇಳುತ್ತವೆ. ಈ ದಾಖಲೆಗಳು ಐತಿಹಾಸಿಕ, ವಾಸ್ತವಿಕ ಹಾಗೂ ಸತ್ಯಾಂಶ ಒಳಗೊಂಡಿರುವುದನ್ನು ಇತಿಹಾಸ ಬಲ್ಲ ನಾವುಗಳು ಮನಗಂಡು ಬೆಂಬಲಿಸುತ್ತೇವೆ.

ಸಂವಿಧಾನ ಅಧಿನಿಯಮ ೨೫ ಮತ್ತು ೫೧-ಕೆ ರಲ್ಲಿ ದತ್ತವಾಗಿರುವ ಧಾರ್ಮಿಕ ಹಕ್ಕಿನ ನಿಯಮಗಳ ಪ್ರಕಾರ ಯಾವುದೇ ಒಬ್ಬ ಭಾರತದ ಪ್ರಜೆ ವೀರಶೈವ-ವ-ಲಿಂಗಾಯತ ಪಂಥ ಅಥವಾ ಧಾರ್ಮಿಕ ನಂಬಿಕೆಯನ್ನು

೮೨. ವೀರಶೈವ ಜಂಗಮ ಬೇರೆ, ಬುಡ್ಗ ಜಂಗಮ ಬೇರೆ – ಡಾ॥ ಎಂ.ಚಿದಾನಂದ ಮೂರ್ತಿ, ಡಾ॥ ಎಚ್.ಎಮ್. ಮರುಳುಸಿದ್ದಯ್ಯ ಬೆಂಗಳೂರು. ಪ್ರಜಾವಾಣಿ ಪತ್ರಿಕೆಯ ವಾಚಕರವಾಣಿ ದಿನಾಂಕ : ೨೨-೯-೨೦೦೯

ಅನುಸರಿಸುವುದರಿಂದ ಪರಿಶಿಷ್ಟ ಜಾತಿ ಪಟ್ಟಿಯಿಂದ ಬಹಿಷ್ಕರಿಸಲಾಗುವುದಿಲ್ಲವೆಂಬುದನ್ನು ಕರ್ನಾಟಕ ಉಚ್ಚ ನ್ಯಾಯಾಲಯವು ಈಗಾಗಲೇ ಪ್ರಕಟಿತ ತೀರ್ಪು ಐ ಎಲ್ ಆರ್ ೧೯೯೬ ಕೆ.ಎ ಆರ್ ೨೬೯೨ ರಲ್ಲಿ ಸ್ಪಷ್ಟೀಕರಿಸುತ್ತದೆ.

ಅಂತೆಯೇ ಸಂವಿಧಾನದ ಅಧಿನಿಯಮದ ೨೧ರ ಅನ್ವಯ ಜಾತಿ, ಧರ್ಮ, ಸಮುದಾಯವನ್ನು ನಿರ್ಧರಿಸಲು ಭಾರತದ ಯಾವುದೇ ಪ್ರಜೆಗೆ ವೈಯಕ್ತಿಕ ಹಕ್ಕುವಿಗೆ ಸಂಬಂಧಿಸಿದ ಸಸ್ಯಾಹಾರಿ ಅಥವಾ ಮಾಂಸಾಹಾರಿ ಆಹಾರ ಪದ್ಧತಿಯನ್ನೇ ಮಾನದಂಡವನ್ನಾಗಿ ಇರಿಸಲು ಸಾಧ್ಯವಿಲ್ಲ. ಅವರು ಯಾವುದೇ ಆಹಾರ ಪದ್ಧತಿಯನ್ನು ಅನುಸರಿಸಲು ಸರ್ವ ಸ್ವತಂತ್ರರು ಎಂಬುದಾಗಿ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪು ಸಹ ಇರುತ್ತದೆಂಬುದನ್ನು ಎಲ್ಲರ ಗಮನಕ್ಕೆ ತರಲು ಬಯಸುತ್ತೇವೆ.

ಸಮಾಜ ಕಲ್ಯಾಣ ನಿರ್ದೇಶನಾಲಯದ ಅಪೇಕ್ಷೆಯ ಮೇರೆಗೆ ಕರ್ನಾಟಕ ಗೆಜೆಟಿಯರ್ ಮುಖ್ಯ ಸಂಪಾದಕರು ಬೇಡಜಂಗಮರ ಬಗ್ಗೆ ಸವಿಸ್ತಾರವಾಗಿ ಅಧ್ಯಯನ ಮಾಡಿ, ಅಧಿಕೃತವಾದ ಒಂದು ಸಮೀಕ್ಷಾ ವರದಿಯನ್ನು ಸಮಾಜಕಲ್ಯಾಣ ನಿರ್ದೇಶಕರಿಗೆ ೨೮-೮-೧೯೮೯ರಂದು ಸಲ್ಲಿಸಿದ್ದಾರೆ. ಶತಶತಮಾನದಿಂದ ಅಯ್ಯಾಚಾರ ದೀಕ್ಷಾಪದ್ಧತಿಯ ಅಡಿಯಲ್ಲಿ ವಂಶಪಾರಂಪರ್ಯವಾಗಿ ಜೋಳಿಗೆ ಕಾಯಕ ವೃತ್ತಿಯಲ್ಲಿ ತೊಡಗಿರುವ ಜಂಗಮರೇ ಬೇಡ ಜಂಗಮರೆಂದು ಆ ವರದಿಯಲ್ಲಿ ತಿಳಿಸಲಾಗಿದೆ. ಈ ಜಂಗಮರೇ ವೀರಶೈವ/ಲಿಂಗಾಯತ/ ಧಾರ್ಮಿಕ ನಂಬಿಕೆಯನ್ನು ಅನುಸರಿಸುವವರು ಎಂಬುವುದಾಗಿ ಅವರು ಸ್ಪಷ್ಟೀಕರಿಸಿರುತ್ತಾರೆ.

ಈ ವರದಿಯನ್ನು ಸಮಾಜ ಕಲ್ಯಾಣ ನಿರ್ದೇಶನಾಲಯವು ೨೯-೧-೧೯೯೩ ರಂದು ರಾಜ್ಯದ ಎಲ್ಲಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು, ಈ ವರದಿಯಲ್ಲಿನ ಅಂಶಗಳನ್ನು ಕಟ್ಟು ನಿಟ್ಟಾಗಿ ಪಾಲಿಸಲು ನಿರ್ದೇಶಿಸಿರುತ್ತಾರೆ.

ಈ ಎಲ್ಲ ಅಂಶಗಳ ಬಗ್ಗೆ ಸರಿಯಾದ ಮಾಹಿತಿ ಮತ್ತು ತಿಳಿವಳಿಕೆ ಹೊಂದದೇ ಕೆಲವು ಅಲೇಮಾರಿ ಜನಾಂಗದ ಸಂಘಟನೆ ಒತ್ತಾಯಕ್ಕೆ ಮಣಿದು ಅವರುಗಳನ್ನೇ ಜಂಗಮರ ಅಂಶವೆಂದು ಪರಿಗಣಿಸಿ ಬುಡ್ಗ ಜಂಗಮರೆಂಬುದಾಗಿ ಊಹಿಸಿಕೊಂಡು ಉಚ್ಚ ನ್ಯಾಯಾಲಯಗಳು ಈ ಬಗ್ಗೆ ನೀಡಿರುವ ಮಾರ್ಗಸೂಚಿಗಳನ್ನು ಉಲ್ಲಂಘಿಸಿ, ಪ್ರಚೋದನಕಾರಿ ಹಾಗೂ ಸಮಾಜಘಾತುಕ ಹೇಳಿಕೆಗಳನ್ನು ಮನಬಂದಂತೆ ನೀಡಿ, ಸಮಾಜವನ್ನು ತಪ್ಪುದಾರಿಗೆ ಎಳೆಯುವ ಯಾವುದೇ ವ್ಯಕ್ತಿ ಅಥವಾ ಸಂಘಟನೆಗಳ ಪ್ರಯತ್ನವನ್ನು ನಾವು ತೀವ್ರವಾಗಿ ಖಂಡಿಸುತ್ತೇವೆ. ರಾಜ್ಯದೆಲ್ಲೆಡೆ ಲಕ್ಷಾಂತರ ಜಂಗಮರ ಅಳಿವು-ಉಳಿವಿನ ಬಗ್ಗೆ ನಡೆಯುತ್ತಿರುವ ಜೋಳಿಗೆ ಕಾಯಕದ ಅಡಿಯಲ್ಲಿ ಗುರುತಿಸಲ್ಪಡುವ ಬೇಡ ಜಂಗಮರ ಸಂವಿಧಾನ ಮತ್ತು ಕಾನೂನುಬದ್ಧ ಹೋರಾಟ ಮತ್ತು ಪ್ರಯತ್ನಕ್ಕೆ ನಮ್ಮ ಸಹಕಾರ, ಬೆಂಬಲವನ್ನು ಈ ಮೂಲಕ ವ್ಯಕ್ತ ಪಡಿಸುತ್ತೇವೆ.[೮೩]

---

೮೩. ಪ್ರಜಾವಾಣಿ ಪತ್ರಿಕೆಯ ವಾಚಕರವಾಣಿ – ದಿನಾಂಕ ೨೪-೯-೨೦೦೯

ಈ ಪತ್ರಕ್ಕೆ ಪ್ರತ್ಯುತ್ತರವಾಗಿ ಶ್ರೀ ದೇವನೂರ ಮಹಾದೇವ, ಶ್ರೀ. ಕೆ. ಮರುಳಸಿದ್ದಪ್ಪ, ಶ್ರೀ ಎಸ್.ಜಿ. ಸಿದ್ದರಾಮಯ್ಯ, ಶ್ರೀ ಜಿ.ಕೆ. ಗೋವಿಂದರಾವ್, ಶ್ರೀಮತಿ ಬಿ.ಟಿ. ಲಲಿತಾನಾಯಕ್, ಡಾ॥ ಎಂ ಚಿದಾನಂದಮೂರ್ತಿ, ಶ್ರೀ ಬರಗೂರು ರಾಮಚಂದ್ರಪ್ಪ, ಶ್ರೀ ಎಲ್, ಹನುಮಂತಯ್ಯ ಇವರು 'ಅಲೆ ಮಾರಿ ಬುಡ್ಗ ಜಂಗಮರಿಗೆ ಬೆಂಬಲ' ಸೂಚಿಸಿ ಓಲೆ ಬರೆದಿದ್ದಾರೆ– "ಕೊಳದ ಮಠದ ಜಂಗಮರು ವೀರಶೈವ ಜಂಗಮರನ್ನು ದಾರಿ ತಪ್ಪಿಸುವುದಲ್ಲದೇ ಸರ್ಕಾರಕ್ಕೆ ಮತ್ತು ಮಾಧ್ಯಮಗಳಿಗೆ ಸುಳ್ಳು ಮಾಹಿತಿ ನೀಡಿದ್ದಾರೆ. ಬೇಡ ಜಂಗಮರಿಗೆ ಬೆಂಬಲ ಘೋಷಿಸಿದ ಮಹನೀಯರು ಲಿಂಗಾಯತ ಜಂಗಮರೇ ಬೇಡ/ ಬುಡ್ಗ ಜಂಗಮರೆಂದು ವಿವರಿಸಿರುವುದು ಅಸಂಬದ್ಧ ಅಮಾನವೀಯ, ಹಾಗೂ ಕಾನೂನುಬಾಹಿರ ಇದನ್ನು ಕರ್ನಾಟಕದ ಎಲ್ಲಾ ಪ್ರಗತಿಪರ ಲೇಖಕರು, ದಲಿತ ಚಿಂತಕರು ಖಂಡಿಸುತ್ತೇವೆ.

ಹೇಳಿಕೇಳಿ ಬೇಡ/ ಬುಡ್ಗ ಜಂಗಮರು ಅಲೆಮಾರಿಗಳು. ೧೯೦೫ ರಲ್ಲೇ ಎಡ್ವರ್ಡ ಥರ್ಸಟನ್ ನಂತರ ಬಂದ ಕೆ.ಎಸ್.ಸಿಂಗ್ ಇವರ ಮಹತ್ವದ ಅಧ್ಯಯನಗಳಲ್ಲಿ ಬೇಡ ಬುಡ್ಗ ಜಂಗಮರ ಕುಲ ಬೆಡಗುಗಳು, ಆಚಾರ, ವಿಚಾರ ಅವರ ವೃತ್ತಿಗಳನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಸಮಾಜ ಕಲ್ಯಾಣ ಇಲಾಖೆ ಇಂದಿಗೂ ಇದನೇ ಆಧಾರವಾಗಿಟ್ಟುಕೊಂಡಿದೆ. ಈ ಮಧ್ಯೆ ೧೯೯೬ ರಲ್ಲಿ ಆಂಧ್ರಪ್ರದೇಶದ ಉಚ್ಚ ನ್ಯಾಯಾಲಯ ಬಹಳ ಸ್ಪಷ್ಟವಾಗಿ ಬೇಡ/ಬುಡ್ಗ ಜಂಗಮರಿಗೂ ವೀರಶೈವ ಜಂಗಮರಿಗೂ ಯಾವುದೇ ಸಂಬಂಧವಿಲ್ಲವೆಂದು ಹಾಗೂ ಬೇಡ/ಬುಡ್ಗ ಜಂಗಮರ ವಿಶೇಷ ಗುಣ ಲಕ್ಷಣಗಳನ್ನು ಸ್ಪಷ್ಟಪಡಿಸಿದೆ. ಕೋರ್ಟ ತೀರ್ಪು ಸಂಖ್ಯೆ ೧೯೦೮೩ ಡಬ್ಲು ಪಿ.ನಂ ೧೯೦೮೩/೧೯೯೪ ಕೋಳದಮಠದವರು ಪದೇ ಪದೇ ಉಲ್ಲೇಖಿಸುವ ಕರ್ನಾಟಕ ಸರಕಾರದ ಉಚ್ಚ ನ್ಯಾಯಾಲಯದ ಪ್ರಕಟಿತ ತೀರ್ಪು ಐ.ಎಲ್.ಆರ್ ೧೯೯೭ ರಲ್ಲಿ ನೀಡಿರುವ ತೀರ್ಪಿನಲ್ಲಿ ರಾಜ್ಯಮಟ್ಟದ ಜಾತಿ ಪರಿಶೀಲನಾ ಸಮಿತಿಗೆ ಬೇಡ ಜಂಗಮರೆಂದು ಜಾತಿ ಪ್ರಮಾಣಪತ್ರ ಪಡೆದು ಸರ್ಕಾರಿ ನೌಕರಿ ಪಡೆದ ಅರ್ಜಿದಾರರ ಸಿಂಧುತ್ವ ಪರಿಶೀಲಿಸುವ ಮತ್ತು ಅರ್ಜಿದಾರರು ನಕಲಿ ಜಾತಿ ಪ್ರಮಾಣ ಪತ್ರ ಪಡೆದಿದ್ದರೆ ಅವರ ವಿರುದ್ಧ ಮುಂದಿನ ಅಗತ್ಯ ಕಾನೂನುಕ್ರಮ ಕೈಗೊಳ್ಳವುದು ಎಂದು ಸ್ಪಷ್ಟವಾಗಿ ತಿಳಿಸಿದೆ.

ಇವುಗಳೆಲ್ಲಕ್ಕಿಂತ ಮಹತ್ವದ ಆದೇಶವನ್ನು ಸುಪ್ರೀಂಕೋರ್ಟ ನೀಡಿದೆ. ೨೩ ಎಪ್ರಿಲ್ ೧೯೯೭ ರಲ್ಲಿ ಸುಪ್ರೀಂಕೋರ್ಟ ತ್ರಿಸದಸ್ಯ ಪೀಠ ಲಿಂಗಾಯತ ಜಂಗಮರನ್ನು ಬೇಡ/ಬುಡ್ಗ ಜಂಗಮರೆಂದು ಪರಿಗಣಿಸದೇ ಲಿಂಗಾಯತ ಜಂಗಮರ ಅರ್ಜಿಯನ್ನು ವಜಾಮಾಡಿದೆ. ಆದೇಶ ಸಂಖ್ಯೆ ೪೨೪೭/ ೨೩ ಎಪ್ರಿಲ್ ೧೯೯೭.

ಆದರೆ, ಇದ್ಯಾವುದರ ಅರಿವಿಲ್ಲದೆ ಅಶಿಕ್ಷಿತ, ಅಸಂಘಟಿತ ಅಲೆಮಾರಿ ಬೇಡ/ ಬುಡ್ಗ ಜಂಗಮರು ಬೇಟೆಯಾಡಿಕೊಂಡು, ಬುರ್ರ್‌ಕಥಾ, ಹಗಲುವೇಷಗಳಲ್ಲಿ ಬೀದಿ ಬೀದಿಗಳಲ್ಲಿ ಭಿಕ್ಷೆ ಬೇಡುತ್ತಾ ಟೆಂಟಗಳಲ್ಲಿ ಬದುಕುತ್ತಿದ್ದಾರೆ. ಈ ಅಲೆಮಾರಿ ಬುಡ್ಗ ಜಂಗಮರನ್ನು ಕುರಿತು ಪುಸ್ತಕ ಪ್ರಾಧಿಕಾರವು ಅಲೆಮಾರಿ ಬುಡ್ಗ ಜಂಗಮರ ಬಗ್ಗೆ

ಪ್ರೊ. ಬರಗೂರು ರಾಮಚಂದ್ರಪ್ಪನವರ ಅಧ್ಯಕ್ಷತೆಯಲ್ಲಿ ಉಪಸಂಸ್ಕೃತಿಗಳ ಅಧ್ಯಯನ ಮಾಲೆಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡಮಿ ಪುಸ್ತಕ ಪ್ರಕಟಿಸಿದೆ. ಕನ್ನಡ ಪುಸ್ತಕ ಪ್ರಾಧಿಕಾರವು ಅಲೆಮಾರಿ ಬೇಡ/ಬುಡ್ಗ ಜಂಗಮರನ್ನು ಕುರಿತು ಪಿ.ಎಚ್.ಡಿ ಪ್ರಬಂಧಗಳನ್ನು ಪ್ರಕಟಿಸಿದೆ. ಮಾಜಿ ಮುಖ್ಯ ಮಂತ್ರಿ ಎನ್ ಧರ್ಮಸಿಂಗ್ ಬುಡ್ಗ ಜಂಗಮರ ಸಮ್ಮೇಳನದಲ್ಲಿ ಈ ಅಲೆಮಾರಿಗಳನ್ನು ಕುರಿತು ಪುಸ್ತಕಗಳನ್ನು ಸ್ವತಃ ಬಿಡುಗಡೆ ಮಾಡಿದ್ದಾರೆ.

ಒಂದು ಕಡೆ ಅಲೆಮಾರಿಗಳು ತಮ್ಮ ಐಡೆಂಟಿಟಿಗಾಗಿ ಪ್ರಯತ್ನ ಪಡುತ್ತಿದ್ದರೆ, ಕೇವಲ ೧೫ ದಿನಗಳ ಹಿಂದೆ ಕೊಳದ ಮಠದವರು 'ಬೇಡ ಜಂಗಮರ ಪರಿಕಲ್ಪನೆ' ಎಂಬ ಪುಸ್ತಕವನ್ನು ಬಿಡುಗಡೆ ಮಾಡಿ ಪ್ರಸ್ತುತ ಬಿ.ಜೆ.ಪಿ ಸರಕಾರದ ವಾರಸುದಾರರು ತಾವೆಂಬ ಭ್ರಮೆಯಲ್ಲಿದ್ದಾರೆ. ದಲಿತರ ಸಾಮಾಜಿಕ ನ್ಯಾಯವನ್ನು ರಕ್ಷಿಸಬೇಕಾದ ಸರ್ಕಾರವನ್ನು ಒತ್ತಡ ತಂತ್ರಗಳಿಂದ ಪ್ರಭಾವ ಬೀರುತ್ತಿದ್ದಾರೆ. ಮುಖ್ಯ ಮಂತ್ರಿಗಳು ಮತ್ತು ಸಂಬಂಧಪಟ್ಟ ಇಲಾಖೆಗಳು ಈ ಸಂದರ್ಭದಲ್ಲಿ ದಲಿತರ ಸಾಮಾಜಿಕ ನ್ಯಾಯವನ್ನು ಸಂರಕ್ಷಿಸುವುದು ಅತ್ಯಂತ ಅನಿವಾರ್ಯವಾಗಿದೆ.'[೮೪]

ಈ ರೀತಿಯಲ್ಲಿ ಜಂಗಮರ ಜಾತಿ ಕುರಿತು, ವೀರಶೈವ/ ಲಿಂಗಾಯತ ಜಂಗಮರನ್ನು ಪರಿಶಿಷ್ಟ ಜಾತಿಯಲ್ಲಿ ಪರಿಗಣಿಸುವ ಕುರಿತು ವಾದ-ವಿವಾದ, ಕ್ರಿಯೆ-ಪ್ರತಿಕ್ರಿಯೆಗಳು ನಡೆದಿವೆ. ಇಂತಹ ಸಂದರ್ಭಗಳಲ್ಲಿ ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ಕಾಲದಲ್ಲಿ ದಲಿತ-ಪಂಚಮ ಜಾಗೃತಿ ಸಂಘ ಕಟ್ಟಿಕೊಂಡು ನಿರಂತರವಾಗಿ ಹೋರಾಟ ಮಾಡುತ್ತ ಬಂದುದನ್ನು ಕಾಣುತ್ತೇವೆ. ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಸರ್ಕಾರದ ಸೌಲಭ್ಯಗಳನ್ನು ಪಡೆಯಬೇಕೆಂಬ ಪೈಪೋಟಿ ಮೇಲ್ಜಾತಿಯ ಪಂಗಡಗಳಲ್ಲಿ ನಡೆದಿರುವುದು ಶೋಚನೀಯವಾಗಿದೆ. ನಿಜವಾದ ಪರಿಶಿಷ್ಟ ಜಾತಿ-ಪರಿಶಿಷ್ಟ ಪಂಗಡಗಳವರು ವಂಚಿತರಾಗುತ್ತಿದ್ದಾರೆ.

**V) ಧಾರ್ಮಿಕ ಮೂಢ ನಂಬಿಕೆಗಳು-ಕಂದಾಚಾರಗಳು :**

ಧರ್ಮ-ದೇವರು-ದೇವಾಲಯ-ಪೂಜಾರಿ-ಪೂರೋಹಿತರು ಮೂಢನಂಬಿಕೆ, ಅಂಧಶ್ರದ್ಧೆ, ಕಂದಾಚಾರಗಳನ್ನು ಬಿತ್ತಿ ಬೆಳೆಯುವ, ತಮ್ಮ ಸ್ವಾರ್ಥಕ್ಕಾಗಿ ದುರ್ಬಳಕೆ ಮಾಡಿಕೊಳ್ಳುವ ಫಲವತ್ತಾದ ನೆಲೆ(ಭೂಮಿ) ಗಳಾಗಿವೆ. ಆಷಾಢಭೂತಿ ಧರ್ಮ ಗುರುಗಳು, ನಯವಂಚಕ ಪೂಜಾರಿ ಪುರೋಹಿತರು ಮುಗ್ಧಜನರಲ್ಲಿ ಮೌಢ್ಯವನ್ನು ನಿರಂತರವಾಗಿ ಬಿತ್ತುತ್ತಲೇ ಇದ್ದಾರೆ. ಜನಸಾಮಾನ್ಯರ ಶೋಷಣೆ ನಡೆಯುತ್ತಲೇ ಸಾಗಿದೆ. ದೇವರ ಪ್ರೀತ್ಯರ್ಥವಾಗಿ ಯಜ್ಞ-ಯಾಗ, ಹೋಮ-ಹವನ ಮಾಡುವದು ನೂರಾರು ಕ್ವಿಂಟಲ್ ತುಪ್ಪ ಸುರಿಯುವುದು, ರೇಶ್ಮೆ ಸೀರೆ-ಪಿತಾಂಬರಗಳನ್ನು ಅಗ್ನಿ ಕುಂಡದಲ್ಲಿ ಹಾಕುವುದು, ದವಸ ಧಾನ್ಯಗಳನ್ನು ಸುರಿಯುವುದು, ಕೊನೆಗೆ ಪ್ರಾಣಿಗಳ ಬಲಿಕೊಡುವುದು ಅದಿಮಾನವಕಾಲದಿಂದ

೮೪. ಪ್ರಜಾವಾಣಿ ದಿನಪತ್ರಿಕೆಯ ವಾಚಕರವಾಣಿ ದಿನಾಂಕ ೨೯-೯-೨೦೦೮

ಹಿಡಿದು ಇಂದಿನ ವಿಜ್ಞಾನಯುಗದವರೆಗೂ ನಿರಂತರ ಸಾಗಿಬಂದಿದೆ. ಸ್ವಾರ್ಥ ರಾಜಕಾರಣಿಗಳು ಅಧಿಕಾರ ದಾಹಕ್ಕಾಗಿ, ತಮ್ಮ ಅಧಿಕಾರದ ಕುರ್ಚಿ ಉಳಿಸಿಕೊಳ್ಳಲೋಸುಗ ಪೂಜಾರಿ–ಪುರೋಹಿತರ ಕಪಿಮುಷ್ಠಿಗೆ ಸಿಲುಕಿ, ಅವರು ಹೇಳಿದಂತೆ ಹೇರಳ ಹಣ ಖರ್ಚುಮಾಡಿ, ನೂರಾರು ಪ್ರಕಾರದ ಪೂಜೆ–ಅಭಿಷೇಕ –ಹೋಮ–ಹವನ–ಯಜ್ಞ–ಯಾಗ ಮಾಡಿಸುವುದು ನಡೆದೇ ಇದೆ. 'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ಜನಸಾಮಾನ್ಯರೂ ಈ ತಂತ್ರ ಕುತಂತ್ರಗಳಿಗೆ ಬಲಿಪಶುಗಳಾಗುತ್ತಿದ್ದಾರೆ.

'ಮಳೆ ಬರದಿದ್ದರೆ ಯಜ್ಞ–ಯಾಗಾದಿಗಳನ್ನು ಮಾಡುವ, ವಿಶ್ವ ಕ್ರಿಕೆಟ್ ಪಂದ್ಯಗಳಲ್ಲಿ ಭಾರತವು ಗೆಲ್ಲುವಂತೆ ಯಜ್ಞ–ಹೋಮ–ಹವನಗಳನ್ನು ಮಾಡುವ ಮತ್ತು ವಿಶ್ವಶಾಂತಿಗಾಗಿ ಬೆಂಕಿಯಲ್ಲಿ ಕಿಲೋಗಟ್ಟಲೆ ತುಪ್ಪ, ದವಸಧಾನ್ಯಗಳನ್ನು ಅರ್ಪಿಸುವ ಜನರು ೨೧ ನೆಯ ಶತಮಾನದಲ್ಲಿಯೂ ಇದ್ದಾರೆ, ಅಷ್ಟೇ ಅಲ್ಲ ಇನ್ನೂ ಹೆಚ್ಚಾಗುತ್ತಿದ್ದಾರೆ.......... ಧರ್ಮವೆಂಬುದು ಉಳ್ಳವರ ಅಸ್ತ್ರವಾಗಿತ್ತು. ಸೋಮಾರಿಗಳು ಸ್ವಲ್ಪವೂ ಶ್ರಮ ಪಡದೆಯೇ ಮೃಷ್ಟಾನ್ನ ಭೋಜನವನ್ನು ಮಾಡುವ ಒಂದು ಮಾರ್ಗವಾಗಿತ್ತು. ಇಂತಹ ಮನೋಭಾವದ ವಿರೋಧಿಯಾಗಿ ಬಸವಾದಿ ಶರಣರು ಬಂಡೆದ್ದರು. ಜನರಿಗೆ ಧರ್ಮ ಮತ್ತು ಮೂಢನಂಬಿಕೆಗಳ ಬಗ್ಗೆ ವೈಜ್ಞಾನಿಕವಾದ ವಿವರಣೆಗಳನ್ನು ನೀಡಿ ಅವರನ್ನು ದೇವರ ಈ ದಲ್ಲಾಳಿಗಳ ಕಪಿಮುಷ್ಟಿಯಿಂದ ಬಿಡಿಸಿದ ಕೀರ್ತಿ ಬಸವಾದಿ ಶರಣರಿಗೆ ಸೇರುತ್ತದೆ.'[೮೫]

ಬಸವಣ್ಣನವರು ಎಂಟುನೂರು ವರುಷಗಳ ಹಿಂದೆಯೇ ಯಜ್ಞ–ಯಾಗಗಳನ್ನು ಖಂಡಿಸಿದರು–

ಕಿಚ್ಚು ದೈವವೆಂದು ಹವಿಯನಿಕ್ಕುವ
ಹಾರುವರ ಮನೆಯಲು
ಕಿಚ್ಚೆದ್ದು ಸುಡುವಾಗ
ಬಚ್ಚಲ ನೀರ, ಬೀದಿಯ ಧೂಳ ಹೊಯ್ದು
ಬೊಬ್ಬಿಟ್ಟು ಎಲ್ಲರ ಕರೆವರಯ್ಯಾ
ಕೂಡಲಸಂಗಮದೇವಾ,
ವಂದನೆಯ ಮರೆತು ನಿಂದಿಸುತ್ತಿದ್ದರು.[೮೬]

ಇಂತಹ ವೈಚಾರಿಕ ಪ್ರಜ್ಞೆಯ–ವೈಜ್ಞಾನಿಕ ವಿಚಾರಧಾರೆಯ ಧರ್ಮಗುರುವಿನ, ಧರ್ಮದ ಅನುಯಾಯಿಗಳೆನಿಸಿಕೊಂಡಿರುವ ಖಾನೆಸುಮಾರಿ ಲಿಂಗಾಯತರಾದ ಮಂತ್ರಿ ಮಹೋದಯರು, ರಾಜಕಾರಣಿಗಳು, ಗುರು–ಜಂಗಮರು, ಭಕ್ತ ಶಿರೋಮಣಿಗಳು ವೈದಿಕರ ಯಜ್ಞ–ಯಾಗಗಳ ತಂತ್ರಕ್ಕೆ ಬಲಿಯಾಗಿರುವುದು ದುರಂತವೇ ಸರಿ.

---

೮೫. ಶರಣ ಬಂಡಾಯ –ಡಾ. ಸರಜೂ ಕಾಟ್ಕರ ಪು–೧೨

೮೬. ಬಸವಣ್ಣನವರ ವಚನ ಸಂಪುಟ – ಸಂ.ಡಾ. ಎಂ.ಎಂ.ಕಲಬುರ್ಗಿ ವಚನ– ೫೮೫.

ಧಾರ್ಮಿಕ ನಂಬಿಕೆಗಳಲ್ಲಿ ಸ್ವರ್ಗಲೋಕ-ನರಕಲೋಕಗಳನ್ನು ಕಲ್ಪಿಸಿದರು, ಜನರಿಗೆ ಸ್ವರ್ಗದ ಆಸೆ, ನರಕದ ಭಯ ಹೊಗಿಸಿದ ಪುರೋಹಿತರು ಹಲವಾರು ಧಾರ್ಮಿಕ ಕಂದಾಚಾರಗಳಿಗೆ ಅವಕಾಶ ಕಲ್ಪಿಸಿದರು. ನೂರೆಂಟು ವ್ರತ-ನೇಮಗಳು, ಜಪ-ತಪಗಳು, ಉಪವಾಸ-ವನವಾಸಗಳು, ಹರಕೆ-ಬೇಡಿಕೆಗಳಿಗೆ ಜನರನ್ನು ತೊಡಗಿಸಿದರು. ಜ್ಯೋತಿಷ್ಯ-ಪಂಚಾಗ, ಫಲಜ್ಯೋತಿಷ್ಯ ಮುಂತಾದವು ಅಂಧಶ್ರದ್ಧೆ-ಮೂಢನಂಬಿಕೆಗಳನ್ನು ಬಿತ್ತಿದರು. ನಿರಂತರ ಪ್ರವಾಹವಾಗಿರುವ ಕಾಲ(ಸಮಯ) ವನ್ನು ರಾಹುಕಾಲ-ಗುಳಿಕಾಲ-ಯಮಗಂಡಕಾಲ ಎಂದು ವಿಂಗಡಿಸಿದ್ದರು. ಶುಭಲಗ್ನ-ಶುಭ ಮುಹೂರ್ತ, ಶುಭ-ಅಶುಭ ಸಮಯ ಎಂದು ಮುಂತಾಗಿ ಕಾಲ್ಪನಿಕವಾಗಿ ಹುಟ್ಟುಹಾಕಿದ್ದರು. ಇದನ್ನು ಖಂಡಿಸಿ ಬಸವಣ್ಣನವರು-

ಲಗ್ನವೆಲ್ಲಿಯದೋ, ವಿಘ್ನವೆಲ್ಲಿಯದೋ, ಸಂಗಯ್ಯ ?
ದೋಷವೆಲ್ಲಿಯದೇ, ದುರಿತವೆಲ್ಲಿಯದೋ ಸಂಗಯ್ಯ ?
ನಿಮ್ಮ ನೆನೆವಂಗೆ ಭವ ಕರ್ಮವೆಲ್ಲಿಯದೋ
ಕೂಡಲಸಂಗಯ್ಯ ?[೮೭]

ಎಂದು ಪ್ರಶ್ನಿಸಿದರು. ಸದಾಕಾಲ ಮಂಗಲಮಯವಾಗಿರುವ ದೇವರು ವಿಶ್ವದ ಒಳಹೊರಗೆಲ್ಲ ತುಂಬಿಕೊಂಡಿರುವಾಗ ಅಮಂಗಲಕ್ಕೆ, ವಿಘ್ನಕ್ಕೆ, ದೋಷಕ್ಕೆ, ದುರಿತಕ್ಕೆ ಅವಕಾಶವೇ ಇಲ್ಲ ಎಂದು ಸಾರಿದರು.

ಶಕುನಶಾಸ್ತ್ರವಂತೂ ಜನರ ವಿಚಾರಶಕ್ತಿಯನ್ನೇ ಹಾಳು ಮಾಡಿದೆ. ಪಶು,ಪಕ್ಷಿ, ಜೀವ ಜಂತುಗಳ ಕೂಗುವಿಕೆ, ಒದರುವಿಕೆಗಳಲ್ಲಿಯೂ ಶುಭ-ಅಶುಭ ಭಾವಿಸುವುದು. 'ಕಾಗೆ ಮನೆಯ ಮುಂದೆ ಕುಳಿತು ಕೂಗಿದರೆ ನೆಂಟರು ಬರುತ್ತಾರೆ. ಹಾಲಕ್ಕಿಗಳು ಜೊತೆಯಾಗಿ ನುಡಿದರೆ ಕಾರ್ಯಸಿದ್ಧಿ; ಎರಡು ಸರ್ಪಗಳು ಕಲಹ ಮಾಡುವುದನ್ನು ಕಂಡರೆ ಆಪ್ತರಿಂದ ವಿರೋಧ; ಪ್ರಯಾಣಕಾಲದಲ್ಲಿ ಬೆಕ್ಕು ಅಡ್ಡಬಂದರೆ ಕಾರ್ಯವಿಘ್ನ; ಒಂಟಿ ಬ್ರಾಹ್ಮಣನ ದರ್ಶನ ಅಶುಭ; ಎಡಭಾಗ ಅಶುಭ; ಬಲಭಾಗ ಶುಭ; ಧೂಮಕೇತು ದರ್ಶನದಿಂದ ದೇಶದ ನಾಯಕರ ಮರಣ; ಕನಸಿನಲ್ಲಿ ಗ್ರಹಣ ನೋಡಿದರೆ ಸ್ತ್ರೀ-ಪುತ್ರ ಮರಣ; ದ್ರಾಕ್ಷಿ ಹಣ್ಣು ನೋಡಿದರೆ ಇಷ್ಟ ಸ್ತ್ರೀ ವಿವಾಹ; ನಿಂಬೆಯ ಗಿಡದ ಹಣ್ಣುಗಳನ್ನು ಹರಿದಂತಾದರೆ ವಿದೇಶ ಪ್ರಯಾಣ; ಗಂಡುಮಗು ಅಮಾವಾಸ್ಯೆ ದಿನ ಹುಟ್ಟಿದರೆ ಕಳ್ಳನಾಗುತ್ತಾನೆ, ಹೆಣ್ಣು ಮಗು ಹುಣ್ಣಿಮೆಯ ದಿನ ಹುಟ್ಟಿದರೆ ವ್ಯಭಿಚಾರಿಣಿಯಾಗುತ್ತಾಳೆ; ಆಶ್ಲೇಷಾ ನಕ್ಷತ್ರದಲ್ಲಿ ಹೆಣ್ಣು ಹುಟ್ಟಿದರೆ ಅತ್ತೆಗೆ ಕೇಡು; ಅಂಗೈ ಕಡಿದರೆ ಹಣ; ಅಂಗಾಲು ಕಡಿದರೆ ರಣ; ಅಂಗಾಲು ತುರಿಸಿದರೆ ಪ್ರಯಾಣ; ಶನಿವಾರ ಸೀತರೆ ಪ್ರೇಯಸಿಯ ದರ್ಶನ ಇತ್ಯಾದಿ[೮೮]

೮೭ ಬಸವಣ್ಣನವರ ವಚನ ಸಂಪುಟ – ಸಂ.ಡಾ. ಎಂ.ಎಂ.ಕಲಬುರ್ಗಿ ವಚನ – ೮೭೨.
೮೮. ವಚನ ಸಾಹಿತ್ಯ ವಿವೇಚನೆ : ಶಕುನಶಾಸ್ತ್ರ ಮತ್ತು ಶರಣರು –ಷಣ್ಮುಖಯ್ಯ ಅಕ್ಕೂರಮಠ ಪು–೧೨೫.

ಈ ಪ್ರಕಾರ ನೂರಾರು ಮೂಢನಂಬಿಕೆಯ ಶುಭ–ಅಶುಭ ಬೆಳೆದುಬಂದಿದೆ. ದೇಹದ ಅಂಗಾಂಗಗಳು ಅದುರಿದರೆ ಶುಭ–ಅಶುಭ; ದೇಹದ ಮೇಲೆ ಹಲ್ಲಿ ಬಿದ್ದರೆ ಶುಭ–ಅಶುಭಗಳು; ಇಂತಹ ಶಕುನಗಳಿಗೆ ಭಯದಿಂದ ಪಂಚಾಗ ಕೇಳಲು ಪುರೋಹಿತಪಂಡಿತರ ಹತ್ತಿರ ಹೋಗಬೇಕು. ಅವರು ಹೇಳುವ ವ್ರತ–ನಿಯಮ–ಪರಿಹಾರ ಮಾಡಬೇಕು.

ಇಂತಹ ಪಂಚಾಂಗದ ಹುಚ್ಚಿನ ಮೂಢರನ್ನು ಕುರಿತು ವಚನಕಾರ 'ನಿಸ್ಸಂಗ ನಿರಾಳ ಪ್ರಭು' ಎಂಬವರು ನಿಷ್ಠುರವಾಗಿ ಉದಾಹರಣೆಗಳನ್ನಿತ್ತು ಖಂಡಿಸುತ್ತಾರೆ–

ಶ್ರೀಮತ್ ಸಜ್ಜನ ಶುದ್ಧ ಶಿವಾಚಾರರಾಗಿ
ಅಷ್ಟಾವರಣವೆ ಅಂಗವಾಗಿ
ಪಂಚಾಚಾರವೇ ಪ್ರಾಣವಾಗಿ
ಬಸವೇಶ್ವರ ದೇವರ ಸಾಂಪ್ರದಾಯಯಕರೆಂದು
ನುಡಿದು ನಡೆಯಬಲ್ಲರೆ, ಭಕ್ತರೆಂಬೆ, ಪುರಾತರೆಂಬೆ.
ಅಂತಪ್ಪ ಭಕ್ತಂಗೆ ಈ ಮೂಜಗವೆಲ್ಲ ಸರಿಯಲ್ಲವೆಂಬೆ.
ಈ ಶಿವಾಚಾರದ ಪಥವನರಿಯದೆ,
ಇರುಳು ಹಗಲು ಅನಂತಸೂತಕ ಪಾತಕಂಗಳೊಳಗೆ
ಮುಳುಗಾಡಿ ಮತಿಗೆಟ್ಟು,
ಪಂಚಾಂಗವ ಬೊಗಳುವ ಭ್ರಷ್ಟ ಮಾದಿಗರ ಮಾತು ಅಂತಿರಲಿ ;
ಪಂಚಾಂಗವ ಕೇಳಿದ ದಕ್ಷಬ್ರಹ್ಮನ ತಲೆ ಯಾಕೆ ಹೋಯಿತು?
ಪಂಚಾಂಗವ ಕೇಳಿದ ಪಂಚ ಪಾಂಡವರು ದೇಶಬ್ರಷ್ಟರಾದರೇಕೆ?
ಪಂಚಾಂಗವ ಕೇಳಿದ ಶ್ರೀರಾಮನ ಹೆಂಡತಿ (ಸೀತೆಯು)
ರಾವಣಂಗೆ ಸೆರೆಯಾದಳೇಕೆ?
ಪಂಚಾಂಗವ ಕೇಳಿದ ಇಂದ್ರನ ಶರೀರವೆಲ್ಲ
ಯೋನಿ ಮಂಡಲವೇಕಾಯ್ತು?
ಪಂಚಾಂಗವ ಕೇಳಿದ ದ್ವಾರಾವತಿಯ ನಾರಾಯಣನ
ಹೆಂಡಿರು ಹೊಲೆ ಮಾದಿಗರ ಕೂಡಿಕೊಂಡರೇಕೆ?
ಪಂಚಾಂಗವ ಕೇಳಿದ ಸರಸ್ವತಿಯ ಮೂಗು ಹೋಯಿತೇಕೆ?
ಪಂಚಾಂಗವ ಕೇಳಿದ ಬ್ರಹ್ಮ, ವಿಷ್ಣು, ಇಂದ್ರ
ಮೊದಲಾದ ಮೂವತ್ಮೂರು ಕೋಟಿ ದೇವರ್ಕಳು
ತಾರಕಾಸುರನಿಂದ ಬಾಧೆಗೊಳಗಾಗಿ
ಕಂಗೆಟ್ಟು ಪ್ರಭುವಿನ ಮೊರೆಹೊಕ್ಕರೇಕೆ ?
ಕುರುಡ, ಕುಂಟ, ಹಲ್ಲುಮುರ್ಕ, ಗುರುತಲ್ಪಕನ
ಬಲವನೇ ಕೇಳಲಾಗದು.
ಶುಭದಿನ, ಶುಭಲಗ್ನ, ಶುಭವೇಳೆ, ಶುಭಮುಹೂರ್ತ

ವ್ಯತಿ_ಪಾತ, ದಗ್ಧ_ವಾರ ಎಂದು ಸಂಕಲ್ಪಿಸಿ
ಬೊಗಳುವರ ಮಾತು ಕೇಳಲಾಗದು.
ಗುರುವಿನಾಜ್ಞೆಯ ಮೀರಿ,
ಸತ್ತರೆ ಹೊಲೆ, ಹಡೆದರೆ ಹೊಲೆ, ಮುಟ್ಟಾದರೆ ಹೊಲೆ
ಎಂದು ಸಂಕಲ್ಪಿಸಿಕೊಂಬಿರಿ.
ನಿಮ್ಮ ಮನೆ ಹೊಲೆಯಾದರೆ,
ನಿಮ್ಮ ಗುರುಕೊಟ್ಟ ಇಷ್ಟಲಿಂಗವೇನಾಯಿತೋ ?
ವಿಭೂತಿ ಏನಾಯಿತೋ ? ಮಂತ್ರವೇನಾಯಿತೋ ?
ನಿಮ್ಮ ಶಿವಾಚಾರವೇನಾಯಿತೋ ?
ನೀವೇನಾದಿರೋ ಹೇಳಿರಣ್ಣಾ,
ಅರಿಯದಿದ್ದರೆ ಕೇಳಿರಣ್ಣಾ:
ನಿಮ್ಮ ಲಿಂಗವು ಪೀತ ಲಿಂಗವು.
ನೀವು ಭೂತ ಪ್ರಾಣಿಗಳು,
ನಿಮ್ಮ ಮನೆಯೊಳಗಾದ ಪದಾರ್ಥವೆಲ್ಲ ಹೆಂಡ ಬಾಂಡ,
ಅವು ಶುದ್ಧ ಕಿಲ್ಬಿಷವೆನಿಸಿತು.
ಇದು ಕಂಡು ನಾಚದೆ ಮತ್ತೆ ಶುಭಲಗ್ನವ ಕೇಳಿ
ಮದುವೆಯಾದ ಅನಂತ ಜನರ ಹೆಂಡಿರು
ಮುಂಡೆಯರಾಗಿ ಹೋದ ದೃಷ್ಟಾಂತವ ಕಂಡು,
ಪಂಚಾಂಗವ ಕೇಳಿದವರಿಗೆ
ನಾಯಮಲವ ಹಂದಿ ಕಿತ್ತುಕೊಂಡು ತಿಂದಂತಾಯಿತ್ತು
ಕಾಣಾ, ನಿಸ್ಸಂಗ ನಿರಾಳ ಪ್ರಭುವೆ.[೮೯]

ಜ್ಯೋತಿಷ್ಯ ಶಬ್ಧ ನಿಜವಾದ ಅರ್ಥವೆಂದರೆ, – 'ಜ್ಯೋತಿ' ಎಂದರೆ ಬೆಳಕು, 'ಷ' ಎಂದರೆ ಹರಡುವುದು. ಜ್ಞಾನದ ಬೆಳಕನ್ನು ಹರಡುವ ವಿಜ್ಞಾನ ಎಂದಾಗಬೇಕಾದ ಇದು ಫಲ ಜ್ಯೋತಿಷ್ಯದಿಂದಾಗಿ ಮೌಢ್ಯವನ್ನು ಬಿತ್ತಿ ಬೆಳಯುವಂತಾಗಿದೆ. 'ಭಾರತದಲ್ಲಿ ಬೆಳಕನ್ನು ಹರಡಬೇಕಾಗಿದ್ದ ಜ್ಯೋತಿಷ್ಯಶಾಸ್ತ್ರ ಎಲ್ಲ ಜಾತಿಗಳಲ್ಲಿರುವ ಪುರೋಹಿತರ ಕುತಂತ್ರಕ್ಕೆ ಒಳಗಾಗಿ ತನ್ನ ವೈಜ್ಞಾನಿಕ ಪಥದಿಂದ ವಂಚಿತವಾಗಿ ಮೌಢ್ಯದ ಪ್ರತೀಕವಾಗಿ ಉಳಿದಿರುವುದು ಭಾರತದ ಇತಿಹಾಸದ ಒಂದು ದೊಡ್ಡ ದುರಂತ'.[೯೦]

ದಲಿತಸಾಹಿತಿ, ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರು ವಿಚಾರವಾದಿ ಸಾಹಿತಿ–ಬರಹಗಾರರದಾದುದರಿಂದ ಧಾರ್ಮಿಕ ಮೂಢನಂಬಿಕೆಗಳನ್ನು ವೈಜ್ಞಾನಿಕವಾಗಿ ಖಂಡಿಸಿರುವುದನ್ನು ಕಾಣುತ್ತೇವೆ. ನಿರಾಕಾರ ದೇವ ಚೈತನ್ಯಕ್ಕೆ ಪ್ರತಿಮೆಗಳನ್ನು

---

೮೯. ವಚನ ಶಾಸ್ತ್ರ ಸಾರ ಭಾಗ–೧ ಸಂ.ಫ.ಗು. ಹಳಕಟ್ಟಿ ಪು– ೩೪೬ ವ–೫
೯೦. ಪಂಚಾಂಗ ಹತ್ತಿ ಉರಿದಾವ – ಮುಗುಳವಳ್ಳಿ ಕೇಶವ ಧರಣಿ ಪು–೧.

ಕೆತ್ತಿಸಿ ಪೂಜಿಸುವುದಾಗಲೀ, ಸಾವಿನ ನಂತರ ಮೋಕ್ಷ ಬಯಸುವುದಾಗಲೀ ಮೌಢ್ಯದ ಅತಿರೇಕಗಳೆಂದು ಹೇಳುತ್ತಾರೆ –

'ಪ್ರತಿಮಾ ಅಲ್ಪ ಬುದ್ಧಿನಾಂ' ಗೊತ್ತಿದ್ದರೂ
ಬುದ್ಧಿಜೀವಿಗಳು ಪ್ರತಿಮೆಗಳನು ಪೂಜಿಸುವುದೇಕೆ?
'ನ ಮೋಕ್ಷೋ ನಭ ಸಃ' ಹೇಳಿದರೂ
ಬಲ್ಲವರು ಮರಣಾನಂತರ ಮೋಕ್ಷ ಬಯಸುವದೇಕೆ?
ಧಾರ್ಮಿಕ ಲೋಕದಲಿ ವಿಜ್ಞಾನ ಸಿದ್ಧಾಂತಕ್ಕಿಂತಲೂ
ಮೂಢನಂಬಿಕೆಗಳಿಗೇ ಗೆಲುವೆಂದ
ಕುಮಾರ ಕಕ್ಕಯ್ಯ.[೯೧]

ದೇವರ ಮೂರ್ತಿ, ಪ್ರತಿಮೆ, ಸತ್ತವರ ಸಮಾಧಿ ಗದ್ದುಗೆಗಳಿಗೆ ಇಂದಿನ ವಿಜ್ಞಾನ ಯುಗದಲ್ಲಿಯೂ ಕೂಡ ಸಹಸ್ರ ಬಿಲ್ವಾರ್ಚನೆ, ಲಕ್ಷ ಬಿಲ್ವಾರ್ಚನೆ, ಕೋಟಿ ಬಿಲ್ವಾರ್ಚನೆಗಳು, ಕ್ಷೀರಾಭಿಷೇಕ, ಪಂಚಾಮೃತ ಅಭಿಷೇಕ, ಜಲಾಭಿಷೇಕಗಳು ನಿರಂತರ ನಡೆದೇ ಇವೆ. ಇವೆಲ್ಲ ಧಾರ್ಮಿಕ ಅಪರಾಧವೆನ್ನುತ್ತಾರೆ ಕುಮಾರ ಕಕ್ಕಯ್ಯ –

ಕಲ್ಲಿನ ಮೂರ್ತಿಗೆ ಅಭಿಷೇಕ ಮಾಡುವದು
ಸತ್ತವರ ಗೋರಿಗೆ ಮೃಷ್ಟಾನ್ನ ಹಿಡಿಯುವದು
ಶಗಣಿಯ ಬೊಂಬೆಯ ದೇವರೆಂದು ಶೃಂಗರಿಸುವುದು
ಅಬ್ಬರದಿ ಊರತುಂಬ ಅದನು ಮೆರೆಸುವುದು
ಮೂಢನಂಬಿಕೆಯ ಪರಮಾವಧಿಯಷ್ಟೆ ಅಲ್ಲ,
ಧಾರ್ಮಿಕ ಅಪರಾಧವೆಂದ ಕುಮಾರ ಕಕ್ಕಯ್ಯ.[೯೨]

ನಮ್ಮ ದೇಶದಲ್ಲಿ ಪುರೋಹಿತಶಾಹಿಗಳು ಪ್ರತಿದಿನ ತಮ್ಮ ಅತಿಬುದ್ಧಿವಂತಿಕೆಯಿಂದ ನೂರಾರು ಕಥೆಗಳನ್ನು ಹುಟ್ಟು ಹಾಕಿ, ಹೊಸ ಹೊಸ ದೇವರುಗಳನ್ನು, ಅವುಗಳಿಗೆ ದೇವಾಲಯಗಳನ್ನು ನಿರ್ಮಿಸುವ ಯೋಜನೆಗಳನ್ನು ಹಾಕುತ್ತಲೇ ಇದ್ದಾರೆ. ಕುಮಾರ ಕಕ್ಕಯ್ಯನವರು ಇಂತಹ ಹುನ್ನಾರಗಳ ಬಗ್ಗೆ ತಮ್ಮ ವಚನದಲ್ಲಿ ತಿಳಿಯಪಡಿಸುತ್ತಾರೆ –

ಹುಲ್ಲು ಕಡ್ಡಿಯನ್ನೂ ಸಹ ಸೃಷ್ಟಿಸಲಿಕ್ಕಾಗದವರು
ನೂರಾರು ದೇವರುಗಳನ್ನು ಸೃಷ್ಟಿಸುತ್ತಲೇ ಇದ್ದಾರೆ.
ಕೋಟಿ ಕೋಟಿ ಬಡಪಾಯಿಗಳಿಗೆ
ಗುಡಿಸಲೂ ಗತಿಯಿಲ್ಲದಾಗ
ಕಲ್ಲುದೇವರುಗಳಿಗೆ ದೊಡ್ಡ ದೊಡ್ಡ ಗುಡಿಗಳನ್ನು.

---

೯೧. ಕುಮಾರ ಕಕ್ಕಯ್ಯನ ವಚನಗಳು – ಪು–೧೩೮ ವ–೫೩೨
೯೨. ಕುಮಾರ ಕಕ್ಕಯ್ಯನ ವಚನಗಳು – ಪು–೧೩೬ ವ–೫೨೫.

ಕಟ್ಟುತ್ತಲೇ ಇದ್ದಾರೆ.
ಎಲ್ಲ ಮೂಢ ನಂಬಿಕೆಗಳಿಗಿಂತ ಇಂತೀ
ದೇವರುಗಳ ನಂಬಿಕೆಯೇ ಹೆಚ್ಚಿನ
ಮೂಢನಂಬಿಕೆಯೆಂದ ಕುಮಾರ ಕಕ್ಕಯ್ಯ[೯೩]

ದೇವ–ಭಕ್ತರ ನಡುವೆ ಪೂಜಾರಿಗಳು ದಲ್ಲಾಳಿಗಳಾಗಿ ಅರ್ಚನೆ–ಅಭಿಷೇಕಗಳ ಹೆಸರಿನಲ್ಲಿ ವಿಧವಿಧವಾದ ರೀತಿಯಲ್ಲಿ ಹಣವನ್ನು ಸುಲಿಯುತ್ತಾರೆ. ಅದನ್ನು ಕೆಲವು ಉದಾಹರಣೆಗಳೊಂದಿಗೆ ಮಾರ್ಮಿಕವಾಗಿ ವಿಡಂಬಿಸುತ್ತಾರೆ ಕುಮಾರ ಕಕ್ಕಯ್ಯ–

ದಾಕ್ಷಿಣ್ಯಕ್ಕಾಗಿ ಅಳಿಯನಿಗೆ
ಉಡುಗೊರೆ ಮಾಡುವುದು ಔಪಚಾರಿಕ ಲಂಚ.
ಕೆಲಸಕ್ಕಾಗಿ ಅಧಿಕಾರಿಗೆ
ಬೆಚ್ಚಗೆ ಮಾಡುವದು ಲೌಕಿಕ ಲಂಚ
ಕೃಪೆಗಾಗಿ ದೇವರಿಗೆ
ಅಭಿಷೇಕ ಮಾಡುವದು ಧಾರ್ಮಿಕ ಲಂಚವೆಂದ
ಕುಮಾರ ಕಕ್ಕಯ್ಯ[೯೪]

ಪೂಜೆ–ಪುನಸ್ಕಾರಗಳು ಜನರ ಅಮೂಲ್ಯವಾದ ಕಾಯಕದ ಸಮಯವನ್ನು ಹಾಳುಮಾಡುತ್ತವೆ. 'ಕಾಯಕವೇ ಪೂಜೆ'ಯೆಂಬುದನ್ನು ಮರೆತು ಅನೇಕರು ಪೂಜೆ ಮಾಡುವದನ್ನೇ ಕಾಯಕ ಮಾಡಿಕೊಂಡಿದ್ದಾರೆ. ವ್ರತ ತಪ್ಪಿದರೆ ಸೈರಿಸಬಹುದು, ಕಾಯಕ ತಪ್ಪಿದರೆ ಎಂದೂ ಸೈರಿಸಬಾರದು ಎಂಬುದು ಶರಣರ ಸಿದ್ಧಾಂತ. ಇದನ್ನು ಅರಿತ ವಚನಕಾರ ಕುಮಾರ ಕಕ್ಕಯ್ಯನವರು ಪೂಜೆ ಮಾಡುವವರ ಬಗ್ಗೆ ಹಾಸ್ಯಮಯವಾಗಿ ಹೇಳುತ್ತಾರೆ –

ಒಂದೆರಡು ತಾಸು ಪೂಜೆ
ಮಾಡುವವನ ಬಗ್ಗೆ ಎಚ್ಚರದಿಂದಿರು.
ನಾಲ್ಕಾರು ತಾಸು ಪೂಜೆ
ಮಾಡುವವನಿಂದ ಆದಷ್ಟು ದೂರವಿರು
ಮೂರೂ ಹೊತ್ತು ಪೂಜೆ
ಮಾಡುವವನ ಮಣ್ಣಿಗೂ ಹೋಗಬೇಡೆಂದ
ಕುಮಾರ ಕಕ್ಕಯ್ಯ[೯೫]

ಧಾರ್ಮಿಕ ರಂಗದಲ್ಲಿ ಅನೇಕ ಸಾಧು,ಸನ್ಯಾಸಿ,ಬಾಬಾಗಳು ಮುಗ್ಧ ಮತ್ತು ಮೂಢಜನರ ಕಣ್ಣಿಗೆ ಮಣ್ಣೆರಚಿ, ಮಂಕು ಬೂದಿ ಎರಚಿ ನಯವಾಗಿ ವಂಚಿಸುತ್ತಾರೆ.

---

೯೩. ಕುಮಾರ ಕಕ್ಕಯ್ಯನ ವಚನಗಳು –ಪು–೩೬೮ ವ–೧೪೨೮
೯೪. ಕುಮಾರ ಕಕ್ಕಯ್ಯನ ವಚನಗಳು –ಪು–೧೨ ವ–೪೭
೯೫. ಕುಮಾರ ಕಕ್ಕಯ್ಯನ ವಚನಗಳು – ಪು– ೧೭೪ ವ–೬೭೨.

ಅತಿಂದ್ರಿಯ ಜ್ಞಾನ, ಅಲೌಕಿಕ ಶಕ್ತಿಯಿದೆ ಎಂದು ತಮ್ಮ ಚೇಲಾ (ಶಿಷ್ಯ) ಗಳಿಂದ ಅತಿರೇಕದ ಪ್ರಚಾರ ಮಾಡಿಸಿ, ಭಕ್ತರನ್ನು ಸೆಳೆಯುತ್ತಾರೆ. ಶಾಪಾನುಗ್ರಹ ಸಮರ್ಥರೆಂದು ಬುರುಡೆ ಬಿಡುತ್ತಾರೆ. ಮಕ್ಕಳಾಗದವರಿಗೆ ಪ್ರಸಾದಕೊಟ್ಟು ಮಕ್ಕಳಾಗುವಂತೆ ಆಶೀರ್ವದಿಸುವುದಾಗಲೀ, ಕಾಯಿ ಪೂಜೆ ಮಾಡಿದರೆ ಸಂಪತ್ತು ಹೆಚ್ಚುವದೆನ್ನುವುದಾಗಲೀ ಬರಿ ಭ್ರಾಂತಿಯೆಂದು ಜನರಿಗೆ ತಿಳಿಸಿಹೇಳಿ, ಅರಿವು ಮೂಡಿಸುತ್ತಾರೆ, ಅಜ್ಞಾನ ದೂರಮಾಡುತ್ತಾರೆ, ಕುಮಾರ ಕಕ್ಕಯ್ಯನವರು. ತಮ್ಮ ವಚನದಲ್ಲಿ ಸ್ಪಷ್ಟವಾಗಿ ನುಡಿಯುತ್ತಾರೆ.

ಪವಾಡದಿಂದ ರೊಟ್ಟಿ ಬೇಯುವದಿಲ್ಲ.
ಪ್ರಸಾದದಿಂದ ಗಂಡನಿಲ್ಲದೆ ಮಕ್ಕಳಾಗುವದಿಲ್ಲ.
ಶಾಪದಿಂದ ಯಾರೂ ಸಾಯುವದಿಲ್ಲ.
ಆಶೀರ್ವಾದದಿಂದ ಯಾರೂ ಬದುಕುವದಿಲ್ಲ
ಅತೀಂದ್ರಿಯ ಜ್ಞಾನ, ಅಲೌಕಿಕ ಶಕ್ತಿ
ಬರೀ ಭ್ರಾಂತಿಯೆಂದ ಕುಮಾರ ಕಕ್ಕಯ್ಯ.[೯೬]

ಧಾರ್ಮಿಕರಂಗದಲ್ಲಿ ಕೆಲವರು ಅಧ್ಯಾತ್ಮ ಸಾಧನೆ ಮಾಡುತ್ತೇವೆಂದು ಸಂಸಾರ ತ್ಯಜಿಸಿ ಸನ್ಯಾಸಿಯಾಗುತ್ತಾರೆ, ಬ್ರಹ್ಮನಾಗಬೇಕೆಂದು ಪ್ರಪಂಚ ತೊರೆದು ಭ್ರಾಂತಿಗೆ ಒಳಗಾಗುತ್ತಾರೆ. ಮಾತು ಬಿಟ್ಟು ಮೌನಕ್ಕೆ ಶರಣಾಗುತ್ತಾರೆ, ಕಣ್ಣು ಮುಚ್ಚಿ ನಿಶ್ಚಲವಾಗಿ ಕುಳಿತುಬಿಡುತ್ತಾರೆ. ಇಂಥವರು ಅಧ್ಯಾತ್ಮಸಾಧನೆ ಮಾಡಲು ಸಾಧ್ಯವೇ ? ಎಂದು ಕುಮಾರ ಕಕ್ಕಯ್ಯ ಪ್ರಶ್ನಿಸುತ್ತಾರೆ –

ಸ್ವರ್ಗ ಅಂತಾ ಸಂಸಾರ ಬಿಟ್ಟು ಸನ್ಯಾಸಿ ಆಗ್ತಾರ.
ಬ್ರಹ್ಮ ಅಂತಾ ಭ್ರಾಂತಿಗೆಟ್ಟು ಪ್ರಪಂಚ ಬಿಡ್ತಾರ.
ಕೈಲಾಸ ಅಂತಾ ಕಾಯಕ ಬಿಟ್ಟು ಕಾವಿ ಹಾಕ್ತರ
ಮೌನ ಅಂತಾ ಮಾತ ಬಿಟ್ಟು ಮೂಕ ಆಗ್ತಾರ
ಬೆಳಕು ಕಾಣಲೆಂದೇ ಇರುವ ಕಣ್ಣು ಮುಚ್ಚಿ
ಬೆಳಕು ಬೇಕೆನ್ನುವ ಇವರು ಅದೆಂತಹ
ಅಧ್ಯಾತ್ಮಿಗಳೆಂದ ಕುಮಾರ ಕಕ್ಕಯ್ಯ.[೯೭]

ಇಂತಹ ಮೂಢರು ಎಂದೆಂದಿಗೂ ಜ್ಞಾನದ ಬೆಳಕು ಕಾಣಲಾರರು. ಪರಲೋಕದ ಆಸೆಗಾಗಿ ಇಹಲೋಕದ ಬದುಕನ್ನು ಬಾಳಲಾರದವರು ಏನನ್ನೂ ಸಾದಿಸಲಾರರು. ಇಂಥವರನ್ನು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ವಿಡಂಬಿಸುತ್ತಾರೆ–

ವೇದಶಾಸ್ತ್ರಗಳ ತಿಳಿವಳಿಕೆ ಇರದಿದ್ದರೂ
ಈಜು ಬಲ್ಲವ ಹೊಳೆದಾಟಬಹುದು

---

೯೬. ಕುಮಾರ ಕಕ್ಕಯ್ಯನ ವಚನಗಳು – ಪು– ೧೫ ವ–೫೬.
೯೭. ಕುಮಾರ ಕಕ್ಕಯ್ಯನ ವಚನಗಳು – ಪು–೩೫ ವ– ೧೩೩

ಬ್ರಹ್ಮಜ್ಞಾನದ ಗಂಧವೇ ಇರದಿದ್ದರೂ
ಬಾಳು ಬಲ್ಲವ ಭವಸಾಗರವ ದಾಟಬಹುದು
ಭೂಲೋಕ ದಾಟುವದನ್ನೇ ಅರಿಯದವರು
ಪರಲೋಕಕ್ಕೆ ಅದ್ಹೇಗೆ ಹೋಗುವರೆಂದ
ಕುಮಾರ ಕಕ್ಕಯ್ಯ.[೯೮]

ಸಮಾಜದಲ್ಲಿ ಜ್ಯೋತಿಷಿ, ಮಾಂತ್ರಿಕ, ಪವಾಡಪುರುಷರೆನ್ನುವವರು ಜನರನ್ನು ಹೇಗೆ ಮೋಸ ಮಾಡುತ್ತಾರೆಂಬುದನ್ನು ತಿಳಿಸಿ, ಜನರು ಎಚ್ಚರಾಗಬೇಕೆಂದು ಹೇಳುತ್ತಾರೆ –

ಪರರಿಗೆ ಭವಿಷ್ಯ ಹೇಳುವ ಜ್ಯೋತಿಷಿ
ತನ್ನ ಭವಿಷ್ಯ ತಾ ತಿಳಿಯದೆ
ಹಾದಿ ಬೀದಿಯಲ್ಲಿ ಅಲೆಯುವದೇಕೆ ?
ಪರರಿಗೆ ಯಂತ್ರ ಮಂತ್ರ ಮಾಡುವ ಮಾಂತ್ರಿಕ
ತನ್ನವರು ಜಡ್ಡಿಗೆ ಬಿದ್ದಾಗ ಆಸ್ಪತ್ರೆಗೆ ಓಡುವದೇಕೆ?
ಪರರಿಗೆ ಚಿನ್ನ ವಸ್ತು ಒಡವೆ ನೀಡುವ ಪವಾಡಪುರುಷ
ತನ್ನ ಆಶ್ರಮ ಕಟ್ಟಲು ಧನವಂತರಲ್ಲಿ ಯಾಚಿಸುವದೇಕೆ?
ತಮ್ಮಲ್ಲಿ ತಮಗೇ ನಂಬಿಕೆ ಇಲ್ಲದ ಭವಿಗಳಿಗೆ
ವೇಷಡಂಬಕರು ಮೋಸ ಮಾಡುವರೆಂದ
ಕುಮಾರ ಕಕ್ಕಯ್ಯ.[೯೯]

ಕುಮಾರ ಕಕ್ಕಯ್ಯ ವಿಚಾರವಾದಿ ಲೇಖಕರಾದುದರಿಂದ, ತಮ್ಮ ವಚನಗಳ ಮೂಲಕ ಜನರನ್ನು ಜಾಗೃತಗೊಳಿಸಲು ಪ್ರಯತ್ನಿಸಿರುವದನ್ನು ಕಾಣುತ್ತೇವೆ. 'ಸಾಹಿತ್ಯವು ಸಮಾಜದ ಬದುಕಿಗೆ ನೈಜತೆಯನ್ನು ತೋರಿಸುವ ಕೈಗನ್ನಡಿಯಾಗಿರಬೇಕು. ಮೌಢ್ಯ, ಅಜ್ಞಾನ, ಗೊಡ್ಡು ಸಂಪ್ರದಾಯಗಳಿಂದ ಜಡ್ಡುಗಟ್ಟಿರುವ ಸಮಾಜಕ್ಕೆ ಬದುಕಿನ ಒಳಾಂಗಣಕ್ಕೆ ಕರೆದೊಯ್ಯಬೇಕು. ಸತ್ಯವನ್ನು ಪ್ರತಿಬಿಂಬಿಸುವ, ಶೋಷಣೆಯನ್ನು ಧಿಕ್ಕರಿಸುವ ಎದೆಗಾರಿಕೆಬೇಕು. ಮನೋದೌರ್ಬಲ್ಯದಿಂದ ಬಳಲಿ ಬಡಕಲಾದ ಸಮಾಜವನ್ನು ಎತ್ತಿ ನಿಲ್ಲಿಸಬೇಕೆಂಬ ಛಲ ಹೊಂದಿದವರು ಕುಮಾರ ಕಕ್ಕಯ್ಯ ಪೋಳ'[೧೦೦] ಅವರಾಗಿದ್ದರು.

**vi) ಕರ್ಮಸಿದ್ಧಾಂತ ಹಾಗೂ ಪುನರ್ಜನ್ಮ ಸಿದ್ಧಾಂತ.**

ಭಾರತೀಯರಲ್ಲಿ ಪ್ರಾಚೀನಕಾಲದಿಂದಲೂ ಕರ್ಮಸಿದ್ಧಾಂತ ಹಾಗೂ ಪುನರ್ಜನ್ಮಸಿದ್ಧಾಂತಗಳು ಜನಮಾನಸವನ್ನು ವ್ಯಾಪಿಸಿಕೊಂಡಿವೆ. ತಮ್ಮ ಜೀವನದ

೯೮. ಕುಮಾರ ಕಕ್ಕಯ್ಯನ ವಚನಗಳೂ – ಪು– ೧೫ ವ–೫೬
೯೯. ಕುಮಾರ ಕಕ್ಕಯ್ಯನ ವಚನಗಳು ಪು– ೨೮೮, ವ–೧೧೧೩.
೧೦೦. ದಲಿತಸಾಹಿತಿ ಕುಮಾರ ಕಕ್ಕಯ್ಯ ಪೋಳ –ಡಾ॥ ಎಚ್.ಟಿ. ಪೋತೆ ಪು–೮

ಪ್ರತಿಯೊಂದು ಆಗು–ಹೋಗುಗಳಿಗೂ ನಮ್ಮ ಕರ್ಮ, ನಮ್ಮ ದೈವ, ನಮ್ಮ ಹಣೆಬರಹ ಎಂದು ಹೇಳಿಕೊಳ್ಳುವದು ಸಾಗಿ ಬಂದಿದೆ. ಹಿಂದಿನ ಜನ್ಮದ ಕರ್ಮದ ಫಲ ಇಂದಿನ ಜನ್ಮದಲ್ಲಿ ಅನುಭವಿಸಬೇಕು. ಇಂದಿನ ಜನ್ಮದ ಪ್ರಾರಬ್ಧ ಅನುಭವಿಸಿ, ಅದು ಉಳಿದರೆ ಮುಂದಿನ ಜನ್ಮದಲ್ಲಿ ಅನುಭವಿಸಬೇಕು. ಅಂದರೆ ಸಂಚಿತಕರ್ಮ (ಹಿಂದಿನ ಜನ್ಮದ್ದು) ಪ್ರಾರಬ್ಧ ಕರ್ಮ (ಇಂದಿನ ಜನ್ಮದ್ದು) ಆಗಾಮಿ ಕರ್ಮ (ಮುಂದಿನ ಜನ್ಮದ್ದು). ಹೀಗೆ ಭವಚಕ್ರ ನಿರಂತರ ಸಾಗುತ್ತದೆ ಎಂಬ ಬಲವಾದ ನಂಬಿಕೆ ಬೇರೂರಿದೆ. ವೇದೋಪನಿಷತ್ತುಗಳಲ್ಲಿ ಈ ಕುರಿತು ಗುರು–ಶಿಷ್ಯರ ಸಂವಾದ ಕಾಣುತ್ತೇವೆ. ನಾನು ಯಾರು? ನನ್ನ ಸ್ವರೂಪವೇನು? ನಾನು ಎಲ್ಲಿಂದ ಬಂದೆ? ಮುಂದೆ ಎಲ್ಲಿಗೆ ಹೋಗಬೇಕಾಗಿದೆ? ಮೋಕ್ಷ ಎಂದರೇನು? ಮೋಕ್ಷ ಹೊಂದಲು ಮಾರ್ಗಗಳು ಯಾವವು? ಇವೇ ಮುಂತಾದ ಪ್ರಶ್ನೆಗಳ ಉತ್ತರ ಹುಡುಕಲು ಕಷ್ಟವಾದಾಗ, ಸಮಸ್ಯೆಗಳ ಪರಿಹಾರಕ್ಕೆಂದು ರೂಪಿಸಿಕೊಂಡ ಪರಿಹಾರಗಳೇ ಕರ್ಮಸಿದ್ಧಾಂತ ಹಾಗೂ ಪುನರ್ಜನ್ಮಸಿದ್ಧಾಂತಗಳೆನ್ನಬಹುದು. ಕಾಲಗತಿಸಿದಂತೆ ಇವೇ ಕರ್ಮ, ಹಣೆಬರಹ, ದೈವ ಮುಂತಾದ ವಿಧಿಗಳನ್ನು ಹುಟ್ಟು ಹಾಕಿದವೆನ್ನಬಹುದು.

ಈ ಕರ್ಮಸಿದ್ಧಾಂತವು ಕಾರ್ಯ–ಕಾರಣ–ಪರಿಣಾಮಗಳನ್ನು ಆಧರಿಸಿದೆ. ಒಳ್ಳೆಯ ಕಾರ್ಯ ಮಾಡುವದರಿಂದ ಒಳ್ಳೆಯ ಪರಿಣಾಮ, ಕೆಟ್ಟಕಾರ್ಯ ಮಾಡುವದರಿಂದ ಕೆಟ್ಟ ಪರಿಣಾಮ ಉಂಟಾಗುತ್ತವೆ. ಸತ್ಕರ್ಮದ ಫಲ ಪುಣ್ಯವಾದರೆ, ದುಷ್ಕರ್ಮದ ಫಲ ಪಾಪವಾಗಿದೆ. ಪುಣ್ಯದ ಮೊತ್ತ ಹೆಚ್ಚಾದರೆ ಸತ್ತಬಳಿಕ ಸ್ವರ್ಗ ಅಥವಾ ಮುಂದಿನ ಜನ್ಮದಲ್ಲಿ ಶ್ರೇಷ್ಠ ಕುಲದಲ್ಲಿ ಜನನ; ಪಾಪದ ಮೊತ್ತ ಹೆಚ್ಚಾದರೆ ನರಕ ಅಥವಾ ಪುನರ್‌ಜನ್ಮದಲ್ಲಿ ಕನಿಷ್ಠ ಕುಲದಲ್ಲಿ ಜನನವಾಗುವದು.

ಒಳ್ಳೆಯ ಕ್ರಿಯೆ ಹಾಗೂ ಕೆಟ್ಟ ಕ್ರಿಯೆಗಳ ಪರಿಣಾಮವನ್ನು ಇದೇ ಜನ್ಮದಲ್ಲಿ ಅನುಭವಿಸುವನು. ಒಂದುವೇಳೆ ಪೂರ್ಣ ಅನುಭವಿಸಲು ಸಾಧ್ಯವಿಲ್ಲದಿದ್ದರೆ ಮುಂದಿನ ಜನ್ಮಕ್ಕೆ ಸಂಚಿತಕರ್ಮವಾಗಿ ಹೋಗುತ್ತದೆ. ಹಿಂದಿನ ಜನ್ಮದ ಈ ಸಂಚಿತ ಕರ್ಮವನ್ನು ಹೊಸಜನ್ಮದಲ್ಲಿ ಅನುಭವಿಸಲೇ ಬೇಕಾಗುತ್ತದೆ. ಹೀಗೆ ಕರ್ಮಸಿದ್ಧಾಂತವು ನೀತಿಯನ್ನು ಪ್ರತಿಪಾದಿಸುತ್ತಲೇ ಅದು ಜಾತಿಯನ್ನು ಗಟ್ಟಿಗೊಳಿಸುತ್ತಲೇ ಸಾಗಿದೆ. ನೀನು ಅಸ್ಪೃಶ್ಯನಾಗಿ ಹುಟ್ಟಿದ್ದರೆ ಅದು ನಿನ್ನ ಹಿಂದಿನ ಜನ್ಮದ ಪಾಪದ ಫಲ, ಅದು ನಿನ್ನ ಕರ್ಮ! ಏನೂ ಮಾಡಲು ಸಾಧ್ಯವಿಲ್ಲ. ಅಸ್ಪೃಶ್ಯರೂ ಕೂಡ ಅದನ್ನು ನಮ್ಮ ಹಣೇಬರಹ, ನಮ್ಮ ದೈವ ಎಂದು ಒಪ್ಪಿಕೊಳ್ಳುವಂತೆ ಪುರೋಹಿತರು ಮಾಡಿದರು. ವರ್ಣಾಶ್ರಮದ "ಶ್ರೇಣಿ ಪದ್ಧತಿಯಲ್ಲಿ ತಮಗಿಂತಲೂ ಕೆಳಗಿನ ಅಂತಸ್ತುಗಳಲ್ಲಲಿರುವ ಜನ ಸಮುದಾಯಗಳನ್ನು ನಿಯಂತ್ರಿಸಿ ತಮ್ಮ ಹತೋಟಿಗೆ ತೆಗೆದುಕೊಳ್ಳುವ ಸಾದನೆಗಳಾಗಿವೆ.'[೧೦೧]

---

೧೦೧. ಬಸವತತ್ವ ಪ್ರದೀಪಿಕೆ – ಕರ್ಮಸಿದ್ಧಾಂತ –ಡಿ.ಎಂ.ಧನ್ನೂರ ಹಾಗೂ ಸಿದ್ಧರಾಮ ಶರಣರು ಬೆಲ್ದಾಳ ಪು–೨೨.

ಶೂದ್ರಾದಿಗಳಿಗೆ ಕರ್ಮಗಳನ್ನು ಮಾಡುತ್ತಲೇ ಇರಬೇಕು, ಅವುಗಳ ಫಲ ಬಯಸಬೇಡ ಎಂದು ಭವದ್ಗೀತೆಯಲ್ಲಿ ಕೃಷ್ಣನ ಬಾಯಿಂದಲೇ ನುಡಿಸಿದರು –

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।
ಮಾ ಕರ್ಮಫಲಹೇತು ರ್ಭೂಃ ಮಾ ತೇ ಸಂಗೋಸ್ತ್ವ ಕರ್ಮಣಿ ॥[೧೦೨]

ಕರ್ಮ ಮಾಡುವುದರಲ್ಲಿಯೇ ನಿನಗೆ ಅಧಿಕಾರ. ಕರ್ಮಫಲದಲ್ಲಿ ಆಸಕ್ತಿ ಬೇಡ. ಸಕಾಮಭಾವದಿಂದ ಕರ್ಮವನ್ನು ಮಾಡಬೇಡ. ಕರ್ಮಗಳನ್ನು ಬಿಟ್ಟು ಬಿಡಬೇಕೆಂಬ ಆಗ್ರಹವೂ ಬೇಡ.

ಪುನರ್‌ಜನ್ಮವೆಂಬುದೊಂದು ಇದೆ. ಈ ಜನ್ಮದಲ್ಲಿ ನಿನಗೆ ಸಿಗಲಾರದ ಸೌಲಭ್ಯಗಳು ಮುಂದಿನ ಜನ್ಮದಲ್ಲಿ ಸಿಗುತ್ತವೆ ಎಂದು ಆಶೆ ಹಚ್ಚಿದರು.

ವಾಂಸಾಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹಣಾತಿ ನರೋಪರಾಣಿ।
ತಥಾ ಶರೀರಾಣಿ ವಿಹಾಯ ಜೀರ್ಣಾ
ನ್ಯನ್ಯಾನಿ ಸಂಯಾತಿ ನವಾನಿ ದೇಹಿ ॥[೧೦೩]

ಮನುಷ್ಯನು ಜೀರ್ಣವಾದ ವಸ್ತ್ರಗಳನ್ನು ಕಳಚಿ ಬೇರೆ ಹೊಸ ವಸ್ತ್ರಗಳನ್ನು ಧರಿಸುವಂತೆ, ಶರೀರವು ಜೀರ್ಣವಾದ ಮೇಲೆ ಇದನ್ನು ತ್ಯಜಿಸಿ ಜೀವನು ಹೊಸ ಹೊಸ ದೇಹಗಳನ್ನು ಹೊಂದುತ್ತಾನೆ. ಹೀಗೆ ಇವರ ಕರ್ಮಸಿದ್ಧಾಂತದ ಕರ್ಮದ ಫಲವಾಗಿ 'ದಲಿತರು ದಾರಿದ್ರ್ಯ ರೇಖೆಗಿಂತ ತೀರ ಕೆಳಮಟ್ಟದ ಘೋರ ಜೀವನ ಬಾಳುತ್ತಿದ್ದಾರೆ! ಅವರಿಗೆ ವಾಸಕ್ಕೆ ಮನೆಯಿಲ್ಲ. ಬೇಸಾಯಕ್ಕೆ ಹೊಲವಿಲ್ಲ. ದುಡಿಯಲು ಸಮಾಜದಲ್ಲಿ ಅವಕಾಶವಿಲ್ಲ. ಶಿಕ್ಷಣದ ಗಂಧವಂತೂ ಮೊದಲಿಗೇ ಇಲ್ಲ. ತಾವು ಉಳಿದವರಿಗಿಂತ ಕೀಳು ಎಂಬ ಮಾನಸಿಕ ರೋಗದಿಂದ ನರಳುತ್ತಿದ್ದಾರೆ! ಜಾತಿಯ ಬಂಧನದಲ್ಲಿ ಬಿಗಿಯಲ್ಪಟ್ಟ ಇವರಿಗೆ – ಉಳಿದಿರುವುದೆಂದರೆ ಎಲ್ಲೆಲ್ಲಿಯೂ ಬರೀ ನಿರಾಶೆ ! ಹತಾಶೆ ! ಬಡತನದ ಬವಣೆ, ಹಸಿವೆಯ ತಾಪ, ಹೃದಯದ ನೋವು ಯಾರಿಗೆ ಹೇಳಬೇಕು? ಹಸಿವೆ ತಾಳದೆ ಕಸ ಮುಸುರೆ ಬಳೆಯುತ್ತಾರೆ! ಹಳಸಿದ ಅನ್ನ ತಿನ್ನುತ್ತಾರೆ, ಹೊಟ್ಟೆಗಾಗಿ ಭಿಕ್ಷೆ ಬೇಡುತ್ತಾರೆ, ಸಹೋದರಿಯರ ಶೀಲ ಮಾರುತ್ತಾರೆ.... ಹಿಂದುಗಳು ಆರಾಧಿಸುವ ವೈದಿಕ ಧರ್ಮ ತನ್ನ ತುತ್ತ ತುದಿಯಲ್ಲಿದ್ದಾಗ ದಲಿತರು ಘೋರವಾದ ನರಕಯಾತನೆಗಳಲ್ಲಿ ಕೊಳೆಯುತ್ತಿದ್ದರು. ಅವರ ಮೇಲೆ ಅನೇಕ ನಿರ್ಬಂಧಗಳನ್ನು ಹೇರಲಾಗಿತ್ತು. ದಲಿತರು ಇಂಥ ಕರಾಳ ಕ್ರೂರ ಯಾತನೆಗಳನ್ನು ಅನುಭವಿಸುವುದು ಅದು ಅವರ ಪೂರ್ವಜನ್ಮದ, ಕರ್ಮದ ಫಲ ಎಂದು ಹಿಂದೂಧರ್ಮ ಹೇಳುತ್ತದೆ. ಹಿಂದಿನ ಜನ್ಮದಲ್ಲಿ ಇವರು ಮಾಡಿದ ಪಾಪಕ್ಕೆ ನರಕದಲ್ಲಿ ಯಾವ ಶಿಕ್ಷೆಯೂ ಸಾಲದಾದಾಗ, ಅಂಥವರನ್ನು ಆ ದೇವರು

೧೦೨. ಭಗವದ್ಗೀತೆ – ಅಧ್ಯಾಯ –೨ ಶ್ಲೋಕ –೪೭.
೧೦೩. –ಅದೆ– ಅಧ್ಯಾಯ –೨ ಶ್ಲೋಕ –೨೨.

ಭೂಲೋಕದಲ್ಲಿ ದಲಿತರನ್ನಾಗಿ ಹುಟ್ಟಸುತ್ತಾನೆ ಎಂದು ಅವರು (ಪುರೋಹಿತರು) ಸಾಧಿಸುತ್ತಾರೆ![೧೦೪]

ಬುದ್ಧಿವಂತ ಮಾನವರು ಮಾಡಿರುವ ಈ ಸಾಮಾಜಿಕ ಕಟ್ಟು ಪಾಡುಗಳು, ಜಾತಿ–ವ್ಯವಸ್ಥೆ, ದಾರಿದ್ರ್ಯ–ಬಡತನ ಎಲ್ಲವನ್ನೂ ದೇವರ ಮೇಲೆ ಹಾಕಿ, ದೇವರೇ ಮಾಡಿದ್ದಾನೆ, ಅವನೇ ನಿಮ್ಮ ನಿಮ್ಮ ಪೂರ್ವಜನ್ಮದ ಕರ್ಮದ ಫಲವಾಗಿ ಈ ಪುನರ್‌ಜನ್ಮದಲ್ಲಿ ನಿಮಗೆ ಹೀಗೆ ಹುಟ್ಟಿಸಿದ್ದಾನೆ ಎಂದು ಸಾಧಿಸಿರುವುದು ಸೂರ್ಯಪ್ರಕಾಶದಷ್ಟು ನಿಚ್ಚಳವಾಗಿವೆ.

ಅಂತೆಯೇ ೧೨ ನೆಯ ಶತಮಾನದಲ್ಲಿ ಬಸವಣ್ಣನವರು ಇದನ್ನು ಖಂಡಿಸಿ, ನಿರಾಕರಿಸಿದರು–

ಸುಖ ಬಂದಡೆ ಪುಣ್ಯದ ಫಲವೆನ್ನೆನು.
ದುಃಖ ಬಂದಡೆ ಪಾಪದ ಫಲವೆನ್ನೆನು.
ನೀ ಮಾಡಿದಡೆ ಆಯಿತ್ತೆಂದೆನ್ನೆನು.
ಕರ್ಮಕ್ಕೆ ಕತೃವೆ ಕಡೆಯೆಂದೆನ್ನೆನು.
ಉದಾಸೀನ ವಿಡಿದು ಶರಣೆನ್ನೆನು.
ಕೂಡಲಸಂಗಮದೇವಾ.[೧೦೫]

ಸುಖ –ದುಃಖಗಳು ನಮ್ಮ ಹಣೆಬರಹ, ನಮ್ಮ ದೈವದಾಗ ಇದ್ದಾಂಗ ಆಗಲಿ, ಇದು ಅನುಭವಿಸುವುದು ನಮ್ಮ ಕರ್ಮ, ವಿಧಿ ಇಟ್ಟಾಂಗ ಇದ್ದೀವಿ ಎಂದು ಮನುಷ್ಯನನ್ನು ನಿರಾಶವಾದದ ಕೂಪಕ್ಕೆ ತಳ್ಳಿ, ಪ್ರಯತ್ನವಾದವನ್ನು ಹೊಸಕಿ ಹಾಕಿದವು ಈ ಕರ್ಮಸಿದ್ಧಾಂತ ಹಾಗೂ ಪುನರ್ ಜನ್ಮ ಸಿದ್ಧಾಂತಗಳು. 'ಕರ್ಮವಾದವು ಅನೇಕ ಸಂದರ್ಭಗಳಲ್ಲಿ ಪುರುಷಶಕ್ತಿಯನ್ನೇ ಹಿಂದಕ್ಕೆ ತಳ್ಳುವ ನಿರಾಶವಾದವಾಗಿ ಸಮಾಜದಲ್ಲಿ ಅಸಮತೆಯನ್ನುಂಟು ಮಾಡುವ ಸಾಧನವಾಗಿತ್ತು. ಎಲ್ಲವೂ ನಮ್ಮ ಹಿಂದಿನ ಕರ್ಮದಂತೆ ನಡೆಯುತ್ತವೆ. ನಮ್ಮ ಕೈಯಲ್ಲಿ ಏನಿದೆ? ಎಂಬ ನಿರಾಶವಾದ ಒಂದು ಕಡೆ; ಅವರವರ ಕರ್ಮಗಳಿಗನುಸಾರವಾಗಿ ಮನುಷ್ಯ ಉತ್ತಮನಾಗಿ, ಶ್ರೀಮಂತನಾಗಿ, ಬಡವನಾಗಿ ಹುಟ್ಟುತ್ತಾನೆ, ಅದನ್ನು ಆತನು ಅನುಭವಿಸಲೇಬೇಕು ಎಂಬ ದೈವವಾದ ಇನ್ನೊಂದು ಕಡೆ;[೧೦೬]

ಅಂತೆಯೇ ವಚನಕಾರ ಕುಮಾರ ಕಕ್ಕಯ್ಯನವರು ತಮ್ಮ ವಚನಗಳಲ್ಲಿ ಈ ಕರ್ಮಸಿದ್ಧಾಂತ – ಪೂರ್ವಜನ್ಮ –ಪುನರ್‌ಜನ್ಮಗಳನ್ನು ಖಂಡಿಸುತ್ತಾರೆ –

ಹೊಳೆ ಹಳ್ಳ ಬೇಕು, ನೆರೆ ತೊರೆ ಬೇಡ.
ಭೂಮಿ ಸೀಮಿಬೇಕು, ಗಾಳಿ ಬಿಸಿಲು ಬೇಡ,

---

೧೦೪. ಮೂಕನ ಭಾಷಣ –ಬಿ.ಎಸ್. ಪೋಳ ಪು–೧೦೨–೧೦೩
೧೦೫. ಬಸವಣ್ಣನವರ ವಚನ ಸಂಪುಟ – ಸಂ॥ ಡಾ.ಎಂ. ಎಂ. ಕಲಬುರ್ಗಿ ವ–೬೯೫.
೧೦೬. ಶರಣರ ಅನುಭಾವ ಸಾಹಿತ್ಯ – ಡಾ॥ ಎಚ್. ತಿಪ್ಪೇರುದ್ರಸ್ವಾಮಿ ಪು–೧೫೬

ಮಳೆ ಬೆಳೆ ಬೇಕು, ಗುಡುಗು ಸಿಡಿಲು ಬೇಡ.
ಸುಖ ಸಂಪತ್ತು ಬೇಕು, ಕಷ್ಟ ಕಾರ್ಪಣ್ಯಬೇಡ.
ಬೇಡಾದವುಗಳನ್ನು ಮೂಢರ ಮೇಲೆ ಹೇರುವುದಕ್ಕಾಗಿಯೇ
ಪೂರ್ವಜನ್ಮದ. ಕರ್ಮಸಿದ್ಧಾಂತ ಕಲ್ಪಿಸಲಾಯಿತೆಂದ
ಕುಮಾರ ಕಕ್ಕಯ್ಯ.[೧೦೭]

ಧರ್ಮಾಧರ್ಮಾತ್ಕಂ ಕರ್ಮ ತಚ್ಚ ತ್ರಿವಿಧಮರ್ಥತಃ ।
ಜಾತ್ಯಾಯುರ್ಭೋಗಂ ಯೇನ ನಾಮಿಶ್ರಂ ಪಶ್ಚತೆಕ್ವಚಿತ್ ॥
ಸುಖ ಸಂಪತ್ತು ಜ್ಞಾನ ಮೇಲ್ಜಾತಿ ಪುಣ್ಯದ ಫಲವಂತೆ !
ದುಃಖ ದಾರಿದ್ರ್ಯ ಅಜ್ಞಾನ ಕೆಳಜಾತಿ ಪಾಪದ ಫಲವಂತೆ!
ಸ್ವರ್ಗ ನರಕ ಪೂರ್ವಜನ್ಮ ಪುನರ್‌ಜನ್ಮ ಕರ್ಮದ ಫಲವಂತೆ !
ಪಾಖಂಡಿಗಳು ಸೃಷ್ಟಿಸಿದ ಖೊಟ್ಟಿ ಸೃಷ್ಟಿಯೆಂದ
ಕುಮಾರ ಕಕ್ಕಯ್ಯ[೧೦೮]

ಈ ರೀತಿಯಾಗಿ ಪುರೋಹಿತಶಾಹಿ ಪಾಖಂಡಿಗಳು ತಮ್ಮ ಸ್ವಾರ್ಥಕ್ಕಾಗಿ, ತಮ್ಮ ಸುಖ–ಭೋಗಕ್ಕಾಗಿ, ದೀನ–ದಲಿತ–ಅಸ್ಪೃಶ್ಯ–ಶೂದ್ರರ ಮೇಲೆ ಪೂರ್ವಜನ್ಮ – ಪುನರ್‌ಜನ್ಮಗಳ ಕರ್ಮಸಿದ್ಧಾಂತವನ್ನು ಒತ್ತಾಯಪೂರ್ವಕ ಹೇರಿ, ಅವುಗಳಿಗೆ ಶಾಸ್ತ್ರ–ಸ್ಮೃತಿಗಳಲ್ಲಿ ಆಧಾರಗಳನ್ನು ಸೃಷ್ಟಿಸಿ, ಶತ ಶತಮಾನಗಳ ವರೆಗೆ, ನಿರಂತವಾಗಿ ಶೋಷಣೆ ಮಾಡುತ್ತಲೇ ಬಂದರು.

'ಆತ್ಮ ಅಮರ, ದೇಹ ನಶ್ವರ' ಎಂದು ಮಿಥ್ಯಾ ಸಿದ್ಧಾಂತ ಪ್ರತಿಪಾದಿಸಿ ಆತ್ಮಕ್ಕೆ ನಾಶವಿಲ್ಲ, ಸಾವಿಲ್ಲ ಎಂದು ಇನ್ನೊಂದು ವಾದವನ್ನು ಹೇರಿದರು.

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ॥
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥[೧೦೯]

'ಈ ಆತ್ಮವನ್ನು ಆಯುಧಗಳು ತುಂಡು ಮಾಡುವದಿಲ್ಲ, ಬೆಂಕಿಯು ಸುಡುವದಿಲ್ಲ, ನೀರು ನೆನೆಸುವದಿಲ್ಲ, ಗಾಳಿಯು ಒಣಗಿಸುವದಿಲ್ಲ' ಎಂದು ಶಾಸ್ತ್ರ ಬರೆದರು. ಶಸ್ತ್ರಾಸ್ತ್ರಗಳಿಂದ ಗಾಯಾಳುವಾಗಿ ನರಳುತ್ತಾ, ಬೆಂಕಿಯಲ್ಲಿ ಸುಟ್ಟುಕೊಂಡು ಯಮಯಾತನೆ ಪಡುತ್ತಾ, ನೀರಿನಲ್ಲಿ ನೆನೆದು ಚಳಿಯಿಂದ ನಡಗುತ್ತಾ, ಗಾಳಿಯಲ್ಲಿ ಒಣಗಿ ಪರಿತಪಿಸುತ್ತಾ ಒದ್ದಾಡುವವನು ಯಾರು? ಎಂಬುದನ್ನು ಮಾತ್ರ – ಹೇಳುವದಿಲ್ಲ. ಕಾಯ ಕಷ್ಟಮಾಡಿ ಪರಿಶ್ರಮ ಪಡುವವರ ನೋವು–ಯಾತನೆಗಳು ಈ 'ಆತ್ಮ ಅಮರ' ವೆಂದು ಹೇಳುವವರಿಗೆ ಅರ್ಥವಾದರೂ ಹೇಗಾದೀತು! ಅಂತೆಯೇ ಕುಮಾರ ಕಕ್ಕಯ್ಯನವರು ಪ್ರಶ್ನಿಸುತ್ತಾರೆ–

---

೧೦೭. ಕುಮಾರ ಕಕ್ಕಯ್ಯನ ವಚನಗಳು ಪು–೪೬ ವ–೧೭೫.
೧೦೮. – ಅದೇ – ಪು–೬೭ ವ–೨೫೯
೧೦೯. ಭಗವದ್ಗೀತೆ :ಅಧ್ಯಾಯ –೨ ಶ್ಲೋಕ ೨೩.

ಆತ್ಮ ಅಮರವಿದ್ದರೆ ನಮ್ಮ ಸರಾಸರಿ
ಜನಸಂಖ್ಯೆ ಎಂದೆಂದಿಗೂ ಒಂದೇಯಿರಬೇಕಿತ್ತು !
ಅರವತ್ತು ವರುಷಗಳಾಚೆ ಇದ್ದ ಮೂವತ್ತು ಕೋಟಿ
ಇಂದು ತೋಂಬತ್ತುಕೋಟಿ ಅದು ಹೇಗಾಯಿತು ?
ಅರವತ್ತು ವರುಷಗಳಲಿ ಈ ಅರವತ್ತು ಕೋಟಿ.
ಹೆಚ್ಚಿನ ಆತ್ಮಗಳು ಬಂದವೆಲ್ಲಿಂದ ?
ಬಲ್ಲವರು ಪೇಳೆಂದ ಕುಮಾರ ಕಕ್ಕಯ್ಯ.[೧೧೦]

ಇಂತಹ ಕಪೋಲ ಕಲ್ಪಿತ ಕರ್ಮಸಿದ್ಧಾಂತ, ಪೂರ್ವಜನ್ಮ –ಪುನರ್‌ಜನ್ಮ, ಸಾವು–ಮೋಕ್ಷ, ಸ್ವರ್ಗ–ನರಕ ಇವುಗಳ ಕುರಿತು ಚಿಂತಿ ಮಾಡುವದನ್ನು ಕೈಬಿಟ್ಟು, ಈಗಿರುವ ಮಾನವ ಜನ್ಮದ ಬಗ್ಗೆ ಚಿಂತನೆ ಮಾಡಬೇಕು. ಈ ಜನ್ಮವನ್ನು ಒಳ್ಳೆಯರೀತಿಯಿಂದ ಸದುಪಯೋಗ ಪಡಿಸಿಕೊಳ್ಳಬೇಕು ಎಂದು ತಿಳಿ ಹೇಳುತ್ತಾರೆ.

ಬ್ರಹ್ಮ ಸತ್ಯ ಜಗನ್ಮಿಥ್ಯಾಯೆಂದು ಹೇಳುವವರು,
ಇಹದ ಬದುಕೆಲ್ಲವೂ ಪರದ ಸಿದ್ಧತೆಗಾಗೆನ್ನುವವರು,
ಯೋಗ ಸಮಾಧಿಗಳಲ್ಲಿ ವೇಳೆಯ ಕಳೆಯುವವರು
ಸ್ವರ್ಗ ನರಕ ಸಾಕ್ಷ ಮೋಕ್ಷ ನಂಬುವವರು
ಹಿಂದಿನ ಮುಂದಿನ ಜನ್ಮಕ್ಕಾಗಿ ಚಿಂತಿಸುವವರು
ಇಹದ ಜನ್ಮ ಕಳೆದುಕೊಳ್ಳುವರೆಂದ
ಕುಮಾರ ಕಕ್ಕಯ್ಯ.[೧೧೧]

ಈ ಸತ್ಯವನ್ನು ಅರಿತುಕೊಳ್ಳಬೇಕು. ಈ ಪ್ರಪಂಚದಲ್ಲಿ 'ಇರುವುದೊಂದೇ ಲೋಕ, ಮತ್ತೊಂದು ಲೋಕವಿಲ್ಲ. ನಮಗೆ ಏನೇನು ಬೇಕೋ ಅದೆಲ್ಲವೂ ಇಲ್ಲಿಯೇ ಸಿಕ್ಕುತ್ತದೆ. ಇಂದ್ರಿಯ ಸುಖ ಬೇಕೆನ್ನುವವರಿಗೆ ಇಂದ್ರಿಯ ಸುಖ ಮತ್ತು ಅದರಿಂದ ಉಂಟಾಗುವ ಸಂಸಾರ ಬಂಧನ ಇಲ್ಲೇ ಸಿಕ್ಕುವಂತೆ, ಮೋಕ್ಷ ಬೇಕೆನ್ನುವವರಿಗೆ ಮೋಕ್ಷ ಇಲ್ಲಿಯೇ, ಈ ಜೀವನದಲ್ಲಿಯೇ ಸಿಕ್ಕುತ್ತದೆ. ಮೋಕ್ಷವನ್ನು ಪಡೆಯುವದೆಂದರೆ, ಈ ಪ್ರಪಂಚದಿಂದ (ಸಂಸಾರದಿಂದ) ತಪ್ಪಿಸಿಕೊಂಡು ಮತ್ತೊಂದು ಲೋಕಕ್ಕೆ ಹೋಗುವದಲ್ಲ'[೧೧೨] ಮತ್ತೊಂದು ಲೋಕಕ್ಕೆ ಸತ್ತಬಳಿಕ ಹೋಗುತ್ತೇನೆ ಎನ್ನುವವರು ಈ ಜನ್ಮವನ್ನು ಕಳೆದುಕೊಳ್ಳುವರು ಎಂದು ಕುಮಾರ ಕಕ್ಕಯ್ಯ ಎಚ್ಚರಿಸುತ್ತಾರೆ.

**vi) ಧಾರ್ಮಿಕ – ಮತಾಂತರ :**

ಮಾನವನಿಗೆ ಜಾತಿ ಹುಟ್ಟಿನಿಂದ ಬರುತ್ತದೆ, ಧರ್ಮ ಸಂಸ್ಕಾರದಿಂದ ಬರುತ್ತದೆ. 'ಜನ್ಮನಾ ಜಾಯತೇ ಶೂದ್ರ, ಸಂಸ್ಕಾರಾತ್ ದ್ವಿಜಮುಚ್ಯತೆ' ಎಂಬ ಮಾತಿನಲ್ಲಿಯೂ

೧೧೦. ಕುಮಾರ ಕಕ್ಕಯ್ಯನ ವಚನಗಳು ಪು–೨೦, ವ–೭೬.
೧೧೧. – ಅದೇ – ಪು–೩೧ ವ–೧೧೯.
೧೧೨. ವಚನಗಳಲ್ಲಿ ತತ್ವ ಮೀಮಾಂಸೆ – ಡಾ॥ ಎನ್. ಜಿ. ಮಹಾದೇವಪ್ಪ ಪು–೨೭೫

ಇದೇ ಅರ್ಥವಿದೆ. ಹಾಗಾದರೆ ಈ ಸಂಸ್ಕಾರವನ್ನು ಎಲ್ಲರಿಗೂ ನೀಡಿ ಎಲ್ಲರನ್ನೂ ಧರ್ಮವಂತರನ್ನಾಗಿ ಮಾಡಿದ್ದರೆ ಭಾರತದಲ್ಲಿ ಜಾತಿವ್ಯವಸ್ಥೆಯೇ ಇರುತ್ತಿರಲಿಲ್ಲ. ಭಾರತದಲ್ಲಿ ಸನಾತನ ಧರ್ಮ, ಆರ್ಯಧರ್ಮ, ವೈದಿಕಧರ್ಮ, ಬ್ರಾಹ್ಮಣಧರ್ಮ, ಇತ್ತೀಚೆಗೆ ಹಿಂದೂ ಧರ್ಮ ಎಂದು ಕರೆಯಲ್ಪಡುವ ಧರ್ಮವು ವರ್ಣವ್ಯವಸ್ಥೆ ಹಾಗೂ ಜಾತಿಪದ್ಧತಿ ಹುಟ್ಟು ಹಾಕಿ, ಅದನ್ನು ಗಟ್ಟಿಗೊಳಿಸಿದ್ದರಿಂದಾಗಿ ಸಾವಿರಾರು ವರುಷಗಳಿಂದ ನಿಮ್ನ ಜಾತಿಗಳ ಜನ ತುಳಿತಕ್ಕೊಳಗಾಗಿ, ಶೋಷಣೆಗೊಳಗಾಗಿ ಧಾರ್ಮಿಕ ಸಂಸ್ಕಾರದಿಂದ ವಂಚಿತರಾಗಿ ಸ್ವಾತಂತ್ರ್ಯ, ಸಮಾನತೆ, ಸ್ವಾಭಿಮಾನ ಕಳೆದುಕೊಂಡರು. ಇವುಗಳಿಲ್ಲದ ಬಹುಸಂಖ್ಯಾತ ಜನರಲ್ಲಿ 'ನನ್ನ ದೇಶ, ನನ್ನ ರಾಷ್ಟ್ರ, ನನ್ನ ಧರ್ಮ ಎಂಬ ಅಭಿಮಾನವಾದರೂ ಉಂಟಾಗಲು ಸಾಧ್ಯವೇ?'

ಸುಮಾರು ಎರಡು ಸಾವಿರ ವರುಷಗಳ ಹಿಂದೆಯೇ ವರ್ಣಾಶ್ರಮ ಧರ್ಮ –ಸಮಾಜ ವ್ಯವಸ್ಥೆಯ ದಬ್ಬಾಳಿಕೆ, ಕ್ರೌರ್ಯ ಅಮಾನವೀಯ ವರ್ತನೆಗಳಿಂದ ರೋಸಿ ಹೋದ ಶೂದ್ರರು, ಅಸ್ಪೃಶ್ಯರು, ತುಳಿತಕ್ಕೊಳಗಾದವರು ಈ ಕರ್ಮಠ ಜಾತಿ–ಸಮಾಜ ಸಂಪ್ರದಾಯಗಳಿಂದ ಮುಕ್ತರಾಗಲು, ಗುಲಾಮಗಿರಿ–ದಾಸ್ಯದಿಂದ ಬಿಡುಗಡೆ ಹೊಂದಲು ಕಂಡುಕೊಂಡ, ಕಾಣಿಸಿದ ಒಂದೇ ಒಂದು ನೇರ ಮಾರ್ಗವೆಂದರೆ ತಮ್ಮನ್ನು ಸಾವಿರಾರು ವರುಷಗಳಿಂದ ಪಶುಗಳಿಗಿಂತಲೂ ಕೀಳಾಗಿ ಕಂಡಿದ್ದ ಹಿಂದೂ ಸನಾತನ ಧರ್ಮದಿಂದ ಮುಕ್ತರಾಗಿ, ಹೊಸ ಧರ್ಮ ಸಮಾಜಕ್ಕೆ ಸೇರುವುದು. ಅದನ್ನು ಇಂದಿನ ವರ್ಣವಾದಿಗಳು ಕರೆದ **'ಮತಾಂತರ'** ಎಂಬುದಾಗಿದೆ.

"ಮತಾಂತರ ಸಮಸ್ಯೆಗೆ ಈ ದೇಶದಲ್ಲಿರುವ ವರ್ಣವ್ಯವಸ್ಥೆ ಮೂಲಕಾರಣವಾಗಿದೆ. ಅಸ್ಪೃಶ್ಯತೆ ಆಚರಣೆಯಲ್ಲಿದೆ. ಧರ್ಮಗೌಣವಾಗಿದೆ. ಸ್ವಾತಂತ್ರ್ಯ ಬಂದು ೫೨ (ಇಂದಿಗೆ ೬೨) ವರುಷಗಳು ಸಂದರೂ ೫೦% ಕ್ಕೂ ಹೆಚ್ಚು ಅನಕ್ಷರಸ್ಥರಿದ್ದಾರೆ. ನಮಗೊಂದು ಸಂವಿಧಾನ ಇದೆ ಎಂಬ ಅರಿವಿರದ ಬುಡಕಟ್ಟು ಜನರು ಈಗಲೂ ಇದ್ದಾರೆ. ಮತಾಂತರಗೊಳ್ಳುತ್ತಿರುವ ಯಾರೂ ತಮ್ಮ ಧರ್ಮವನ್ನಾಗಲೀ ಅಥವಾ ಅನ್ಯಧರ್ಮಗಳನ್ನಾಗಲೀ ಅರಿತು ಅಲ್ಲಿಯ ಒಳಿತು ಕೆಡಕುಗಳನ್ನು ತಿಳಿದು ಮತಾಂತರಗೊಳ್ಳುವುದಿಲ್ಲ. ಮತಾಂತರಕ್ಕೆ ಮೂಲಕಾರಣ ಸಾಮಾಜಿಕ ವ್ಯವಸ್ಥೆ....ಅಸ್ಪೃಶ್ಯತೆಯ ಆಚರಣೆ ಈ ದೇಶದಲ್ಲಿ ಈಗಲೂ ಜೀವಂತವಾಗಿದೆ, ಕ್ರೂರವಾಗಿದೆ."[೧೧೩]

'ಮತಾಂತರ' ಇಂದು–ನಿನ್ನೆಯದಲ್ಲ. ಅದಕ್ಕೆ ಎರಡೂವರೆ –ಮೂರು ಸಾವಿರ ವರುಷಗಳ ಇತಿಹಾಸವಿದೆ. ಭಾರತದ ಮೂಲನಿವಾಸಿಗಳಾದ ದ್ರಾವಿಡರ ಮೇಲೆ ಆರ್ಯರು ದಾಳಿ ಮಾಡಿ, ಅವರ ಧರ್ಮ–ಸಂಸ್ಕೃತಿಯನ್ನು ಹತ್ತಿಕ್ಕಿ, ತಮ್ಮ ಧರ್ಮವನ್ನು, ಸಂಸ್ಕೃತಿಯನ್ನು ಒತ್ತಾಯವಾಗಿ ಅವರ ಮೇಲೆ ಹೇರಿದರು. ಒಪ್ಪಿಕೊಂಡವರು ದಸ್ಯುಗಳಾದರು, ಗುಲಾಮರಾದರು, ಶೂದ್ರರಾದರು. ಒಪ್ಪಿಕೊಳ್ಳದೇ ಹೋದವರು ಚಾತುರ್ವರ್ಣ ಧರ್ಮ–ಸಮಾಜ ವ್ಯವಸ್ಥೆಯಿಂದ ಬಹಿಷ್ಕೃತರಾಗಿ

---

೧೧೩. ಬ್ರಾಹ್ಮಣ್ಯದ ತಂತ್ರಗಳು – ಜಹೋನಾ ಪು–೧೦೫

ಅಸ್ಪೃಶ್ಯ–ದಲಿತರಾದರು. ತಮ್ಮ ಧರ್ಮದ ಸಮಾಜವನ್ನು ಒಪ್ಪಿಕೊಳ್ಳದವರನ್ನು 'ಆರ್ಯರು ಆದಿಕ್ಷತ್ರಿಯರನ್ನು ಅಸ್ಪೃಶ್ಯರನ್ನಾಗಿ ಮಾಡಿದರು[೧೧೪] ಆಗ ಆರ್ಯಧರ್ಮದ ಉದಯ ಭಾರತದಲ್ಲಿ ಪ್ರಾರಂಭವಾಯಿತು. ಈ ಚಾತುರ್ವರ್ಣ ಧರ್ಮ–ಸಮಾಜ ವ್ಯವಸ್ಥೆಯಲ್ಲಿ "ಬ್ರಾಹ್ಮಣರೆಂದು ಕರೆಯಲಾದ ಪುರೋಹಿತ ಶಾಹಿಯ ಉದಯವಾಯಿತು. ಅದರ ಜೊತೆಯೆ ಎಲ್ಲಾ ಮೌಢ್ಯಗಳು, ಸಮಾಜದ ವಿಚ್ಛಿದ್ರೀಕರಣ, ಕ್ರೂರ ಸಂಪ್ರದಾಯಗಳು, ನಿರ್ಜಿವ ಆಚರಣೆಗಳು ಬಂದವು. ಇವು ಎಲ್ಲಾ ದೇಶಗಳಲ್ಲಿಯೂ ಪುರೋಹಿತರಿಗೆ ಪ್ರಾಬಲ್ಯ ಒದಗಿಸಿವೆ. ಇವೇ ಅಂತಿಮವಾಗಿ ಭಾರತದ ಸ್ವಾತಂತ್ರ್ಯವನ್ನು ಹಾಳು ಮಾಡಲೂ ಹಿಂದೂ ಜನಾಂಗಗಳನ್ನು ಗುಲಾಮರನ್ನಾಗಿಸಲೂ ಕಾರಣವಾದವು"[೧೧೫]

ಇಂತಹ ಗುಲಾಮಗಿರಿ, ಅಸ್ಪೃಶ್ಯತೆಯ ಕಲಂಕ, ಬಡತನ–ದಾರಿದ್ರ್ಯದಿಂದ ಪಾರಾಗಲು ಒದಗಿ ಬಂದ ಮೊದಲ ಅವಕಾಶವೇ ಬೌದ್ಧ ಧರ್ಮ. 'ಮತಾಂತರ ಇಂದಿನದಲ್ಲ. ಬುದ್ಧನ ಕಾಲದಿಂದಲೂ ಇರುವಂಥದ್ದು'.[೧೧೬] ಯಾಕೆಂದರೆ ಸನಾತನ ವೈದಿಕ ಧರ್ಮದಲ್ಲಿ ಅಸ್ಪೃಶ್ಯರು ಶೂದ್ರರಿಗೆ ಧಾರ್ಮಿಕ ಸಂಸ್ಕಾರವಿರಲಿಲ್ಲ, ಸಾಮಾಜಿಕ ಸಮಾನತೆ, ಮನ್ನಣೆ ಇರಲಿಲ್ಲ. ಇದರಿಂದಾಗಿ ಲಕ್ಷಾಂತರ ಜನ ಬೌದ್ಧ ಧರ್ಮ ಸೇರಿ ಬುದ್ಧನ ಅನುಯಾಯಿಗಳಾದರು.

'ಬುದ್ಧಂ ಶರಣಮ್ ಗಚ್ಛಾಮಿ, ಧಮ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ' ಎಂದು ಬೌದ್ಧಧರ್ಮಕ್ಕೆ ಹಿಂದೂ ಧರ್ಮದಿಂದ ಮತಾಂತರಗೊಂಡರು.

ಅನಂತರ ೫೦೦ ವರುಷಗಳ ತರುವಾಯ ಕ್ರಿ.ಶ. ೧ನೇ ಶತಮಾನದಲ್ಲಿಯೇ ಕ್ರಿಶ್ಚಿಯನ್ ಧರ್ಮವು ಭಾರತವನ್ನು ಪ್ರವೇಶಿಸಿತು. 'ಪ್ರೇಮವೇ ದೇವರು, ನಿನ್ನ ನೆರೆ ಹೊರೆಯವರನ್ನು ಪ್ರೀತಿಸು, ಎಲ್ಲರೂ ದೇವರ ಮಕ್ಕಳು, ಜೀವ ಸೇವೆಯೇ ದೇವ ಸೇವೆ' ಎಂಬ ಕ್ರಿಸ್ತನ ಸಂದೇಶ ಹೊತ್ತು ಬಂದುದರಿಂದ ಈ ಧರ್ಮಕ್ಕೆ ಆಕರ್ಷಿತರಾಗಿ ಮತಾಂತರಗೊಂಡರು. "ಬ್ರಾಹ್ಮಣರ ಬಂಧನದಿಂದ ಪಾರಾಗಲು ಯತ್ನಿಸಿದ ಜನಸಾಮಾನ್ಯರು ಕ್ರೈಸ್ತಧರ್ಮ ಮುಂತಾದ ದೇಶದ ಒಳಗೆ ಇರುವ ವಿರೋಧದ ಧಾರ್ಮಿಕ ಹಾವಳಿಗೆ ಸಿಕ್ಕಿದರು"[೧೧೭] ಬ್ರಿಟೀಶರ ಆಡಳಿತದ ಕಾಲಕ್ಕೆ ಕ್ರಿಶ್ಚಿಯನ್ ಪಾದ್ರಿಗಳು ಶೈಕ್ಷಣಿಕ ಸೇವೆ–ವೈದ್ಯಕೀಯ ಸೇವೆಯ ಮೂಲಕ ಭಾರತದಾದ್ಯಂತ ಜನಸಾಮಾನ್ಯರನ್ನು –ಶೂದ್ರ ದಲಿತರನ್ನು ಸೆಳೆದರು, ಭಾರತದ ತುಂಬೆಲ್ಲಾ ಜನ ಲಕ್ಷ ಲಕ್ಷ ಸಂಖ್ಯೆಯಲ್ಲಿ ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದರು.

ಕ್ರಿ.ಶ. ೯ಹಾಗೂ ೧೦ನೆಯ ಶತಮಾನಗಳಲ್ಲಿ ಮಹಮ್ಮದೀಯರ ದಾಳಿಯಿಂದಾಗಿ ಭಾರತದ ರಾಜರು ಕ್ರಮೇಣ ಸೋಲುತ್ತಾ ಬಂದು, ಬಾದಶಹರ

---

೧೧೪. ಚಾತುರ್ವರ್ಣ ಧರ್ಮದರ್ಶನ –ಕುಮಾರ ಕಕ್ಕಯ್ಯ ಪೋಳ ಪು–೧೯೬.
೧೧೫. ಹಿಂದೂ ಸಾಮಾಜ್ಯಶಾಹಿಂ ಯ ಇತಿಹಾಸ – ಅನು: ಭಗವಾನ್ ಪು–೪೧.
೧೧೬. ಬ್ರಾಹ್ಮಣ್ಯದ ತಂತ್ರಗಳು – ಜಹೋನಾ ಪು–೨೨.
೧೧೭. ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು – ಸಂ॥ ಜ.ಹೊ.ನಾ. ಪು–೭೧.

ಆಳ್ವಿಕೆ ಪ್ರಾರಂಭವಾಯಿತು. ಭಾರತೀಯರೇ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡರು. "ಭರತಖಂಡದ ಮಹಮ್ಮದೀಯರಲ್ಲಿ ಅನೇಕರು ಏಕೆ ಮಹಮ್ಮದೀಯರಾಗಿರುವರು, ಬಲ ಪ್ರಯೋಗದಿಂದ ಅವರನ್ನು ಮುಸಲ್ಮಾನ ಮತಕ್ಕೆ ಸೇರಿಸಿದರು ಎನ್ನುವದು ಶುದ್ಧ ತಪ್ಪು. ಜಮೀನದಾರರ ಉಪಟಳದಿಂದ, ಪುರೋಹಿತರ ಹಿಂಸೆಯಿಂದ ತಪ್ಪಿಸಿಕೊಳ್ಳಬೇಕೆಂದು ಮುಸಲ್ಮಾನರಾದರು."[೧೧೮]

೧೨ ನೆಯ ಶತಮಾನದಲ್ಲಿ ಮಹಾಮಾನವತಾವಾದಿ, ಸಮತಾವಾದಿ, ದೀನ-ದಲಿತೋದ್ಧಾರಕ ಶರಣ, ಜಗಜ್ಯೋತಿ ಬಸವಣ್ಣನವರು ಜನಿಸಿಬಂದರು. ವರ್ಣಾಶ್ರಮ ಧರ್ಮ-ಸಮಾಜವನ್ನು 'ವರ್ಣಾನಾಂ ಕಿಂ ಪ್ರಯೋಜನಂ ?' ಎಂದು ಪ್ರಶ್ನಿಸಿ, ಸನಾತನ ಸಂಪ್ರದಾಯವಾದಿ ಕರ್ಮಠ ವೈದಿಕ ಧರ್ಮವನ್ನು ಧಿಕ್ಕರಿಸಿದರು. ಸ್ವತಃ ತಾವು ಬ್ರಾಹ್ಮಣ ಜನಾಂಗದಲ್ಲಿ ಜನಿಸಿದವರಾಗಿದ್ದರೂ ಕೂಡ, ಅದು ಸುಧಾರಣೆಯಾಗದಷ್ಟು ಕರ್ಮಠವಾಗಿರುವುದನ್ನು ಮನಗಂಡು 'ಏನಯ್ಯಾ ವಿಪ್ರರು? ನುಡಿದಂತೆ ನಡೆಯರು. ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ!' ಎಂದು ಪ್ರಶ್ನಿಸಿ, ಕರ್ಮಲತೆಯಂತಿರ್ದ, ಅಸಮಾನತೆಯ ಸಂಕೇತವಾಗಿದ್ದ ಜನಿವಾರವನ್ನು ಕಿತ್ತು ಬಿಸುಟು, ಮುಂದೆ ಸಮತೆ-ಸ್ವಾತಂತ್ರ್ಯ-ಬಂಧುತ್ವದ ಸಕಲಜೀವಾತ್ಮರಿಗೆ ಲೇಸನೆ ಬಯಸುವ, ಮಾನವ ಕುಲದ ಕಲ್ಯಾಣ ಸಾಧಿಸುವ, ವರ್ಣಾಶ್ರಮಭೇದವಿಲ್ಲದ ಸರ್ವತಂತ್ರ ಸ್ವತಂತ್ರವಾದ ಇಷ್ಟಲಿಂಗ ಉಪಾಸನೆಯ ಲಿಂಗಾಯತ ಧರ್ಮ-ಸಮಾಜ-ಸಂಸ್ಕೃತಿಯನ್ನು ಸ್ಥಾಪಿಸಿದರು. "ಲಿಂಗಾಯತ ಧರ್ಮವು ಅವೈದಿಕವಾದುದರಿಂದ ತನ್ನ ಬಾಗಿಲನ್ನು ಇತರರಿಗೂ ತೆರೆಯಿತು, ಅಥವಾ ಇತರರಿಗೂ ತೆರೆದು ಅವೈದಿಕವಾಯಿತು. ಬಸವಣ್ಣನವರು ಇಷ್ಟಲಿಂಗ ಪ್ರಧಾನ ಮಾಡುವ ಮೂಲಕ ವಿವಿಧ ಹಿಂದೂ ಜಾತಿಗಳಿಗೆ ಸೇರಿದವರನ್ನು ಲಿಂಗಾಯತರನ್ನಾಗಿ ಮಾಡಿದುದು ಸರ್ವವಿದತ."[೧೧೯] 'ಇವನಾರವ ಇವನಾರವ ಇವನಾರವನೆಂದೆನ್ನದೇ, ಇವನಮ್ಮವ ಇವನಮ್ಮವ ಇವನಮ್ಮವ'ನೆಂದು ಸರ್ವರನ್ನೂ ಬಸವಣ್ಣನವರು ಅಪ್ಪಿಕೊಂಡರು. ಇವರ ವಿಶಾಲ ಹೃದಯ-ಮಾನವೀಯ ಕಳಕಳಿ-ಲೋಹಚುಂಬಕ ವ್ಯಕ್ತಿತ್ವದಿಂದಾಗಿ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಹೊಲೆಯರ ಶಿವನಾಗಮಯ್ಯ, ಸಮಗಾರ ಹರಳಯ್ಯ, ಮಾದಾರ ಧೂಳಯ್ಯ, ಅಂಬಿಗ ಚೌಡಯ್ಯ, ಮಡಿವಾಳ ಮಾಚಯ್ಯ, ಕಿನ್ನರಿ ಬ್ರಮ್ಹಯ್ಯ, ಮೇದಾರ ಕೇತಯ್ಯ, ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ, ಹಡಪದ ಅಪ್ಪಣ್ಣ, ಕುರುಬಗೊಲ್ಲಾಳ, ಒಕ್ಕಲಿಗರ ಮುದ್ದಣ್ಣ, ತೆಲುಗು ಜೊಮ್ಮಣ್ಣ, ಆಯ್ದಕ್ಕಿ ಮಾರಯ್ಯ, ಲಕ್ಕಮ್ಮ ಸೂಳೆ ಸಂಕವ್ವೆ, ದೋಸೆಯ ಪಿಟ್ಟವ್ವೆ, ಹಡಪದ ಅಪ್ಪಣ್ಣ-ಲಿಂಗಮ್ಮ, ಅಮುಗೆದೇವಯ್ಯಾ, ರಾಯಮ್ಮ, ಉರಿಲಿಂಗದೇವ, ಉರಿಲಿಂಗಪೆದ್ದಿ, ಸಿದ್ಧರಾಮ, ಸತ್ಯಕ್ಕ, ಮುಕ್ತಾಯಕ್ಕ,

---

೧೧೮. ಸ್ವಾಮಿ ವಿವೇಕಾನಂದರ ಪತ್ರಮಾಲೆ - ಪು-೧೩೦.
೧೧೯. ಲಿಂಗಾಯತರು ಹಿಂದೂಗಳಲ್ಲ - ಡಾ॥ ಎನ್.ಜಿ. ಮಹಾದೇವಪ್ಪ ಪು-೩೨-೩೩.

ಬೊಂತಾದೇವಿ, ಅಕ್ಕಮಹಾದೇವಿ, ಕಲ್ಯಾಣಮ್ಮ, ಮಧುವರಸ ಮುಂತಾದ ಅಂತ್ಯಜ ಮೊದಲ್ಗೊಂಡು ವಿಪ್ರಕಡೆಯಾಗಿ ಸಮಾಜದ ಎಲ್ಲ ಸ್ತರಗಳ ಸ್ತ್ರೀ –ಪುರುಷರು ಬಸವಧರ್ಮದ ಅನುಯಾಯಿಗಳಾಗಿ ೭೭೦ ಜನ ಶರಣ–ಶರಣೆಯರಾದರು. ಬಸವಣ್ಣನವರು "ಕುಲ ಹದಿನೆಂಟು ಜಾತಿಯವರನ್ನು ತಮ್ಮ ವಿಶಾಲ ವಕ್ಷ (ಹೃದಯ) ದಲ್ಲಿ ಅಪ್ಪಿಕೊಂಡರು.......ಒಮ್ಮೆ ಅವರ ಪ್ರಭಾವಲಯದಲ್ಲಿ ಬಂದ ಮೇಲೆ ಪೂರ್ವಸಂಸ್ಕಾರದ ಬಿಡುಗಡೆ ಹೊಂದಿ ಶರಣರ ಸಾಲಿನಲ್ಲಿ ಸೇರಿಹೋದರು."[೨೨೦]

ಇಪ್ಪತ್ತನೆಯ ಶತಮಾನದಲ್ಲಿ ದಲಿತಸೂರ್ಯನಾಗಿ ಭಾರತದ ಸಮಾಜಾಕಾಶದಲ್ಲಿ ಉದಿಸಿಬಂದವರೇ ಡಾ॥ ಬಾಬಾಸಾಹೇಬ ಅಂಬೇಡ್ಕರರು. ಡಾ॥ ಅಂಬೇಡ್ಕರರು ಮಹಾರಾಷ್ಟ್ರದಲ್ಲಿ 'ಮಹಾರ್' ಎಂಬ ಅಸ್ಪೃಶ್ಯ ಜನಾಂಗದಲ್ಲಿ ಜನಿಸಿ, ದಲಿತರ ನೋವು–ಸಂಕಷ್ಟಗಳನ್ನು, ಉಚ್ಚವರ್ಣಿಯರ ದೌರ್ಜನ್ಯವನ್ನು ಸ್ವತಃ ಅನುಭವಿಸಿ, ತಾನು ಹುಟ್ಟಿಬಂದ ಹಿಂದೂ ಧರ್ಮ–ಸಮಾಜ–ಸಂಸ್ಕೃತಿಯನ್ನು ಆಳವಾಗಿ ಅಧ್ಯಯನ ಮಾಡಿದವರು. "ಹಿಂದೂ ಸಮಾಜ ವ್ಯವಸ್ಥೆಯು ಸಮಾನತೆಯ ಮೇಲೆ ನಿಂತಿಲ್ಲ. ಹಾಗಾದರೆ ಅದಕ್ಕೆ ಆಧಾರವಾಗಿರುವ ತತ್ವಗಳಾದರೂ ಯಾವವು? ಹಿಂದೂ ಸಾಮಾಜಿಕ ವ್ಯವಸ್ಥೆಯನ್ನು ಮೂರು ತತ್ವಗಳು ಪೋಷಿಸುತ್ತಲಿವೆ. ಇವುಗಳಲ್ಲಿ ಮೊದಲನೆಯದು ಮತ್ತು ತುಂಬಾ ಮುಖ್ಯವಾದದ್ದು **ವರ್ಗೀಕೃತ ಅಸಮಾನತೆಯ ತತ್ವ.** ಶ್ರೇಣಿಕೃತ ಅಸಮಾನತೆಯು ಮೂಲಭೂತವಾದ ತತ್ವ ಎಂಬ ವಿಷಯದಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲ. ನಾಲ್ಕು ವರ್ಣಗಳೂ ಬೇರೆ ಬೇರೆಯಾಗಿ ಸಮತಲ ಕ್ಷೇತ್ರದಲ್ಲಿ ಇಲ್ಲ, ಬದಲು ಲಂಬ ರೇಖೆಯಲ್ಲಿವೆ. ಅವು ಬೇರೆಯಾಗಿರುವದು ಮಾತ್ರವಲ್ಲ, ಅಸಮಾನ ಸ್ಥಾನ ಹೊಂದಿವೆ, ಒಂದರ ಮೇಲೆ ಇನ್ನೊಂದು ನಿಂತಿದೆ. ಮನುವಿನ ಯೋಜನೆಯ ಪ್ರಕಾರ ಬ್ರಾಹ್ಮಣನು ಈ ಶ್ರೇಣಿಯ ತುತ್ತ ತುದಿಯಲ್ಲಿದ್ದಾನೆ. ಅವನ ಕೆಳಗೆ ಕ್ಷತ್ರೀಯ, ಕ್ಷತ್ರೀಯನ ಕೆಳಗೆ ವೈಶ್ಯ, ವೈಶ್ಯನ ಕೆಳಗೆ ಶೂದ್ರ, ಶೂದ್ರನಿಗಿಂತ ಕೆಳಗೆ ಅತಿಶೂದ್ರ, ಅಥವಾ ಅಸ್ಪೃಶ್ಯ. ವರ್ಗಗಳ ಈ ಅವರೋಹಣ ಕ್ರಮವು ಕೇವಲ ರೂಢಿಯಿಂದ ಬಂದದ್ದಲ್ಲ. ಅದು ಅಧ್ಯಾತ್ಮಿಕ, ನೈತಿಕ ಹಾಗೂ ಶಾಸನಬದ್ಧವಾಗಿದೆ. ಈ ಶ್ರೇಣಿಕೃತ ಅಸಮಾನತೆಯ ತತ್ವದ ನಿಯಂತ್ರಣಕ್ಕೆ ಒಳಪಡದಿರುವ ಯಾವುದೇ ಜೀವನ ಕ್ಷೇತ್ರವಿಲ್ಲ."[೨೨೧]

"ಹಿಂದೂ ಸಮಾಜ ವ್ಯವಸ್ಥೆಗೆ ಆಧಾರವಾಗಿರುವ ಎರಡನೆಯ ತತ್ವವೆಂದರೆ ಪ್ರತಿಯೊಂದು ವರ್ಗಕ್ಕೂ ವೃತ್ತಿಗಳನ್ನು ನಿಗದಿಗೊಳಿಸಿ ಅವರು ವಂಶಪರಂಪರೆಯಾಗಿ ಅದೇ ವೃತ್ತಿಯನ್ನೇ ನಿರ್ವಹಿಸಿಕೊಂಡು ಹೋಗುತ್ತಿರಬೇಕೆಂದು ಕಡ್ಡಾಯ ಪಡಿಸಿರುವುದು".[೨೨೨]

---

೨೨೦. ದೀನಬಂಧು ಬಸವಣ್ಣ –ಕೋ. ಚೆನ್ನಬಸಪ್ಪ ಪು–೭೯.
೨೨೧. ಡಾ॥ ಬಾಬಾಸಾಹೇಬ ಅಂಬೇಡ್ಕರರ ಬರಹಗಳು ಮತ್ತು ಭಾಷಣಗಳು – ಸಂಪುಟ–೩ ಕರ್ನಾಟಕ ಸರ್ಕಾರ ೧೯೯೪. ಪು – ೧೫೭
೨೨೨. ಅದೇ ಪುಟ– ೧೬೪.

"ಹಿಂದೂ ಸಮಾಜ ವ್ಯವಸ್ಥೆಗೆ ಆಧಾರವಾಗಿರುವ ಮೂರನೆಯ ತತ್ವ ವಿವಿಧವರ್ಗಗಳಲ್ಲಿ ಅವುಗಳಿಗೆ ಸೇರಿದ ಜನರನ್ನು ನಿಗದಿಗೊಳಿಸಿರುವುದು."[೧೨೩]

ಈ ರೀತಿಯಾಗಿ ಹಿಂದೂ ವರ್ಣಾಶ್ರಮ ಧರ್ಮ–ಸಮಾಜವನ್ನು ಅದರ ಧರ್ಮಗ್ರಂಥಗಳಾದ ವೇದ–ಆಗಮ, ಶ್ರುತಿ–ಸ್ಮೃತಿ, ಇತಿಹಾಸ–ಪುರಾಣ, ಷಟ್‌ದರ್ಶನ, ಜಾಗತಿಕ ಧರ್ಮ–ಮತ–ಪಂಥ ಎಲ್ಲವನ್ನೂ ಅಧ್ಯಯನ ಮಾಡಿದ ಅಂಬೇಡ್ಕರರು ಏಕದಂ ಬೌದ್ಧ ಧರ್ಮವನ್ನು ಸ್ವೀಕರಿಸಲಿಲ್ಲ. ಸ್ವೀಕಾರಕ್ಕೆ ಮುನ್ನ ಹಲವು ವರ್ಷಗಳಿಂದ ಮುನ್ನೆಚ್ಚರಿಕೆ ನೀಡುತ್ತಿದ್ದರು. ೧೯೨೭ ರಿಂದ ಪ್ರತಿಯೊಂದು ಸಭೆ ಸಮ್ಮೇಳನಗಳಲ್ಲಿ ಮತಾಂತರ ವಿಷಯವನ್ನು ಪ್ರಸ್ತಾಪಿಸುತ್ತಿದ್ರು. ಹಿಂದೂ ಧರ್ಮವನ್ನು ಬಿಟ್ಟು ಬೇರಾವುದಾದರೂ ಧರ್ಮವನ್ನಪ್ಪಿಕೊಳ್ಳುವಂತೆ ೧೯೨೯ ನೇ ಸಂವತ್ಸರದ ಮೇ ೨೯ ನೆಯ ದಿನದಂದು ಜಲಗಾಂವನಲ್ಲಿ ನಡೆದ ಸಮ್ಮೇಲನ ನಿರ್ಣಯವೊಂದು ಅಂಗೀಕರಿಸಿತು.

"೧೯೩೬ ನೆಯ ಮೇ ತಿಂಗಳಲ್ಲಿ ಮುಂಬಯಿಯ ದಾದರ್ ಪ್ರದೇಶದಲ್ಲಿ ಸೇರಿದ ಮಹರ್ ಸಮ್ಮೇಳನದಲ್ಲಿ ತಮ್ಮ ಜನಾಂಗದವರಿಗೆ ಕೊಟ್ಟ ಕರೆ– 'ಹಿಂದೂ ದೇವತೆಗಳನ್ನು ಪೂಜಿಸಬೇಡಿ, ಹಿಂದೂ ಹಬ್ಬಗಳನ್ನು ಆಚರಿಸಬೇಡಿ, ಹಿಂದೂ ದೇವಾಲಯಗಳಿಗೆ ಹೋಗಬೇಡಿ. ಮತಾಂತರದಿಂದ ಸಾಮಾಜಿಕ ದಾಸ್ಯ ತೊಲಗುತ್ತದೆ. ಆರ್ಥಿಕ ಪ್ರಗತಿ ಕೈಗೊಡುತ್ತದೆ ; ಎಂಬುದೇ ಅವರ ಸಂದೇಶ"

"ಖಂಡಿತವಾಗಿಯೂ ತಾವು ಹಿಂದೂವಾಗಿ ಸಾಯುವದಿಲ್ಲವೆಂದು ಘಂಟಾಘೋಷಿವಾಗಿ ಸಾರಿದರು."

"ಕೊನೆಗೂ ಅಂಬೇಡ್ಕರ ಜೀವನದ ಸುಮುಹೂರ್ತ, ತಮ್ಮ ಸಂಕಲ್ಪವನ್ನು ಪೂರೈಸಿಕೊಳ್ಳಬಹುದಾದ ಮಂಗಳ ಕ್ಷಣ ಸನ್ನಿಹಿತವಾಗುತ್ತದೆ. ೧೯೫೬ ನೆಯ ಅಕ್ಟೋಬರ ೧೪ ರಂದು, ವಿಜಯದಶಮಿಯ ದಿನ ಬೆಳ್ಳಿಗ್ಗೆ ೯ ರಿಂದ ೧೧ ಗಂಟೆಯೊಳಗೆ ನಾಗಪುರದಲ್ಲಿ ದೀಕ್ಷಾ ಸಮಾರಂಭ ನಡೆಯುತ್ತದೆ. ೮೩ ವರುಷದ ಕುಶಿನಾರ ನಗರದ ಚಂದ್ರಮಣಿ ಯತಿಗಳು ಇತರ ನಾಲ್ವರು ಭಿಕ್ಕುಗಳೊಂದಿಗೆ 'ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ' ಎಂಬ ಮಂತ್ರಗಳನ್ನು ಅಂಬೇಡ್ಕರ ದಂಪತಿಗಳಿಗೆ ಬೋಧಿಸಿದರು. ಆಗ ಅವರು– 'ಕ್ರೌರ್ಯ, ಅಸಮಾನತೆಗಳಿಗೆ ಹೆಸರಾಗಿದ್ದ ನನ್ನ ಪ್ರಾಚೀನ ಹಿಂದೂ ಮತದಿಂದ ಮುಕ್ತನಾಗಿದ್ದೇನೆ, ನನಗೆ ಪುನರ್‌ಜನ್ಮವೊದಗಿದೆ..... ಇನ್ನು ಮುಂದೆ ಹಿಂದೂ ಧರ್ಮದ ಸೋಂಕು ನನಗೆ ತಟ್ಟಲಾರದು' ಎನ್ನುವಾಗ ಉಸಿರು ಕಟ್ಟಿದಂತಾಗಿ ಅವರ ಕಣ್ಣಲ್ಲಿ ನೀರು ಸ್ರವಿಸಿದವು. ಅಂದು ಮತ್ತು ಮಾರನೆಯದಿನ ಅವರು ಲಕ್ಷ ಲಕ್ಷ ಜನರಿಗೆ ಬೌದ್ಧ ಧರ್ಮದ ದೀಕ್ಷೆ ನೀಡಿದರು."[೧೨೪]

"ಸವರ್ಣಿಯರ ತಲೆಯೊಳಗಿನ ಜಾತಿವಿಕಾರ ಅಷ್ಟು ಸುಲಭವಾಗಿ ಮಾಯವಾಗುವಂಥದ್ದಲ್ಲ. ಹೀಗಾಗಿ ಧಾರ್ಮಿಕ ಮತಾಂತರ ಮೂಲಕವೇ ಅಸ್ಪೃಶ್ಯತೆಗೆ

೧೨೩. – ಅದೇ – ಪುಟ– ೧೬೬

೧೨೪. ಬಸವೇಶ್ವರ –ಅಂಬೇಡ್ಕರ ಡಾ॥ ದೇ.ಜ.ಗೌ. ಪು–೭೪–೮೨.

ಅಂತಿಮ ಪರಿಹಾರ ದೊರೆಯಬಲ್ಲದು ಎಂಬ ಬಗೆಗಿನ ಚಿಂತನೆ ಈಗ ಹೆಚ್ಚು ವ್ಯಾಪಕವಾಗತೊಡಗಿದೆ."[೧೨೫]

ಡಾ॥ ಬಾಬಾಸಾಹೇಬ ಅಂಬೇಡ್ಕರ ಅವರಂತೆಯೇ ಕರ್ನಾಟಕದಲ್ಲಿ ೧೯೨೯ ರಲ್ಲಿ ಜನಿಸಿದ ಭೀಮರಾವ ಸಾಯಬಣ್ಣ ಪೋಳ ಅವರು ಅಸ್ಪೃಶ್ಯ ದಲಿತ ಜನಾಂಗವಾದ 'ಘೋರ' ಜಾತಿಯಲ್ಲಿ ಹುಟ್ಟಿ, ದಲಿತರ ನೋವು–ತೊಂದರೆಗಳನ್ನು ಅನುಭವಿಸಿ, ಆಳವಾದ ಅಧ್ಯಯನಗೈದು, ತಾವೂ ಸಹ " ವರ್ಣಾಶ್ರಮದ ಸವರ್ಣಿಯ ಹಿಂದೂ ಧರ್ಮದಲ್ಲಿ ಬಾಳಲಾರೆ ಎಂದು ನಿರ್ಧರಿಸಿ ೧೯೮೦ ರಲ್ಲಿ ಬಸವಧರ್ಮದ. ಇಷ್ಟಲಿಂಗ ದೀಕ್ಷೆ ಪಡೆದು (ವಿಜಾಪುರದ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರಿಂದ) ಶರಣರಾಗಿ, ನಾಡಿನ ಅಸ್ಪೃಶ್ಯರಿಗೆ–ದಲಿತರಿಗೆ ಬಸವಧರ್ಮ ನಮ್ಮ ಸೊತ್ತು ಎಂದು ಘೋಷಿಸಿ, ಜಗಜ್ಯೋತಿ ಬಸವಣ್ಣನವರನ್ನು ತೋರಿಸಿದರು, ಬಸವಬೆಳಗಿನಲ್ಲಿ ನಡೆದು ಬೆಳಕಾದರು."[೧೨೬]

ಡಾ॥ ಭೀಮರಾವ ಅಂಬೇಡ್ಕರ ಅವರು ಎಲ್ಲ ಧರ್ಮಗಳನ್ನು ಅಧ್ಯಯನ ಮಾಡಿ ಕೊನೆಗೆ ಬೌದ್ಧ ಧರ್ಮ ಸ್ವೀಕರಿಸಿದಂತೆಯೇ ಶ್ರೀ ಭೀಮರಾವ ಪೋಳ ಅವರು ಎಲ್ಲ ಧರ್ಮಗಳನ್ನು ಪರಿಶೀಲನೆ ಮಾಡಿ ಕೊನೆಗೆ ಬಸವಧರ್ಮ (ಲಿಂಗಾಯತ) ಸ್ವೀಕರಿಸಿದರು. ಸ್ವತಃ ಅವರು ತಮ್ಮ ವಚನದಲ್ಲಿ ಹೇಳುತ್ತಾರೆ. –

ಎಲ್ಲ ಧರ್ಮ ಸ್ಥಾಪಕರನ್ನು ತೂಗಿದರೆ
ಬಸವಣ್ಣನೇ ಹೆಚ್ಚು ತೂಗುವನು.
ಎಲ್ಲ ಧರ್ಮಗ್ರಂಥಗಳನ್ನು ತೂಗಿದರೆ.
ವಚನ ಗ್ರಂಥವೇ ಹೆಚ್ಚು ತೂಗುವುದು.
ಜಗದಲಿ ಬಸವಧರ್ಮಕ್ಕೆ ಸಾಟಿಯೇ
ಇಲ್ಲೆಂದ ಕುಮಾರ ಕಕ್ಕಯ್ಯ.[೧೨೭]

ಬಸವಧರ್ಮದ ವಿಶೇಷತೆಯನ್ನು ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ಇನ್ನೊಂದು ವಚನದಲ್ಲಿ ಅರ್ಥಪೂರ್ಣವಾಗಿ ಹೇಳುತ್ತಾರೆ –

ಕರಿಯರು ಬೇರೆ ಬಿಳಿಯರು ಬೇರೆ ಎಂಬ ವರ್ಣಭೇದವಿಲ್ಲ.
ಸ್ತ್ರೀಯರು ಬೇರೆ ಪುರುಷರು ಬೇರೆ ಎಂಬ ಲಿಂಗಭೇದವಿಲ್ಲ.
ಧನಿಕರು ಬೇರೆ ಬಡವರು ಬೇರೆ ಎಂಬ ವರ್ಗಭೇದವಿಲ್ಲ.
ಭಕ್ತರು ಬೇರೆ ಗುರುಗಳು ಬೇರೆ ಎಂಬ ವಂಶಭೇದವಿಲ್ಲ.
ಹೆಚ್ಚು–ಕಡಿಮೆ, ಮೇಲು–ಕೀಳು ಎಂಬ ವೃತ್ತಿಗಳ ಭೇದವಿಲ್ಲ.

---

೧೨೫. ವಿಚಾರಸಾಹಿತ್ಯ : ಬಾಬಾಸಾಹೇಬ ಜ್ಞಾನೋದಯ ಮತ್ತು ಅನಂತರ: ಡಾ॥ ನಟರಾಜ ಹುಳಿಯಾರ ಪು–೭೮

೧೨೬. ಕುಮಾರ ಕಕ್ಕಯ್ಯ ಪೋಳ ಪ್ರೊ. ಸಿದ್ದಣ್ಣ ಲಂಗೋಟಿ ಪು–೪೬–೪೭.

೧೨೭. ಕುಮಾರ ಕಕ್ಕಯ್ಯ ವಚನಗಳು – ಪು–೨೦೩ ವ–೭೮೨.

ಬಸವಧರ್ಮದಲ್ಲಿ ಒಳಜಾತಿ ಹೊರಜಾತಿಗಳಿಲ್ಲೆಂದ
ಕುಮಾರ ಕಕ್ಕಯ್ಯ.[೧೨೮]

ಬಸವಧರ್ಮದಲ್ಲಿ ವರ್ಣಭೇದ, ವರ್ಗಭೇದ, ಲಿಂಗಭೇದಗಳಿಲ್ಲ. ಭಕ್ತರು –ಗುರುಗಳು ಎಂಬ ವಂಶಭೇದವಿಲ್ಲ. ಹೆಚ್ಚು ಕಡಿಮೆ ಎಂದು ಕಾಯಕಗಳ ಭೇದವಿಲ್ಲ. ಒಳಸುತ್ತಿನ, ಇನ್ನೂ ಒಳಸುತ್ತಿನ, ಹೊರಸುತ್ತಿನ, ಇನ್ನೂ ಹೊರಸುತ್ತಿನ ಲಿಂಗಾಯತರು ಎಂಬ ಜಾತಿಭೇದಗಳಂತೂ ಮುನ್ನವೇ ಇಲ್ಲ.ಕುಮಾರ ಕಕ್ಕಯ್ಯ ಪೋಳ ಅವರು ಶಿವ, ಇಂದ್ರ, ವಿಷ್ಣು, ಕೃಷ್ಣ ಮುಂತಾದವರು ಮಾಡಿರುವ ಸಾಧನೆಗಳೊಂದಿಗೆ ಬಸವಣ್ಣನವರ ಸಾಧನೆಯನ್ನು ಹೋಲಿಸಿ, ಬಸವಣ್ಣನವರ ಶ್ರೇಷ್ಠತೆಯನ್ನು ಮನಗಾಣಿಸಿಕೊಡುತ್ತಾರೆ–

ಶಿವ ಮಾಡಿದ ಉನ್ಮತ್ತರ ಉಚ್ಚಾಟ.
ಇಂದ್ರ ಮಾಡಿದ ದ್ರಾವಿಡರ ನಿರ್ನಾಮ.
ವಿಷ್ಣು ಮಾಡಿದ ವೈರಿಗಳ ಸಂಹಾರ.
ಕೃಷ್ಣ ಮಾಡಿದ ದುಷ್ಟರ ಮರ್ದನ.
ಆದರೆ, ದುಷ್ಟರನು ಶಿಷ್ಟರನ್ನಾಗಿ ಮಾಡಿದ,
ಪತಿತರನ್ನು ಪಾವನರನ್ನಾಗಿ ಮಾಡಿದ
ಬಸವಣ್ಣ, ಇವರೆಲ್ಲರಿಗಿಂತ ಬಹು ಶ್ರೇಷ್ಠನೆಂದ
ಕುಮಾರ ಕಕ್ಕಯ್ಯ.[೧೨೯]

ಡಾ॥ ಬಿ.ಆರ್. ಅಂಬೇಡ್ಕರ ಅವರಿಗೆ 'ಬುದ್ಧ ಶರಣಂ ಗಚ್ಛಾಮಿ' ಎಂಬುದು ದೀನ–ದಲಿತೋದ್ಧಾರದ ಮಂತ್ರವಾದರೆ, ಶ್ರೀ ಬಿ.ಎಸ್. ಪೋಳ ಅವರಿಗೆ 'ಬಸವ ಬಸವ ಎಂಬುದೇ ಮಂತ್ರ ತಂತ್ರ, ಬಸವ ಬಸವಾ ಎಂಬುದೇ ಸಾಕ್ಷ–ಮೋಕ್ಷವಾಗಿತ್ತು.

'ಸಹಸ್ರಾರು ವರುಷಗಳಿಂದ ಶೈವ–ವೈದಿಕ ಪುರೋಹಿತಶಾಹಿಗಳ ಕರ್ಮಠ ಧರ್ಮ ದೇವಾಲಯ ಸಂಸ್ಕೃತಿಗಳ ಕಪಿಮುಷ್ಟಿಯಿಂದ ದೀನ ದಲಿತರು, ಶೂದ್ರರು, ಪಂಚಮರು, ಸ್ತ್ರೀಯರು, ಬಡವರೆಲ್ಲರನ್ನೂ ಪಾರು ಮಾಡಿ ಸಮತೆಯ ಕಾಯಕ ಜೀವಿಗಳನ್ನು ಉದ್ಧರಿಸಿದ ಬಸವಣ್ಣನವರು ಈ ದೇಶದ ಇತಿಹಾಸದಲ್ಲಿಯೇ ಅದ್ಭುತ ಕ್ರಾಂತಿ ಮಾಡಿದರು.'[೧೩೦]

ಇಂತಹ ಕ್ರಾಂತಿಕಾರಿ ಧರ್ಮ–ಸಮಾಜದ ಅನುಯಾಯಿಗಳಾಗಿಯೂ ಬಹಳ ಜನರು ತಮ್ಮ ಪೂರ್ವಾಶ್ರಮದ ಚಾತುರ್ವರ್ಣ ಧರ್ಮ–ಸಮಾಜಗಳ ಜಾತಿ, ಮೂಢ ಸಂಪ್ರದಾಯಗಳನ್ನು ಬಿಡಲಾರದೇ ಒದ್ದಾಡುತ್ತಿರುತ್ತಾರೆ. ಅಂತಹ ಮತಾಂತರ ಮಾಡಿದವರನ್ನು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ವಿಡಂಬಿಸುತ್ತಾರೆ–

---

೧೨೮. ಕುಮಾರ ಕಕ್ಕಯ್ಯ ವಚನಗಳು – ಪು–೨೦೦ ವ– ೭೭೧
೧೨೯. ಕುಮಾರ ಕಕ್ಕಯ್ಯ ವಚನಗಳು – ಪು–೧೯೯ ವ– ೭೬೬
೧೩೦. ದಲಿತಸಾಹಿತಿ ಕುಮಾರ ಕಕ್ಕಯ್ಯ ಪೋಳ – ಡಾ॥ ಎಚ್.ಟಿ. ಪೋತೆ ಪು–೨೯.

ಜಾತಿ ಬೇಡ ಬೇಡ ಬೇಡೆಂದು
ಗೋಗರೆದರೂ, ಜಾತಿ ನಮ್ಮನ್ನು ಬಿಡದು.
ಧರ್ಮ ಸಾಕು ಸಾಕು ಸಾಕೆಂದು
ಮತಾಂತರವಾದರೂ, ಆ ಧರ್ಮ ನಮ್ಮಿಂದ ತೊಲಗದು.
ಸಂಪ್ರದಾಯ ಒಲ್ಲೆ ಒಲ್ಲೆ ಒಲ್ಲೆಂದು
ಸ್ಮಶಾನಕ್ಹೋದರೂ ಸಂಪ್ರದಾಯ
ನಮ್ಮ ಬೆನ್ನು ಬಿಡದೆಂದ
ಕುಮಾರ ಕಕ್ಕಯ್ಯ.[೧೩೧]

ಒಟ್ಟಿನಲ್ಲಿ ಕುಮಾರ ಕಕ್ಕಯ್ಯನವರ ವಚನಗಳಲ್ಲಿ ಭಾರತದ ಸನಾತನ ಚಾತುರ್‌ವರ್ಣ ಧರ್ಮ, ದೇವರುಗಳು, ದೇವಾಲಯ, ಪೂಜಾರಿ, ಪುರೋಹಿತರು, ಧರ್ಮಗುರುಗಳು, ಮೂಢನಂಬಿಕೆ, ಕಂದಾಚಾರ, ಕರ್ಮಸಿದ್ಧಾಂತ, ಪುನರ್ಜನ್ಮ ಸಿದ್ಧಾಂತ, ಪಾಪ–ಪುಣ್ಯ, ಸ್ವರ್ಗ–ನರಕ, ಪುರೋಹಿತಶಾಹಿಯ ಶೋಷಣೆ, ದಲಿತರ ಆಕ್ರೋಶ, ಮತಾಂತರ ಮುಂತಾದವುಗಳ ಕುರಿತು ಸ್ವತಂತ್ರವಾದ ಚಿಂತನೆಗಳು ಮೂಡಿಬಂದಿರುವುದನ್ನು ಕಾಣುತ್ತೇವೆ. ಧರ್ಮ–ಸಮಾಜ ಕುರಿತಾದ ತೀಕ್ಷ್ಣವಾದ ವಿಮರ್ಶಾತ್ಮಕ ದೃಷ್ಟಿಕೋನ ಕಂಡುಬರುತ್ತದೆ.

೧೩೧. ಕುಮಾರ ಕಕ್ಕಯ್ಯನ ವಚನಗಳೂ – ಪು–೩೧೪ ವ–೧೨೧೪.

## (ಇ.) ಕುಮಾರ ಕಕ್ಕಯ್ಯನ ವಚನಗಳಲ್ಲಿ ರಾಜಕೀಯ ವಿಚಾರಗಳು :

### (i) ರಾಜಕೀಯ ರಂಗ ಹಾಗೂ ರಾಜಕಾರಣಿಗಳು :

ಭಾರತವು ಸಾವಿರಾರು ವರುಷಗಳಿಂದ ರಾಜ-ಮಹಾರಾಜರ, ಅರಸ-ಮಾಂಡಲೀಕರ ಆಡಳಿತಕ್ಕೊಳಪಟ್ಟು, ಕೊನೆಗೆ ಬ್ರಿಟೀಶರ ಆಡಳಿತಕ್ಕೆ ಒಳಗಾಯಿತು. ಬ್ರಿಟೀಶರ ವಿರುದ್ಧ ಟಿಪ್ಪು ಸುಲ್ತಾನ, ಕಿತ್ತೂರು ರಾಣಿ ಚೆನ್ನಮ್ಮ, ಝಾನ್ಸಿರಾಣೀ ಲಕ್ಷ್ಮಿಬಾಯಿ ಮುಂತಾದವರು ಹೋರಾಡಿ ವೀರ ಮರಣಹೊಂದಿದರು. ೧೯ ನೇ ಶತಮಾನದ ಪ್ರಾರಂಭದಿಂದಲೇ ಸುರುವಾದ ಈ ಸ್ವಾತಂತ್ರ್ಯ ಹೋರಾಟವು ಲೋಕಮಾನ್ಯಟಿಳಕರು, ಗೋಪಾಲಕೃಷ್ಣ ಗೋಖಲೆ, ನೇತಾಜಿ ಸುಭಾಸಚಂದ್ರ ಬೋಸ, ಮಹಾತ್ಮಾಗಾಂಧೀಜಿ ಮುಂತಾದ ನೇತಾರರ ಮುಖಂಡತ್ವದಲ್ಲಿ ಮುಂದುವರೆದು, ಕೊನೆಗೆ ರಾಷ್ಟ್ರಪಿತ ಗಾಂಧೀಜಿಯವರ ಹಾಗೂ ಲಕ್ಷಾಂತರ ಸ್ವಾತಂತ್ರ್ಯ ಸೇನಾನಿಗಳ ತ್ಯಾಗ-ಬಲಿದಾನಗಳ ಫಲವಾಗಿ ೧೯೪೭ ಅಗಸ್ಟ ೧೫ ರಂದು ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ಲಭಿಸಿತು. ಭಾರತವು ಸರ್ವತಂತ್ರ ಸ್ವತಂತ್ರ ಸಾರ್ವಭೌಮ ಗಣರಾಜ್ಯವಾಗಿ, ಪ್ರಜಾರಾಜ್ಯ ದೇಶವೆನಿಸಿತು. ಡಾ॥ ಬಾಬಾಸಾಹೇಬ ಅಂಬೇಡ್ಕರ ಅಧ್ಯಕ್ಷತೆಯಲ್ಲಿ ಅನೇಕ ಕಾನೂನು ಪಂಡಿತರ ಚಿಂತನೆಗಳ ಮೂಲಕ ರಚಿಸಲ್ಪಟ್ಟ ಕರಡು ಸಂವಿಧಾನವನ್ನು ಕೂಲಂಕಷವಾಗಿ ಪರಿಶೀಲಿಸಿ, ಅಂತಿಮವಾಗಿ ೧೯೫೦ ಜನೇವರಿ ೨೬ ರಂದು ಜಾರಿಗೆ ತರಲಾಯಿತು.

'ಸಂವಿಧಾನ ಶಿಲ್ಪಿ' ಎಂದು ಸಮಗ್ರ ಭಾರತೀಯರಿಂದ ಗೌರವಿಸಲ್ಪಡುತ್ತಿರುವ ಡಾ॥ ಬಿ.ಆರ್. ಅಂಬೇಡ್ಕರ ಅವರು ನಮ್ಮ ದೇಶದ ಲಿಖಿತ ಸಂವಿಧಾನ ರಚನೆಯಲ್ಲಿ ಪ್ರಮುಖಪಾತ್ರ ವಹಿಸಿದವರು. 'ಸಂವಿಧಾನ ರಚನೆಗೆ ಅವರ ಕೊಡುಗೆ ಅಪಾರ. ಅವರು ಶೋಷಿತ ವರ್ಗದವರ, ದಲಿತವರ್ಗದವರ ಹರಿಕಾರರಾಗಿ, ಆರಾಧ್ಯ ದೇವರಾಗಿ, ದೇಶದ ಸ್ವಾತಂತ್ರ್ಯ ಹೋರಾಟಗಾರರಾಗಿ, ಕಾನೂನು ಪಂಡಿತರಾಗಿ, ರಾಜಕಾರಣಿಯಾಗಿ, ಆರ್ಥಿಕ ಚಿಂತಕರಾಗಿ, ಮಹಾ ಮೇಧಾವಿಯಾಗಿ ಮತ್ತು ದಲಿತವರ್ಗದವರ ಹಿತಚಿಂತಕರಾಗಿ ದುಡಿದ ಮಹಾನವ್ಯಕ್ತಿಯಾಗಿದ್ದರು..... ಸಂವಿಧಾನ ರಚನಾ ಪ್ರಕ್ರಿಯೆಯಲ್ಲಿ ಸಕ್ರೀಯ ಭಾಗವಹಿಸಿ ದೀನ ದಲಿತರಿಗೆ ವಿಶೇಷ ಹಕ್ಕುಗಳನ್ನು ಮತ್ತು ಸೌಲಭ್ಯಗಳನ್ನು ದೊರಕಿಸಿಕೊಡುವದರಲ್ಲಿ ಅವರು ಯಶಸ್ವಿಯಾದರು.[೧]

ಭಾರತದ ಸಂವಿಧಾನದ ಪ್ರಸ್ತಾವನೆಯು (Preamble) ಹೀಗಿದೆ – 'ಭಾರತದ ಸಂವಿಧಾನವು ಕೆಲವು ನಿರ್ದಿಷ್ಟವಾದ ಹಾಗೂ ಉನ್ನತವಾದ ಧ್ಯೇಯೋದ್ಧೇಶಗಳನ್ನು ಹೊಂದಿದೆ. ಅವು ಸಮಗ್ರ ಸಂವಿಧಾನಕ್ಕೆ ಮಾರ್ಗದರ್ಶಕ ಸೂತ್ರಗಳಾಗಿವೆ. ಅವುಗಳನ್ನು ಪ್ರಸ್ತಾವನೆಯಲ್ಲಿ ಕೊಡಲಾಗಿದೆ. ಅವು ಇಂತಿವೆ – "ನಾವು ಭಾರತದ ಪ್ರಜೆಗಳು, ಭಾರತವನ್ನು ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ, ಪ್ರಜಾಸತ್ತಾತ್ಮಕ ಗಣರಾಜ್ಯವನ್ನಾಗಿ ಮಾಡಲು ಮತ್ತು ಅದರ ಎಲ್ಲ ನಾಗರಿಕರೂ –ಸಾಮಾಜಿಕ,

---

೧. ಭಾರತದ ಸಂವಿಧಾನ – ಪ್ರೊ. ಕೆ.ಡಿ. ಬಸವಾ ಅಧ್ಯಾಯ –೧ ಪು–೯.

ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನು ; ವಿಚಾರ, ಅಭಿವ್ಯಕ್ತಿ, ವಿಶ್ವಾಸ, ಧರ್ಮ, ಶ್ರದ್ಧೆ ಮತ್ತು ಉಪಾಸನೆಗಳಲ್ಲಿ ಸ್ವಾತಂತ್ರ್ಯವನ್ನು ; ಸ್ಥಾನ ಮಾನ ಮತ್ತು ಅವಕಾಶಗಳಲ್ಲಿ ಸಮಾನತೆಯನ್ನು ಒದಗಿಸಿಕೊಡಲು ; ಮತ್ತು ವ್ಯಕ್ತಿಯ ಗೌರವವನ್ನು ಹಾಗೂ ರಾಷ್ಟ್ರದ ಐಕ್ಯತೆ ಮತ್ತು ಸಮಗ್ರತೆಯನ್ನು ರಕ್ಷಿಸಿ, ಎಲ್ಲರಲ್ಲೂ ಭ್ರಾತೃತ್ವ ಭಾವನೆಯನ್ನು ಬೆಳೆಸಲು ದೃಢಸಂಕಲ್ಪ ಮಾಡಿದ್ದೇವೆ, ಮತ್ತು ನಮ್ಮ ಈ ಸಂವಿಧಾನ ಸಭೆಯಲ್ಲಿ, ಇಂದು ಅಂದರೆ ೧೯೪೯ ರ ನವೆಂಬರ ೨೬ ರಂದು ಈ ಸಂವಿಧಾನವನ್ನು ಅಂಗೀಕರಿಸಿದ್ದೇವೆ, ಶಾಸನವನ್ನಾಗಿ ಮಾಡಿದ್ದೇವೆ ಮತ್ತು ನಮಗಾಗಿಯೇ ಸಂವಿಧಾನವನ್ನು ಕೊಟ್ಟಿದ್ದೇವೆ."[೨]

೧೯೫೦ ಜನೇವರಿ ೨೬ ರಂದು ಅಧಿಕೃತವಾಗಿ ಜಾರಿಗೆ ಬಂದ ನಮ್ಮ ದೇಶದ ಸಂವಿಧಾನವು, ಇಂದು ಕೆಲವು ತಿದ್ದುಪಡಿಗಳ ಮೂಲಕ ಒಟ್ಟು ೩೯೫ ವಿಧಿಗಳು (Articles) ಮತ್ತು ೧೨ ಅನುಸೂಚಿಗಳನ್ನು (Schedules) ಒಳಗೊಂಡಿದೆ.

ನಮ್ಮ ದೇಶದ ಸಂವಿಧಾನವು ಅತ್ಯುತ್ತಮವಾದ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಒದಗಿಸಿಕೊಟ್ಟಿದೆ. (Fundamental Rights and Duties).

**ಮೂಲಭೂತ ಹಕ್ಕುಗಳು :**

(೧) ಸಮಾನತೆಯ ಹಕ್ಕು (೨) ಸ್ವಾತಂತ್ರ್ಯದ ಹಕ್ಕು (೩) ಶೋಷಣೆಯ ವಿರುದ್ಧ ಹಕ್ಕು (೪) ಧಾರ್ಮಿಕ ಸ್ವಾತಂತ್ರ್ಯದ ಹಕ್ಕು (೫) ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸ್ವಾತಂತ್ರ್ಯದ ಹಕ್ಕು (೬) ಆಸ್ತಿಯ ಹಕ್ಕು (೭) ಸಂವಿಧಾನಾತ್ಮಕ ಪರಿಹಾರಗಳ ಹಕ್ಕು.

**ಮೂಲಭೂತ ಕರ್ತವ್ಯಗಳು :**

(೧) ಭಾರತದ ಸಂವಿಧಾನ, ರಾಷ್ಟ್ರಧ್ವಜ ಮತ್ತು ರಾಷ್ಟ್ರಗೀತೆಯನ್ನು ಗೌರವಿಸುವುದು.
(೨) ಸ್ವಾತಂತ್ರ್ಯ ಸಮರದ ಉದಾತ್ತ ಧ್ಯೇಯಗಳನ್ನು ಪಾಲಿಸುವುದು.
೩) ಭಾರತದ ಸಾರ್ವಭೌಮ ಅಧಿಕಾರ, ಐಕ್ಯತೆ ಮತ್ತು ಸಮಗ್ರತೆ ಕಾಪಾಡುವುದು.
೪) ರಾಷ್ಟ್ರವನ್ನು ರಕ್ಷಿಸುವದು ಮತ್ತು ರಾಷ್ಟಸೇವೆಗೆ ಬದ್ಧರಾಗಿರುವದು.
೫) ಸಹೋದರ ಭಾವನೆಯನ್ನು ಬೆಳೆಸಿಕೊಳ್ಳುವುದು ಮತ್ತು ಸ್ತ್ರೀಯರ ಗೌರವಕ್ಕೆ ಧಕ್ಕೆಯಾಗದಂತೆ ನೋಡಿಕೊಳ್ಳುವುದು.
೬) ಭಾರತದ ವಿಶಿಷ್ಟ ಸಂಸ್ಕೃತಿಯನ್ನು ಕಾಪಾಡುವದು.
೭) ನೈಸರ್ಗಿಕ ಪರಿಸರವನ್ನು ರಕ್ಷಿಸುವದು, ಪಶುಪಕ್ಷಿಗಳ ಬಗ್ಗೆ ಅನುಕಂಪ ಇಟ್ಟುಕೊಳ್ಳುವುದು.
೮) ವೈಜ್ಞಾನಿಕ ಮನೋಭಾವನೆಯನ್ನು ಮತ್ತು ಮಾನವೀಯತೆಯನ್ನು ಬೆಳೆಸಿಕೊಳ್ಳುವುದು.

---

೨. ಭಾರತದ ಸಂವಿಧಾನ –ಪ್ರೊ. ಕೆ.ಡಿ. ಬಸವಾ ಅಧ್ಯಾಯ –೨, ಪು–೧ ಮತ್ತು ೨.

೯) ಸಾರ್ವಜನಿಕ ಆಸ್ತಿ ಪಾಸ್ತಿಗಳನ್ನು ರಕ್ಷಿಸುವದು ಮತ್ತು ಹಿಂಸಾಚಾರಗಳನ್ನು ಪೂರ್ತಿಯಾಗಿ ಬಿಟ್ಟು ಕೊಡುವುದು.
೧೦) ವೈಯಕ್ತಿಕ ಮತ್ತು ಸಾಮೂಹಿಕ ಚಟುವಟಿಕೆಗಳಲ್ಲಿ ಉನ್ನತಮಟ್ಟವನ್ನು ಸಾಧಿಸುವದು.

ಇವಲ್ಲದೇ, ನಮ್ಮ ದೇಶದಲ್ಲಿ ರಾಜಕೀಯ ಪ್ರಜಾಪ್ರಭುತ್ವದೊಂದಿಗೆ ಆರ್ಥಿಕ ಮತ್ತು ಸಾಮಾಜಿಕ ಪ್ರಜಾಪ್ರಭುತ್ವ ಸ್ಥಾಪಿಸಿ ದೇಶವನ್ನು ಕಲ್ಯಾಣರಾಜ್ಯವನ್ನಾಗಿಸುವ ಸಲುವಾಗಿ ೨೫ ನಿರ್ದೇಶಕ ತತ್ವಗಳನ್ನು ಸರಕಾರ ಆಡಳಿತ ನಡೆಸುವ ಸಲುವಾಗಿಯೇ ಸೂಚಿಸಲಾಗಿದೆ.[೩]

ಭಾರತದ ಸಂವಿಧಾನದ ಹಕ್ಕು, ಕರ್ತವ್ಯ, ನಿರ್ದೇಶನ ತತ್ವಗಳ ಬಹುತೇಕ ವಿಚಾರಗಳು ಬಸವಾದಿ ಶರಣರ ವಚನಗಳಲ್ಲಿ ಅಡಕವಾಗಿರುವುದನ್ನು ಇಂದು ಅನೇಕ ಪ್ರಾಜ್ಞರು, ಕಾನೂನು ಪಂಡಿತರು ಗುರುತಿಸಿದ್ದಾರೆ.

ಭಾರತದ ಸಂವಿಧಾನದಲ್ಲಿ ಹೇಳಿರುವಂತೆ ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಎಲ್ಲ ರಂಗಗಳಲ್ಲಿಯೂ ಭಾರತೀಯರು ಸಮಾನರಾಗಿಯೇ ಹಕ್ಕುಗಳನ್ನು ಹೊಂದಿದ್ದು, ಎಲ್ಲರೂ ತಮ್ಮ ಕರ್ತವ್ಯಗಳನ್ನು ಪಾಲಿಸಲೇಬೇಕು.

ಎಂಟು ನೂರು ವರುಷಗಳ ಹಿಂದೆ ಬಸವಣ್ಣನವರು ಹೇಳಿರುವ ವಿಚಾರಗಳು ಆಚರಣೆಯಲ್ಲಿ ಇಂದು ಒಂದೊಂದಾಗಿ ಬರತೊಡಗಿವೆ. ನಾವು ಪ್ರಜಾಪ್ರಭುತ್ವ ಮಾದರಿಯ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದೇವೆ.

ಪ್ರಜಾಪ್ರಭುತ್ವದ ಬಗ್ಗೆ ಅಮೇರಿಕ ದೇಶದ ಹಿಂದಿನ ಅಧ್ಯಕ್ಷರಾಗಿದ್ದ ಅಬ್ರಹಾಂ ಲಿಂಕನ್ ಅವರು ನೀಡಿದ ವ್ಯಾಖ್ಯೆ–ಪ್ರಜೆಗಳ, ಪ್ರಜೆಗಳಿಂದ ಮತ್ತು ಪ್ರಜೆಗಳಿಗಾಗಿ ಇರುವ ಸರಕಾರವೇ ಪ್ರಜಾಪ್ರಭುತ್ವವೆಂಬುದು. ಪ್ರೊ. ಜೆ.ಎಸ್. ಮಿಲ್ ಅವರು – ಯಾವ ಸರಕಾರದಲ್ಲಿ ಎಲ್ಲ ಜನಗಳಾಗಲಿ ಅಥವಾ ಅವರಲ್ಲಿ ಕೆಲವರಾಗಲಿ ಅವರೇ ಚುನಾಯಿಸಲ್ಪಟ್ಟ ಪ್ರತಿನಿಧಿಗಳಿಂದ ಆಡಳಿತವನ್ನು ನಡೆಸುವದೋ ಅದೇ ಪ್ರಜಾ ಸರಕಾರ, ಎಂದಿರುವರು. ಅತಿ ಶ್ರೇಷ್ಠ ಹಾಗೂ ಬುದ್ಧಿವಂತರ ಮುಂದಾಳತ್ವದಲ್ಲಿ ಎಲ್ಲರ ಪ್ರಗತಿಯು ಎಲ್ಲರ ಮುಖಾಂತರ ಆಗುವದೇ ಪ್ರಜಾಪ್ರಭುತ್ವ, ಎಂಬುದು ಮ್ಯಾಜೀನಿಯೆಂಬ ರಾಜ್ಯಶಾಸ್ತ್ರಜ್ಞರ ಹೇಳಿಕೆ"[೪]

ಪ್ರಜೆಗಳಿಂದ ಆರಿಸಲ್ಪಟ್ಟು, ಚುನಾಯಿತರಾಗಿ ದೇಶವನ್ನು, ರಾಜ್ಯವನ್ನು ಆಳುವ ಶಾಸಕರು, ಸಂಸದರು, ಮಂತ್ರಿ ಮಹೋದಯರು ಇಂದು ಬಹುತೇಕರು ಸ್ವಾರ್ಥ, ಅಧಿಕಾರದಾಹ, ಲಂಚ–ವಂಚನೆ, ಭ್ರಷ್ಟಾಚಾರಗಳಿಗೆ ಒಳಗಾಗಿ ದೇಶವನ್ನು ಅಧಃಪತನದತ್ತ ಒಯ್ಯುತ್ತಿರುವುದು ಕಾಣುತ್ತಿದ್ದೇವೆ. ಬಸವಣ್ಣನವರು ಅಂದು ನೀಡಿದ ಎಚ್ಚರಿಕೆ ಇಂದಿಗೂ ಅರ್ಥಪೂರ್ಣವಾಗಿರುವದನ್ನು ಗಮನಿಸಬೇಕು–

---

೩. ಭಾರತದ ಸಂವಿಧಾನ –ಅಧ್ಯಾಯ ೩, ಪುಟ–೬

೪. ಶರಣಸಂಸ್ಕೃತಿ ಮುಖಾಮುಖಿ– ಪ್ರಜಾಪ್ರಭುತ್ವ : ಸ್ತ್ರೀ ನೀತಿ –ಡಾ॥ ಚೆನ್ನಕ್ಕ ಪಾವಟೆ ಪು– ೧೮೨.

ಆನೆಯನೇರಿಕೊಂಡು ಹೋದಿರೇ ನೀವು,
ಕುದುರೆಯನೇರಿಕೊಂಡು ಹೋದಿರೇ ನೀವು,
ಕುಂಕುಮ ಕಸ್ತೂರಿಯ ಹೂಸಿಕೊಂಡು ಹೋದಿರೇ ಅಣ್ಣಾ!
ಸತ್ಯದ ನಿಲವನರಿಯದೆ ಹೋದಿರಲ್ಲಾ,
ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ!
ಅಹಂಕಾರವೆಂಬ ಸದಮದ ಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!
ನಮ್ಮ ಕೂಡಲಸಂಗಮದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ![೫]

ಅಂದು ರಾಜಸತ್ತೆ ಇದ್ದ ಕಾಲದಲ್ಲಿ ದೇಶ–ರಾಜ್ಯಗಳನ್ನಾಳುವವರು ಹಾಗಿದ್ದರೆ, ಇಂದು ಪ್ರಜಾಸತ್ತೆ ಇರುವ ಕಾಲದಲ್ಲಿ ಶಾಸಕರು, ಸಚಿವರುಗಳು ಹೀಗಿದ್ದಾರೆ. ಬಸವಣ್ಣನವರು ಕಲ್ಯಾಣ ಸಾಮ್ರಾಜ್ಯದ ಕಲಚೂರ್ಯ ಬಿಜ್ಜಳ ಚಕ್ರವರ್ತಿಯ ಪ್ರಧಾನಿಯಾಗಿದ್ದು ಬಾಳಿದ ರೀತಿ ಇಂದಿಗೂ ಆಶ್ಚರ್ಯವೆನಿಸುವಂತಿದ್ದರೂ ಸಹ ಆದರ್ಶವಾಗಿದೆ –

ಹೊನ್ನಿನೊಳಗೊಂದೊರೆಯ,
ಅನ್ನದೊಳಗೊಂದಗುಳ,
ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ
ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ
ಕೂಡಲಸಂಗಮದೇವಾ.[೬]

ದೇಶದ ಸಂಪತ್ತು ಪ್ರಜೆಗಳಿಗೆ ಸದ್ವಿನಿಯೋಗವಾಗಬೇಕು, ಪ್ರಜೆಗಳ ಕಲ್ಯಾಣಕ್ಕೆ, ರಾಜ್ಯದ ಅಭಿವೃದ್ಧಿಗೆ ಬಳಕೆಯಾಗಬೇಕೇ ವಿನಃ ರಾಜಕಾರಣಿಗಳು ತಮ್ಮ ಸ್ವಾರ್ಥಕ್ಕೆ ಕೂಡಿಟ್ಟುಕೊಳ್ಳಬಾರದು.

ಇಂತಹ ಬಸವತತ್ವ ಹಾಗೂ ಡಾ॥ ಬಾಬಾಸಾಹೇಬರ ವಿಚಾರಧಾರೆಗಳ ತಳಹದಿಯ ಮೇಲೆ ವೈಚಾರಿಕ ಚಿಂತನ ನಡೆಸಿದ ಕುಮಾರ ಕಕ್ಕಯ್ಯನವರು ತಮ್ಮ ವಚನಗಳಲ್ಲಿ ಶಾಸಕ–ಸಚಿವರುಗಳ, ರಾಜಕಾರಣಿಗಳ ಕುರಿತು ನೇರವಾಗಿಯೇ ವಿಡಂಬನೆಗೈದಿದ್ದಾರೆ. –

ಅನ್ನ ಕೆಟ್ಟರೆ ನಾಯಿಯ ಪಾಲಿಗೆ
ಹಣ್ಣು ಕೆಟ್ಟರೆ ತಿಪ್ಪೆಯ ಪಾಲಿಗೆ

---

೫. ಬಸವಣ್ಣನವರ ವಚನ ಸಂಪುಟ – ಸಂ॥ ಡಾ. ಎಂ.ಎಂ. ಕಲಬುರ್ಗಿ ವ– ೬೩೮.
೬. ಬಸವಣ್ಣನವರ ವಚನ ಸಂಪುಟ – ಸಂ॥ ಡಾ. ಎಂ.ಎಂ. ಕಲಬುರ್ಗಿ ವ– ೪೩೬.

ಹೆಂಡತಿ ಕೆಟ್ಟರೆ ತವರು ಮನೆಗೆ
ಗಂಡ ಕೆಟ್ಟರೆ ವೇಶ್ಯಾವಾಟಿಕೆಗೆ
ಯುವಕ ಕೆಟ್ಟರೆ ರಾಜಕಾರಣಕ್ಕೆಂದ
ಕುಮಾರ ಕಕ್ಕಯ್ಯ.[೭]

ಇಂದು ರಾಜಕೀಯರಂಗವೆಂಬುದು ಪರಿಶುದ್ಧವಾಗಿ ಉಳಿದಿಲ್ಲ. ಶ್ರೀ ಲಾಲಬಹಾದ್ದೂರ ಶಾಸ್ತ್ರಿ, ಶ್ರೀ ಎಸ್. ನಿಜಲಿಂಗಪ್ಪನವರಂತಹ ಸಾತ್ವಿಕ ರಾಜಕೀಯ ಮುತ್ಸದ್ದಿಗಳ ಕಾಲ ಹೊರಟು ಹೋಯಿತು. ಎಲ್ಲೆಡೆಯಲ್ಲಿಯೂ ಕ್ಷುಲ್ಲಕ, ಸ್ವಾರ್ಥ ರಾಜಕಾರಣಿಗಳೇ ಕಂಡು ಬರುತ್ತಿದ್ದಾರೆ. ದುರ್ವ್ಯಸನ –ದುರಾಚಾರ–ದುಶ್ಚಟ–ದುರ್ನಡತೆಗಳಿಂದ ಕೆಟ್ಟವರೆಲ್ಲರೂ ಬಹುತೇಕ ಆಯ್ಕೆ ಮಾಡಿ ಕೊಳ್ಳುವುದು ರಾಜಕೀಯರಂಗವನ್ನೇ. ಇಂದು ಭಾರತದುದ್ದಕ್ಕೂ ಕಂಡು ಬರುವ ಸಾಮಾನ್ಯ ರಾಜಕೀಯ ಚಿತ್ರಣವೆಂದರೆ– 'ಸಾಮಾಜಿಕ, ರಾಜಕೀಯ ವಿಷಯಗಳ ಬಗ್ಗೆ ಪ್ರಜ್ಞೆಯಿರುವ ಸರ್ವಸಾಮಾನ್ಯ ಜನರಿಗೆಲ್ಲ ಸುಪರಿಚಿತವಿರುವ ವಿಷಯ ದಿಲ್ಲಿಯಿಂದ ಹಳ್ಳಿಗಳಲ್ಲಿ, ಒಂದೇ ರೀತಿಯಾದ ರಾಜಕಾರಣ. ಮಹಾತ್ಮಾಗಾಂಧೀಜಿಯವರ ಮಾತಿನಲ್ಲಿ ಹೇಳುವದಾದರೆ, ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ, ನಮ್ಮ ದೇಶಕ್ಕೆ, ಸಮಾಜಕ್ಕೆ ಬಡಿದುಕೊಂಡ ರೋಗವೆಂದರೆ ತತ್ವರಹಿತ ರಾಜಕಾರಣ. ಪಟ್ಟಣಿಗರು–ಹಳ್ಳಿಗರು ಎಂಬ ಭೇದಭಾವನೆಯಿಲ್ಲ ಈ ರೋಗಕ್ಕೆ, ಇದು ಸರ್ವವ್ಯಾಪಿಯಾಗಿರುತ್ತದೆ."[೮]

ರಾಜಕಾರಣ ಎಂಬುದು ಇಂದು ಒಂದು ಹಣಗಳಿಕೆಯ ಧಂದೆಯಾಗಿದೆ. ಹನ್ನೆರಡೂ ತಿಂಗಳು ಅಂದರೆ ವರ್ಷದುದ್ದಕ್ಕೂ ರಾಜಕಾರಣಿಗಳಿಗೆ ಪರ್ವಕಾಲವೆಂದು ಕುಮಾರ ಕಕ್ಕಯ್ಯ ವಿಡಂಬನೆ ಮಾಡುತ್ತಾರೆ–

ವೈದ್ಯರಿಗೆ ರೋಗ ಹರಡಿದ್ದೇ ಗಳಿಕೆಯ ಕಾಲವಾದರೆ
ವಕೀಲರಿಗೆ ಹೆಣಗಳು ಉರುಳಿದ್ದು ಸಂಪಾದನೆಯಕಾಲ
ವ್ಯಾಪರಿಗಳಿಗೆ ಬರಗಾಲ ಬಿದ್ದದ್ದೆ ಶುಭ ಕಾಲವಾದರೆ
ಊರಿಗೆ ಕೇಡಾದದ್ದೇ ರೌಡಿಗಳಿಗೆ ಸಂಪನ್ನಕಾಲ.
ಕದೀಮರಿಗೆ ಅರಾಜಕತೆಯೇ ಸುಗ್ಗಿಯಕಾಲವಾದರೆ
ರಾಜಕಾರಣಿಗಳಿಗೆ ಹನ್ನೆರಡೂ ತಿಂಗಳು
ಪರ್ವಕಾಲವೆಂದ ಕುಮಾರ ಕಕ್ಕಯ್ಯ[೯]

ರಾಜಕಾರಣಿಗಳು ಊಸರುವಳ್ಳಿಯಂತೆ ಬಣ್ಣ ಬದಲಾಯಿಸುವವರು. ಯಾವುದೇ ಜಾತಿ–ಮತ–ಪಂಥ–ಧರ್ಮದ ಜನರ ಸಭೆ–ಸಮಾರಂಭಗಳಲ್ಲಿ ಹೋಗಿ,

---

೭. ಕುಮಾರ ಕಕ್ಕಯ್ಯನ ವಚನಗಳು – ಪು–೨೬೫ ವ – ೧೦೨೨

೮. ಜಗಜ್ಯೋತಿ ಬಸವಣ್ಣ –ದಿಕ್ಕುಗೆಟ್ಟ ಆಧುನಿಕಯುಗಕ್ಕೆ ಮಾರ್ಗದರ್ಶಿ – ಪ್ರೊ.ಎಸ್.ವ್ಹಿ. ಪಾಟೀಲ ಪುಟ– ೨೯

೯. ಕುಮಾರ ಕಕ್ಕಯ್ಯನ ವಚನಗಳು : ಪು–೧೬೨ ವ–೬೨೬.

ಅವರವರಿಗೆ ಪ್ರಿಯವಾದ ಮಾತುಗಳನ್ನಾಡಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಜನರಾಗಿದ್ದಾರೆ. ಇಂಥವರ ಗುಣ–ಲಕ್ಷಣಗಳನ್ನು ಕುಮಾರ ಕಕ್ಕಯ್ಯ ತಮ್ಮ ವಚನವೊಂದರಲ್ಲಿ ಮಾರ್ಮಿಕವಾಗಿ ತಿಳಿಯಪಡಿಸುತ್ತಾರೆ –

ಬಕ್ರೀದದಲ್ಲಿ ಕುರ್ಬಾನದ ಮಹಾತ್ಮೆ ಹೇಳುವದು,
ಬುದ್ಧ ಪೌರ್ಣಿಮೆಯಲ್ಲಿ ಅಹಿಂಸೆಯ ಬಗ್ಗೆ ಮಾತನಾಡುವದು,
ಸವರ್ಣೀಯರ ಸಮ್ಮೇಲನದಲ್ಲಿ ಹಿಂದೂ ಧರ್ಮ ಹೊಗಳುವದು,
ಶೂದ್ರರ ಸಮ್ಮೇಳನದಲ್ಲಿ ಚಾತುರ್ವರ್ಣ ತೆಗಳುವುದು,
ಜೈನರ ಜಾತ್ರೆಯಲ್ಲಿ ಬೆತ್ತಲೆ ಗುರುವಿನ ಕಾಲ್ಹಿಡಿಯುವುದು
ನುರಿತ ರಾಜಕಾರಣಿಗಳ ಲಕ್ಷಣವೆಂದ ಕುಮಾರ ಕಕ್ಕಯ್ಯ.[೧೦]

ಇಂದು ದೇಶದ ತುಂಬೆಲ್ಲಾ ರಾಜಕಾರಣಿಗಳ ಸಂಖ್ಯೆ ಹೆಚ್ಚುತ್ತಿದೆ. ದೇಶದ ಶಾಂತಿ ಕದಡುತ್ತಿದೆ. ಕದಡಿದ ನೀರಿನಲ್ಲಿ ಮೀನು ಹಿಡಿಯುವ ಜಾಣತನ ರಾಜಕಾರಣಿಗಳಿಗಿದೆ. ಅಂತೆಯೇ ಕುಮಾರ ಕಕ್ಕಯ್ಯ ಸ್ವಾರಸ್ಯಪೂರ್ಣವಾಗಿ ಹೇಳುತ್ತಾರೆ –

ಕಳೆ ಹೆಚ್ಚಾದ ಭೂಮಿಯಲ್ಲಿ ಬೆಳೆಯಿಲ್ಲ.
ಮಕ್ಕಳು ಹೆಚ್ಚಾದ ಮನೆಯಲ್ಲಿ ನೆಮ್ಮದಿಯಿಲ್ಲ.
ಉಪ್ಪು ಹೆಚ್ಚಾದ ಅಡಿಗೆಯಲ್ಲಿ ರುಚಿಯಿಲ್ಲ.
ರಾಜಕಾರಣಿಗಳು ಹೆಚ್ಚಾದ ದೇಶದಲ್ಲಿ ಶಾಂತಿಯಿಲ್ಲ.
ಕಾಯ್ದೆ ಕಾನೂನು ಹೆಚ್ಚಾದ ಆಡಳಿತದಲ್ಲಿ
ಸುಖ ಇಲ್ಲವೇ ಇಲ್ಲವೆಂದ ಕುಮಾರ ಕಕ್ಕಯ್ಯ[೧೧]

ಇಂದು ರಾಜಕಾರಣಿಗಳು ಚುನಾವಣೆಯಲ್ಲಿ ಆರಿಸಿ ಬರುವ ಸಲುವಾಗಿ ಹತ್ತು–ಹಲವು ತಂತ್ರಗಳನ್ನು ಮಾಡುವರು. ಮತದಾರರನ್ನು ಓಲೈಸುವ ರೀತಿಯು ಆಶ್ಚರ್ಯಕರವಾಗಿದೆ. ಇದನ್ನು ಅದ್ಭುತವಾಗಿ ಕುಮಾರ ಕಕ್ಕಯ್ಯನವರು ವರ್ಣಿಸುತ್ತಾರೆ –

ಕಾಗೆಯಂತೆ ಹಾರಾಡಿ, ಗೂಗೆಯಂತೆ ತಲೆದೂಗಿ,
ನರಿಯಂತೆ ಹೊಂಚುಹಾಕಿ, ತೋಳನಂತೆ ತಿಂದು,
ನಾಯಿಯಂತೆ ಬಾಲಬಡಿದು, ಭಂಡರ ಕಾಲು ಹಿಡಿದು
ಹೇರಳ ಹಣ ಸುರಿದು ಆರಿಸಿ ಬರುವ ಶಾಸಕರು
ದೇಶದ ದೊಡ್ಡ ದುರಂತವೆಂದ ಕುಮಾರ ಕಕ್ಕಯ್ಯ.[೧೨]

---

೧೦. ಕುಮಾರ ಕಕ್ಕಯ್ಯನ ವಚನಗಳು : ಪು- ೧೫೦ ವ- ೫೭೭
೧೧. ಕುಮಾರ ಕಕ್ಕಯ್ಯನ ವಚನಗಳು : ಪು-೫೮ ವ-೨೦೭
೧೨. -ಅದೇ- ಪು- ೧೨೫ ವ-೪೭೮

ಇಂದು ನೂರು ಹಣ ಚೆಲ್ಲಿ, ಸಾವಿರ ಹಣ ಗಳಿಸುವ ಭಾರೀ ಉದ್ದಿಮೆ ಎಂದರೆ ರಾಜಕಾರಣವಾಗಿದೆ. ರಾಜಕಾರಣಿಗಳು ಈ ಉದ್ದಿಮೆಯಲ್ಲಿ ಬಹುದೊಡ್ಡ ಉದ್ದಿಮೆದಾರರಾಗಿದ್ದಾರೆ. 'ಕೆಲವರಿಗೆ ವ್ಯಾಪಾರವೊಂದು ಉದ್ದಿಮೆಯಾದರೆ, ಹಲವರಿಗೆ ಶಾಲೆ ಕಾಲೇಜುಗಳೊಂದು ಉದ್ದಿಮೆಯಾಗಿವೆ. ಕೆಲವರಿಗೆ ಸಂಘ–ಸಂಸ್ಥೆಗಳು ಉದ್ದಿಮೆಯಾದರೆ, ಹಲವರಿಗೆ ದೇವಾಲಯ–ಟ್ರಸ್ಟಗಳು ಉದ್ದಿಮೆಯಾಗಿವೆ. ಹಣ ಸುರುವಿ ಆರಿಸಿ ಹೋಗುವ ಶಾಸಕರಿಗೆ ರಾಜಕಾರಣವೆಂಬುದೊಂದು ಬಹುದೊಡ್ಡ ಉದ್ದಿಮೆಯಾಗಿದೆ' ಎಂದು ಕುಮಾರ ಕಕ್ಕಯ್ಯ ಹೇಳುತ್ತಾರೆ–

ಮತದಾರ ಕಡು ಬಡವನಾಗಿರುವಾಗ
ರಾಜಕಾರಣಿ ಆಗರ್ಭ ಸಿರಿವಂತನಾಗಿರುವದು.
ಮತದಾರ ಕೂಳಿಗೂ ಕಂಗಾಲಾಗಿರುವಾಗ
ರಾಜಕಾರಣಿ ಬಂಗ್ಲೆಯಲ್ಲಿ ಮೇಜವಾನಿ ಮಾಡುವದು
ಪ್ರಜಾರಾಜ್ಯ ಪ್ರಜಾಪ್ರಭುತ್ವವಲ್ಲ,
ಪ್ರಭುಗಳ ಪ್ರಭುತ್ವವೆಂದ ಕುಮಾರ ಕಕ್ಕಯ್ಯ.[೧೩]

**(ii) ಲಂಚ–ವಂಚನೆ–ಭ್ರಷ್ಟಾಚಾರ :**

ಇಂದು ರಾಜಕಾರಣಿಗಳು ತತ್ವರಹಿತ–ನೀತಿಭ್ರಷ್ಟರಾಗಿ ರಾಜಕಾರಣ ಮಾಡುತ್ತಾ ಜನಸೇವೆ, ಸಮಾಜಸೇವೆ, ರಾಷ್ಟ್ರಸೇವೆ ಎಂದು ಹೇಳುತ್ತಾ ಲಂಚ ವಂಚನೆ–ಭ್ರಷ್ಟಾಚಾರಕ್ಕೆ ಇಳಿದಿದ್ದಾರೆ. ಇಂದು ನೇತಾರ, ನಾಯಕ, ಪುಢಾರಿ ಎನಿಸಿಕೊಳ್ಳಬೇಕಾದರೆ ಆತ ಎಲ್ಲಾ ರೀತಿಯ ದುರ್ನಡತೆಗಳನ್ನು ಅಳವಡಿಸಿಕೊಂಡಿರಬೇಕಾಗುತ್ತದೆ. ಅದನ್ನು ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ಚೆನ್ನಾಗಿ ವಿಡಂಬಿಸುತ್ತಾರೆ–

ಮೊದಮೊದಲು ಚಾಡಿ ಚುಗಲಿ ಹೇಳುವುದು
ಬರ ಬರುತ್ತ ಮೋಸ ವಂಚನೆ ಮಾಡುವುದು
ಆ ಬಳಿಕ ಕೊಲೆ ಸುಲಿಗೆಗೆ ನಿಲ್ಲುವದು
ಕೊನೆ ಕೊನೆಗೆ ಶಾಸಕ ಸಚಿವನಾಗಿ ಮೆರೆಯುವದು
ಹಂತ ಹಂತವಾಗಿ ಮೇಲೇರಿದ ಧೂರ್ತನೇ
ಪ್ರಗತಿಪರ ಪುಢಾರಿಯೆಂದ ಕುಮಾರ ಕಕ್ಕಯ್ಯ.[೧೪]

ಇಂದು ರಾಜಕಾರಣವೆಂದರೆ ಹಣ –ಹೆಂಡ–ಹೆಣ್ಣುಗಳ ವಿಕೃತಭೋಗದ ರಾಜಮಾರ್ಗವೆನ್ನುವಷ್ಟರ ಮಟ್ಟಿಗೆ ಪ್ರಸಿದ್ಧಿಪಡೆದಿದೆ. ಸಾಮಾನ್ಯ ಜನರೂ ಕೂಡ ಇಂತಹ ಧೂರ್ತರನ್ನೇ ನಾಯಕರೆಂದು ಬೆನ್ನುಹತ್ತಿದ್ದಾರೆ. ನೀತಿವಂತ, ಪ್ರಾಮಾಣಿಕ

---

೧೩. –ಅದೇ – ಪು–೧೮೨ ವ–೨೦೧
೧೪. ಕುಮಾರ ಕಕ್ಕಯ್ಯನ ವಚನಗಳು – ಪು–೧೨೦ ವ–೬೫೭.

ವ್ಯಕ್ತಿ ರಾಜಕೀಯದಲ್ಲಿದ್ದರೆ ಆತನಿಗೆ ಒಂದು ಕವಡೆಯ ಕಿಮ್ಮತ್ತೂ ಇಲ್ಲವಾಗಿದೆ. 'ಹಣ' ಎಂಬುದು ಕೋಟಿ ಕೋಟಿಗಟ್ಟಲೆ ಇದ್ದರೆ ಮಾತ್ರ 'ವೋಟು' ಖರೀದಿಸಿ ಚುನಾವಣೆಗಳಲ್ಲಿ ಗೆದ್ದು ಬರುವ ಪರಿಸ್ಥಿತಿ ನಿರ್ಮಾಣವಾಗಿದೆ.

ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ರಾಜಕೀಯ ಜನರಿಗೆ ಸಾಮಾನ್ಯವಾಗಿ ಬಿಟ್ಟಿದೆ. ಆತ ಅಷ್ಟು ಕೋಟಿ ಹಣ ಮಾಡಿದ್ದಾನೆ. ದೇವರ ಮನೆಗೆ ಬಂಗಾರದ ತಗಡು ಹಾಕಿಸಿದ್ದಾನೆ. ನಾನೇಕೆ ಕಡಿಮೆ ಹಣ ಮಾಡಬೇಕು? ಎಂದು ಕುರ್ಚಿಗಾಗಿ ಬಡಿದಾಟ ನಡೆದಿದೆಯೇ ಹೊರತು, ಅವನಿಗಿಂತ ಹೆಚ್ಚು ನಾನು ಜನಹಿತ ಮಾಡಬಲ್ಲೆ, ಅವನಿಗಿಂತ ನಾನು ಸರಳ ಜೀವನ ನಡೆಸಿ ತೋರಿಸಬಲ್ಲೆ ಎಂದು ಹೇಳುವವರು ಎಲ್ಲೂ ಸಿಗಲಾರರು. ಎಲ್ಲ ಮಾಜಿ, ಹಾಲಿ ಶಾಸಕರು, ಸಂಸತ್ ಸದಸ್ಯರು, ಮಂತ್ರಿ ಮುಖ್ಯಮಂತ್ರಿ, ಮತ್ತು ಪ್ರಧಾನಮಂತ್ರಿಗಳ ಆಸ್ತಿ ಪಾಸ್ತಿ ತನಿಖೆ ನಡೆಸಿದರೆ ಯಾರೂ ಬಡವರು ಸಿಗಲಾರರು.'[೧೫]

ಇಂದಿನ ಬಹುತೇಕ ರಾಜಕಾರಣಿಗಳು ದುರಾಸೆಯ ಬೆನ್ನು ಹತ್ತಿ ಅನ್ಯಾಯದ ಹಣಕ್ಕೆ ಹಪ ಹಪಿಸುತ್ತಿದ್ದಾರೆ. ಅಂತೆಯೇ ಕುಮಾರ ಕಕ್ಕಯ್ಯನವರು ತಮ್ಮದೊಂದು ವಚನದಲ್ಲಿ ಈ ಕುರಿತು ಸ್ಪಷ್ಟ ಚಿತ್ರಣವನ್ನೇ ನೀಡುತ್ತಾರೆ –

ಮೋಸ ವಂಚನೆ ಮಾಡ್ಯಾನ
ಹೇರಳ ಹಣ ಗಳಿಸ್ಯಾನ
ಅವಸರ ಮಾಡಿ ಖಾದಿ ಹಾಕ್ಯಾನ
ದಿಲ್ಲಿಗ್ಹೋಗಿ ಪಾರ್ಟಿ ಟಿಕೇಟ ತಂದಾನ
ಬೇಕಾಬಿಟ್ಟಿ ರೊಕ್ಕ ಕೊಟ್ಟು ಆರಿಸಿಬಂದಾನ
ಶಾಸಕ, ಸಚಿವನಾಗಿ ಮೆರೆದಾನ
ಹಣ ಸಣ್ಣವನನ್ನು ದೊಡ್ಡವನನ್ನಾಗಿ
ಮಾಡುವದೆಂದ ಕುಮಾರ ಕಕ್ಕಯ್ಯ[೧೬]

ಈ ಹಣ ಗಳಿಸುವ ಬಗೆಯಾದರೂ ಹೇಗೆ ? ಸತ್ಯ ಶುದ್ಧ ದುಡಿಮೆಯಿಂದ ಕೋಟ್ಯಾಂತರ ರೂಪಾಯಿ ಗಳಿಸುಲು ಸಾಧ್ಯವೇ ? ಸಾಧ್ಯವಿಲ್ಲ. ಆದ್ದರಿಂದ ಇವರು ಹಿಡಿಯುವದು ವಾಮಮಾರ್ಗ ದಿಲ್ಲಿಯಿಂದ ಹಳ್ಳಿಯವರೆಗೆ ಎಲ್ಲೆಲ್ಲಿಯೂ ಲಂಚ ಸಾಮ್ರಾಜ್ಯವೇ ಕಂಡು ಬರುತ್ತದೆ. ರಾಜಕೀಯದಲ್ಲಿರುವ ಶಾಸಕ, ಸಚಿವರ ಹಣದ ದಾಹಕ್ಕೆ ಅಧಿಕಾರಿಗಳು ಲಂಚ ಹೊಡೆಯಲೇಬೇಕು. ಅವರ ಕೆಳಗಿನವರುಅದೇ ದಾರಿ ತುಳಿಯಲೇಬೇಕಾಗುತ್ತದೆ. ಇದರ ಪರಿಣಾಮವನ್ನು ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ತಿಳಿಸುತ್ತಾರೆ–

ಗ್ರಾಮಲೆಕ್ಕಿಗ ಲಂಚಕ್ಕಿಳಿದರೆ
ಗ್ರಾಮದ ಚಾವಡಿಗೆ ಬೆಂಕಿ ಬಿದ್ದಂತೆ !

---

೧೫. ದೇವರು ಮತ್ತು ದಲಿತರು : ಯಾರಿಗೆ ಸ್ವಾತಂತ್ರ್ಯ ಸಿಕ್ಕಿದೆ – 'ಈನಿಂಕಿ' ಪು–೩೦
೧೬. ಪ್ರಗತಿಪರ ವಿಚಾರವಾದಿ ಕುಮಾರ ಕಕ್ಕಯ್ಯನ ವಚನಗಳು – ಪು–೧೭೫, ವ–೫೩೩

ಮೇಲಾಧಿಕಾರಿ ಲಂಚಕ್ಕಿಳಿದರೆ
ಇಲಾಖಾ ಕಚೇರಿಗೆ ಬೆಂಕಿ ಬಿದ್ದಂತೆ!
ಸಚಿವ ಲಂಚಕ್ಕಿಳಿದರೆ
ಇಡೀ ವಿಧಾನಸೌಧಕ್ಕೆ ಉರಿಹತ್ತಿದಂತೆಂದ
ಕುಮಾರ ಕಕ್ಕಯ್ಯ.[೧೭]

ಇಂತಹ ಲಂಚ–ವಂಚನೆಯ ರಾಜಕೀಯ ಶಾಸಕ, ಸಚಿವ, ಅಧಿಕಾರಿಗಳು ಬೀದಿ ಬೀದಿಯಲ್ಲಿ ಕೈಯೊಡ್ಡಿ ಭಿಕ್ಷೆ ಬೇಡುವ ಭಿಕಾರಿಗಳಿಗಿಂತಲೂ ಕನಿಷ್ಠರು. ಹೊಟ್ಟೆಯ ಹಸಿವೆಗಾಗಿ ಭಿಕ್ಷೆ ಬೇಡುವ ಭಿಕ್ಷುಕ ಇವರಿಗಿಂತ ಎಷ್ಟೋ ಮಿಗಿಲು.

ಕೊಳೆತ ಮಾವಿನ ಕಾಯಿಗಿಂತ ಮಾಗಿದ ಬೋರೆಕಾಯಿ ಲೇಸು, ಮಹಡಿಯಲ್ಲಿರುವ ರೋಗಿಗಿಂತ ಗುಡಿಸಲಲ್ಲಿರುವ ನಿರೋಗಿಯೇ ಲೇಸು, ಲಂಚಕ್ಕೆ ನಿಂತ ಅಧಿಕಾರಿಗಿಂತ ಭಿಕ್ಷೆಗೆ ನಿಂತ ಭಿಕಾರಿ ಬಹಳ ಲೇಸೆಂದು ಕುಮಾರ ಕಕ್ಕಯ್ಯನವರು ತಿಳಿಸುತ್ತಾ– ಎಷ್ಟೋ ಸಲ ಲಂಚ ತೆಗೆದುಕೊಂಡವರು ಸಿಕ್ಕುಬಿದ್ದಾಗ, ಲಂಚಕೊಟ್ಟೇ ಪಾರಾಗುತ್ತಾರೆ. ಇಂತಹ ಲಂಚದ ವ್ಯವಸ್ಥೆಯನ್ನೇ ಕುಮಾರ ಕಕ್ಕಯ್ಯ ವಿಡಂಬನೆ ಮಾಡುತ್ತಾರೆ–

ಇಲ್ಲಿಯೂ ಲಂಚ, ಅಲ್ಲಿಯೂ ಲಂಚ.
ಇಲ್ಲಿಂದ ಅಲ್ಲಿಯವರೆಗೆ ಎಲ್ಲೆಲ್ಲಿಯೂ
ಲಂಚವೇ ಲಂಚ !
ದೊಡ್ಡ ಮೀನು ಸಣ್ಣ ಮೀನನ್ನು ನುಂಗುವಂತೆ
ಲಂಚದ ಪ್ರಕರಣ ಲಂಚವೇ
ನುಂಗುವದೆಂದ ಕುಮಾರ ಕಕ್ಕಯ್ಯ.[೧೮]

ಲಂಚದಲ್ಲಿ ಸಿಕ್ಕು ಬಿದ್ದವನಿಗಿಂತ, ಸಿಗದೇ ಆಚಾರ ಹೇಳುವವನೇ ನಿಜವಾದ ಲಂಚಕೋರನು. ವ್ಯಭಿಚಾರದಲ್ಲಿ ಸಿಕ್ಕು ಬಿದ್ದವನಿಗಿಂತ ಸಿಗದೇ ತತ್ವ ಹೇಳುವವನೇ ನಿಜವಾದ ವ್ಯಭಿಚಾರಿಯು. ಕಳ್ಳತನದಲ್ಲಿ ಸಿಕ್ಕು ಬಿದ್ದವನಿಗಿಂತ ಸಿಗದೇ ರಾಜಕಾರಣ ಮಾಡುವವನೇ ನಿಜವಾದ ಕಳ್ಳನು ಎಂದು ಕುಮಾರ ಕಕ್ಕಯ್ಯನವರ ವಚನಸಂದೇಶವಾಗಿದೆ. ಇಂದು 'ಲಂಚ ವಂಚನೆಗೆ ಕೈಯಾನದ ಭಾಷೆ' ಎಂಬ ಶರಣರ ವಚನ ಸಂದೇಶವನ್ನು ಸರ್ವರೂ ಪಾಲಿಸಿದಾಗ ಮಾತ್ರ ಅಭಿವೃದ್ಧಿ ಜನಹಿತ ಕಾರ್ಯಗಳು ನಡೆಯಬಹುದಾಗಿದೆ.

**iii) ಅಧಿಕಾರ ದಾಹ –ಧೂರ್ತತನ –ಶೋಷಣೆ :**

ಬ್ರಿಟೀಶರ ಆಡಳಿತಕ್ಕೆ ಒಳಪಟ್ಟಿದ್ದ ಭಾರತವನ್ನು ಸ್ವತಂತ್ರಗೊಳಿಸಲು ಮಹಾತ್ಮಾಗಾಂಧೀಜಿ ಹಾಗೂ ಸಹಸ್ರಾರು ಜನ ಸ್ವಾತಂತ್ರ್ಯ ಹೋರಾಟಗಾರರು

---
೧೭. ಕುಮಾರ ಕಕ್ಕಯ್ಯನ ವಚನಗಳು – ಪು–೨೭೨ ವ–೧೦೫೨
೧೮. –ಅದೇ– ಪು–೨೭೩ ವ–೧೦೫೫.

ನಿಃಸ್ವಾರ್ಥದಿಂದ ಮನೆ–ಮಾರು ತೊರೆದು, ಹೆಂಡತಿ–ಮಕ್ಕಳನ್ನು ಬಿಟ್ಟು ಹಗಲಿರುಳು ಸತ್ಯಾಗ್ರಹದಲ್ಲಿ ಪಾಲ್ಗೊಂಡು ಪ್ರಾಣದ ಹಂಗು ಹರಿದು ಹೋರಾಡಿದರು. ಎಷ್ಟೋ ಜನ ಬ್ರಿಟೀಶರ ಗುಂಡಿಗೆ ಎದೆಯೊಡ್ಡಿ ಪ್ರಾಣನೀಗಿದರು. ಸ್ವಾತಂತ್ರ್ಯ ಸಿಕ್ಕ ದಿನ ಮಹಾತ್ಮಾಗಾಂಧೀಜಿಯವರು ದೇಶ ವಿಭಜನೆಯಿಂದ ಉಲ್ಬಣಗೊಂಡಿದ್ದ ಹಿಂದು–ಮುಸ್ಲಿಂ ಗಲಭೆ, ರಕ್ತಪಾತ ನಿಲ್ಲಿಸಲು ಬಂಗಾಲದ ನೌಖಾಲಿಯಲ್ಲಿ ಉಪವಾಸ ಸತ್ಯಾಗ್ರಹದಲ್ಲಿ ನಿರತರಾಗಿದ್ದರೆ, ಅಧಿಕಾರ ಲಾಲಸೆಯ ಜನ ಆಗಲೇ ದಿಲ್ಲಿಯಲ್ಲಿ ಗರಿಗರಿ ಖಾದಿ ಬಟ್ಟೆತೊಟ್ಟು ಓಡಾಡುತ್ತಿದ್ದರು.

ಸ್ವಾತಂತ್ರ್ಯ ಸಿಕ್ಕು ೬೩ ವರುಷಗಳಲ್ಲಿ ದೇಶದುದ್ದಗಲಕ್ಕೂ ರಾಜಕಾರಣಿಗಳ ಅಧಿಕಾರ ದಾಹ –ಧೂರ್ತತನ, ಸಾಮಾನ್ಯ ಪ್ರಜೆಗಳ ಶೋಷಣೆ ನಿರಂತವಾಗಿ ನಡೆದಿದೆ. 'ರಾಜನೀತಿಜ್ಞರೊಬ್ಬರ ಅನುಭವದ ನುಡಿಯಂತೆ – 'A Politician has an eye on Election, and a Statesman has an eye on Generation' ಎಂಬ ಮಾತಿನ ಮರ್ಮ ಅರಿಯಬೇಕಾಗಿದೆ. ಇಂದಿನ ಸ್ವಾರ್ಥ ರಾಜಕಾರಣಿಯು ತನ್ನ ದೃಷ್ಟಿಯನ್ನು ಕೇವಲ ಚುನಾವಣೆಯಲ್ಲಿ ಗೆಲ್ಲುವದಕ್ಕಾಗಿ ಮಾತ್ರ ಮೀಸಲಿಟ್ಟಿದ್ದಾನೆ. ಆತನಿಗೆ ದೇಶದ ಆಗು–ಹೋಗುಗಳ ಬಗೆಗಾಗಲಿ, ಜನರ ಸಂಕಷ್ಟಗಳ ಸಲುವಾಗಿಯಾಗಲೀ ಚಿಂತನೆ ಬೇಕಿಲ್ಲ. ಕೇವಲ ತಾನು–ತನ್ನವರು, ಹಣ–ಅಧಿಕಾರ–ಕುರ್ಚಿ–ಕೀರ್ತಿ ಮಾತ್ರ ಬೇಕಾಗಿದೆ. ರಾಜಕಾರಣ ಮುತ್ಸದ್ದಿಗೆ ಮಾತ್ರ ಜನಾಂಗದ ಮುಂದಣ ನೂರಾರು ವರುಷಗಳ ಅಭಿವೃದ್ಧಿಯ ಕಡೆಗೆ ಗಮನವಿರುತ್ತದೆ.'[೧೯]

ರಾಜಕಾರಣಿಗಳು ಅಧಿಕಾರಕ್ಕೆ ಬರಲು ಏನೆಲ್ಲ ತಂತ್ರ ಪ್ರತಿತಂತ್ರ–ಕುತಂತ್ರಗಳನ್ನು ಮಾಡಿ, ವಾಮಮಾರ್ಗ ಹಿಡಿಯುತ್ತಾರೆ. ಇವರ ಅಧಿಕಾರ ದಾಹಕ್ಕೆ ಮಿತಿಯೇ ಇಲ್ಲ, ಅದು ತುಂಬಾ ಭಯಾನಕವೆಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ –

ನೀರಡಿಕೆಯ ದಾಹ ನೀರು ಕುಡಿದು ನೀಗಿಸಬಹುದು.
ಹಸಿವೆಯ ದಾಹ ಮೃಷ್ಟಾನ್ನವನುಂಡು ಹಿಂಗಿಸಬಹುದು.
ಶರೀರದಾಹ ಅಂಗನೆಯರನ್ನು ಅಪ್ಪಿ ಭೋಗಿಸಬಹುದು.
ನಿದ್ರೆಯದಾಹ ಸುಪ್ಪತ್ತಿಗೆಯಲಿ ಮಲಗಿ ತಣಿಯಬಹುದು
ಸಾಹುಕಾರರ ಹಣದ ದಾಹ –ರಾಜಕಾರಣಿಗಳ ಅಧಿಕಾರದಾಹ
ಬಹು ಭಯಾನಕವೆಂದ ಕುಮಾರ ಕಕ್ಕಯ್ಯ.[೨೦]

ಈ ಅಧಿಕಾರ ದಾಹ ಎಂಬುದು ಭೂತ–ಪ್ರೇತ–ಪಿಶಾಚಿ–ರಾಕ್ಷಸರ ರಕ್ತದಾಹಕ್ಕಿಂತಲೂ ಕ್ರೂರವಾದುದೆಂದು ಅನುಭವಿಗಳು ಹೇಳುತ್ತಾರೆ. ಅಧಿಕಾರ ಗದ್ದುಗೆ ಏರಲು, ಅದನ್ನು ದೊರಕಿಸಲು 'ನಾಚಿಕೆ' ಎಂಬ ಮೂರಕ್ಷರ ಬಿಟ್ಟೇ ರಾಜಕಾರಣಿಗಳು ನಿಂತಿರುತ್ತಾರೆ. ಅಂತೆಯೇ ಕುಮಾರ ಕಕ್ಕಯ್ಯನವರು ಇಂಥವರ ಬಗ್ಗೆ ಹೇಳುತ್ತಾರೆ –

೧೯. ಲಿಂಗಾಯತ ಧರ್ಮ ಸಮಾಜ ತತ್ವಜ್ಞಾನ : ರಾಜಕೀಯ ವಿಚಾರಧಾರೆ –ಪ್ರೊ ಸಿದ್ದಣ್ಣ. ಲಂಗೋಟಿ ಪು–೪೯.

೨೦. ಕುಮಾರ ಕಕ್ಕಯ್ಯನ ವಚನಗಳು – ಪು–೮ ವ–೩೦

ಭೂತಗಳು ಕೆಲವೊಂದು ಸಲ
ದಯ ತೋರಬಹುದು, ಸತ್ಯ ಹೇಳಬಹುದು.
ಬೇತಾಳಗಳು ಕೆಲವೊಂದು ಸಲ
ಆತ್ಮನಿಗೆ ನಾಚಬಹುದು, ದೇವನಿಗೆ ಅಂಜಬಹುದು.
ರಾಜಕಾರಣಿಗಳ ಆತ್ಮಕ್ಕೆ ನಾಚಿಕೆಯೂ ಇಲ್ಲ,
ದೇವನ ಅಂಜಿಕೆಯೂ ಇಲ್ಲವೆಂದ
ಕುಮಾರ ಕಕ್ಕಯ್ಯ.[೨೧]

'ಅಧಿಕಾರ ಲಾಲಸೆ, ಧನದ ಲೋಭಗಳಿರುವತನಕ ಮನುಷ್ಯ ಆತ್ಮ ಗೌರವವನ್ನು ಗಳಿಸಿಕೊಳ್ಳಲಾರ, ಆತ್ಮಶ್ರದ್ಧೆಯನ್ನು ಕಾಪಾಡಿಕೊಳ್ಳಲಾರ'[೨೨]

ಇಂದು ಜನಸೇವೆಯ ಹೆಸರಿನಲ್ಲಿ ರಾಜಕಾರಣಿಗಳು ಮಾಡುತ್ತಿರುವುದು ಜಾತಿಯ ರಾಜಕಾರಣ. ಜಾತ್ಯಾತೀತ ರಾಷ್ಟ್ರದಲ್ಲಿ ಜಾತಿಗಳೇ ಪ್ರಮುಖ ಪಾತ್ರ ವಹಿಸುತ್ತಿವೆ. ಸಾಮರ್ಥ್ಯವುಳ್ಳ ಪ್ರಾಮಾಣಿಕ ರಾಜಕಾರಣಿಗಳಿಗೆ ಜಾತಿ-ಜನಾಂಗಗಳ ಬೆಂಬಲವಿಲ್ಲದೇ ಇರುವುದರಿಂದ ಅವರು ಚುನಾವಣೆಯಲ್ಲಿ ಆರಿಸಿಬಂದು, ಅಧಿಕಾರ ಹೊಂದುವುದು ಕನಸಿನ ಮಾತಾಗಿದೆ. ಭ್ರಷ್ಟರು, ಕೊಲೆ-ಸುಲಿಗೆಯ ದಗಾಕೋರರು ಪಕ್ಷ, ಪಂಗಡ, ಗುಂಪುಗಾರಿಕೆ ಮಾಡಿಕೊಂಡು ಅಧಿಕಾರ ಹಿಡಿಯುವುದು, ಸ್ವಜನ ಪಕ್ಷಪಾತ ಮಾಡುವುದು, ಹಣ ಗಳಿಸುವುದು ನಡೆಯುತ್ತಿದೆ. ಇಂಥವರು ದೇಶಕ್ಕೆ, ದೇಶದ ಭದ್ರತೆಗೆ ದೊಡ್ಡ ಗಂಡಾಂತರವೊಡ್ಡುತ್ತಾರೆಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ-

ಕಟುಕನಿಗೆ ಮಾಂಸ, ಮುಖ್ಯವೇ ಹೊರತು
ಆಕಳ ಜೀವನ ಪಾಲನೆ ಪೋಷಣೆಗಳಲ್ಲ.
ಪಾರ್ಟಿ ಪಕ್ಷಗಳಿಗೆ ಅಧಿಕಾರ ಮುಖ್ಯವೇ ಹೊರತು,
ರಾಷ್ಟ್ರದ ಆಗು-ಹೋಗು, ಪ್ರಗತಿ-ಭದ್ರತೆಗಳಲ್ಲ;
ಪಕ್ಷ ಪಂಗಡಗಳ ಗುಂಪುಗಾರಿಕೆಯ ರಾಜಕಾರಣದಿಂದ
ದೇಶದ ಭದ್ರತೆಗೆ ದೊಡ್ಡ ಗಂಡಾಂತರವೆಂದ
ಕುಮಾರ ಕಕ್ಕಯ್ಯ.[೨೩]

ತಮ್ಮ ಅಧಿಕಾರದಾಹಕ್ಕಾಗಿ ರಾಜ್ಯವನ್ನು, ರಾಷ್ಟ್ರವನ್ನು, ದೇಶದ ಹಿತವನ್ನೂ ಸಹ ಬಲಿಕೊಡಲು ಹೇಸದ ರಾಜಕಾರಣಿಗಳನ್ನು ನಾವಿಂದು ಕಾಣುತ್ತಿದ್ದೇವೆ. ದೇಶದಲ್ಲಿ ಕೋಮುಗಲಭೆಗಳನ್ನು ಹುಟ್ಟುಹಾಕಿ ಜನರು ಪರಸ್ಪರ ಧರ್ಮ- ದೇವರು, ಮಂದಿರ-ಮಸೀದೆ, ದೇವಾಲಯ-ಚರ್ಚುಗಳ ಹೆಸರಿನಲ್ಲಿ ಬಡಿದಾಡಲು ಹಚ್ಚುವವರು ರಾಜಕಾರಣಿಗಳು. ರಾಷ್ಟ್ರೀಯ ಭಾವೈಕ್ಯತೆ, ಕೋಮುಸಾಮರಸ್ಯದ ಬಗ್ಗೆ ಅನಂತರ ದೊಡ್ಡ ದೊಡ್ಡ ಭಾಷಣ ಬಿಗಿದು ಚಪ್ಪಾಳೆ ತಟ್ಟಿಸಿಕೊಳ್ಳುವವರೂ ರಾಜಕಾರಣಿಗಳೇ ಆಗಿದ್ದಾರೆ -

---

೨೧. ಕುಮಾರ ಕಕ್ಕಯ್ಯನ ವಚನಗಳು - ಪು- ೨೬೯ ವ- ೧೦೪೦
೨೨. ಬಸವನ ಬೆಳಕು -ದೇ. ಜವರೇಗೌಡರು. ಪು-೬೧.
೨೩. ಕುಮಾರ ಕಕ್ಕಯ್ಯನ ವಚನಗಳು - ಪು-೧೬೯ ವ-೬೫೨.

ಶೀಸ ಮಹಲಿನೋಳ್ ಇರುವವರು
ಸೊಗಸಾದ ಕಾರಿನೋಳ್ ಮೆರೆವವರು
ಕೇರುಬೀಜ ಮನುಕಾ ಮೆಲ್ಲುವವರು
ಹೊಟ್ಟೆಗಿಲ್ಲದ ಬಡಪಾಯಿಗಳ ಮುಂದೆ
ಬಂಡವಾಳ, ಭ್ರಷ್ಟಾಚಾರ, ದುರಾಡಳಿತ ಖಂಡಿಸಿ
ಅಬ್ಬರದಿ ಮಾಡುವ ರಾಜಕಾರಣಿಗಳ ಭಾಷಣದ
ವೈಖರಿ ನೋಡೆಂದ ಕುಮಾರ ಕಕ್ಕಯ್ಯ.[೨೪]

ರಾಜಕಾರಣಿಗಳು ಮತದಾರ ಪ್ರಭುಗಳ ಮುಂದೆ, ಚುನಾವಣೆಯ ಕಾಲಕ್ಕೆ ಕೇವಲ ಮೊಸಳೆ ಕಣ್ಣೀರು ಸುರಿಸುತ್ತಾ, ಕಪಟತನದಿಂದ ಮತಗಳಿಸುತ್ತಾರೆ. ಒಮ್ಮೆ ಚುನಾಯಿತರಾಗಿ ಶಾಸಕರಾಗಿ ಬಿಟ್ಟರೆ ತೀರಿತು, ಮರುಚುನಾವಣೆ ಬರುವವರೆಗೆ ಅವರ ಸನಿಹವೇ ಸುಳಿಯುವದಿಲ್ಲ. ಪಂಚತಾರಾ ಹೋಟೆಲುಗಳಲ್ಲಿ ವಾಸ, ಸಮುದ್ರದ ದಂಡೆಗಳ ರೆಸಾರ್ಟಗಳಲ್ಲಿ ಮೋಜು–ಮಜಾ, ವಿದೇಶಿ– ಪಾನೀಯಗಳ ಸೇವನೆ, ಐಷಾರಾಮ ಜೀವನ ನಡೆಸುವುದರ ನಡುವೆ ಅವರಿಗೆ ಪ್ರಜೆಗಳ ಬೇಕು–ಬೇಡಗಳ ಬಗ್ಗೆ, ಅವರ ಸುಖ–ದುಃಖಗಳ ಬಗ್ಗೆ ನೆನಪಾಗುವುದಾದರೂ ಹೇಗೆ! ಅವರ ಚೇಲಾಗಳು ಆಗಾಗ ಅಲ್ಲೊಮ್ಮೆ ಇಲ್ಲೊಮ್ಮೆ ಏರ್ಪಡಿಸುವ ಸಾಮೂಹಿಕ ಸಭೆ, ಸಮಾರಂಭ ಮದುವೆ,ಗಳಿಗೆ ಒಂದಿಷ್ಟು ಹಣಸುರುವಿ, ಲಕ್ಷಾಂತರ ಜನರಿಗೆ ಬಿಟ್ಟಿ ಕೂಳು ಹಾಕಿಸಿ, ಬಂಡವಾಳಶಾಹಿಗಳ ಬಗ್ಗೆ, ರಾಜಕೀಯ ಭ್ರಷ್ಟಾಚಾರ, ದುರಾಡಳಿತ ಖಂಡಿಸಿ ಅಬ್ಬರದಿಂದ ಭಾಷಣಮಾಡಿ, ಚಪ್ಪಾಳೆ ತಟ್ಟಿಸಿಕೊಂಡು ಜಯ–ಜಯಕಾರ, ಘೋಷಣೆ ಕೂಗಿಸಿಕೊಂಡು ಪ್ರತಿಷ್ಠೆ ಮೆರೆಯುವದೇ ಇವರು ಮಾಡುವ ಜನಸೇವೆ! ದೇಶಸೇವೆ!! ಇಂತಹ ಧೂರ್ತ ರಾಜಕಾರಣಿಗಳ ಹೂರಣವನ್ನು ತಮ್ಮ ವಚನಗಳಲ್ಲಿ ಕುಮಾರಕಕ್ಕಯ್ಯನವರು ಬಯಲಿಗೆಳೆದಿದ್ದಾರೆ. ಬಹಿರಂಗಪಡಿಸಿದ್ದಾರೆ.

**iv) ರಾಜಕಾರಣಿಗಳು ಹಾಗೂ ಗ್ರಾಮೀಣಾಭಿವೃದ್ಧಿ :**

ಭಾರತವು ವಾಸ್ತವಿಕವಾಗಿ ಗ್ರಾಮಗಳ ದೇಶವಾಗಿದೆ. ಗ್ರಾಮಗಳ ಅಭಿವೃದ್ಧಿಯಾದರೆ ದೇಶದ ಅಭಿವೃದ್ಧಿಯಾದಂತೆ ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರು ನನ್ನ ಕನಸಿನ ಭಾರತ ಪುಸ್ತಕದಲ್ಲಿ ಹೇಳಿರುವ ಮಾತುಗಳು ಹೀಗಿವೆ–' ಭಾರತಕ್ಕೆ ಬೇಕಾಗಿರುವುದು ೧೯೦೦ ಮೈಲುಗಳ ಉದ್ದ. ೧೫೦೧ ಮೈಲುಗಳ ಅಗಲವಿರುವ ಈ ಉಪಖಂಡದ ೭.೫ ಲಕ್ಷ ಹಳ್ಳಿಗಳ ಕೈಗೆಟಕುವಂತೆ ಬಂಡವಾಳವನ್ನು ಹಂಚುವುದೇ ಹೊರತು, ಆ ಬಂಡವಾಳ ಕೆಲವೇ ಕೈಗಳಲ್ಲಿ ಕೇಂದ್ರೀಕೃತವಾಗುವುದಲ್ಲ"[೨೫] ಗಾಂಧೀಜಿಯವರು ೧೯೨೧ ರಷ್ಟು ಹಿಂದೆಯೇ ಈ ಕನಸು ಕಂಡಿದ್ದರು. ಅವರ ಅಹರ್ನಿಷ ಹೋರಾಟದಿಂದಾಗಿ

---

೨೪. ಕುಮಾರ ಕಕ್ಕಯ್ಯನ ವಚನಗಳು– ಪು–೧೩೦. ವ–೫೦೧
೨೫. ನನ್ನ ಕನಸಿನ ಭಾರತ : ಯಂಗ್ ಇಂಡಿಯಾ–ಮಹಾತ್ಮಾಗಾಂಧೀ ೨೩–೩–೧೯೨೧

ದೇಶಕ್ಕೆ ಸ್ವಾತಂತ್ರ್ಯವೇನೋ ಸಿಕ್ಕಿತು, ಆದರೆ ಕನಸು ನನಸಾಗಲಿಲ್ಲ. ಇಂದಿಗೂ ಹಳ್ಳಿಗಳು ಹಾಳಾಗುತ್ತಲೇ ಇವೆ. ಪಟ್ಟಣಗಳು ಶರವೇಗದಲ್ಲಿ ಬೆಳೆಯುತ್ತಲೇ ಇವೆ.

ನಮ್ಮ ದೇಶದ ಪ್ರಥಮ ಉಪರಾಷ್ಟ್ರಪತಿ, ದ್ವಿತಿಯ ರಾಷ್ಟ್ರಪತಿಯಾಗಿ ದೇಶವನ್ನಾಳಿದ ಸರಕಾರಗಳಿಗೆ ಮಾರ್ಗದರ್ಶನ ಮಾಡಿದ ತತ್ವಜ್ಞಾನಿ ಡಾ॥ ಎಸ್. ರಾಧಾಕೃಷ್ಣನ್‌ರು ಈ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಉಂಟಾಗಿರುವ ನ್ಯೂನತೆ, ದೋಷಗಳನ್ನು ತಮ್ಮ 'ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ' ಎಂಬ ಕೃತಿಯಲ್ಲಿ ನೇರವಾಗಿ ಬಿಚ್ಚು ನುಡಿಗಳಲ್ಲಿ ತೋರಿಸಿದ್ದಾರೆ–" ಯಾವುದಾದರೊಂದು ದೇಶದಲ್ಲಾಗಲಿ ಚುನಾವಣೆಗಳು ನಡೆದು ಪ್ರಜಾತಂತ್ರದ ಆಡಳಿತಗಾರರಾಗುವ ಅವಕಾಶ ದೊರೆಯುವುದೇ ವಿರಳ.. ಆಡಳಿತ ಸ್ಥಾನಗಳಿಗೆ ಬಂದವರಿಗೆ ಆಡಳಿತ ಸಾಮರ್ಥ್ಯವಿರುವದಿಲ್ಲ, ಆಡಳಿತ ಸ್ಥಾಮರ್ಥ್ಯವಿರುವವರಿಗೆ ಆಡಳಿತ ಸ್ಥಾನಗಳಿಗೆ ಬರುವುದಕ್ಕೆ ಅವಕಾಶವೇ ದೊರೆಯುವುದಿಲ್ಲ. ಇದು ಇಂದಿನ ವಿಲಕ್ಷಣ ಸನ್ನಿವೇಶ. ಪ್ರಜಾತಂತ್ರದ ವ್ಯವಸ್ಥೆಯಿಂದ ಈಗ ಕೆಲಸ ನಡೆಯುತ್ತಿರುವ ರೀತಿಯು ತೃಪ್ತಿಕರವಾಗಿಲ್ಲದಿರುವದಕ್ಕೆ ಇದೇ ಕಾರಣ"[೨೬] ಎಂದಿದ್ದಾರೆ. ಮುಂದುವರೆದು ಹೇಳುತ್ತಾರೆ. 'ಇಂದು ನಾವು ಹೋರಾಟ ಮಾಡಬೇಕಾಗಿರುವುದು ಬಡತನ, ರೋಗಗಳ ವಿರುದ್ಧ; ಅನಕ್ಷರತೆ, ನಿರುದ್ಯೋಗಗಳ ವಿರುದ್ಧ : ಜನತೆಯ ಮನಸ್ಸುಗಳಲ್ಲಿ ತುಂಬಿರುವ ಅಜ್ಞಾನ–ಮೌಢ್ಯದ ಗಾಢಾಂಧಕಾರದ ವಿರುದ್ಧ, ನಾವೀಗ ಸುದೀರ್ಘ ಹೋರಾಟದ ಪಣ ತೊಡಬೇಕಾಗಿದೆ. ನಮಗಿಂದು ಬೇಕಾಗಿರುವವರು ಬಡತನ, ನಿರುದ್ಯೋಗ, ಹಸಿವು, ರೋಗ ಮತ್ತು ಅವನತಿಗಿಳಿಯುತ್ತಿರುವ ಮಾನವೀಯತೆಗಳ ವಿರುದ್ಧ ಹೋರಾಡಲು ಜ್ಞಾನಿಗಳು, ವಿಜ್ಞಾನಿಗಳು, ತಂತ್ರಜ್ಞಾನಿಗಳು'[೨೭]

ಭಾರತಕ್ಕೆ ಸ್ವಾತಂತ್ರ್ಯ ಬರುವ ಪೂರ್ವದಲ್ಲಿ ಈ ದೇಶದಲ್ಲಿ ಅಂದಾಜು ೬೦೦ ರಷ್ಟು ರಾಜ. ಮಹಾರಾಜ, ನಿಜಾಮ, ಬಾದಶಾಹ, ಮಾಂಡಲಿಕ, ಸಂಸ್ಥಾನಿಕರಿದ್ದರು. ಸ್ವಾತಂತ್ರ್ಯ ಹೋರಾಟದ ಕಾಲಕ್ಕೆ, ಸ್ವಾತಂತ್ರ್ಯ ನಂತರ ಸರ್ದಾರ ವಲ್ಲಭಭಾಯಿ ಪಟೇಲರ ದಕ್ಷತೆಯಿಂದಾಗಿ ಸಂಸ್ಥಾನಗಳೆಲ್ಲ ಭಾರತದ ಗಣರಾಜ್ಯ ಒಕ್ಕೂಟದಲ್ಲಿ ವಿಲಿನೀಕರಣಗೊಂಡವು. ಆಗ ನಮ್ಮ ದೇಶದ ಒಟ್ಟು ಹಳ್ಳಿಗಳ–ಪಟ್ಟಣಗಳ ಒಂದು ಚಿತ್ರಣ ದೊರೆಯಿತು.

ಮಹಾತ್ಮಾ ಗಾಂಧೀಜಿಯವರು ಗ್ರಾಮ ಸ್ವರಾಜ್ಯದ ಕನಸು ಕಂಡವರಾಗಿದ್ದರು. ಆದ್ದರಿಂದಲೇ ಬ್ರಿಟೀಶರ ಕಾಲದ ಗೌಡ–ಕುಲಕರ್ಣಿಯರ ಆಡಳಿತ ಕೊನೆಗೊಂಡು, ಸ್ವತಂತ್ರ ಭರತದಲ್ಲಿ ಗ್ರಾಮ ಪಂಚಾಯತಗಳು ಅಸ್ತಿತ್ವಕ್ಕೆ ಬಂದವು. ರಾಜ್ಯದ ರಾಷ್ಟ್ರದ ಕೆಲವೇ ಜನರ ಕೈಯಲ್ಲಿ ಅಧಿಕಾರ ಬಂದರೆ ಅವರು ಸರ್ವಾಧಿಕಾರಿ ಮನೋಭಾವ ತಾಳಬಹುದು ಎಂದು ಚಿಂತನ ಮಾಡಿ, ಗ್ರಾಮದ ಜನತೆಯ ಕೈಗಳಿಗೆ ಪಂಚಾಯತ ರಾಜ್ಯ ವ್ಯವಸ್ಥೆಯ ಮೂಲಕ ಕೆಲವು ಅಧಿಕಾರ ನೀಡಲಾಯಿತು. ಇವುಗಳ –

೨೬. ಡಾ॥ ಸರ್ವಪಲ್ಲಿ ರಾಧಾಕೃಷ್ಣನ್‌ರು : ರಾಜಕೀಯ ವಿಚಾರಗಳು–ಪ್ರೊ ಸಿದ್ದಣ್ಣ ಲಂಗೋಟಿ ಪುಟಗಳು ೭೫–೭೬

೨೭. –ಅದೇ– ಪು–೭೮

ಕರ್ತವ್ಯಗಳೆಂದರೆ– “ಅ) ಗ್ರಾಮದ ಮಕ್ಕಳಿಗೆಲ್ಲ ಶಿಕ್ಷಣ ಆ) ಸ್ವಚ್ಛತೆಯ ಕ್ರಮಗಳು ಇ) ಆರೋಗ್ಯ ರಕ್ಷಣೆ ಮತ್ತು ಚಿಕಿತ್ಸೆ (ಈ) ಬಾವಿ, ಕೆರೆಗಳನ್ನು ಶುಚಿಯಾಗಿಡುವುದು (ಉ) ಅಸ್ಪೃಶ್ಯರೆಂದು ಕಾಣುವ ಜನರ ಯೋಗಕ್ಷೇಮ”[೨೮]

ಗೌಡ–ಕುಲಕರ್ಣಿಯವರ ಕೈಯಿಂದ ತಪ್ಪಿದ ಅಧಿಕಾರ ಪಂಚಾಯತ ಸರಪಂಚ, ಸದಸ್ಯರು, ಕಾರ್ಯದರ್ಶಿ, ಸಿಪಾಯಿಗಳ ಕೈಯಲ್ಲಿ ಬಂದಿತು. ಎಲ್ಲಿಯವರೆಗೆ ಗ್ರಾಮಗಳ ಜನರು ಅನಕ್ಷರಸ್ಥರು. ಅಜ್ಞಾನಿಗಳಾಗಿರುವರೋ ಅಲ್ಲಿಯವರೆಗೆ ಪಂಚಾಯತರಾಜ್ಯ ವ್ಯವಸ್ಥೆಯು ಪರಿಣಾಮಕಾರಿಯಾಗಿ ಕೆಲಸಮಾಡುವುದಿಲ್ಲ. ಗ್ರಾಮಗಳ ಕೊಲೆಗಡುಕರು, ವೇಶ್ಯೆಯರು, ಕುಡುಕರು, ಪುಂಡಪೋಕರಿಗಳು ಅಧಿಕಾರಕ್ಕೆ ಬಂದು, ಸರಕಾರದ ಸವಲತ್ತುಗಳನ್ನು ದುರುಪಯೋಗ ಪಡಿಸಿಕೊಳ್ಳುವರು ಸ್ವತಃ ಕಂದಾಯ ಇಲಾಖೆಯಲ್ಲಿ ಕ್ಲಾರ್ಕ, ಶಿರಸ್ತೇದಾರ, ತಹಶೀಲ್ದಾರ ಆಗಿ ಸೇವೆ ಸಲ್ಲಿಸಿದ್ದ ಕುಮಾರ ಕಕ್ಕಯ್ಯ ಪೋಳ ಅವರಿಗೆ ಪಂಚಾಯತಗಳ ವ್ಯಾಪಕ ಪರಿಚಯವಿತ್ತು ಅಂತೆಯೇ ತಮ್ಮ ವಚನವೊಂದರಲ್ಲಿ ಅಂತಹ ಒಂದು ಕೆಟ್ಟ ಗ್ರಾಮಪಂಚಾಯತಿ ಆಡಳಿತದ ಚಿತ್ರಣವನ್ನು ನೀಡಿದ್ದಾರೆ–

ನಡವೂರ ಪುಂಡ ಸಿಪಾಯಿಯಾಗಿ
ನೆರೆಯೂರ ಕುಡುಕ ಕಾರ್ಯದರ್ಶಿಯಾದೊಡೆ,
ಗೊಂಚಲ ಮುತ್ತೈದೆ ಸದಸ್ಯೆಯಾಗಿ
ಕೊಂಡೆಯ ಕೊಲೆಗಡುಕ ಸರಪಂಚನಾದಡೆ
ಆ ಗ್ರಾಮ ಪಂಚಾಯತಿಯ ಹಣೆಬರಹ
ನೋಡೆಂದ ಕುಮಾರ ಕಕ್ಕಯ್ಯ.[೨೯]

ಒಳ್ಳೆಯ ಗ್ರಾಮಪಂಚಾಯತಿಗಳು ಗ್ರಾಮಾಭಿವೃದ್ಧಿಗಾಗಿ, ಗ್ರಾಮಗಳ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುತ್ತವೆ. ೧೯೮೩ ರಲ್ಲಿ ಕರ್ನಾಟಕದಲ್ಲಿ ಹೊಸ ವ್ಯವಸ್ಥೆಯನ್ನು ತರಲಾಯಿತು. ಮಂಡಲ ಪಂಚಾಯತ, ನ್ಯಾಯ ಪಂಚಾಯತ, ತಾಲೂಕಾ ಪಂಚಾಯತ, ಜಿಲ್ಲಾ ಪರಿಷತ್ತುಗಳು ರಚನೆಗೊಂಡು ಹೊಸ ಆಡಳಿತ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದಿತು. ಸರ್ಕಾರಗಳು ಈ ವ್ಯವಸ್ಥೆಯನ್ನು ಸರಿಯಾಗಿ ಕಾರ್ಯನಿರ್ವಹಿಸುವಂತೆ ಮಾಡಲು ಗ್ರಾಮೀಣಾಭಿವೃದ್ಧಿ ಇಲಾಖೆಯನ್ನು ರೂಪಿಸಿ, ಅದಕ್ಕೊಬ್ಬ ಕ್ಯಾಬಿನೆಟ್ ದರ್ಜೆಯ ಸಚಿವರನ್ನೂ ನೇಮಿಸಿವೆ.

“ಗ್ರಾಮ ಸ್ವರಾಜ್ಯವೆಂದರೆ ಅದಕ್ಕೆ ಅದರದೇ ಆದ ಸ್ವರೂಪ, ಅಸ್ತಿತ್ವವಿದೆ. ಆದರ್ಶವಿದೆ. ಆಸ್ತಿ ಸಂಪತ್ತು ಎಲ್ಲಾ ಇದೆ. ಅಲ್ಲಿ ಎಲ್ಲರೂ ಕೂಡಿ ಬೆಳೆಯುವ, ಕೂಡಿ ಹಂಚಿಕೊಳ್ಳುವ, ಕೂಡಿ ಉಣ್ಣುವ ಒಂದು ಸಾಂಘಿಕ ಸಮನ್ವಯ ಬದುಕು ಏರ್ಪಟ್ಟಿರುತ್ತದೆ. ಅಲ್ಲಿ ಶ್ರಮದೊಂದಿಗೆ ಸಂಸ್ಕೃತಿ ರೂಪ ಪಡೆಯುವಂತಹುದು.

---

೨೮. ದೇವರು ಮತ್ತು ದಲಿತರು : ಪಂಚಾಯತ ರಾಜ್ಯ– ಈರಯ್ಯ ಕಿಲ್ಲೇದಾರ ಪು–೨
೨೯. ಕುಮಾರ ಕಕ್ಕಯ್ಯನ ವಚನಗಳು– ಪು–೭೮ ವ–೩೦೧

ಇಂತಹ ಶ್ರಮಸಂಸ್ಕೃತಿಯೇ ಭಾರತವನ್ನು ಬಹು ಸಂಸ್ಕೃತಿಯ ಪ್ರಧಾನ ನೆಲೆಯಲ್ಲಿ ಕಟ್ಟುವ ದೇಶಿ ಪರಂಪರೆಯೊಂದನ್ನು ಬೆಳಗುವ ಗಾಂಧಿಯ ಆದರ್ಶರಾಜ್ಯದ ಕನಸುಗಳಾಗಿರುತ್ತವೆ. ಇಲ್ಲಿ ಆಧುನಿಕ ರೀತಿಯ ಬಂಧನ ಕಟ್ಟಳೆಗಳಿರುವುದಿಲ್ಲ. ಇಲ್ಲಿ ಪ್ರಜೆಗಳೇ ಪ್ರಭುಗಳು, ಪ್ರಭುಗಳೇ ಸೇವಕರು."[೩೦]

ಇಂದು ಜಾಗತೀಕರಣವೆಂಬುದು ಗ್ರಾಮಭಾರತದ ಕನಸನ್ನು ನುಚ್ಚುನೂರು ಮಾಡುತ್ತಿದೆ. ಇದರಿಂದ ನಮ್ಮ ಗ್ರಾಮಗಳ ದೇಶವಾಗಿರುವ ಭಾರತವು ಜಾಗತೀಕರಣದ ಕಪಿಮುಷ್ಟಿಯಿಂದ , ಪೇಟೆಂಟಗಳೆಂಬ ಬಲಿಷ್ಠರಾಷ್ಟ್ರಗಳ ಬಹುರಾಷ್ಟ್ರೀಯ ಕಂಪನಿಗಳ ಕಾಯ್ದೆಗಳಿಂದ ಹೊರಬಂದು ನಿಜವಾಗಿಯೂ ಅಭಿವೃದ್ಧಿಯಾಗಬೇಕಿದೆ. ಸ್ವಾರ್ಥ–ಧೂರ್ತ– ಪಟ್ಟಭದ್ರ ರಾಜಕಾರಣಿಗಳು ಆಡಳಿತ ಚುಕ್ಕಾಣಿ ಹಿಡಿದಿರುವವರೆಗೆ ಇದು ಸಾಧ್ಯವಿಲ್ಲ.

**v) ಆರ್ಥಿಕ ಸ್ವಾವಲಂಬನೆ–ಕಲ್ಯಾಣರಾಜ್ಯ:**

ಯಾವುದೇ ಒಂದು ರಾಜ್ಯ, ರಾಷ್ಟ್ರವು ಕಲ್ಯಾಣ ರಾಜ್ಯ (Welfare State) ಎನಿಸಿಕೊಳ್ಳಬೇಕಾದರೆ ಅಲ್ಲಿ ವಾಸಿಸುತ್ತಿರುವ ಸರ್ವರಿಗೂ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ. ಸಾಂಸ್ಕೃತಿಕವಾಗಿ ಸಮಾನವಾದ ಅವಕಾಶಗಳಿರಬೇಕು. ಸಮತೆ–ಸ್ವಾತಂತ್ರ್ಯ–ಬಂಧುತ್ವ–ಮಾನವೀಯತೆಯುಳ್ಳ ಸಮಾಜವಿರಬೇಕು. ಪ್ರತಿಯೊಬ್ಬರಿಗೂ ಉದ್ಯೋಗಾವಕಾಶಗಳು ಲಭ್ಯವಿರಬೇಕು. ಯಾವ ರಾಜ್ಯದಲ್ಲಿ ಪ್ರತಿಯೊಬ್ಬರಿಗೂ ಅನ್ನ, ಅರಿವೆ, ಆಶ್ರಯ, ಅರಿವು, ಔಷಧಗಳೆಂಬ ಶಿವಪಂಚಾಯತಗಳು ಲಭ್ಯವಿರುತ್ತವೆಯೋ ಆ ರಾಜ್ಯವು ಸುಖೀರಾಜ್ಯ, ಕಲ್ಯಾಣರಾಜ್ಯವೆನಿಸುತ್ತದೆ.

ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಪ್ಲೇಟೋ–ಅರಿಸ್ಟಾಟಲರ ವಿಚಾರಧಾರೆಯ ಮೇಲೆ, ಮಾರ್ಕ್ಸವಿಚಾರಧಾರೆಯ ಮೇಲೆ, ಮಾವೋ–ಲೆನಿನ್ ವಿಚಾರಧಾರೆಯ ಮೇಲೆ ಆರ್ಥಿಕ–ಸ್ವಾವಲಂಬನೆಯ ಕಲ್ಯಾಣರಾಜ್ಯಗಳ ಸಾಧನೆಯ ಗುರಿ ಇಟ್ಟುಕೊಂಡು ಹಲವಾರು ಬದಲಾವಣೆಗಳನ್ನು ಆಡಳಿತದಲ್ಲಿ ರೂಪಿಸಲಾಯಿತು. ಭಾರತದಲ್ಲಿ ವರ್ಣಾಶ್ರಮಧರ್ಮ–ಸಮಾಜ ವ್ಯವಸ್ಥೆಯು ಸಾವಿರಾರು ವರುಷಗಳಿಂದ ಸಾಗಿಬಂದಿದ್ದರೂ ಕೂಡ ಬಸವಣ್ಣನವರ ಕಾಲದಲ್ಲಿ ಅದಕೊಂದು ಹೊಸ ಆಯಾಮ ದೊರೆಯಿತು.

ಶ್ರೀ ಬಸವೇಶ್ವರರ ರಾಜನೀತಿಯು ಬಹು ಮೇಲಾದುದು. ಯಾರಿಗೂ ಹಿಂಸೆಯಾಗದೆ, ಆರ್ಥಿಕ ತೊಂದರೆಯನ್ನನುಭವಿಸದೆ, ಮೇಲು–ಕೀಳುಗಳೆಂಬ ತೊಂದರೆಗೊಳಗಾಗದೆ, ಎಲ್ಲರೂ ಯಾವುದಾದರೊಂದು ಉದ್ಯೋಗ ಮಾಡಬೇಕು. ಭಿಕ್ಷೆಯಿಂದ ಉದರ ಪೋಷಣೆ ಮಾಡಕೂಡದೆಂಬುದು ಕಟ್ಟಪ್ಪಣೆಮಾಡಿ ರಾಜ್ಯದಲ್ಲಿ ಕೃತಿಗೆ ತರುವ ಸಾಹಸ ಮಾಡಿ ಜನಗಳಲ್ಲಿ ನೆಮ್ಮದಿಯ ಮಾರ್ಗವನ್ನು ತೋರಿಸಿಕೊಟ್ಟರು. ಎಲ್ಲರೂ ದುಡಿದರೆ ಯಾವ ರಾಜ್ಯದಲ್ಲಿಯೇ ಆಗಲಿ ಆರ್ಥಿಕ

೩೦. ಸಾಹಿತ್ಯ ಸಿರಿ : ಜಾಗತೀಕರಣದಲ್ಲಿ ನಲುಗುತ್ತಿರುವ ಗಾಂಧೀಜಿಯ ಗ್ರಾಮಭಾರತ– ಡಾ॥ ನಿಂಗಪ್ಪ ಮುದೇನೂರ ಪು ೨೬೨–೨೬೩

ತೊಂದರೆ ಬರಲಾರದು. ಜನಗಳು ದುಡಿಯಲಾರದ ಹೇಡಿಗಳಾದರೆ ಆ ದೇಶವು ಆರ್ಥಿಕ ಮುಗ್ಗಟ್ಟಿನಿಂದ ಬಳಲಬೇಕಾಗುತ್ತದೆ."[೩೧]

ಭಾರತದಲ್ಲಿ ಕೌಟಿಲ್ಯನ ಅರ್ಥಶಾಸ್ತ್ರ ಬಹಳ ಪ್ರಾಚೀನವಾಗಿದೆ. ಅದರಲ್ಲಿ ಜನರಿಂದ ಅವರ ಭಾವನೆಗಳನ್ನು ಉಪಾಯದಿಂದ ಉಪಯೋಗಿಸಿ ಹಣ ಸಂಗ್ರಹಿಸುವ ವಿಧಾನಗಳನ್ನು ತಿಳಿಸುತ್ತಾನೆ. ರಾಜ್ಯ ಹಾಗೂ ಪುರೋಹಿತರು ಜನರಲ್ಲಿಯ 'ಅಜ್ಞಾನ, ಅಂಧಶ್ರದ್ಧೆಗಳನ್ನೇ ಬಂಡವಾಳ ಮಾಡಿಕೊಂಡು ಅವರ ಶ್ರಮದ ಫಲವನ್ನು ಸುಲಭವಾಗಿ ಕೊಳ್ಳೆ ಹೊಡೆದು ಸುಖ ಭೋಗ ವಿಲಾಸ ಜೀವನಗೈಯಲು ಅನುಸರಿಸದ ಮಾರ್ಗವೇ ಇಲ್ಲ '[೩೨] ಎಂದು ಹೇಳಬಹುದು.

ಅರ್ಥಶಾಸ್ತ್ರದ ಪಿತಾಮಹನೆಂದೇ ಆಧುನಿಕಯುಗದಲ್ಲಿ ಖ್ಯಾತನಾಗಿರುವ ಆಡಂ ಸ್ಮಿತ್‌ನು ತನ್ನ ಆರ್ಥಿಕ ಸಿದ್ಧಾಂತದಲ್ಲಿ ಮೂರು ಅಂಶಗಳನ್ನು ೧೮ ನೇ ಶತಮಾನದಲ್ಲಿ ಪ್ರತಿಪಾದಿಸಿದ್ದಾನೆ. ಬಯಕೆ–ಪ್ರಯತ್ನ–ತೃಪ್ತಿ ಎಂಬುವೇ ಆತನ ಸಿದ್ಧಾಂತದ ಸೂತ್ರಗಳಾಗಿವೆ. ಆದರೆ ೧೨ ನೆಯ ಶತಮಾನದಲ್ಲಿಯೇ ಬಸವಣ್ಣನವರು 'ಕಾಯಕ–ದಾಸೋಹ–ಪ್ರಸಾದ' ಎಂದು ಪ್ರತಿಪಾದಿಸಿದ ಆರ್ಥಿಕ ಸಿದ್ಧಾಂತ ಆಶ್ಚರ್ಯವೆನಿಸುತ್ತದೆ.

'ಕಾಯಕ' ಎಂಬುದು ಬಸವಾದಿಶರಣರ ಒಂದು ವಿಶಿಷ್ಟವಾದ ಸಿದ್ಧಾಂತ. ಕಾಯಕ ಎಂದರೆ ಕೇವಲ ದೈಹಿಕ ದುಡಿಮೆಯಲ್ಲ. ತನು–ಮನ–ಭಾವ ಎಲ್ಲವೂ ಸಂಗಮಿಸಿ ಸತ್ಯ ಶುದ್ಧವಾಗಿ ಮಾಡುವ ಕೆಲಸವಾಗಿದೆ. ಕಾಯಕದಿಂದ ಹಣದಗಳಿಕೆಯಾಗಬೇಕು. ಆ ಗಳಿಕೆಯು ವ್ಯಷ್ಟಿ–ಸಮಷ್ಟಿಯ ಹಿತಕ್ಕೆ ಬಳಕೆಯಾಗಬೇಕು. ಅದರಿಂದ ವ್ಯಕ್ತಿ–ಸಮಾಜಗಳ ಜೀವನ ಪ್ರಸನ್ನತೆಯ ಪ್ರಸಾದ ಸ್ವರೂಪವಾಗಬೇಕು.

'ಕಾಯಕವು ಉದರಂಭರಣೋಪಾಯ ಮಾತ್ರವಲ್ಲ, ತನ್ನನ್ನು ಆಶ್ರಯಿಸಿದವರ ಕಾಯದ ಗುಣಗಳನ್ನು ಕಳೆದು ಮನದ ವಿಕಾರಗಳನ್ನು ಮಾಣಿಸಿ, ಆತ್ಮದ ಐಸಿರಿಯನ್ನು ಒದಗಿಸುವ ದಿವ್ಯ ಸಾಧನ. ಅದು ಜೀವನೋಪಾಯ, ಸ್ವಾವಲಂಬನ, ಆತ್ಮೋತ್ಕರ್ಷ, ದಾಸೋಹದ ಮೂಲಕ ಚರಸೇವೆ. ಧನದಲ್ಲಿ ಶುಚಿತ್ವ–ಪ್ರಾಣದಲ್ಲಿ ನಿರ್ಭಯತ್ವ, ಧೀರತೆ–ಸ್ವತಂತ್ರಗಳ ಸಂಗಮ.... ಕಾಯಕವೇ ಕಲ್ಪವೃಕ್ಷ, ಕಾಯಕವೇ ಯೋಗ, ಕಾಯಕವೇ ಕೈಲಾಸ'[೩೩]ವಾಗಿದೆ.

ಕಾಯಕ ಎಂಬುದು ವೃತ್ತಿಗೌರವ–ವೃತ್ತಿ ದೈವತ್ವ ಎರಡನ್ನೂ ಏಕಕಾಲಕ್ಕೆ ಸಂಗಮಿಸಿಕೊಂಡು ಮಾನವನನ್ನು ಮಹಾದೇವನನ್ನಾಗಿಸುವ ಶಕ್ತಿ ಹೊಂದಿದೆ. ಕಾಯಕ ಜೀವಿಗಳಿಗೆ ಗೌರವವಿದೆ. 'ದೇಹ ದಂಡಿಸಿ ಬೆವರು ಸುರಿಸಿ ಪರಿಶ್ರಮ ಜೀವಿಗಳಾಗಿರುವವರನ್ನು ಕೀಳಾಗಿ ಕಾಣುವ ಪದ್ಧತಿ ಕಾಯಕದಲ್ಲಿಲ್ಲ. ಅವರಲ್ಲಿ ಪ್ರತಿಯೊಬ್ಬರೂ ತಮ್ಮ ಹುಟ್ಟು, ಜಾತಿ, ಕುಲ, ಅಧಿಕಾರ ಅಂತಸ್ತುಗಳನ್ನು ಮರೆತು

---

೩೧. ಬಸವತತ್ವ ರತ್ನಾಕರ–ಚಂದ್ರಶೇಖರ ಶಾಸ್ತ್ರಿ ಹಿರೇಮಠ ಹೊಳಲು ಪು –೫೧೮
೩೨. ಬಸವತತ್ವ ಪ್ರದೀಪಕೆ–ಸಿದ್ಧರಾಮಶರಣರು ಹಾಗೂ ಡಿ.ಎಂ. ಧನ್ನೂರ ಪು–೧೭೯
೩೩. ಬಸವಣ್ಣನವರ ಜೀವನ ಹಾಗೂ ಸಂದೇಶ– ಡಾ॥ ಸಿದ್ದಯ್ಯ ಪುರಾಣಿಕ ಪು–೧೦೧–೧೦೨

ಒಂದಿಲ್ಲೊಂದು ಕಾಯಕ ಮಾಡಲೇಬೇಕು. ಇಂಥ ಕಾಯಕಗೌರವದಿಂದ ಸಾಮಾಜಿಕ ವೈಷಮ್ಯಗಳು ದೂರವಾಗಿ, ಸಮಾನತೆ ತನ್ನಿಂದ ತಾನೇ ನೆಲೆಗೊಳ್ಳುತ್ತದೆ.'[೩೪]

ಮಾರ್ಕ್ಸ ಸಿದ್ಧಾಂತದಲ್ಲಿ 'ವೃತ್ತಿ ಗೌರವ' ಮಾತ್ರ ಇದೆ. ಆದರೆ ಬಸವಣ್ಣನವರ ಕಾಯಕ ಸಿದ್ಧಾಂತದಲ್ಲಿ 'ವೃತ್ತಿ ಗೌರವದೊಂದಿಗೆ ವೃತ್ತಿ ದೈವತ್ವ' ವೂ ಅಡಕವಾಗಿರುವುದರಿಂದ, ಎಲ್ಲ ಕಾಯಕಗಳೂ ಯಾವುದೇ ಭೇದ-ಭಾವ, ಮೇಲು-ಕೀಳು ಎನ್ನದೇ ವ್ಯಕ್ತಿ-ಸಮಾಜ-ರಾಷ್ಟ್ರಕಲ್ಯಾಣಕ್ಕೆ ಅತ್ಯುಪಯುಕ್ತವಾಗಿರುತ್ತವೆ.

ಪ್ರಧಾನಿಯ ಕಾಯಕದಿಂದ ಹಿಡಿದು ಚಮ್ಮಾರನ ಕಾಯಕದವರೆಗೆ ಎಲ್ಲವೂ ಅಷ್ಟೇ ಸಮಾನ ಗೌರವ ಮತ್ತು ದೇಶಾಭಿವೃದ್ಧಿಗೆ ಮಹತ್ವವುಳ್ಳವುಗಳಾಗಿವೆ. ಕಾಯಕಗಳಲ್ಲಿ ಮೇಲು-ಕೀಳು ಎಣಿಸಬಾರದು 'ಕಾಯಕದಲ್ಲಿ ಕುಲವನರಸಬಾರದು' ಎಂದು ಬಸವವಾಣಿ ಹೇಳುತ್ತದೆ. "ಕ್ರಿಯಾಶಕ್ತಿಯ ಮೂಲವಾದ ಕಾಯಕ ವಿಷಯದಲ್ಲಿ ಬಸವಣ್ಣನವರು ಒಂದು ಹೊಸ ಕಾಂತ್ರಿಯನ್ನೇ ಕೈಕೊಂಡರು. ಹೊಸಯುಗವನ್ನೇ ಸಂಸ್ಥಾಪಿಸಿದರು"[೩೫] ಎಂಬ ಡಾ॥ ಜ.ಚ.ನಿ. ಅವರ ಮಾತುಗಳಲ್ಲಿ ಸತ್ಯವಿದೆ.

'ಕಾಯಕ' ವಿಲ್ಲದೆ ಕೇವಲ ದೇವಾನುದೇವತೆಗಳನ್ನು ಕಲ್ಪಿಸಿಕೊಂಡು ಪೂಜೆಗಳಲ್ಲಿ ನಿರತರಾಗಿರುವವರನ್ನು ವಚನಕಾರ ಕುಮಾರ ಕಕ್ಕಯ್ಯ ಪೋಳ ಅವರು ವಿಡಂಬನೆ ಮಾಡುತ್ತಾರೆ-

ಬಿತ್ತದೆ, ಭೂಮಿ ಪೂಜಿಸಿದರೆ ಬೆಳೆ ಬರುವುದೇ?
ತಿನ್ನದೇ, ಅನ್ನ ಪೂಜಿಸಿದರೆ ಹೊಟ್ಟೆ ತುಂಬುವುದೇ?
ಗಳಿಸದೇ, ಲಕ್ಷ್ಮೀ ಪೂಜಿಸಿದರೆ ಸಂಪತ್ತು ಸಿಗುವುದೇ?
ಓದದೇ, ಸರಸ್ವತಿ ಪೂಜಿಸಿದರೆ ವಿದ್ಯೆ ಲಭಿಸುವುದೇ?
ಕಾಯಕವಿಲ್ಲದೇ ಪೂಜಿಸಿದೊಡೆ, ಪ್ರಾರ್ಥಿಸಿದೊಡೆ
ದೇವನೊಲಿವನೇ?
ಮಾಡದೆ ಬೇಡುವದು ಮಹಾಪಾಪವೆಂದ
ಕುಮಾರ ಕಕ್ಕಯ್ಯ.[೩೬]

ಇಂದು ದೇಶದ ತುಂಬೆಲ್ಲಾ ಲಕ್ಷ ಲಕ್ಷ ಮಠ-ಮಂದಿರಗಳು, ದೇವಾಲಯ-ಮಸೀದೆ-ಚರ್ಚು-ಪಗೋಡಾ-ಬಸದಿಗಳು. ಎಲ್ಲೆಡೆಯಲ್ಲಿಯೂ ಪೂಜಾರಿ - ಪುರೋಹಿತರು, ಸಾಧು-ಸನ್ಯಾಸಿಗಳು ಕೋಟಿ-ಕೋಟಿ ಸಂಖ್ಯೆಯಲ್ಲಿ ಅರ್ಚನೆ-ಪೂಜನೆ, ಧ್ಯಾನ-ಜಪ-ತಪ-ಅನುಷ್ಠಾನಗಳಲ್ಲಿ ತೊಡಗಿಸಿಕೊಂಡು ಕಾಯಕಷ್ಟಮಾಡಿ ಕಾಯಕಮಾಡುವ ಜನರ ಪ್ರತಿಫಲದ ಮೇಲೆ ಪರಾವಲಂಬಿ ಜೀವಿಗಳಾಗಿ ಜೀವಿಸುತ್ತಿರುವುದನ್ನು ಕಾಣುತ್ತಿದ್ದೇವೆ. 'ಪೂಜೆ ಮಾಡುವುದೇ ಕಾಯಕ' ಎಂದು ತಿಳಿದುಕೊಂಡಿರುವ ಜನರೇ ಎಲ್ಲೆಡೆಯಲ್ಲಿಯೂ ಕಾಣಸಿಗುತ್ತಾರೆ. ಇಂಥವರು

---

೩೪. ಸಮಕಾಲೀನತೆ-ವಚನಸಾಹಿತ್ಯ-ಶ್ರೀ ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿಗಳು ಪುಟ-೨೫
೩೫. ಬಸವಗೀತ-ಶ್ರೀ ಜ.ಚ.ನಿ. ಮುನ್ನುಡಿ ಪು-೬೨
೩೬. ಕುಮಾರ ಕಕ್ಕಯ್ಯನ ವಚನಗಳು-ಪು-೨೪೬, ವ-೯೪೮

ಸ್ವಾವಲಂಬನೆಯ ಜೀವನ ಬಾಳಲು ಸಾಧ್ಯವೇ? 'ಕಾಯಕವೇ ಪೂಜೆ' ಎಂಬುದನ್ನು ತಿಳಿಯದ ವಿನಹ ರಾಷ್ಟ್ರವು ಕಲ್ಯಾಣರಾಜ್ಯವಾಗುವುದಿಲ್ಲ.

ಅಂತೆಯೇ ಕುಮಾರ ಕಕ್ಕಯ್ಯನವರು ನಿಷ್ಠುರವಾಗಿ ತಮ್ಮ ವಚನದಲ್ಲಿ ನುಡಿಯುತ್ತಾರೆ–

ಮಠ ಮಂದಿರಗಳೋ
ಪರಾವಲಂಬಿಗಳ ಪ್ರತಿಷ್ಠೆಯ ಬೀಡು.
ತೀರ್ಥ ಕ್ಷೇತ್ರಗಳೋ
ವ್ಯವಸ್ಥಿತ ಶೋಷಣೆಯ ಜಾಡು.
ದೇವರಲಿ ಬೇಡುವ ಜನಗಳಿಗೆ
ಮೈಮುರಿದು ದುಡಿಯುವ ಪ್ರಶ್ನೆ ಎಲ್ಲಿ?
ಬಹಳ ದೇವಾಲಯಗಳಿರುವ ದೇಶದಲ್ಲಿ
ಭಾಳ ಬಡತನವೆಂದ ಕುಮಾರ ಕಕ್ಕಯ್ಯ[೩೭]

'ಶರಣರು ಅರ್ಥ ಎಂಬುದನ್ನು ಸಿರಿ.ಹೊನ್ನು, ದ್ರವ್ಯಗಳೆಂಬ ಸಂಕುಚಿತ ಅರ್ಥದಿಂದ ಪರಿಗಣಿಸಲಿಲ್ಲ. ಅರ್ಥವನ್ನು ಮಾಯೆಯೆಂದೂ, ಅಧ್ಯಾತ್ಮಕ್ಕೆ ಅಡ್ಡಿಯಾಗುತ್ತದೆಂದೂ, ಅಹಂಕಾರದ ಪ್ರತೀಕವೆಂದೂ ಸ್ವೀಕರಿಸಲಿಲ್ಲ. ಅರ್ಥವಿಲ್ಲವೆಂದು ಅವಮಾನಕ್ಕೂ ಒಳಗಾಗಲಿಲ್ಲ. ಬದಲಾಗಿ ಸಾತ್ವಿಕ ಅಭಿಮಾನವನ್ನು ಅರ್ಥದಲ್ಲಿಟ್ಟುಕೊಂಡರು. ಅದನ್ನು ದಾಸೋಹಕ್ಕಾಗಿ ಸವೆಸಿದರು. ಸದ್ವಿನಿಯೋಗದ ಈ ಭಾವನೆ ಅವರನ್ನು ಇವತ್ತಿಗೂ ಜೀವಂತವಾಗಿರಿಸಿದೆ.'[೩೮]

'ಗಳಿಕೆ'ಯ ಸಂಪತ್ತು ಅನಾವಶ್ಯಕವಾಗಿ 'ಉಳಿಕೆ' ಯಾಗತೊಡಗಿದರೆ ಸಂಗ್ರಹ ಹೆಚ್ಚಾಗಿ ಬಂಡವಾಳಶಾಹಿ ಮನೋಭಾವ ಪ್ರಾರಂಭವಾಗುತ್ತದೆ. ಆದ್ದರಿಂದ ಅದನ್ನು ಸಮಾಜರೂಪಿ ಜಂಗಮಕಾರ್ಯಕ್ಕೆ ಬಳಸಲೇಬೇಕು. ಹೀಗೆ ಬಳಸುವ ಪ್ರಕ್ರಿಯೆಯೇ 'ದಾಸೋಹ' ಸಿದ್ಧಾಂತವಾಗಿದೆ.

ಬಸವಾದಿಶರಣರು ಸಾವಿರಾರು ವರುಷಗಳಿಂದ ಸಾಗಿ ಬಂದಿದ್ದ 'ದಾನ' ಪದ್ಧತಿಯನ್ನು ತಿರಸ್ಕರಿಸಿದರು. ಯಾಕೆಂದರೆ–"ದಾನ, ನೆರವು ಮುಂತಾದ ಔದಾರ್ಯದ ವಿಕೃತರೂಪಗಳು ಕೊಡುವವರಿಗೂ, ಪಡೆಯುವವರಿಗೂ ಕೂಡಿಯೇ ಕೇಡು ಮಾಡಿವೆ. ಅವು ಸ್ವಾವಲಂಬನೆಯ ಮೂಲಕ್ಕೆ ಕುಠಾರವಾಗಿ, ಪಡೆದವರಲ್ಲಿ ಪರಾವಲಂಬನೆಯನ್ನೂ, ಪರಾಭೂತ ಮನೋಭಾವನೆಯನ್ನೂ ಹುಟ್ಟಿಸುತ್ತವೆ. ಅವು ಸಮಾಜಕ್ಕೆ ಏನನ್ನೂ ನೀಡದೆ ಸಮಾಜದ ಸಂಪತ್ತಿನಲ್ಲಿ ಪಾಲು ಪಡೆಯುವ ಅನುತ್ಪಾದಕ ಜೀವಿಗಳ ಅನಿಷ್ಟ–ವರ್ಗವೊಂದನ್ನು ಹುಟ್ಟಿಸುತ್ತವೆ."[೩೯]

---

೩೭. ಕುಮಾರ ಕಕ್ಕಯ್ಯನ ವಚನಗಳು– ಪು–೧೨೪, ವ–೪೭೫
೩೮. ಶರಣರ ಆರ್ಥಿಕ ಚಿಂತನೆ–ಡಾ॥ ಜಯಶ್ರೀ ದಂಡೆ ಪು–೩
೩೯. ಶರಣ ಸರಣಿ ಕಾಯಕದ ಅರ್ಥ ಪ್ರಪಂಚ– ಡಾ॥ ಸಿದ್ಧಯ್ಯ ಪುರಾಣಿಕ ಪು–೯೪

ದೇವರಿಂದ ಮಾನವರಿಗೆ–ಸಕಲ ಜೀವರಾಶಿಗಳಿಗೆ ಲಬ್ಧವಾಗಿರುವ ಪೃಥ್ವಿ–ಅಪ್ಪು–ತೇಜ–ವಾಯು–ಆಕಾಶಗಳು, ಮಳೆ–ಬೆಳೆ, ನದಿ–ಸಾಗರಗಳು ಎಲ್ಲವೂ ದಾನರೂಪವಾಗಿ ಬಂದಿವೆ. ಆದರೆ ಮಾನವ–ಮಾನವರಿಗೆ ಮಾಡುವುದು ದಾಸೋಹವಾಗಿರಬೇಕೇ ಹೊರತು ದಾನವಲ್ಲ. ದಾನದಲ್ಲಿ ಕೊಡುವವನಲ್ಲಿ ಮೇಲರಿಮೆ, ಅಹಂಕಾರವಿದೆ, ಪಡೆಯುವವನಲ್ಲಿ ಕೀಳರಿಮೆ ದೈನ್ಯವಿದೆ. ಇದು ಅಸಮಾನತೆ ಹುಟ್ಟು ಹಾಕುತ್ತದೆ. ಅಂತೆಯೇ ಶರಣರು ಸಮಾನತೆಯ 'ದಾಸೋಹ' ಪದ್ಧತಿ ಜಾರಿಗೆ ತಂದರು. " ಅರ್ಥದ ಸಮರ್ಪಕ ಸದ್ವಿನಿಯೋಗವೇ ದಾಸೋಹ. ದಾಸೋಹವೆಂದರೆ ಸಾಮೂಹಿಕ ಭೋಜನವಲ್ಲ. ಇದ್ದವರು ಇಲ್ಲದವರೊಡನೆ ಹಂಚಿಕೊಂಡು ಉಣ್ಣುವ ತತ್ವವೇ ದಾಸೋಹ. ಹಂಚಿಕೊಂಡು ಉಣ್ಣುವದು ಸಮಾಜವಾದ, ಹಂಚದೇ ಉಣ್ಣುವುದು ಬಂಡವಾಳಶಾಹಿವಾದ"[೪೦]

ಹಣದ ಗಳಿಕೆ, ಹಣದ ಬಳಕೆಗಷ್ಟೇ ಕಾಯಕ–ದಾಸೋಹಗಳು ಸೀಮಿತವಾಗಿರದೇ ಪ್ರಸಾದ ಸಂತೃಪ್ತಿಯ, ಪ್ರಸನ್ನತೆಯ ಶರಣಜೀವನಕ್ಕೆ ಕಾರಣವಾಗಬೇಕು. ಎಲ್ಲಿ ಅತೃಪ್ತಿಯಿದೆಯೋ ಅಲ್ಲಿ ಅಶಾಂತಿ ಇದೆ. ಅಂತೆಯೇ ಶರಣರು ಪ್ರಸಾದ ತತ್ವವನ್ನು ರೂಪಿಸಿದರು. ಸಂಪತ್ತು ಹೆಚ್ಚಿದಷ್ಟೂ ಅತೃಪ್ತಿ ಹೆಚ್ಚುತ್ತದೆ. ಸಂಪತ್ತು ಇಲ್ಲದಿದ್ದರೆ ಕೊರಗು ವೃದ್ಧಿಸುತ್ತದೆ. ಕುಮಾರ ಕಕ್ಕಯ್ಯನವರು ತಮ್ಮ ವಚನವೊಂದರಲ್ಲಿ ಹೇಳುತ್ತಾರೆ.

ಬೆಂಕಿ ಎಷ್ಟೊಂದು ಉಲ್ಬಣಗೊಳ್ಳುವದೋ
ಅಷ್ಟೊಂದು ಹೆಚ್ಚು ಹೆಚ್ಚು ಸುಡುವಂತೆ,
ಮಹಾಪೂರ ಎಷ್ಟೊಂದು ಮೆರೆದಿರುವುದೋ
ಅಷ್ಟೊಂದು ಹೆಚ್ಚು ಹೆಚ್ಚು ಅನಾಹುತ ಮಾಡುವಂತೆ,
ಸಂಪತ್ತು ಎಷ್ಟೊಂದು ಮಿತಿ ಮೀರುವುದೋ
ಅಷ್ಟೊಂದು ಅಶಾಂತಿ ಅತೃಪ್ತಿ ಹೆಚ್ಚುವದೆಂದ
ಕುಮಾರ ಕಕ್ಕಯ್ಯ[೪೧]

ಬಸವಾದಿ 'ಶರಣರ ರಾಜಕೀಯ ಧೋರಣೆಗೆ ಭದ್ರವಾದ ಸಾಮಾಜಿಕ ಮತ್ತು ಆರ್ಥಿಕ ಬುನಾದಿ ಇತ್ತು. ವರ್ಗರಹಿತ ಸರಿ ಸಮಾನವಾದ ಸ್ವಾತಂತ್ರ್ಯ ನಿಜವಾದ ಪ್ರಜಾ–ಪ್ರಭುತ್ವಕ್ಕೆ ಸಾಕ್ಷಿಯಾಗಿತ್ತು. ಕೇವಲ ರಾಜಕೀಯ ಸ್ವಾತಂತ್ರ್ಯ ಸಮಾಜಕ್ಕೆ ಶಾಂತಿ, ಸಮೃದ್ಧಿಯನ್ನು ಕೊಡಲಾರದು ಎಂಬ ಅಂಶ ಶರಣರಿಗೆ ಗೊತ್ತಿತ್ತು. ಅದಕ್ಕೆಂತಲ್ಲೇ ಅವರು ಆರ್ಥಿಕ ಸ್ವಾತಂತ್ರ್ಯದ ಸಂಬಂಧ ಕ್ರಾಂತಿಯನ್ನೇ ಗೈದರು.'[೪೨] ವಚನಕಾರರು ಅನುಭವ ಮಂಟಪದ ಮೂಲಕ ಚಿಂತನ–ಮಂಥನ

---

೪೦. ಬಸವನಿಷ್ಠೆ–ಶರಣರ ಆರ್ಥಿಕ ಸಿದ್ಧಾಂತ– ನಿಷ್ಠಿರುದ್ರಪ್ಪ ಪು–೮೩
೪೧. ಕುಮಾರ ಕಕ್ಕಯ್ಯನ ವಚನಗಳು–ಪು–೬ ವ–೨೨
೪೨. ಕಾಯಕ ಪರಿಣಾಮಿ : ಶರಣರ ರಾಜಕೀಯ ಧೋರಣೆ–ಡಾ॥ಎ.ಎಂ ರಾಜಶೇಖರಯ್ಯಾ ಪು – ೧೧೦೭

ನಡೆಸಿ ರೂಪಿಸಿದ ಕಾಯಕ–ದಾಸೋಹ–ಪ್ರಸಾದ ತತ್ವ–ಸಿದ್ಧಾಂತಗಳು ಸ್ವಾವಲಂಬನೆಯ ಸ್ವಾಭಿಮಾನದ ಸರ್ವಾಂಗ ಸುಂದರ ಸಮಾಜ–ರಾಷ್ಟ್ರವನ್ನು ರೂಪಿಸಿದವು. 'ಕಲ್ಯಾಣ ರಾಜ್ಯದಲ್ಲಿ ನೀಡುವವರುಂಟು, ಬೇಡುವವರಿಲ್ಲ' ಎಂಬಂತೆ ಭಿಕ್ಷುಕರಿಲ್ಲದ ಕಾಯಕ ಜೀವಿಗಳ ಸಾಮ್ರಾಜ್ಯವಾಗಿತ್ತು.

"ಶರಣರ ನಡೆಯಲ್ಲಿ ಪುಟಗೊಂಡು ನುಡಿಯಲ್ಲಿ ಸ್ಫುಟವಾದ ಈ ಕಾಯಕ ತತ್ವದಲ್ಲಿ ಅಡಕವಾದ ಮುಖ್ಯ ಅಂಶಗಳು ಮೂರು–೧) ಉದ್ಯೋಗಶಿಲತ್ವ, ೨) ಸರ್ವಸಮಾನತ್ವ ೩) ಸಮರ್ಪಣಭಾವ."[೪೩]

ಆಧುನಿಕ ಯುಗದಲ್ಲಿಯೂ ಕೂಡ ಶಿವಶರಣರ ಈ ತತ್ವಗಳು ಅನುಷ್ಠಾನಗೊಂಡರೆ ಭಾರತ ಸಮೃದ್ಧವಾಗುತ್ತದೆ. ಆದರೆ 'ಇಂದಿನ ರಾಜಕಾರಣಿಗಳು ಎಂಥ ಹೀನಮಟ್ಟಕ್ಕಿಳಿಯುವುದಕ್ಕೂ ಹಿಂಜರಿಯುವದಿಲ್ಲ. ಕೇವಲ ಅಧಿಕಾರದ ಆಸೆಗಾಗಿ ಒಂದು ಪಕ್ಷವನ್ನು ಬಿಟ್ಟು ಇನ್ನೊಂದು ಪಕ್ಷವನ್ನು ಸೇರುವುದು ದಿನನಿತ್ಯದ ಮಾತಾಗಿದೆ. ತತ್ವರಹಿತ ರಾಜಕಾರಣ ಅವರ ಜೀವನ ರೀತಿಯಾಗಿದೆ'[೪೪] ಇಂಥವರಿಂದ ಬಸವಣ್ಣನವರ 'ಕಲ್ಯಾಣರಾಜ್ಯ' ಕಲ್ಪನೆ ಸಾಕಾರಗೊಳ್ಳಬಹುದೇ? ಪ್ರಶ್ನೆಯು ಪ್ರಶ್ನೆಯಾಗಿಯೇ ಉಳಿಯುತ್ತದೆ. ಈ ದೇಶದ ಜನರು ಮೊದಲು ಮನಸ್ಸು ಮಾಡಬೇಕು ಎಂದು ಕುಮಾರ ಕಕ್ಕಯ್ಯ ಹೇಳುತ್ತಾರೆ–

ಮನಸ್ಸಿನಂತೆ ಊಟೋಪಚಾರ
ಮನಸ್ಸಿನಂತೆ ಉಡಿಗೆ ತೊಡಿಗೆ
ಮನಸ್ಸಿನಂತೆ ಆಚಾರ ವಿಚಾರ
ಮನಸ್ಸಿನಂತೆ ಕಾರ್ಯ ಕಲಾಪ
ಮನಸ್ಸು ಇದ್ದಂತೆ ಮನುಷ್ಯ
ರೂಪುಗೊಳ್ಳುವನೆಂದ ಕುಮಾರ ಕಕ್ಕಯ್ಯ[೪೫]

ರಾಜಕೀಯ ನೇತಾರರು, ಪ್ರಜೆಗಳು ಮನಸ್ಸು ಮಾಡಿದರೆ ರಾಜ್ಯ–ರಾಷ್ಟ್ರಗಳು ಕಲ್ಯಾಣರಾಜ್ಯವಾಗುವುದು ತಡವಾಗುವುದಿಲ್ಲ. ಈ ದಿಸೆಯಲ್ಲಿ ಸರ್ವರೂ ಕಾರ್ಯಪ್ರವೃತ್ತರಾಗಬೇಕು.

---

೪೩. ಶಿವಶರಣರ ಕಾಯಕ ಸಿದ್ಧಾಂತ–ಸಂ ಡಾ॥ ಎಂ.ಎಂ ಕಲಬುರ್ಗಿ ಪು–೮೩
೪೪. ಶರಣರ ತತ್ವ ವಿವೇಚನೆ ಭಾಗ–೨ : ಪ್ರೊ. ಬಿ. ವಿರೂಪಾಕ್ಷಪ್ಪ ಪು–೧೦೬
೪೫. ಕುಮಾರ ಕಕ್ಕಯ್ಯನ ವಚನಗಳು– ಪು–೨೭೧ ವ–೧೦೪೬

## (ಈ) ಕುಮಾರ ಕಕ್ಕಯ್ಯನ ವಚನಗಳಲ್ಲಿ ಶೈಕ್ಷಣಿಕ ವಿಚಾರಗಳು

### (i) ಶಿಕ್ಷಣದ ಸ್ವರೂಪ ಮತ್ತು ಮಹತ್ವ

ಕೋಟ್ಯಾಂತರ ವರುಷಗಳ ಹಿಂದೆ ಭೂಮಿಯ ಮೇಲೆ ಜನ್ಮತಾಳಿದ ಆದಿಮಾನವ ಕಾಡಿನಿಂದ-ನಾಡಿಗೆ, ಅನಾಗರಿಕತೆಯಿಂದ- ನಾಗರಿಕತೆಗೆ, ಅಜ್ಞಾನದಿಂದ-ವಿಜ್ಞಾನದೆಡೆಗೆ ಸಾಗಿ ಬಂದ ದಾರಿಯು ರೋಚಕವಾಗಿದೆ, ವಿಸ್ಮಯಕಾರಿಯಾಗಿದೆ. ಮಾನವನಲ್ಲಿ ಗುಪ್ತವಾಗಿ, ಮರವಾಗಿ, ಹೆಮ್ಮರವಾಗಿ ಇಂದು ಸಹಸ್ರಾರು ರೆಂಬೆ-ಕೊಂಬೆಗಳಲ್ಲಿ ಜ್ಞಾನ-ವಿಜ್ಞಾನ-ತತ್ವಜ್ಞಾನ ಪುಷ್ಪ-ಕಾಯಿ-ಹಣ್ಣುಗಳಾಗಿ ಹೊರಹೊಮ್ಮುತ್ತಿದೆ. ಈ ಪ್ರಕ್ರಿಯೆಯು ವಿಶ್ವವಿರುವವರೆಗೂ ನಿರಂತರವಾಗಿ ಮುಂದುವರೆಯುತ್ತಲೇ ಸಾಗುತ್ತದೆ.

ಪ್ರತಿಯೊಂದು ಮಗುವಿನಲ್ಲೂ ಅರಿವು ತದ್ಗತವಾಗಿದೆ. ಅವ್ಯಕ್ತವಾಗಿರುವ ಈ ಅರಿವನ್ನು ಹೊರಹೊಮ್ಮಿಸುವ ಕ್ರಿಯಾಶೀಲ ವ್ಯವಸ್ಥೆಯೇ ಶಿಕ್ಷಣವಾಗಿದೆ. ಸ್ವಾಮಿ ವಿವೇಕಾನಂದರು-'Education is the manifestation of perfection alrady in man'[೧] ಎಂದು ಹೇಳಿರುವ ಮಾತು ಗಮನಾರ್ಹವಾಗಿದೆ. ವಿಶ್ವವಿಖ್ಯಾತ ತತ್ವಜ್ಞಾನಿ ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ನರು 'Education is second birth ಶಿಕ್ಷಣವೆಂದರೆ ದ್ವಿತೀಯ ಜನ್ಮ ಅಂದರೆ ಎರಡನೆಯ ಹುಟ್ಟು'[೨] ಎಂದು ಹೇಳಿರುವುದು ಸಮಂಜಸವೆನಿಸುತ್ತದೆ.

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಶಿಕ್ಷಣವು ಋಷಿ-ಮುನಿಗಳಿಂದ ಸಾಗಿ ಬಂದಿದೆ. ವರ್ಣಾಶ್ರಮಧರ್ಮ ಪ್ರಾರಂಭವಾದಾಗಿನಿಂದ ಶಿಕ್ಷಣವು ಕೇವಲ ಬ್ರಾಹ್ಮಣ ವರ್ಣದವರಿಗೆ ಸೀಮಿತವಾಗಿತ್ತು. ಆಗ ಮೂರು ವಿಧದ ಬ್ರಾಹ್ಮಣರ ಶಿಕ್ಷಣ ಕೇಂದ್ರಗಳಿರುತ್ತಿದ್ದವು. ಅವುಗಳೆಂದರೆ ಅಗ್ರಹಾರಗಳು, ಮಠಗಳು ಮತ್ತು ಶಿಕ್ಷಣ ಸಂಸ್ಥೆಗಳು. ಅಗ್ರಹಾರಗಳು ಬ್ರಹ್ಮಪುರಿ ಎಂದೂ ಕರೆಯಲಾಗುತ್ತಿತ್ತು. ಅಗ್ರಹಾರ ಎಂಬುದು ಹಳ್ಳಿ ಅಥವಾ ಗ್ರಾಮವೊಂದನ್ನು ಪ್ರತಿನಿಧಿಸಿದರೆ, ಬ್ರಹ್ಮಪುರಿಯು ನಗರದ ಭಾಗವನ್ನು ಮಾತ್ರ ಪ್ರತಿನಿಧಿಸುತ್ತದೆ. ಘಟಿಕಾ ಸ್ಥಾನ ಎಂದು ಪ್ರಸಿದ್ಧವಾದ ಶಿಕ್ಷಣ ಕೇಂದ್ರಗಳು ಇಂದಿನ ಅಧುನಿಕ ವಿಶ್ವವಿದ್ಯಾಲಯಗಳಿಗೆ ಸಮವಾಗಿದ್ದವು'[೩]

ಶೈವರು, ಕಾಳಾಮುಖರು, ವೈಷ್ಣವರು, ಕಾಪಾಲಿಕರು ತಮ್ಮ ತಮ್ಮ ಮಠಗಳಲ್ಲಿ ಶಿಕ್ಷಣ ನೀಡಲು ಪ್ರಾರಂಭಿಸಿದ್ದು ತಿಳಿದು ಬರುತ್ತದೆ.. ಬಳ್ಳಿಗಾವೆ, ಶ್ರೀಶೈಲ, ಕೇದಾರ, ಶೃಂಗೇರಿ, ಸಾಲೋಟಗಿ, ನಳಂದಾ ಮುಂತಾದೆಡೆಗಳಲ್ಲಿ ಶಿಕ್ಷಣ ನೀಡಲ್ಪಡುತ್ತಿತ್ತು.

---

೧. ಡಾ॥ ಸರ್ವಪಲ್ಲಿ ರಾಧಾಕೃಷ್ಣನ್‌ರು-ಪ್ರೊ. ಸಿದ್ದಣ್ಣ ಲಂಗೋಟಿ ಪು-೪೩

೨. -ಅದೇ- ಪುಟ-೪೨

೩. ಅನುಭಾವಿಗಳ ಕ್ರಾಂತಿ : ಶಿಕ್ಷಣ -ಜಾನ್ ಪೀಟರ್‌ಶೌಟನ್ ಅನು : ಟಿ. ಆರ್. ಚಂದ್ರಶೇಖರ ಪುಟ-೨೯೦

ಬೌದ್ಧ ಧರ್ಮದವರು ಬುದ್ಧ ವಿಹಾರಗಳಲ್ಲಿ, ಜೈನರು ಬಸದಿಗಳಲ್ಲಿ, ಶೈವ-ವೀರಶೈವರು ಮಠಗಳಲ್ಲಿ ತಮ್ಮ ತಮ್ಮ ಜನಾಂಗದವರಿಗೆ ಶಿಕ್ಷಣ ಕೊಡಲು ಪ್ರಾರಂಭಿಸಿದರು. ಪ್ರಾಚೀನ ಕಾಲದಲ್ಲಿ ಮೇಲ್ವರ್ಗದ ಬ್ರಾಹ್ಮಣರಿಗೆ ಸಂಸ್ಕೃತದಲ್ಲಿ ವೇದಾಧ್ಯಯನ ಮಾಡಲು ಮಾತ್ರ ಅವಕಾಶವಿತ್ತು. 'ವಿದ್ಯಾಹೀನ ಮಾನವಾಃ ಪಶು ಸಮಾನಃ' ಎಂದು ಹೇಳಿದ ಉಕ್ತಿಯು ಎಲ್ಲರಿಗೂ ಅನ್ವಯಿಸುತ್ತಿರಲಿಲ್ಲ. ಬಹುಸಂಖ್ಯಾತರಾಗಿದ್ದ ಶೂದ್ರ ಹಾಗೂ ಅಸ್ಪೃಶ್ಯ ದಲಿತರು ಶಿಕ್ಷಣದಿಂದ ವಂಚಿತರಾಗಿದ್ದರು. ಇದನ್ನು ಮನಗಂಡು ೧೨ ನೇ ಶತಮಾನದಲ್ಲಿ ಬಸವಣ್ಣನವರು ಅನುಭವಮಂಟಪ ಎಂಬ ಸಮಾಜೋ-ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿದರು. ಅಲ್ಲಿ ಜನಸಾಮಾನ್ಯರ ಆಡುನುಡಿಯಲ್ಲಿ ಅಂದರೆ ಕನ್ನಡದಲ್ಲಿ ಶಿಕ್ಷಣ ನೀಡಲು ಪಾರಂಭಿಸಿದರು. ಪ್ರತಿಯೊಂದು ಗ್ರಾಮಗಳಲ್ಲಿ 'ಸಾಲಿಮಠ' ಗಳು, 'ಓದಿಸುವಮಠ'ಗಳು, 'ಗುರುಮಠ' ಗಳು ಸುರುವಾದುದರ ಪರಿಣಾಮವಾಗಿ ವಿಪ್ರವೊದಲು-ಅಂತ್ಯಜ ಕಡೆಯಾಗಿ ಸರ್ವರಿಗೂ ಶಿಕ್ಷಣ-ಸಂಸ್ಕಾರ ನೀಡಲಾಯಿತು.

'ಅನುಭವ ಮಂಟಪ' ಎಂಬದು ಮುಕ್ತ ವಿಶ್ವವಿದ್ಯಾಲಯವೆಂದೇ ಹೇಳಬಹುದು. ದೇಶಾದ್ಯಂತದ ಜಾತಿ-ಮತ-ಪಂಥವೆನ್ನದೇ ಸ್ತ್ರೀ-ಪುರುಷರೆನ್ನದೇ, ಬ್ರಾಹ್ಮಣ-ಶೂದ್ರರಿಗೂ ಮುಕ್ತ ಅವಕಾಶ ನೀಡಿದ್ದ ರಿಂದ,ಅನುಭವ ಮಂಟಪವು ದೇಶದಲ್ಲಿಯೇ ಹೆಸರುವಾಸಿಯಾಯಿತು. ಅನುಭವ ಮಂಟಪವೊಂದು ಮಹಾಶಿಕ್ಷಣ ಕೇಂದ್ರ . ಸಾಕ್ಷರರಿಗೆ ಮಾತ್ರವಲ್ಲ, ನಿರಕ್ಷರಿಗೂ ಅಲ್ಲಿ ಶಿಕ್ಷಣ ದೊರೆಯುತ್ತಿತ್ತು. ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಏಕಕಾಲದಲ್ಲಿ ಸಿಗುತ್ತಿತ್ತು. ವಿಚಾರಸ್ವಾತಂತ್ರ್ಯ ವಾತಾವರಣದಲ್ಲಿ ವಿಚಾರ ವಿನಿಮಯವೂ ಜ್ಞಾನಾರ್ಜನೆಯೂ ಸಾಗುತ್ತಿದ್ದವು. ಭಾಷಣ ಹಾಗೂ ಸಂಭಾಷಣ ಪದ್ಧತಿಗಳೆರಡಕ್ಕೂ ಅಲ್ಲಿ ಸಮಾನ ಸ್ಥಾನವಿತ್ತು.[೪] ಕನ್ನಡದಲ್ಲಿ ಹೊಸ ಸಾಹಿತ್ಯವೇ ನಿರ್ಮಾಣವಾಯಿತು. ಇದುವೇ ವಚನಸಾಹಿತ್ಯ. ಬಸವಾದಿ ಶರಣರ ವಚನಗಳು ತಾಡೋಲೆಗಳಲ್ಲಿ ಬರೆಯಲ್ಪಟ್ಟು, ಸಹಸ್ರಾರು ಸಂಖ್ಯೆಯಲ್ಲಿ ಪ್ರತಿಮಾಡಲ್ಪಟ್ಟು ಚರಜಂಗಮರ ಮೂಲಕ ಹಳ್ಳಿ-ಪಟ್ಟಣಗಳಿಗೆಲ್ಲ ತಲುಪುತ್ತಿದ್ದವು. ಗುರುಮಠ, ಸಾಲಿಮಠ,ಓದಿಸುವ ಮಠಗಳಲ್ಲಿದ್ದ ಶಿಕ್ಷಕರು ಸುಲಭ-ಸರಳವಾಗಿದ್ದ ವಚನಗಳ ಮೂಲಕ ಶಿಕ್ಷಣ ನೀಡುತ್ತಿದ್ದರು. ಕೆಲವರಿಗೇ ಸೀಮಿತವಾಗಿದ್ದ ಶಿಕ್ಷಣವು ಸರ್ವರಿಗೂ ದೊರೆಯುವಂತಾಯಿತು.

೧೨ ನೇ ಶತಮಾನದ ನಂತರ, ಭಾರತವನ್ನು ಆಕ್ರಮಿಸಿಕೊಂಡ ಮಹಮದೀಯ ಬಾದಶಹರು ಅರಬ್ಬಿ, ಉರ್ದು ಭಾಷೆಗಳಲ್ಲಿ 'ಮದರಸಾ'ಗಳನ್ನು ಸ್ಥಾಪಿಸಿ ಶಿಕ್ಷಣ ಕೊಡತೊಡಗಿದರು. ಅನಂತರ ಬಂದ ಬ್ರಿಟೀಶರು ಚರ್ಚಗಳ ಮೂಲಕ ಕಾನ್ವೆಂಟಗಳನ್ನು ಸ್ಥಾಪಿಸಿ ಇಂಗ್ಲೀಷ ಭಾಷೆಯ ಪಾಶ್ಚಿಮಾತ್ಯ ಶಿಕ್ಷಣಕ್ಕೆ ನಾಂದಿ ಹಾಡಿದರು. ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳು ಪ್ರಾರಂಭಗೊಂಡು ಆಧುನಿಕ ಶಿಕ್ಷಣದ ಯುಗ ಪ್ರಾರಂಭವಾಯಿತು.

---

೪. ಬಸವ ಬೆಳಕು-ದೇ. ಜವರೇಗೌಡ ಪು-೨೦

೨೦ನೇ ಶತಮಾನದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಎಲ್ಲ ಭಾಷೆಗಳಲ್ಲಿ, ಎಲ್ಲರಿಗೂ ಮುಕ್ತವಾಗಿ ಸರ್ಕಾರಿ, ಅರೆಸರ್ಕಾರಿ, ಖಾಸಗಿ ಶಿಕ್ಷಣ ಸಂಸ್ಥೆಗಳು ಪ್ರಾರಂಭವಾಗಿ ಹಲವಾರು ರೀತಿಯಲ್ಲಿ ಅಂದರೆ ಕಲೆ,ವಾಣಿಜ್ಯ, ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ, ಕಂಪ್ಯೂಟರ್ ಶಿಕ್ಷಣ ವ್ಯಾಪಕವಾಗಿ ಬೆಳೆಯತೊಡಗಿದೆ. ಪ್ರಾಥಮಿಕ, ಮಾಧ್ಯಮಿಕ, ಪದವಿಪೂರ್ವ, ಪದವಿ ಶಾಲೆ-ಕಾಲೇಜುಗಳು, ಡಿಪ್ಲೋಮಾ, ಡಿ.ಇಡಿ. ಬಿ.ಇಡಿ ತರಬೇತಿ ಸಂಸ್ಥೆಗಳು, ವಿಶ್ವವಿದ್ಯಾಲಯಗಳಲ್ಲಿ ಉನ್ನತ ಸ್ನಾತಕೋತ್ತರ ಶಿಕ್ಷಣ ನೀಡಲ್ಪಡುತ್ತಿದೆ. ಇಷ್ಟಿದ್ದಾಗ್ಯೂ ಭಾರತದಲ್ಲಿ ಇನ್ನೂ ಸಾಕ್ಷರತೆಯ ಪ್ರಮಾಣ ೬೦ ಪ್ರತಿಶತ ದಾಟಿಲ್ಲದಿರುವುದು ತಿಳಿದು ಬರುತ್ತದೆ. ಇದಕ್ಕೆಲ್ಲ ಪ್ರಮುಖ ಕಾರಣವೆಂದರೆ ಬಡತನ, ದಾರಿದ್ರ್ಯ, ಉದಾಶೀನತೆ, ಹಾಗೂ ಸರ್ಕಾರಗಳ ದೃಢ ಸಂಕಲ್ಪದ ಕೊರತೆ ಎನ್ನಬಹುದು.

'ಅಕ್ಷರ ಕಲಿಕೆಗಾಗಿ ಸ್ವಾತಂತ್ರ್ಯನಂತರ ಸರ್ಕಾರ ಹಲವು ಯೋಜನೆಗಳನ್ನು ಜಾರಿಯಲ್ಲಿ ತಂದಿದೆ. ಕೋಟಿ ಕೋಟಿ ಹಣ ಖರ್ಚು ಮಾಡಿದೆ. ರಾತ್ರಿ ಶಾಲೆಗಳು ಸಹ ಕಣ್ಮುಚ್ಚಿವೆ. ಆದರೆ ಸಾಕ್ಷರತೆಯ ಕನಸು ನನಸಾಗಿಲ್ಲ. ಹೆಬ್ಬೆಟ್ಟು ಒತ್ತುವವರ ಸಂಖ್ಯೆ ಕಡಿಮೆಯಾಗಿಲ್ಲ. ಸಾಕ್ಷರತೆ ಕುರಿತಂತೆ ಆಗಿರುವ ಖರ್ಚು ಆ ಖರ್ಚಿಗನುಗುಣವಾಗಿ ಬಂದಿರುವ ವರದಿಗಳನ್ನು ಆಧರಿಸಿ ಹೇಳುವದಾದರೆ ಈ ನಾಡಿನಲ್ಲಿ ಅನಕ್ಷರಸ್ತರು ಇರಲೇಬಾರದಾಗಿತ್ತು. ಆದರೆ ವಸ್ತು ಸ್ಥಿತಿ ಹಾಗಿಲ್ಲ. ಕಾರಣ ಅಕ್ಷರಸ್ಥರ ಆತ್ಮ ವಂಚನೆ.[೫]

ಇಂದು ಸರ್ವರಿಗೂ ಶಿಕ್ಷಣ ಬೇಕು. ಶಿಕ್ಷಣವಿಲ್ಲದಿದ್ದರೆ ಮನುಷ್ಯ ಬಹಳಷ್ಟು ತೊಂದರೆ, ಕಷ್ಟಗಳನ್ನೆದುರಿಸಬೇಕಾಗುತ್ತದೆ, ಹಾನಿಗೊಳಗಾಗಬೇಕಾಗುತ್ತದೆ. ಅಂತೆಯೇ ಕುಮಾರ ಕಕ್ಕಯ್ಯ ಪೊಳ ಅವರು ಶಿಕ್ಷಣದ ಮಹತ್ವವನ್ನು ತಮ್ಮ ವಚನಗಳಲ್ಲಿ ಅರುಹುತ್ತಾರೆ-

ಶಿಕ್ಷಣವೇ ಜೀವನ, ಶಿಕ್ಷಣವೇ ಬೆಳಕು.
ಶಿಕ್ಷಣವೇ ಸಂಸ್ಕೃತಿ, ಶಿಕ್ಷಣವೇ ಸಂಪತ್ತು.
ಶಿಕ್ಷಣವೇ ಆರೋಗ್ಯ, ಶಿಕ್ಷಣವೇ ಆಯುಷ್ಯ.
ಶಿಕ್ಷಣವೇ ಕರ್ಮ, ಶಿಕ್ಷಣವೇ ಧರ್ಮ.
ಶಿಕ್ಷಣವೇ ತಪಸ್ಸು, ಶಿಕ್ಷಣವೇ ಮೋಕ್ಷ.
ಶಿಕ್ಷಣ ಇಲ್ಲದವ ಇದ್ದೂ ಸತ್ತಂತೆಯೆಂದ
ಕುಮಾರಕಕ್ಕಯ್ಯ[೬]

ಇಂದು ಶಿಕ್ಷಣವೆಂದರೆ ಕೇವಲ ಪದವಿಗಳಿಸುವುದಕ್ಕೆ ಸೀಮಿತವಾಗುತ್ತಿದೆ. ಪದವಿ ಗಳಿಸುವುದು ಅಧಿಕಾರ, ಹುದ್ದೆ, ನೌಕರಿಗಾಗಿ ಮಾತ್ರ ಎಂಬ ಭಾವನೆ

---

೫. ಆದರ್ಶ-ವಾಸ್ತವ : ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಪು-೧೧
೬. ಕುಮಾರ ಕಕ್ಕಯ್ಯನ ವಚನಗಳು-ಪು-೨೯ ವ-೧೧೨

ಬೆಳೆಯುತ್ತಿದೆ. ಶಿಕ್ಷಣ ಕಲಿತು ಕೇವಲ ಆಸ್ತಿ–ಪಾಸ್ತಿ, ಧನ–ಕನಕ ಗಳಿಸುವುದೇ ಆಗಿದೆ. ಅಂತೆಯೇ ಕುಮಾರ ಕಕ್ಕಯ್ಯ ತಮ್ಮ ವಚನವೊಂದರಲ್ಲಿ ಇದನ್ನು ವಿಡಂಬಿಸುತ್ತಾರೆ–

> ಶಿಕ್ಷಣವೆಂದರೆ ಬರೀ ಪದವಿ ಪಡೆಯುವದಲ್ಲ,
> ಹಣ ಅಧಿಕಾರಕ್ಕಾಗಿ ಹುದ್ದೆ ಸಂಪಾದಿಸುವದೂ ಅಲ್ಲ.
> ಶಿಕ್ಷಣವೆಂದರೆ ಬರಿ ಆಸ್ತಿ ಪಾಸ್ತಿ ಮಾಡುವದಲ್ಲ.
> ಪಂಡಿತ ಪ್ರತಿಷ್ಠಿತ ಧುರೀಣನೆನಿಸುವುದೂ ಅಲ್ಲ.
> ಬೆಳಕಿನಿಂದ ಕತ್ತಲೆಯ ಕಳೆಯುವಂತೆ
> ಜ್ಞಾನದಿಂದ ಅಜ್ಞಾನ ಕಳೆಯುವುದೇ ಶಿಕ್ಷಣವೆಂದ
> ಕುಮಾರ ಕಕ್ಕಯ್ಯ[೭]

'ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ' ಎಂಬ ಬಸವಣ್ಣನವರ ವಚನವಾಣಿಯ ಆಶಯವನ್ನು ಇಲ್ಲಿ ಕಾರಣಬಹುದಾಗಿದೆ. ನಮಗೆ ಶಿಕ್ಷಣ ಯಾಕೆ ಬೇಕು? ವಿದ್ಯೆಯ ಉದ್ದೇಶ ಏನಿರಬೇಕು? ಎಂಬ ಬಗ್ಗೆ ರಾಷ್ಟ್ರಕವಿ ಕುವೆಂಪು ಅವರ ವಿಶ್ಲೇಷಣೆ ಹೀಗಿದೆ– 'ಶಿಕ್ಷಣ ಎರಡು ಕಾರಣಗಳಿಗಾಗಿ ಬೇಕು. ಒಂದು ಲೌಕಿಕೋದ್ದೇಶಕ್ಕಾಗಿ, ಎರಡು ಆಧ್ಯಾತ್ಮಿಕ ಉದ್ದೇಶಕ್ಕಾಗಿ. ನಮ್ಮ ಹೊಟ್ಟೆ ಬಟ್ಟೆಗಳಿಗೆ ಸಂಪಾದನೆ ಮಾಡಿಕೊಂಡು ಜೀವನವನ್ನು ಸುಖಮಯವಾಗಿ ಮಾಡಿಕೊಳ್ಳಬೇಕೆಂಬ ಲೌಕಿಕೋದ್ಧೇಶವೇ ಬಹುಜನರ ಆಶಯ. ಇದು ನ್ಯಾಯವೇ, ಹೊಟ್ಟೆಗೆ ಇಲ್ಲದವನು ಆತ್ಮವನ್ನೇನು ಸಾಧಿಸಿಯಾನು? ಆದ್ದರಿಂದ ಹೊಟ್ಟೆ ಬಟ್ಟೆ ಬೇಕು. ಆದರೆ ಅಷ್ಟೇ ಸಾಲದು, ಅನ್ನ ಬಟ್ಟೆಗಳನ್ನು ಸಂಪಾದಿಸುವುದು ಮಾತ್ರವೇ ವಿದ್ಯೆಯ ಗುರಿಯಲ್ಲ. ನಮ್ಮನ್ನು ಮುಕ್ತರನ್ನಾಗಿ ಮಾಡತಕ್ಕಂತಹುದು ಯಾವುದೋ ಅದೇ ವಿದ್ಯೆ. ಲೌಕಿಕ ವಿದ್ಯೆ ನಮ್ಮನ್ನು ಲೌಕಿಕ ದಾಹದಿಂದ ಮುಕ್ತರನ್ನಾಗಿ ಮಾಡುತ್ತದೆ. ಆಧ್ಯಾತ್ಮಿಕ ವಿದ್ಯೆ ನಮ್ಮ ಆತ್ಮ ತೃಷೆಯನ್ನು ಇಂಗಿಸುತ್ತದೆ."[೮]

ಇಂದು ಶಿಕ್ಷಣ ಕೇವಲ ಉಪಜೀವನ ವಿದ್ಯೆಯಾಗಿ ಮಾರ್ಪಾಟಾಗಿದೆ. ಅದು ಜೀವನ ವಿದ್ಯೆಯಾಗಬೇಕು. ಅಪರಾ ವಿದ್ಯೆ–ಪರಾವಿದ್ಯೆ ಎಂದು ಪ್ರಾಚೀನ ಕಾಲದಲ್ಲಿ ವಿಂಗಡಿಸಿದ್ದರು. ಅಪರಾವಿದ್ಯೆಯು ಕೇವಲ ಭೌತಿಕ ಬೆಳವಣಿಗೆ, ಭೌತಿಕ ಪ್ರಗತಿಗೆ ಕಾರಣವಾಗಿತ್ತು. ಪರಾ ವಿದ್ಯೆಯು ಕೇವಲ ಆಧ್ಯಾತ್ಮಸಾಧನೆ, ಆತ್ಮಿಕ ವಿಕಾಸಕ್ಕೆ ಸೀಮಿತವಾಗಿತ್ತು. ಹನ್ನೆರಡನೆಯ ಶತಮಾನದಲ್ಲಿ ಶರಣರು ಲೌಕಿಕ–ಪಾರಮಾರ್ಥಿಕ ಎಂದು ಭೇದಮಾಡಲಿಲ್ಲ. ಅಂತರಂಗದಲ್ಲಿ ಅರಿವಾದಡೇನು? ಬಹಿರಂಗದಲ್ಲಿ ಕ್ರಿಯೆ ಇಲ್ಲದನಕ್ಕರ? ಎಂದು ಪ್ರಶ್ನಿಸಿದರು. ಅಂತರಂಗದ ವಿದ್ಯೆ ಹಾಗೂ ಬಹಿರಂಗದ ವಿದ್ಯೆ ಎಂದು ಭೇದ ಮಾಡದೇ, ಮರ್ತ್ಯಲೋಕದ ಬಾಳಿವೆಯು

---

೭. –ಅದೇ– ಪು–೩೦೦ ವ–೧೧೬೦
೮. ಚೈತನ್ಯರೂಪಿ ಕುವೆಂಪು : ಶೈಕ್ಷಣಿಕ ವಿಚಾರಗಳು–ಜ.ಹೊ. ನಾರಾಯಣಸ್ವಾಮಿ ಪು–೧೦೭

ಅರಿವಿನ ತಳಹದಿಯ ಮೇಲೆಯೇ ಸಾಗಬೇಕು ಎಂದು ನುಡಿದರು, ನುಡಿದಂತೆ ನಡೆದರು. ಅಂತೆಯೇ ಕುಮಾರ ಕಕ್ಕಯ್ಯನವರು ಹೇಳುತ್ತಾರೆ–

ಓದು ಬರಹ ಕಲಿತದ್ದಷ್ಟೇ ಶಿಕ್ಷಣವಲ್ಲ.
ಶಾಲೆ ಕಾಲೇಜಿಗೆ ಹೋದದ್ದಷ್ಟೇ ಶಿಕ್ಷಣವಲ್ಲ.
ವೇದಾಧ್ಯಯನ ಮಾಡಿದ್ದಷ್ಟೇ ಶಿಕ್ಷಣವಲ್ಲ.
ದೊಡ್ಡ ದೊಡ್ಡ ಪದವಿ ಪಡೆದದ್ದಷ್ಟೇ ಶಿಕ್ಷಣವಲ್ಲ.
ಸಂಸಾರ ಸ್ವರ್ಗವನ್ನಾಗಿ ಮಾಡುವ ಕಲೆಯೇ
ನಿಜವಾದ ಶಿಕ್ಷಣವೆಂದ ಕುಮಾರ ಕಕ್ಕಯ್ಯ.[೯]

ಪ್ರಪಂಚ ಬಿಟ್ಟು ಪಾರಮಾರ್ಥವಿಲ್ಲ, ಪ್ರಪಂಚವನ್ನೇ ಪಾರಮಾರ್ಥವಾಗಿ ಬದುಕಬೇಕು. ಈ ಸಂಸಾರವನ್ನು ಸ್ವರ್ಗವನ್ನಾಗಿ ಮಾಡುವ ಕಲೆಯೇ ನಿಜವಾದ ಶಿಕ್ಷಣ ಧ್ಯೇಯವಾಗಬೇಕು.

ಶಿಕ್ಷಣವು ಸಾವಿರಾರು ವರುಷಗಳಿಂದ ಬೆಳೆದು ಬಂದ ಅಜ್ಞಾನ, ಮೂಢನಂಬಿಕೆ, ಕಂದಾಚಾರಗಳು, ಅಂಧವಿಶ್ವಾಸಗಳನ್ನು ತೊಡೆದು ಹಾಕುತ್ತದೆ. ನಿಜವಾದ ಶಿಕ್ಷಣ ದೊರೆತರೆ ಕುಲ–ಗೋತ್ರ, ಜಾತಿ–ಮತ, ಭೂತ –ಪಿಶಾಚಿ, ಅಂಧರೂಢಿ ಮುಂತಾದವುಗಳು ಸಹಜವಾಗಿಯೇ ದೂರವಾಗುತ್ತವೆಯೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ.

ಜನಸಂಖ್ಯೆ ಬೆಳೆದು ಕುಲಗೋತ್ರಗಳು ಹೋದರೆ
ಶಿಕ್ಷಣ ಬೆಳೆದು ಜಾತಿಮತಗಳು ಹೋದವು.
ವೈದ್ಯಕೀಯ ಬೆಳೆದು ಭೂತ ಪಿಶಾಚಿಗಳು ಹೋದರೆ
ವಿಜ್ಞಾನ ಬೆಳೆದು ದೇವಾನುದೇವತೆಗಳೂ ಹೋದವು.
ಮಾನವಕುಲ ವಿಕಾಸವಾಗಿ ಜ್ಞಾನ ಬೆಳೆದಂತೆ
ಅಂಧ ವಿಸ್ವಾಸ ತಾನೇ ತೊಲಗುವದೆಂದ
ಕುಮಾರ ಕಕ್ಕಯ್ಯ.[೧೦]

ಡಾ॥ ರಾಧಾಕೃಷ್ಣನ್ನರು ಶಿಕ್ಷಣದ ಮಹತ್ವವನ್ನು ಕುರಿತು ತಮ್ಮ 'The True knowledge' ಎಂಬ ಗ್ರಂಥದಲ್ಲಿ ಹೇಳುತ್ತಾರೆ– "Literacy is not education, knowledge is not education, but the growth of wisdom, the capacity to look upon other object with compassion, that is what is necessary" ಅಂದರೆ ಅಕ್ಷರ ಜ್ಞಾನವಷ್ಟೇ ಶಿಕ್ಷಣವಲ್ಲ, ಜ್ಞಾನವಷ್ಟೇ ಶಿಕ್ಷಣವಲ್ಲ; ಆದರೆ ಜ್ಞಾನ್ಮೆಯ ಬೆಳವಣಿಗೆ, ಇನ್ನಿತರ ವಸ್ತು ವಿಷಯಗಳನ್ನು ಕರುಣೆ, ಅನುಕಂಪ

---

೯. ಕುಮಾರ ಕಕ್ಕಯ್ಯನ ವಚನಗಳು– ಪು–೩೦೦ ವ–೧೧೫೮
೧೦. ಕುಮಾರ ಕಕ್ಕಯ್ಯನ ವಚನಗಳು– ಪು–೪ ವ–೧೨

ಪೂರ್ಣವಾಗಿ ನೋಡುವುದನ್ನು ಕಲಿಯಬೇಕು. ಅದು ತುಂಬಾ ಅವಶ್ಯವಾದುದು'[೧೧] ಎಂದು ತಿಳಿಸುತ್ತಾರೆ.ನಮ್ಮ ದೇಶದಲ್ಲಿ ಬ್ರಿಟೀಷರ ಆಡಳಿತ ಕಾಲಕ್ಕೆ ಅವರು ತಮ್ಮ ಅನುಕೂಲಕ್ಕಾಗಿ ರೂಪಿಸಿದ ಶಿಕ್ಷಣಪದ್ಧತಿಯೇ ಇಂದಿಗೂ ನಮ್ಮಲ್ಲಿ ಅಲ್ಪ-ಸ್ವಲ್ಪ ಬದಲಾವಣೆಯೊಂದಿಗೆ ಮುಂದುವರೆದಿದೆ. ಶಿಕ್ಷಣದ ವ್ಯವಸ್ಥೆಯಲ್ಲಿ ಪರಿವರ್ತನೆ ತರಲೋಸುಗವೇ ೧೯೪೮ ರಲ್ಲಿ ರಾಧಾಕೃಷ್ಣನ್ ಆಯೋಗ, ೧೯೫೨ ರಲ್ಲಿ ಮೊದಲಿಯಾರ್ ಆಯೋಗ, ೧೯೬೪ ರಲ್ಲಿ ಕೊಠಾರಿ ಅಯೋಗಗಳನ್ನು ಕೇಂದ್ರ ಸರಕಾರಗಳು ನೇಮಿಸಿದವು. ಸಹಸ್ರಾರು ಪುಟಗಳ ವರದಿಗಳು ಹಾಗೆಯೇ ಧೂಳು ತಿನ್ನುತ್ತ ಕುಳಿತಿವೆ. ಶಿಕ್ಷಣಕ್ಕೆ ಹಾಕುವ ಹಣ ಅತ್ಯಲ್ಪ ಪ್ರಮಾಣ ಮಾತ್ರ. ಇದು ಅನುತ್ಪಾದಕ ಎಂಬ ಭಾವದಿಂದಲೋ ಏನೋ ವಿಶೇಷ ಲಕ್ಷ್ಯ ವಹಿಸಲಿಲ್ಲ. ಇತ್ತಿಚೆಗೆ ಅಂತರಾಷ್ಟ್ರೀಯ ಮಟ್ಟದ ಪೈಪೋಟಿಯಿಂದಾಗಿ ಗಮನಹರಿಸಲಾಗಿದೆ. ಆದರೆ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತಗಳು ಇನ್ನೂ ಶೈಶವಾವಸ್ಥೆಯಲ್ಲಿಯೇ ಇವೆ. ಗ್ರಾಮೀಣ ಭಾಗಗಳಲ್ಲಂತೂ ವಿದ್ಯಾರ್ಥಿಗಳು-ಶಿಕ್ಷಕರು-ಶಾಲಾಕಟ್ಟಡಗಳು ಯೋಗ್ಯ ಪ್ರಮಾಣದಲ್ಲಿ ಇಲ್ಲವೆಂಬುದು ಸತ್ಯವಾಗಿದೆ. ನಗರಗಳಲ್ಲಿ ಸಿರಿವಂತರ-ಅಧಿಕಾರಿಗಳ-ಉದ್ದಿಮೆದಾರರ ಮಕ್ಕಳಿಗೆ ಕಾನ್ವೆಂಟ ಶಾಲೆಗಳು; ಅದೇ ನಗರಗಳ ಕೊಳಚೆ ಪ್ರದೇಶಗಳ ಮಕ್ಕಳು ಬಾಲಕಾರ್ಮಿಕರಾಗಿ, ಕೂಲಿ ಮಾಡಿ ಅನಕ್ಷರಸ್ಥರಾಗಿಯೇ ಜೀವಿಸುತ್ತಿರುವುದು ವಾಸ್ತವಿಕ ಕಟು ಸತ್ಯವಾಗಿದೆ.

ಶಿಕ್ಷಣ ಇಂದು ತುಂಬಾ ದುಬಾರಿಯಾಗುತ್ತಿದೆ. ನೂರಕ್ಕೆ ಎಪ್ಪತ್ತರಷ್ಟು ಮಧ್ಯಮ-ಕೆಳಮದ್ಯಮ-ಬಡವರೇ ಇರುವ ನಮ್ಮ ದೇಶದಲ್ಲಿ ಇವರ ಮಕ್ಕಳಿಗೆ ಉನ್ನತ, ಸ್ನಾತಕ, ಸ್ನಾತಕೋತ್ತರ, ಇಂಜಿನೀಯರಿಂಗ್, ಮೆಡಿಕಲ್, ಸಾಫ್ಟವೇರ್, ಕಂಪ್ಯೂಟರ್ ಶಿಕ್ಷಣ ಸಾಧ್ಯವಾದೀತೆ? ಈ ದಿಸೆಯಲ್ಲಿ ಯೋಚಿಸಬೇಕಾಗಿದೆ. ಶಿಕ್ಷಣ ಮತ್ತು ಹಣ ಇವರೆಡಿಲ್ಲದವರು ಅಂಗವಿಕಲರೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ- 'ಶಿಕ್ಷಣದಿಂದ ಜ್ಞಾನ, ಹಣದಿಂದ ಸಮಾಜದಲ್ಲಿ ಮಾನ. ಇವೆರಡಿಲ್ಲದವನೇ ನಿಜವಾದ ಅಂಗವಿಕಲನೆಂದ ಕುಮಾರ ಕಕ್ಕಯ್ಯ'[೧೨]

### (ii) ಶಿಕ್ಷಕ ಹಾಗೂ ವಿದ್ಯಾರ್ಥಿಗಳು

ಪ್ರಾಚೀನಕಾಲದಿಂದಲೂ ನಮ್ಮ ದೇಶದಲ್ಲಿ 'ಗುರು' ವಿಗೆ ತುಂಬಾ ಗೌರವದ ಸ್ಥಾನವಿದೆ. ನ ಗುರೋರಧಿಕಂ, ನ ಗುರೋರಧಿಕಂ ಎಂದು ಶ್ರುತಿಗಳು ಸಾರುತ್ತವೆ. 'ಹರಮುನಿದರೆ ಗುರು ಕಾಯ್ವನು, ಗುರು ಮನಿದರೆ ಹರ ಕಾಯನು' ಎಂಬ ಉಕ್ತಿಯು ಹರನಿಗಿಂತಲೂ ಗುರು ದೊಡ್ಡವನು ಎಂಬುದನ್ನು ತಿಳಿಸುತ್ತದೆ. ಗುರುವನ್ನು 'ಆಚಾರ್ಯ' ಎಂದೂ ಕರೆಯಲಾಗಿದೆ. 'ಆಚಾರ್ಯ ದೇವೋಭವ' ಎಂದು ಗೌರವಿಸಲಾಗಿದೆ. ಇನ್ನೂ ಮುಂದುವರೆದು- 'ಗುರು ಬ್ರಹ್ಮ, ಗುರುವಿಷ್ಣು, ಗುರು ದೇವೋ ಮಹೇಶ್ವರಃ! ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ॥ ಎಂದು ಪ್ರಾರ್ಥಿಸಲಾಗಿದೆ.

---

೧೧. ಡಾ॥ ಸರ್ವಪಲ್ಲಿ ರಾಧಾಕೃಷ್ಣನ್‌ರು-ಪ್ರೊ. ಸಿದ್ಧಣ ಲಂಗೋಟಿ ಪು-೪೪

೧೨. ಕುಮಾರ ಕಕ್ಕಯ್ಯನ ವಚನಗಳು-ಪು-೧, ವ-೩

೧೨ ನೇ ಶತಮಾನದಲ್ಲಿ ಬಸವಣ್ಣನವರು ವಚನದಲ್ಲಿ-

ಮಡಕೆಯ ಮಾಡುವಡೆ ಮಣ್ಣೆ ಮೊದಲು,
ತೊಡಿಗೆಯ ಮಾಡುವಡೆ ಹೊನ್ನೇ ಮೊದಲು,
ಶಿವಪಥವನರಿವಡೆ ಗುರುಪಥವೆ ಮೊದಲು,
ಕೂಡಲಸಂಗಮದೇವರನರಿವಡೆ
ಶರಣರ ಸಂಗವೆ ಮೊದಲು[೧೩]

ಎಂದು ತಿಳಿಸಿದ್ದಾರೆ . ಇಲ್ಲಿಯೂ ಕೂಡ ಗುರುವಿನ ಮಹತ್ವವನ್ನೇ ಕಾಣುತ್ತೇವೆ. ಶಿವಶರಣೆ ಅಕ್ಕಮಹಾದೇವಿಯು ಗುರುವಿನ ಮಹಿಮೆಯನ್ನು ತನ್ನ ವಚವೊಂದರಲ್ಲಿ ವರ್ಣಿಸುತ್ತಾಳೆ-

ನರ ಜನ್ಮವ ತೊಡೆದು ಹರಜನ್ಮವ
ಮಾಡಿದ ಗುರುವೆ ನಮೋ.
ಭವ ಬಂಧನವ ಬಿಡಿಸಿ ಪರಮಸುಖವ
ತೋರಿದ ಗುರುವೆ ನಮೋ.
ಭವಿಯೆಂಬುದ ತೊಡೆದು ಭಕ್ತೆ
ಎಂದೆನಿಸಿದ ಗುರುವೆ ನಮೋ.
ಚೆನ್ನಮಲ್ಲಿಕಾರ್ಜುನನ ತಂದೆನ್ನ
ಕೈವಶಕ್ಕೆ ಕೊಟ್ಟ ಗುರುವೆ, ನಮೋ ನಮೋ[೧೪]

ಈ ವಚನದಲ್ಲಿ ಗುರುವಿನ ಕರ್ತವ್ಯ ವಿವರಿಸಲ್ಪಟ್ಟಿದೆ. ನರಜನ್ಮವ ತೊಡೆದು ಹರಜನ್ಮ ಮಾಡುವುದು, ಭವ ಬಂಧನ ಬಿಡಿಸಿ ಪರಮಸುಖವ ತೋರುವುದು, ಭವಿ ಎಂಬುದ ತೊಡೆದು ಭಕ್ತ ಎಂದೆನಿಸಿವುದು, ದೇವತತ್ವವನ್ನೇ ತಂದು ಶಿಷ್ಯನ ಕೈವಶಕ್ಕೆ ಕೊಡುವುದು. ಇಲ್ಲಿ ಗುರುವು ನೀಡುವ ಸಂಸ್ಕಾರದ ವಿವರಣೆಯಿದೆ.

'ವರ್ಣಾನಾಂ ಕಲಿಸಿದಾತಂ ಗುರು' ಎಂದರೆ ಅಕ್ಷರಗಳನ್ನು ಕಲಿಸುವ ಗುರುವಿನಿಂದ ಹಿಡಿದು ಮೋಕ್ಷ ಮಾರ್ಗವನ್ನು ತೋರುವ ಅಧ್ಯಾತ್ಮಿಕ ಗುರುವಿನ ವರೆಗೆ-ಎಲ್ಲರನ್ನೂ ಗೌರವಿಸಲಾಗಿದೆ.

ಪ್ರತಿಯೊಂದು ಶಾಲೆಗಳಲ್ಲಿ ದೇಶದ ಭವಿಷ್ಯ ನಿರ್ಮಾಣವಾಗುತ್ತದೆ. ದೇಶದ ಭಾವೀ ನಾಗರಿಕರನ್ನು ರೂಪಿಸುವ ರೂವಾರಿಗಳು ಶಿಕ್ಷಕರು ಪ್ರಪಂಚದ ಆದರ್ಶ ತತ್ವಜ್ಞಾನಿ, ಗುರು, ಶಿಕ್ಷಣತಜ್ಞ ಎಂದು ಖ್ಯಾತಿವೆತ್ತ ಡಾ|| ರಾಧಾಕೃಷ್ಣನ್ನರು ಶಿಕ್ಷಕರ ಮಹತ್ವ ಕುರಿತು ಹೇಳುತ್ತಾರೆ. 'The teachers place in society is of vital importance. throughout the history of civilization it is the teachers who were able to transmit the intellectual traditions and technical

೧೩. ಬಸವಣ್ಣನವರ ವಚನ ಸಂಪುಟ-ಸಂ ಡಾ|| ಎಂ.ಎಂ. ಕಲಬುರ್ಗಿ ವ-೭೦.
೧೪. ಶಿವಶರಣೆಯರ ವಚನ ಸಂಪುಟ - ಸಂ|| ಡಾ. ವೀರಣ್ಣ ರಾಜೂರ ವ-೨೫೧.

skills from one generation to another and keep the lamp of civilization burning. It is their supreme function. ಅಂದರೆ ನಮ್ಮ ಸಮಾಜದಲ್ಲಿ ಶಿಕ್ಷಕರ ಸ್ಥಾನವು ಬಹಳ ಮಹತ್ವದ್ದಾಗಿದೆ. ನಾಗರಿಕತೆಯ ಇತಿಹಾಸದಲ್ಲಿ ಪ್ರಾಚೀನ ಜ್ಞಾನಪರಂಪರೆಯನ್ನು ಜನಾಂಗಗಳಿಗೆ ನೀಡುತ್ತಾ ಮುಂದುವರೆಸಿಕೊಂಡು ಬಂದಿದ್ದಾರೆ ನಾಗರಿಕತೆಯ ಜ್ಯೋತಿ ಉರಿಯವಂತೆ ಪ್ರಜ್ವಲಿಸುವಂತೆ ಮಾಡಿದ್ದಾರೆ".[೧೫]

ನಮ್ಮ ದೇಶದಲ್ಲಿ ಇಂದು ಬಾಲವಾಡಿ, ಶಿಶುವಿಹಾರ, ಪ್ರಾಥಮಿಕ ಶಾಲೆ, ಹೈಸ್ಕೂಲು, ಪದವಿಪೂರ್ವ ಕಾಲೇಜು, ಸ್ನಾತಕ, ಸ್ನಾತಕೋತ್ತರ, ವೈದ್ಯಕೀಯ, ಇಂಜಿನೀಯರಿಂಗ, ಟೆಕ್ನಿಕಲ್, ಡಿ.ಇಡಿ. ಬಿ.ಇಡಿ. ಎಂ.ಇಡಿ. ಎಂಫಿಲ್, ಪಿಎಚ್.ಡಿ. ಕಂಪ್ಯೂಟರ ವಿಜ್ಞಾನ, ಆಯ್.ಟಿ.ಆಯ್. ಹೀಗೆ ಅನಂತವಾದ ಪ್ರಕಾರಗಳಲ್ಲಿ ಶಿಕ್ಷಣವನ್ನು ಬೋಧಿಸುವ ಮಾರ್ಗದರ್ಶನ ಮಾಡುವ ಶಿಕ್ಷಕ ವೃಂದವಿದೆ. ಶಿಕ್ಷಕ ವೃತ್ತಿಯು ಒಂದು ಪವಿತ್ರವಾದ ಕಾಯಕವಾಗಿದೆ. 'ಶಾಲೆಗಳು ಜೀವಂತ ದೇವರ ದೇವಾಲಯಗಳು, ವಿದ್ಯಾರ್ಥಿಗಳೇ ದೇವರು, ಶಿಕ್ಷಕರೇ ಪೂಜಾರಿಗಳು' ಎಂದು ಹೇಳಲಾಗುತ್ತಿದೆ. ಶಿಕ್ಷಕ ಎಂದರೆ ಶೀಲ,ಕ್ಷಮೆ, ಕರ್ತವ್ಯನಿಷ್ಠೆಯ ಪ್ರತೀಕ ಎಂದು ಹೇಳಬಹುದು. 'ಯಥಾ ಗುರು: ತಥಾ ಶಿಷ್ಯ:, ಚೋರ ಗುರು: ಚಾಂಡಾಲ ಶಿಷ್ಯ: ಎಂಬ ಸುಭಾಷಿತದ ಸಂದೇಶದಂತೆ ಗುರುವಿನಂತೆ ಶಿಷ್ಯರು ನಿರ್ಮಾಣವಾಗುತ್ತಾರೆ.ಶಿಕ್ಷಕರು ವಿದ್ಯಾರ್ಥಿಗಳ ಚಾರಿತ್ರ್ಯ ನಿರ್ಮಾಣ ಮಾಡುತ್ತಾರೆ. ಆದ್ದರಿಂದ ಅವರು ಮೊದಲು ಚಾರಿತ್ರ್ಯವಂತರಾಗಿರಬೇಕಾಗುತ್ತದೆ.

ಚಾರಿತ್ರ್ಯವಂತ, ನೀತಿವಂತ, ಸದ್ಗುರುಗಳಿಗೆ ಬೃಹದಾಕಾರದ ಕಟ್ಟಡಗಳಾಗಲೀ, ಸಕಲ ಉಪಕರಣಗಳುಳ್ಳ ಶಿಕ್ಷಣ ಸಂಸ್ಥೆಗಳಾಗಲೀ ಪರ್ಯಾಯವಾಗಲಾರವು ಎಂದು ಡಾಕ್ಟರ್ ರಾಧಾಕೃಷ್ಣನ್‌ರು ತಮ್ಮ ಭಾಷಣದಲ್ಲಿ ಹೇಳುತ್ತಾರೆ- 'Magnificent buildings and equipments are not substitutes for the great teacher.' ಆದ್ದರಿಂದಲೇ ಮುಂದುವರೆದು ಕಳಕಳಿಯಿಂದ ಹೇಳುತ್ತಾರೆ – 'Character is destiny. character is that on which the destiny of a nation is built. One can not have a great nation with men of small character if we want to build a great nation. we must try to train a large number of young men and women who have charater."[೧೬] ಅಂದರೆ ಚಾರಿತ್ರ್ಯವೇ ದೈವ. ಚಾರಿತ್ರ್ಯ ಎಂಬ ದೈವದ ಮೇಲೆಯೇ ದೇಶದ ಭವಿತವ್ಯ ನಿರ್ಮಾಣಗೊಳ್ಳುತ್ತದೆ. ಹೀನ ಚಾರಿತ್ರ್ಯವಂತರಿಂದ ದೊಡ್ಡ ದೇಶ ನಿರ್ಮಾಣವಾಗಲಾರದು. ಚಾರಿತ್ರ್ಯವುಳ್ಳ ಯುವಕ-ಯುವತಿಯರಿಗೆ ತರಬೇತಿ ನೀಡಬೇಕು.

---

೧೫. ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ನರು – ಪ್ರೊ. ಸಿದ್ದಣ್ಣ ಲಂಗೋಟಿ ಪು-೪೮-೪೯.
೧೬. ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ನರು – ಪ್ರೊ. ಸಿದ್ದಣ್ಣ ಲಂಗೋಟಿ ಪು-೫೨-೫೩

ಶಿಕ್ಷಕ ಯಾವಾಗಲೂ ಅಧ್ಯಯನಶೀಲನಾಗಿರಬೇಕು. ಪ್ರಪಂಚದಲ್ಲಿ ದಿನದಿನವೂ ಆಗುತ್ತಿರುವ ಹೊಸ ಹೊಸ ಅವಿಷ್ಕಾರಗಳ ಬಗ್ಗೆ, ಶಿಕ್ಷಣ ಕ್ಷೇತ್ರದ ಜ್ಞಾನದ ಬೆಳವಣಿಗೆಗಳ ಬಗ್ಗೆ ಗಮನಹರಿಸುತ್ತಿರಬೇಕು. ಶಿಕ್ಷಕನು ಪ್ರಜ್ಞಾವಂತ ನಾಗರಿಕನಾಗಿರುವುದರಿಂದ ಪರಿಸರ ಪ್ರಜ್ಞೆ, ದೇಶದ ಆಗು-ಹೋಗುಗಳ ಬಗ್ಗೆ ಸರಿಯಾದ ತಿಳಿವಳಿಕೆ ಹೊಂದಿರಬೇಕು. ಶಿಕ್ಷಕನಿಗೆ ರಾಜಕೀಯ ಸಂಪೂರ್ಣಜ್ಞಾನವಿರಬೇಕೇ ಹೊರತು, ರಾಜಕೀಯದಲ್ಲಿ ತೊಡಗಿಸಿಕೊಳ್ಳಬಾರದು.

ಶಿಕ್ಷಕನಾದವನು ಸದಾಚಾರ, ಸದುವಿನಯ ಸಂಪನ್ನನಾಗಿದ್ದರೆ ವಿದ್ಯಾರ್ಥಿಗಳೂ ಸಹ ಅನುಕರಣೆ ಮಾಡುತ್ತಾರೆ. ಆತನು ದುರ್ವ್ಯಸನಿ, ದುರಾಚಾರಿಯಾಗಿದ್ದರೆ ವಿದ್ಯಾರ್ಥಿಗಳಿಗೆ ಯಾವ ಮಾರ್ಗದರ್ಶನ ಸಿಕ್ಕೀತು!

ವಿದ್ಯಾರ್ಥಿಗಳೂ ಸಹ ಬಾಲ್ಯದಿಂದಲೇ ವಿನಯ, ಶ್ರದ್ಧೆ, ಭಕ್ತಿಭಾವ ಬೆಳೆಸಿಕೊಳ್ಳಬೇಕು. ತಂದೆ-ತಾಯಿಯರ ಬಗ್ಗೆ ಗೌರವ, ಗುರು-ಹಿರಿಯರಲ್ಲಿ ಭಕ್ತಿ, ಸ್ನೇಹಿತರಲ್ಲಿ ಪ್ರೀತಿ ಹೊಂದಿರಬೇಕು. ದೇಶದ ಬಗ್ಗೆ ಅಭಿಮಾನ; ಅಸಹಾಯಕರು, ದುರ್ಬಲರ ಬಗ್ಗೆ ದಯೆ-ಅನುಕಂಪ, ಕ್ರಿಯಾಶೀಲ, ಸಾಹಸ ಮನೋಭಾವದವರಾಗಿರಬೇಕು. ಸದೃಢ ಶರೀರ, ಸ್ಥಿರ ಮನಸ್ಸು, ಶುದ್ಧ ಭಾವನೆಯುಳ್ಳವರಾಗಿರಬೇಕು. ಅಂತರಂಗದ ಪ್ರತಿಭೆ, ಸತತ ಪ್ರಯತ್ನ, ಗುರುಕರುಣೆಯಿಂದ ಏನನ್ನಾದರೂ ಸಾಧಿಸಬಲ್ಲೆ ಎಂಬ ದೃಢ ಸಂಕಲ್ಪ ತಾಳಬೇಕು. ವಿದ್ಯಾರ್ಥಿ ಜೀವನದಲ್ಲಿ ಸಾಧಿಸುವ, ಗಳಿಸುವ ಜ್ಞಾನವು ಬಾಳಿನುದ್ದಕ್ಕೂ ಉಪಯೋಗಕ್ಕೆ ಬರುತ್ತದೆ. ಅಂತೆಯೇ ಹಿಂದಿನ ಹಿರಿಯರು 'ಜ್ಞಾನ ಎಂಬ ಸಂಪತ್ತು ಮಾತ್ರ ಶಾಶ್ವತವಾದದ್ದು, ಅದನ್ನು ಕಳ್ಳರು ಕದಿಯಲಾರರು, ಅದು ನಾಶವಾಗಲಾರದು, ಅದನ್ನು ಹಂಚಿದಷ್ಟೂ ಹೆಚ್ಚುವದು' ಎಂದು ಹೇಳುವ ಅನುಭವದ ನುಡಿಗಳು ಸತ್ಯವೆಂಬುದನ್ನು ಅರಿಯಬೇಕು.

ಗುರು-ಶಿಷ್ಯ ಸಂಬಂಧ ಪವಿತ್ರವಾದುದು, ನಿಃಸ್ವಾರ್ಥವಾದುದು. ಗುರುವಿನ ಉಪದೇಶದಂತೆ ನಡೆಯುವ ಶಿಷ್ಯನು ಜೀವನದಲ್ಲಿ ಉನ್ನತ ಸಾಧನೆಯನ್ನು ಮಾಡುವನು. ಅಲ್ಲಮ ಪ್ರಭುದೇವರು ಗುರು-ಶಿಷ್ಯ ಸಂಬಂಧವನ್ನು ಮಾರ್ಮಿಕವಾಗಿ ಹೇಳಿದ್ದಾರೆ-

ಕೃತಯುಗದಲ್ಲಿ ಶ್ರೀ ಗುರುವು ಶಿಷ್ಯರಿಗೆ
ಬಡಿದು ಬುದ್ಧಿಯ ಕಲಿಸಿದಡೆ,
ಆಗಲಿ ಮಹಾಪ್ರಸಾದವೆಂದೆನಯ್ಯಾ.
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ
ಬೈದು ಬುದ್ಧಿಯ ಕಲಿಸಿದಡೆ,
ಆಗಲಿ ಮಹಾಪ್ರಸಾದವೆಂದೆನಯ್ಯಾ.
ದ್ವಾಪರಯುಗದಲ್ಲಿ ಶ್ರೀಗುರು ಶಿಷ್ಯಂಗೆ
ಝುಂಕಿಸಿ ಬುದ್ಧಿಯ ಕಲಿಸಿದಡೆ,

ಆಗಲಿ ಮಹಾ ಪ್ರಸಾದವೆಂದೆನಯ್ಯಾ.
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ
ವಂದಿಸಿ ಬುದ್ಧಿಯ ಕಲಿಸಿದಡೆ
ಆಗಲಿ ಮಹಾ ಪ್ರಸಾದವೆಂದೆನಯ್ಯಾ.
ಗುಹೇಶ್ವರಾ, ನಿಮ್ಮ ಕಾಲದ ಕಟ್ಟಳೆಯ
ಕಲಿತನಕ್ಕೆ ನಾನು ಬೆರಗಾದೆನು.[೧೭]

ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಗಳಲ್ಲಿ ಅನುಕ್ರಮವಾಗಿ ಬಡಿದು, ಬೈದು, ಝುಂಕಿಸಿ, ವಂದಿಸಿ ಗುರುವು ಶಿಷ್ಯನಿಗೆ ಬುದ್ಧಿ ಕಲಿಸುವ ಕಾಲದ ಕಟ್ಟಳೆ ಕಂಡು ಬೆರಗಾದರಂತೆ ಪ್ರಭುದೇವರು.

ಇಂದಿನದು ಆಧುನಿಕ ಯುಗ. ಪ್ರಾಥಮಿಕ ಶಾಲೆಗಳಲ್ಲಿ ಬಡಿದು, ಮಾಧ್ಯಮಿಕ ಶಾಲೆಗಳಲ್ಲಿ ಬೈದು, ಕಾಲೇಜುಗಳಲ್ಲಿ ಝುಂಕಿಸಿ, ವಿಶ್ವವಿದ್ಯಾಲಯಗಳ ಹಂತದಲ್ಲಿ ವಂದಿಸಿ ಜ್ಞಾನೋಪದೇಶ ಮಾಡಬೇಕು ಎಂಬ ಆಶಯವನ್ನು ನಾವು ಗ್ರಹಿಸಬಹುದಾಗಿದೆ. ಮಗುವಿನ ದೈಹಿಕ–ಮಾನಸಿಕ–ಬೌದ್ಧಿಕ ಬೆಳವಣಿಗೆಯನ್ನು ಗಮನಿಸಿ, ಶಿಕ್ಷಕರಾದವರು ಬೋಧನೆ ಮಾಡಬೇಕಾಗುತ್ತದೆ.

ಆದರೆ, ಇಂದು ಬಹಳಷ್ಟು ಗುರುಗಳು ಹಣಕ್ಕಾಗಿ, ಸಂಬಳಕ್ಕಾಗಿ ಈ ಶಿಕ್ಷಕ ವೃತ್ತಿಗೆ ಬರುತ್ತಿದ್ದಾರೆ. ಉನ್ನತ ಧ್ಯೇಯಾದರ್ಶಗಳನ್ನು ಹೊಂದಿ ಬಂದರೆ, ಅಂಥವರಿಂದ ಆದರ್ಶ ನಾಗರಿಕರು ನಿರ್ಮಾಣವಾಗುತ್ತಾರೆ. ಕುಮಾರ ಕಕ್ಕಯ್ಯನವರು ನಿಜವಾದ ಗುರು ಯಾರು ಎಂಬುದನ್ನು ತಮ್ಮ ವಚನದಲ್ಲಿ ತಿಳಿಸುತ್ತಾರೆ –

ಹಣಕ್ಕಾಗಿ ಶಿಕೋಣಿ ಹೇಳಿದಾತ ಗುರುವಲ್ಲ,
ಸಂಬಳಕ್ಕಾಗಿ ಪಾಠ ಕಲಿಸಿದಾತನೂ ಗುರುವಲ್ಲ,
ಗುರುಕುಲವೆಂದು ದಕ್ಷಿಣೆ ಕೇಳಿದಾತ ಗುರುವಲ್ಲ,
ಸಂಪ್ರದಾಯಿಕ ದೀಕ್ಷೆ ಕೊಟ್ಟವನೂ ಗುರುವಲ್ಲ,
ಅಜ್ಞಾನದ ಕತ್ತಲೆ ಕಳೆದು, ಸುಜ್ಞಾನದ ಬೆಳಕು
ತೋರಿದಾತನೇ ಗುರುವೆಂದ ಕುಮಾರ ಕಕ್ಕಯ್ಯ.[೧೮]

ಶಿಕ್ಷಕನಾದವನು ಜೀವನ ಪರ್ಯಂತರ ಕಲಿಯುತ್ತಲೇ ಇರಬೇಕು. ಅಂದರೆ ಆತನೂ ಜ್ಞಾನಪಿಪಾಸುವಾಗಿರಬೇಕು. ತಾನು ಪದವಿ ಪಡೆದು ಶಿಕ್ಷನಾದ ನಂತರ, ತನ್ನದು ಓದುವದು ಮುಗಿಯಿತು ಎಂದು ಭಾವಿಸಬಾರದು, ನಿರಂತರ ಕಲಿಕೆ ಇರಬೇಕು.

ಕಲಿಕೆಯಿಂದ ಶಿಕ್ಷಣ ಜ್ಞಾನ,
ಜ್ಞಾನದಿಂದ ಕಾರ್ಯ, ಕಾರ್ಯದಿಂದ ಫಲ.

---

೧೭. ಅಲ್ಲಮ ಪ್ರಭುದೇವರ ವಚನ ಸಂಪುಟ – ಸಂ॥ ಡಾ. ಬಿ.ವ್ಹಿ. ಮಲ್ಲಾಪೂರ ವ–೫೨
೧೮. ಕುಮಾರ ಕಕ್ಕಯ್ಯನ ವಚನಗಳು – ಪು–೭೨ ವ–೨೭೭

ಕಾಯಕದಿಂದ ಸಂಪಾದನೆ, ಸೌಖ್ಯ.
ಸೌಖ್ಯದಿಂದ ಶಾಂತಿ, ಶಾಂತಿಯಿಂದ ಶಿವ.
ಮಾನವ ಜೀವಿಗೆ ಜೀವಮಾನದವರೆಗೆ
ಕಲಿಕೆಯ ಕಾಯಕವೇ ಜೀವನವೆಂದ
ಕುಮಾರ ಕಕ್ಕಯ್ಯ.[೧೯]

ಶಿಕ್ಷಣ-ರಂಗದಲ್ಲಿ ಇಂದು ಬಹಳಷ್ಟು ಬದಲಾವಣೆ ನಡೆಯುತ್ತಿದೆ. ಜಾಗತೀಕರಣದಿಂದಾಗಿ ಶಿಕ್ಷಣಕ್ಷೇತ್ರ ವ್ಯಾಪಕವಾಗಿ ಬೆಳೆಯುತ್ತಿದೆ. "ಹಿಂದಿನ ದಿನಗಳಲ್ಲಿದ್ದ ಸಾಂಪ್ರದಾಯಿಕ ಉನ್ನತ ಶಿಕ್ಷಣ ಇಂದು ಬಹುತೇಕ ತನ್ನ ಪ್ರಸ್ತುತತೆ ಕಳೆದುಕೊಂಡಿದೆ. ಜಾಗತಿಕ ಗುಣಮಟ್ಟ ಬಯಸುವ ಉನ್ನತ ಶಿಕ್ಷಣ ಭಾರತದಲ್ಲಿ ಕಾಲಿರಿಸಿದೆ. ಇಂತಹ ಸಂದರ್ಭದಲ್ಲಿ ವಿಶ್ವವಿದ್ಯಾಲಯ ಹಾಗೂ ಕಾಲೇಜ ಅಧ್ಯಾಪಕರ ಹೊಣೆಗಾರಿಕೆ ಹಾಗೂ ವೃತ್ತಿ ಬೆಳವಣಿಗೆಯ ಕುರಿತು ಗಂಭೀರವಾಗಿ ಚಿಂತಿಸುವ ತುರ್ತು ಅಗತ್ಯವಿದೆ. ಅಧ್ಯಾಪಕರ ಅರ್ಹತೆಯ ಜೊತೆಗೆ ವೃತ್ತಿ ಸಾಮರ್ಥ್ಯಗಳಿಗೆ (ಪ್ರೊಫೆಷನಲ್ ಕಾಂಪಿಟೆನ್ಸೀಸ್) ಹೆಚ್ಚು ಗಮನ ನೀಡಲಾಗುತ್ತಿದೆ. ಬೋಧನೆ, ಸಂಶೋಧನೆ ಹಾಗೂ ವೃತಿಪರ ಬೆಳವಣಿಗೆಗೆ ಪ್ರಾಶಸ್ತ್ಯ ನೀಡಿ, ಅಧ್ಯಾಪಕರನ್ನು ಬೌದ್ಧಿಕ ಬಂಡವಾಳಗಳಾಗಿ (ನಾಲೆಡ್ಜ ಕ್ಯಾಪಿಟಲ್) ಪರಿಗಣಿಸಲಾಗುತ್ತಿದೆ. ಅವರ ವೃತ್ತಿಗೌರವ ಹೆಚ್ಚಿದಂತೆಯೇ ಅವರಿಂದ ಗುಣಮಟ್ಟದ ಸೇವೆಯನ್ನು ನಿರೀಕ್ಷಿಸಲಾಗುತ್ತಿದೆ. ಆದುದರಿಂದ ಅಧ್ಯಾಪಕರು ತಮ್ಮ ವೃತ್ತಿ ಬೆಳವಣಿಗೆಯ ಮಾರ್ಗಗಳನ್ನು ಹುಡುಕಬೇಕಿದೆ. ತಮಗಿರುವ ಅವಕಾಶಗಳನ್ನು ವೃತ್ತಿ ಬೆಳವಣಿಗೆಯ ಮೆಟ್ಟಿಲುಗಳಾಗಿಸಿಕೊಳ್ಳಲೇಬೇಕಾಗಿದೆ"[೨೦]

ಇಂದು ಶಿಕ್ಷಣ ಕ್ಷೇತ್ರದಲ್ಲಿ 'ಸರ್ವಶಿಕ್ಷಾ ಅಭಿಯಾನ'ದಿಂದಾಗಿ ಶಿಕ್ಷಣ ರಂಗದ ಎಲ್ಲ ಹಂತಗಳಲ್ಲಿ ಬದಲಾವಣೆಗಳು ಬಂದಿವೆ. ಅಕ್ಷರದಾಸೋಹ, ಪರಿಹಾರ ಬೋಧನೆ, ಸೆಮಿಸ್ಟರ ಶಿಕ್ಷಣ, ತ್ರೈಮಾಸಿಕ ಶಿಕ್ಷಣ, ಸಮುದಾಯದತ್ತ ಶಾಲೆ, ಚೈತನ್ಯ ಮಾದರಿ ಕಲಿಕೆ – ಬೋಧನೆ. ಪ್ರಾಥಮಿಕ ಹಂತದಿಂದ ವಿಶ್ವವಿದ್ಯಾಲಯ ಹಂತದವರೆಗೆ ಶಿಕ್ಷಕರು–ಅಧ್ಯಾಪಕರು – ಉಪನ್ಯಾಸಕರು – ಪ್ರೋಫೆಸರುಗಳಿಗೆಲ್ಲ ಇಂದು ಶಿಕ್ಷಣ ಇಲಾಖೆಯು ಓರಿಯಂಟೇಶನ್ ಹಾಗೂ ರಿಫ್ರೆಶರ ಕೋರ್ಸುಗಳ ಮೂಲಕ, ಕಾರ್ಯಾಗಾರ, ಉಪಗ್ರಹ ಶಿಕ್ಷಣ, ಸಮ್ಮೇಳನ, ವಿಚಾರ ಸಂಕಿರಣಗಳ ಮೂಲಕ ವೃತ್ತಿ ಬೆಳವಣಿಗೆಗೆ ಅವಕಾಶ ಕಲ್ಪಿಸುತ್ತಿದೆ. ಅಧ್ಯಾಪಕ ವರ್ಗ ಇವುಗಳ ಉಪಯೋಗ ಪಡೆದುಕೊಂಡು ಕ್ರಿಯಾಶೀಲರಾಗಿ ತಮ್ಮನ್ನು ಜ್ಞಾನ – ವಿಜ್ಞಾನ ಕ್ಷೇತ್ರಗಳಲ್ಲಿ ತೊಡಗಿಸಿಕೊಳ್ಳಬೇಕು.

ಜೀವನದ ಜವಾಬ್ದಾರಿಯ ಅರಿವಿಲ್ಲದ ವಿದ್ಯಾರ್ಥಿಗಳು, ಪಾಲಕರ ಹಣವನ್ನು ನೀರಿನಂತೆ ಖರ್ಚುಮಾಡುತ್ತಾ, ವಿಕೃತ ಭೋಗ ಜೀವನಕ್ಕೆ ಮರುಳಾಗಿ ತಮ್ಮ

---

೧೯. ಕುಮಾರ ಕಕ್ಕಯ್ಯನ ವಚನಗಳು– ಪು–೪೭, ವ–೧೭೮

೨೦. ಪ್ರಜಾವಾಣಿ ಪತ್ರಿಕೆ ಶಿಕ್ಷಣ :ಅಧ್ಯಾಪಕರ ವೃತ್ತಿ ಸಾಮರ್ಥ್ಯ ಬೆಳವಣಿಗೆ ಹೇಗೆ?
ಡಾ॥ ವಿಷ್ಣು ಎಂ. ಶಿಂಧೆ (ದಿನಾಂಕ ೧೪–೧೨–೨೦೦೯) ಪುಟ–೧

ಬದುಕನ್ನು ಚಿಕ್ಕವಯಸ್ಸಿನಲ್ಲಿಯೇ ಹಾಳುಮಾಡಿಕೊಳ್ಳುತ್ತಿದ್ದಾರೆ. ಇಂಥವರಿಗಾಗಿಯೇ "ಪ್ರೌಢಶಾಲಾ ಮಟ್ಟದಲ್ಲಿ ಹಣದ ಮಹತ್ವ, ಉಳಿತಾಯದ ಮಾರ್ಗಗಳು ಹಾಗೂ ಅದರ ಸದುಪಯೋಗದ ಬಗ್ಗೆ ತಿಳುವಳಿಕೆಯನ್ನು ಕಲಿಕೆಯ ಹಂತದಲ್ಲಿಯೇ ನೀಡಲು ಷೇರು ಪೇಟೆ ನಿಯಂತ್ರಣ ಮಂಡಳಿ (ಸೆಬಿ) ಸ್ಥಾಪಿಸಿರುವ 'ಷೇರು ಪೇಟೆಗಳ ರಾಷ್ಟ್ರೀಯ ಸಂಸ್ಥೆ (ಎನ್.ಆಯ್.ಎಸ್.ಎಂ) ಕಾರ್ಯಕ್ರಮವೊಂದನ್ನು ಹಮ್ಮಿಕೊಂಡಿದೆ."[೨೧] ಈ ಯೋಜನೆಯಲ್ಲಿ ಶಿಕ್ಷಕರಿಗೆ ತರಬೇತಿ ಹಾಗೂ ವಿದ್ಯಾರ್ಥಿಗಳಿಗೂ ತರಬೇತಿ ಕೊಡಿಸಲು ಸಿದ್ಧವಾಗಿದೆ.

ಇಷ್ಟೆಲ್ಲ ಯೋಜನೆಗಳು, ಅವಕಾಶಗಳು ಇದ್ದರೂ ಸಹ ಅನೇಕ ಅಧ್ಯಾಪಕರು–ವಿದ್ಯಾರ್ಥಿಗಳು ಭೋಗಜೀವನಕ್ಕೆ ಬಲಿಯಾಗುತ್ತಿದ್ದಾರೆ. ಇಂಥವರನ್ನು ಕುರಿತು ಕುಮಾರ ಕಕ್ಕಯ್ಯ ಪೋಳ ಅವರು ತಮ್ಮ ವಚನದಲ್ಲಿ ವಿಡಂಬಿಸುತ್ತಾರೆ –

ಕ್ಲಬ್ಬಿನಲಿ ಪ್ರೊಫೇಸರ್, ಥಿಯೇಟರದಲಿ ವಿದ್ಯಾರ್ಥಿ.
ಕೈಯಲ್ಲಿ ಪುಸ್ತಕ, ಮನದಲ್ಲಿ ಕಾಮ.
ಹಿಡಿಯುವದು ನೋಟಬುಕ್, ಬರೆಯುವದು ಪ್ರೇಮಪತ್ರ,
ಕ್ಲಾಸಿನಲ್ಲಿ ಕುಚೇಷ್ಟೆ, ಬೀದಿಯಲ್ಲಿ ಸ್ವೇಚ್ಛೆ.
ಹಸಿಕಾಯಿ ಹಿಸುಕಿದಂತೆ
ಬಾಲ್ಯದಲ್ಲಿ ಮುಪ್ಪು ಬರುವ ಇಂಥ ಶಿಕ್ಷಣ
ಬೇಡವೇ ಬೇಡವೆಂದ ಕುಮಾರ ಕಕ್ಕಯ್ಯ.[೨೨]

iii) **ಪಾಲಕರು–ಶಾಲೆಗಳು–ಸಂಘ ಸಂಸ್ಥೆಗಳು :**

ಮಕ್ಕಳ ಭವಿಷ್ಯ ರೂಪಿಸುವಲ್ಲಿ ಪಾಲಕರದೂ ಸಹ ಬಹು ದೊಡ್ಡ ಜವಾಬ್ದಾರಿ ಇದೆ. ನಮ್ಮ ದೇಶದಲ್ಲಿ ಪ್ರತಿಶತ ೫೦% ರಷ್ಟು ಪಾಲಕರು ಅನಕ್ಷರಸ್ಥರು, ಅವಿದ್ಯಾವಂತರು, ಬಡತನದ ರೇಖೆಗಿಂತ ಕೆಳಗಿನವರೂ ಇರುವುದರಿಂದ ಶಿಕ್ಷಣದ ಮಹತ್ವ ಅವರಿಗೆ ತಿಳಿದೇ ಇಲ್ಲ. ಶಾಲೆಗೆ ಹೋಗುವ ತಮ್ಮ ಮಕ್ಕಳು ಸರಿಯಾಗಿ ಕಲಿಯುತ್ತಿರುವ ಬಗ್ಗೆ, ಅವರ ಪ್ರಗತಿಯ ಬಗ್ಗೆ ಚಿಂತಿಸುವದೂ ಇಲ್ಲ, ಶಾಲೆ–ಕಾಲೇಜುಗಳಿಗೆ ಹೋಗಿ ಮುಖ್ಯಾಧ್ಯಾಪಕರು–ಪ್ರಾಚಾರ್ಯರು–ಶಿಕ್ಷಕರನ್ನು ವಿಚಾರಿಸುವುದೂ ಇಲ್ಲ. ಇಂತಹ ಪಾಲಕರು ಶಾಲೆಗಳಲ್ಲಿ ನಡೆಯುವ 'ಪಾಲಕರ ಸಭೆ'ಗೆ ಹಾಜರಾಗುವುದೂ ಇಲ್ಲ. ಇಂಥವರನ್ನು ಕುರಿತು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ತಿಳಿಹೇಳುತ್ತಾರೆ –

ಹಾಗೂ ಹೀಗೂ ಹೇಗೋ ಬದುಕಿ
ಪೂರ್ವಜನ್ಮದ ಕರ್ಮವೆನ್ನುವದಕ್ಕಿಂತ
ಸ್ವಲ್ಪ ಕಣ್ತೆರೆದು ಎಚ್ಚರಾಗಬೇಕು.

---

೨೧. ಹಣಕಾಸು ನಿರ್ವಹಣೆ ಕೋರ್ಸ –ವಿಶ್ವನಾಥ ಸುಬ್ರಹ್ಮಣ್ಯಂ ಅನು–ಕೆ. ಶ್ರೀಕಾಂತ. ಪ್ರಜಾವಾಣಿ (ದಿನಾಂಕ ೧೪–೧೨–೨೦೦೯) ಪು–೨.

೨೨. ಕುಮಾರ ಕಕ್ಕಯ್ಯನ ವಚನಗಳು – ಪು–೨೮ ವ–೧೦೬.

ಕುರುಡನಂತೆ ತಡಕಾಡಿ ಎಡವಿ
ಕತ್ತಲೆಯನ್ನೇ ಶಪಿಸುವದಕ್ಕಿಂತ
ಸ್ವಲ್ಪ ಕಡ್ಡಿ ಕೊರೆದು ದೀಪ ಹಚ್ಚಬೇಕು.
ದಡ್ಡನಾಗಿ ಹೆಬ್ಬೊಟ್ಟೊತ್ತಿ ಮೋಸ ಹೋಗಿ
ಹಣೆಬರಹವೆಂದು ಹಳಿಯುವದಕ್ಕಿಂತ
ಸ್ವಲ್ಪ ಓದು ಬರಹ ಕಲಿಯಬೇಕೆಂದ
ಕುಮಾರ ಕಕ್ಕಯ್ಯ.[೨೩]

ಪಾಲಕರು ವಿದ್ಯಾವಂತರಾಗಿದ್ದರೆ ಕನಿಷ್ಠಪಕ್ಷ ತಮ್ಮ ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಚಿಂತಿಯನ್ನಾದರೂ ಮಾಡುತ್ತಾರೆ.

ಶಿಕ್ಷಣಕ್ಕೆ ಹಾಕುವ ದುಡ್ಡು ತಕ್ಷಣ ಫಲನೀಡುವದಿಲ್ಲ, ಅದು ಸುದೀರ್ಘಕಾಲದ ನಂತರ ಅಮೃತಫಲಗಳನ್ನು ಕೊಡುತ್ತದೆ ಎಂಬ ಅರಿವು ಪಾಲಕರಿಗೆ, ಸಂಘ ಸಂಸ್ಥೆಗಳಿಗೆ, ಸರ್ಕಾರಗಳಿಗೆ ಬೇಕಾಗುತ್ತದೆ. ಶಿಕ್ಷಣವು ಅನುತ್ಪಾದಕ ಎಂಬ ಭಾವನೆ ಬೆಳೆದು ಬಂದರಂತೂ ಅದರ ಬೆಳವಣಿಗೆಯಾಗಲು ಹೇಗೆ ಸಾದ್ಯ ?

ಇತ್ತೀಚೆಗೆ ತಮ್ಮ ಸ್ವಾರ್ಥ ರಾಜಕೀಯ ಉದ್ದೇಶಕ್ಕಾಗಿ ಸರಕಾರಗಳು ಬೇಡಿ ಬೇಡಿದವರಿಗೆಲ್ಲ ಶಾಲೆ-ಕಾಲೇಜುಗಳನ್ನು, ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಲು ಪರವಾನಿಗಿ ಕೊಡುತ್ತಲೇ ಇವೆ. 'ಇಂದು ಶಾಲಾ-ಕಾಲೇಜುಗಳು ನಾಯಿ ಕೊಡೆಗಳಂತೆ ಹುಟ್ಟಿಕೊಳ್ಳುತ್ತಲಿವೆ. ಅವುಗಳಲ್ಲಿ ಗುಣಾತ್ಮಕ ಶಿಕ್ಷಣ ಸಿಗುವುದು ದುಸ್ಸಾಧ್ಯವಾಗುತ್ತಿದೆ.' (೨೪) ಬಹಳಷ್ಟು ಶಿಕ್ಷಣ ಸಂಸ್ಥೆಗಳು ಧನದಾಹದಿಂದ ಶಿಕ್ಷಣದ ಹೆಸರಿನಲ್ಲಿ ವ್ಯಾಪಾರ ನಡೆಸುತ್ತಿವೆ. ಡೊನೇಶನ್ ಹೆಸರಿನಲ್ಲಿ ಹಣದ ಸುಲಿಗೆಯೇ ನಡೆದಿದೆ. ಯೋಗ್ಯತೆ-ಅರ್ಹತೆಗಳನ್ನು ಬದಿಗೆ ಸರಿಸಿ ಹಣ ಹೆಚ್ಚು ಕೊಡುವ ಯೋಗ್ಯತೆ ಇರುವವರನ್ನು ಅಧ್ಯಾಪಕರನ್ನಾಗಿ ನೇಮಿಸಿಕೊಳ್ಳುವುದು, ಸರ್ಕಾರಿ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಅವ್ಯಾಹತವಾಗಿಯೇ ಸಾಗಿದೆ. ಇಂತಹ ಭ್ರಷ್ಟ ವ್ಯವಸ್ಥೆಯಲ್ಲಿ ಮೌಲಿಕ ಶಿಕ್ಷಣ ಬಯಸುವದು ಸಾಧ್ಯವೇ ?

'ಭಾರತದಲ್ಲಿ ಶಿಕ್ಷಣ ಎನ್ನುವುದು ಒಂದು ಮರೀಚಿಕೆಯಾಗಿದೆ. ಸರಕಾರಗಳು ಶಿಕ್ಷಣಕ್ಕಾಗಿ ಮೀಸಲಿಡುತ್ತಿರುವ ಹಣ ಕೇವಲ ನೂರಕ್ಕೆ ಮೂರು ಭಾಗ. ಶಿಕ್ಷಣವನ್ನು ವ್ಯಾಪಾರೀಕರಣಗೊಳಿಸಿ ಖಾಸಗಿಯವರ ದರೋಡೆಗೆ ಬಿಟ್ಟಿರುವ ದುರಂತ ಈ ದೇಶದ್ದು. ನೀಡುತ್ತಿರುವ ಶಿಕ್ಷಣವೂ ಸ್ವಾವಲಂಬಿಗಳನ್ನಾಗಿಸುವಂಥದ್ದಲ್ಲ, ಪರತಂತ್ರಿಗಳನ್ನಾಗಿಸುವಂಥದ್ದು. ವಿದೇಶಗಳ ವ್ಯಾಮೋಹ ಶಿಕ್ಷಣದ ಪ್ರಥಮಗುರಿಯಾಗಿದೆ. ಹಣದ ದಾಹ ಅದರ ಅಂತರಂಗವಾಗಿದೆ. ಆದ ಕಾರಣ ಸುಲಿಗೆ ಸಹಜವಾಗಿದೆ.... ಶಿಕ್ಷಣವನ್ನೂ ಪರದೇಶಗಳ ರಾಜತಾಂತ್ರಿಕತೆಗೆ ಬಲಿಗೊಟ್ಟಿರುವ ದೇಶ ಎಂದರೆ ಭಾರತ.'[೨೫]

---

೨೩. ಕುಮಾರ ಕಕ್ಕಯ್ಯನ ವಚನಗಳು – ಪು-೩೯ ವ-೧೫೦
೨೪. ಸಮಕಾಲಿನತೆ – ವಚನ ಸಾಹಿತ್ಯ – ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಪು-೯-೧೦
೨೫. ಬ್ರಾಹ್ಮಣ್ಯದ ತಂತ್ರಗಳು-ಜ.ಹೊ.ನಾ ಪು-೧೫೪-೧೫೫

ಬಹುತೇಕ ಖಾಸಗಿ–ಶಿಕ್ಷಣ ಸಂಸ್ಥೆಗಳು ಸ್ವಾತಂತ್ರ್ಯನಂತರ ತಮ್ಮ ಮೂಲ ಉದ್ದೇಶವನ್ನೇ ಮರೆತವೆನ್ನಬಹುದು. ಸಮಾಜದ ಬಡಮಕ್ಕಳಿಗಾಗಿ ಫ್ರೀ ಬೋರ್ಡಿಂಗ ಹಾಗೂ ಫ್ರೀ ಎಜ್ಯುಕೇಶನ್ ಎಂಬ ಕಳಕಳಿಯಿಂದ ದೂರ ಸರಿಯತೊಡಗಿದವು. ಹಿಂದಿನವರು ತ್ಯಾಗಮನೋಭಾವದಿಂದ, ಸಮಾಜದ ರಾಷ್ಟ್ರದ ಉನ್ನತಿಗೋಸ್ಕರ ಕಟ್ಟಿದ ಸಂಸ್ಥೆಗಳಲ್ಲಿ ಕಾಲ ಗತಿಸಿದಂತೆ ಅವರ ವಾರಸುದಾರರು ಈ ವ್ಯವಸ್ಥೆಯನ್ನು 'ಗಳಿಕೆ'ಗಾಗಿ ಬಳಸಿಕೊಳ್ಳತೊಡಗಿದರು. ಸೇವಾ ಭಾವನೆ ಮರೆಯಾಗಿ ಸೇವನಾ ಮನೋಭಾವ ಕಬಂಧಬಾಹುಗಳನ್ನು ಚಾಚತೊಡಗಿತು. ಇದರ ಪರಿಣಾಮವಾಗಿ ಶಿಕ್ಷಣದ ಸಂಘ–ಸಂಸ್ಥೆಗಳಲ್ಲಿ ಆಡಳಿತ ಮಂಡಳಿಗೆ ಚುನಾವಣೆಗಳು, ಅಧ್ಯಕ್ಷಗಿರಿಗಾಗಿ ಪೈಪೋಟಿ ಸುರುವಾಯ್ತು. ಹಣ ಹಾಗೂ ಜಾತಿ ಪ್ರಮುಖ ಪಾತ್ರ ವಹಿಸಿತೊಡಗಿದವು. ಶಿಕ್ಷಣ ಸಂಸ್ಥೆಗಳ 'ಮಾಲಿಕ' ರುಗಳೇ ರಾಜಕಾರಣಕ್ಕಿಳಿದು ಚುನಾವಣೆಗಳಲ್ಲಿ ಆರಿಸಿಬಂದು ಶಾಸಕರಾಗಿ, ಸಚಿವರಾಗಿ ಸರಕಾರದ ಭಾಗವಾದುದರಿಂದ ಖಾಸಗಿ –ಶಿಕ್ಷಣ ಸಂಸ್ಥೆಗಳ ಮೇಲೆ ಸರಕಾರಗಳ ಯಾವ ಹಿಡಿತವೂ ಸಾಧ್ಯವಾಗಲಿಲ್ಲ. ಹೀಗಾಗಿ ಆರ್ಥಿಕ–ಸಾಮಾಜಿಕವಾಗಿ ಹಿಂದುಳಿದಿರುವ ಬಡಜನತೆಯ ಮಕ್ಕಳು ಉನ್ನತ ಶಿಕ್ಷಣದಿಂದ ವಂಚಿತರಾಗುತ್ತಲೇ ಇದ್ದಾರೆ. ಇಂತಹ ದುರಂತಕ್ಕೆ ನಮ್ಮ ವ್ಯವಸ್ಥೆಯು ಈಡಾಗುತ್ತಿದೆ.

ಪಾಲಕರು ಪ್ರಜ್ಞಾವಂತರಾಗದ ವಿನಹ, ಸಂಘಟಿತರಾಗದ ವಿನಹ ಶಿಕ್ಷಣ ವ್ಯವಸ್ಥೆಯಲ್ಲಿ ಬದಲಾವಣೆ ಸಾಧ್ಯವಿಲ್ಲ. ಅವರಲ್ಲಿ ಪ್ರಜ್ಞೆ ಬರಬೇಕೆಂದರೆ ಮೊದಲು ಅವರು ಜ್ಞಾನಿಗಳಾಗಬೇಕು. ಅಂತೆಯೇ ಕುಮಾರ ಕಕ್ಕಯ್ಯನವರು ಕಳಕಳಿಯಿಂದ ತಮ್ಮ ವಚನದಲ್ಲಿ ತಿಳಿಸುತ್ತಾರೆ –

ಓದಿದವನು ಜ್ಞಾನಿಯಾದರೆ,
ಓದದವನು ಆಗುವನು ಅಜ್ಞಾನಿ,
ಸಂಪಾದಿಸಿದವನು ಸುಖಿಯಾದರೆ,
ಸಂಪಾದಿಸದವನು ಆಗುವನು ದುಃಖಿ,
ಪ್ರಪಂಚದಲ್ಲಿ ಯಾವುದೇ ಅದೃಷ್ಟಗಳಿಲ್ಲ,
ಕರ್ತವ್ಯಗಳುಂಟೆಂದ ಕುಮಾರ ಕಕ್ಕಯ್ಯ.[೨೬]

ದೇಶದ ಜನ–ಸಾಮಾನ್ಯರು 'ಅದೃಷ್ಟ' ದ ಬೆನ್ನು ಹತ್ತದೇ, ಪ್ರಯತ್ನವಾದಿಗಳಾಗಿ, ವಿದ್ಯಾವಂತರಾಗಿ, ತಮ್ಮ ಕರ್ತವ್ಯಗಳನ್ನು ಅರಿತು ಅನ್ಯಾಯದ ವಿರುದ್ಧ, ಅವ್ಯವಸ್ಥೆಯ ವಿರುದ್ಧ ಹೋರಾಡಿದರೆ ಪರಿವರ್ತನೆ ತರಬಹುದಾಗಿದೆ.

**(iv) ನೈತಿಕತೆ ಹಾಗೂ ರಾಷ್ಟ್ರನಿರ್ಮಾಣ :**

ಯಾವುದೇ ಒಂದು ರಾಷ್ಟ್ರ ಸುಭದ್ರವಾಗಿರಬೇಕಾದರೆ ಆ ರಾಷ್ಟ್ರದ ಎಲ್ಲ ರಂಗಗಳಲ್ಲಿ ನೀತಿವಂತ, ಚಾರಿತ್ರ್ಯವಂತ ಜನರು ಬಹುಸಂಖ್ಯೆಯಲ್ಲಿರಬೇಕು.

---

೨೬. ಕುಮಾರ ಕಕ್ಕಯ್ಯನ ವಚನಗಳು – ಪು–೭ ವ–೨೫.

ಚಾರಿತ್ರ್ಯಹೀನ ಜನರಿಂದ ಸುಭದ್ರ ರಾಷ್ಟ್ರ ಕಟ್ಟಲಾಗುವುದಿಲ್ಲ. Charity begins at home ಎನ್ನುವ ಆಂಗ್ಲ ಉಕ್ತಿಯಂತೆ ಇದು ಮನೆಯಿಂದಲೇ ಪ್ರಾರಂಭವಾಗಬೇಕು. ತಂದೆ-ತಾಯಿಯರು ಚಾರಿತ್ರ್ಯವಂತರಾಗಿದ್ದರೆ ಚಾರಿತ್ರ್ಯವಂತ ಮಕ್ಕಳು ನಿರ್ಮಾಣವಾಗುತ್ತಾರೆ. ಇಂತಹ ಮಕ್ಕಳೇ ಬೆಳೆದು ಸುಶಿಕ್ಷಿತರಾಗಿ, ಸುಸಂಸ್ಕೃತರಾಗಿ ಸಮಾಜ -ರಾಷ್ಟ್ರಗಳ ಬೆನ್ನೆಲುಬಾಗುತ್ತಾರೆ.

ಇಂದು ದೇಶದ ಎಲ್ಲ ರಂಗಗಳಲ್ಲಿ ಆಸೆ-ಆಮಿಷ, ಧನದದಾಹ, ಅಧಿಕಾರದ ಹುಚ್ಚು ತುಂಬಿರುವವರೇ ತುಂಬಿಕೊಂಡಿರುವಾಗ ಎಂತಹ ರಾಷ್ಟ್ರ ನಿರ್ಮಾಣವಾದೀತು!

If Wealth is lost, Nothing is lost.
If health is lost, Something is lost.
If Character is lost, Every thing is lost.

ಎಂಬ ಅನುಭಾವೋಕ್ತಿಯು ಈ ಮಾತಿಗೆ ನಿದರ್ಶನವಾಗಿದೆ. ಹಣ ಕಳೆದು ಹೋದರೆ ಏನನ್ನೂ ಕಳೆದುಕೊಂಡಂತಲ್ಲ, ಆರೋಗ್ಯ ಕಳೆದುಕೊಂಡರೆ ಸ್ವಲ್ಪವನ್ನು ಕಳೆದುಕೊಂಡಂತೆ, ಎಂಬ ಪ್ರಜ್ಞೆ ಎಲ್ಲರಿಗೂ ಬೇಕಾಗಿದೆ, ಅದರಲ್ಲಿಯೂ ಎಲ್ಲಾ ರಂಗಗಳಲ್ಲಿರುವ ಮುಖಂಡರು, ನಾಯಕರು, ನೇತಾರರಿಗೆ ಬೇಕಾಗಿದೆ.

'ರಾಷ್ಟ್ರದ ಜೀವಂತ ಹಾಗೂ ಸಜೀವ ಸಂಪನ್ಮೂಲ ಮಾನವನಾಗಿದ್ದಾನೆ. ಸಂಪನ್ಮೂಲದೊಂದಿಗೆ ವ್ಯವಹರಿಸುವ ಶಿಕ್ಷಣ ವಾಸ್ತವಿಕವಾಗಿ ಉತ್ಪಾದಕ ಕ್ಷೇತ್ರವಾಗುತ್ತದೆ. ಒಂದು ರಾಷ್ಟ್ರದ ನಿಜವಾದ ಸಂಪತ್ತು ಮಾನವ ಶಕ್ತಿ, ಕೇವಲ ನೆಲ ಜಲ ಖನಿಜ ಸಂಪತ್ತಲ್ಲ. ರತ್ನಗರ್ಭಾವಸುಂಧರೆಯನ್ನಾಗಲೀ, ನಿಸರ್ಗ ಸಂಪತ್ತನ್ನಾಗಲೀ ರಚನಾತ್ಮಕವಾಗಿ ಹೇಗೆ ಬಳಸಿಕೊಳ್ಳಬೇಕು ? ಎನ್ನುವ ಆಲೋಚನಾ ಶಕ್ತಿ-ಸಾಮರ್ಥ್ಯ ಮಾನವನ ಬುದ್ಧಿಶಕ್ತಿಗೆ ಮಾತ್ರ ಮೀಸಲಾಗಿದೆ. ತನ್ನ ಬುದ್ಧಿಶಕ್ತಿಯ ಪ್ರಬಲ ಅಂಕುಶದಿಂದ ನಿಸರ್ಗವೆಂಬ ಮದಗಜವನ್ನು ಪಳಗಿಸಬಲ್ಲ ಶಕ್ತಿ ಮಾನವನಿಗಿದೆ. ಪ್ರಕೃತಿಯ ಸಂಪನ್ಮೂಲವನ್ನು ಸೂಕ್ತ ರೀತಿಯಲ್ಲಿ ಸಂಸ್ಕರಿಸಿ, ಮಾನವ ಸಂಪನ್ಮೂಲವನ್ನಾಗಿ ಪರಿವರ್ತಿಸಿ ರಾಷ್ಟ್ರದ ಭವಿಷ್ಯವನ್ನು ಸುಭದ್ರಗೊಳಿಸುವದು ಮಾನವನ ಶಿಕ್ಷಣದಿಂದಲೇ ಅದು ಸಾಧ್ಯ... ಒಂದು ರಾಷ್ಟ್ರ ಕೇವಲ ಆರ್ಥಿಕವಾಗಿ ಮಾತ್ರವಲ್ಲ ; ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ, ಹಾಗೂ ಔದ್ಯೋಗಿಕವಾಗಿ ಹೀಗೆ ಹತ್ತಾರು ನಿಟ್ಟಿನಲ್ಲಿ ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸುವುದು ಶಿಕ್ಷಣದಿಂದಲೇ ಸಾಧ್ಯವಾಗಬೇಕು.'[೨೭]

ಶಿಕ್ಷಣದ ನಿಜವಾದ ಧ್ಯೇಯ ವ್ಯಕ್ತಿಗಳನ್ನು ದೈಹಿಕವಾಗಿ, ಮಾನಸಿಕವಾಗಿ ಸದೃಢರನ್ನಾಗಿ ಮಾಡುವುದರ ಜೊತೆಗೆ ನೀತಿವಂತರನ್ನಾಗಿ, ರಾಷ್ಟ್ರ ಪ್ರೇಮಿಗಳನ್ನಾಗಿ ಮಾಡುವುದಾಗಬೇಕು. ಇಂದು ರಾಜಕೀಯ ರಂಗ ಎಲ್ಲ ರಂಗಗಳಿಗಿಂತಲೂ

---

೨೭. ಸಮಾಯೋಗ-ಷಣ್ಮುಖಯ್ಯಾ ಅಕ್ಕೂರಮಠ ಪು-೩೦೫-೩೦೬

ಹೆಚ್ಚು ಭ್ರಷ್ಟವಾಗಿದೆ. ಇದಕ್ಕೆ ಕಾರಣವೆಂದರೆ ಚಾರಿತ್ರ್ಯಹೀನ ಜನರು ಹೆಚ್ಚಿನಸಂಖ್ಯೆಯಲ್ಲಿ ಅದರಲ್ಲಿ ಪ್ರವೇಶಿಸುತ್ತಿರುವುದು. ಅಂಥವರು ಶಿಕ್ಷಣರಂಗದಲ್ಲಿ ಯುವಕರನ್ನು ಆಸೆ–ಆಮಿಷವೊಡ್ಡಿ ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಿರುವುದು. ಎಲ್ಲ ರಾಜಕೀಯ ಪಕ್ಷಗಳೂ ಶಾಲೆ–ಕಾಲೇಜುಗಳಲ್ಲಿ ತಮ್ಮ ತಮ್ಮ ಪಕ್ಷಗಳ ಯುವ ಸಂಘಟನೆಗಳನ್ನು ಹುಟ್ಟು ಹಾಕಿ, ವಿದ್ಯಾರ್ಥಿಗಳಲ್ಲಿ ಗುಂಪುಗಾರಿಕೆ, ಕೋಮುಭಾನವೆ, ಬಿತ್ತಿ ಬಡಿದಾಡಲು ಹಚ್ಚುವುದು, ಪ್ರೀತಿ –ಪ್ರೇಮದ ಹೆಸರಿನಲ್ಲಿ ಲವ್ ಜಿಹಾದ್ ಮಾಡಲು ಪ್ರೇರೇಪಿಸುವುದು, ಪ್ರಾಮಾಣಿಕ ಪ್ರೀತಿಯನ್ನು ಹತ್ತಿಕ್ಕುವುದು, ಚಳುವಳಿ ಮಾಡಿಸುವುದು, ಬಂದ್‌ಗೆ ಕರೆ ಕೊಡಿಸುವುದು, ಸಾರ್ವಜನಿಕ ಆಸ್ತಿ–ಪಾಸ್ತಿ ಹಾಳು ಮಾಡುವುದು, ಬಸ್ ಸುಡುವುದು, ರೈಲು ಹಳಿ ಕಿತ್ತುವುದು, ಚಾಕು ಚೂರಿ ಚೈನು, ಬಾಂಬ್ ಗಳ ಮೂಲಕ ಹೊಡೆದಾಟ.... ಇವೇ ಮುಂತಾದ ಕುಕೃತ್ಯಗಳಗೆ ಪ್ರೇರಣೆ ನೀಡುವುದು, ಇಂತಹ ಚಾರಿತ್ರ್ಯಹೀನ ನಡೆವಳಿಕೆಗಳಿಂದ ಯುವ ಪೀಳಿಗೆಯಲ್ಲಿ ನೈತಿಕತೆ ಸಾಧ್ಯವಾದೀತೇ? ಪ್ರಜ್ಞಾವಂತ ನಾಗರಿಕರು ಚಿಂತನ ಮಾಡಬೇಕಿದೆ.

ಎಲ್ಲಿಯವರೆಗೆ ರಾಷ್ಟ್ರದಲ್ಲಿ 'ಕೋಮುವಾದ'ವಿರುತ್ತದೆಯೋ ಅಲ್ಲಿಯವರೆಗೆ ರಾಷ್ಟ್ರದ ಏಕತೆ ಭದ್ರವಾಗಿರುವುದಿಲ್ಲ. ಈ ಕುರಿತು ಪ್ರೊ. ರಹಮತ್ ತರಿಕೆರೆ ಹೇಳ್ತಾರೆ–'ಕೋಮು ಎಂದರೆ ಧರ್ಮವಲ್ಲ. ಅದು ಧರ್ಮದ ಹೆಸರಿನಲ್ಲಿರುವ ರಾಜಕಾರಣ. ಆದ್ದರಿಂದ ನಿಜವಾದ ಧಾರ್ಮಿಕ ವ್ಯಕ್ತಿ ಕೋಮುವಾದಿಯಾಗಿರುವುದಿಲ್ಲ. ಕೋಮುವಾದಿಗೆ ನಿಜವಾದ ಧಾರ್ಮಿಕ ಸತ್ವ ಇರುವುದಿಲ್ಲ. ಮಹಮದಾಲಿ ಜಿನ್ನಾನನ್ನು ನೆನಪಿಸಿಕೊಳ್ಳುಬೇಕು. ಆತ ಮತದ ಹೆಸರಿನಲ್ಲಿ ಈ ದೇಶ ತುಂಡಾಗಲು ಒಂದು ಕಾರಣವಾದವನು. (ಇನ್ನೊಂದು ಕಾರಣ, ಕಾಂಗ್ರೆಸ್ ಚಳವಳಿಯಲ್ಲಿದ್ದ ಹಿಂದೂ ಮತೀಯವಾದಿಗಳು. ಅಂದರೆ ಈ ದೇಶ ವಿಭಜನೆಯಾಗಲಿಕ್ಕೆ ಜನರಲ್ಲ ಕಾರಣ ಎರಡೂ ಕಡೆಯ ರಾಜಕಾರಣಿಗಳು). ಜಿನ್ನಾಗೆ ಇಸ್ಲಾಮ್ ಧರ್ಮದ ಯಾವುದೇ ತತ್ವಗಳಲ್ಲಿ ನಂಬಿಕೆ ಇರಲಿಲ್ಲ. ಆದರೆ ಮುಸ್ಲಿಂ ಲೀಗಿನ ಮೂಲಕ ಮುಸ್ಲಿಮರಿಗೆ ಬೇರೆ ದೇಶ ಬೇಕೆಂದು ರಾಜಕಾರಣ ಮಾಡಿದ. ಮುಸ್ಲಿಮರ ನಾಯಕನೆನಿಸಿಕೊಂಡು ಬಿಟ್ಟ, ಕೋಮುವಾದಿ ರಾಜಾಕಾರಣಿಗಳು ತಾವು ಧರ್ಮ ರಕ್ಷಕರೆಂದು ಜನರಿಗೆ ಪೋಜು ಕೊಟ್ಟು ನಂಬಿಸುತ್ತಾರೆ. ಅದಕ್ಕೂ ಮುಂಚೆ ತಮ್ಮ ಧರ್ಮ ಅಥವಾ ದೇಶ ಅಪಾಯದಲ್ಲಿದೆ ಎಂದು ಗಾಬರಿ ಹುಟ್ಟಿಸುತ್ತಾರೆ. ಈ ಅಪಾಯಕ್ಕೆ ಕಾರಣ 'ಇಂಥವರು' ಎಂದು ಶತ್ರುಗಳನ್ನು ಸೃಷ್ಟಿಸಿಕೊಡುತ್ತಾರೆ. ಈ ಕಾಲ್ಪನಿಕ ಶತ್ರುಗಳ ಮೇಲೆ ಆಪಾದನೆಗಳನ್ನು ಹೊರಿಸುತ್ತಾರೆ. ಅವರ ವಿರುದ್ಧ ಜನರನ್ನು ಒಗ್ಗೂಡಿಸಿ ಹಿಂಸೆಗೆಳಸುತ್ತಾರೆ. ಹಿಂಸೆಗೆ ಧರ್ಮರಕ್ಷಣೆ, ದೇಶಭಕ್ತಿಯ ಮುಖ ತೊಡಿಸುತ್ತಾರೆ."[೨೮]

ಶ್ರೀಯುತರು ಮುಂದುವರೆದು ಹೇಳುತ್ತಾರೆ– "ಕೋಮುವಾದ ಎಂಬುದು ಕೇವಲ 'ಹಿಂದು' ಎಂದು ಹೇಳಿಕೊಳ್ಳುವವರಲ್ಲಿ ಮಾತ್ರ ಇಲ್ಲ, ಅದು 'ಮುಸ್ಲಿಮ್'

---

೨೮. ವಿಚಾರಸಾಹಿತ್ಯ : ಕೋಮುವಾದ ಮತ್ತು ರಾಷ್ಟ್ರೀಯತೆ– ಪ್ರೊ. ರಹಮತ್ ತರೀಕೆರೆ. ಪು–೧೭

ಅನಿಸಿಕೊಂಡವರಲ್ಲೂ ಇರುತ್ತದೆ. ಅದು ಎಲ್ಲಿದ್ದರೂ ಅದರ ಗುಣ ಒಂದೇ, ದ್ವೇಷ ಮತ್ತು ಅಸಹನೆ; ಅದರ ಕೆಲಸ ಒಂದೇ, ಹಿಂಸೆ ಮತ್ತು ಕ್ರೌರ್ಯ."[೨೯]

ಇಂದು ರಾಷ್ಟ್ರದ ಭವಿಷ್ಯ ಭಯೋತ್ಪಾದಕರ ಕರಾಳ ಹಸ್ತಗಳ ಕ್ರೌರ್ಯಕ್ಕೆ ಸಿಲುಕುವ ಅಪಾಯದಲ್ಲಿದೆ. ಹೊರ ರಾಷ್ಟ್ರಗಳಲ್ಲಿರುವ ಬೇರೆ ಬೇರೆ ಹೆಸರುಗಳನ್ನು ಹೊತ್ತಿರುವ ಸಂಘಟನೆಗಳು ನಮ್ಮ ದೇಶದಲ್ಲಿ ನೆಲ,ಜಲ,ವಾಯು ಮಾರ್ಗಗಳಿಂದ ರಾಜಾರೋಷವಾಗಿ ಒಳನುಸುಳಿ ರಾಷ್ಟ್ರದ ಪ್ರಮುಖ ನಗರಗಳಲ್ಲಿ ನರಮೇಧ ನಡೆಸುತ್ತಿರುವುದು ಹೆಚ್ಚಾಗಿದೆ. "ಸ್ಥಳೀಯ ಮುಸ್ಲಿಮರ ಸಹಕಾರವಿಲ್ಲದೆ ಹೊರಗಿನವರು ಇಷ್ಟು ವ್ಯವಸ್ಥಿತವಾಗಿ ಹಾಗೂ ಕರಾರುವಾಕ್ಕಾಗಿ ಭಯೋತ್ಪಾದಕ ಕೃತ್ಯಗಳನ್ನು ನಡೆಸಲು ಸಾಧ್ಯವಿಲ್ಲೆಂದು ಭಯೋತ್ಪಾದನಾ ನಿಗ್ರಹದಳವೇ ಹೇಳಿದೆ. ಇದು ನಿಜವಾದ ದುರಂತ. ಮುಸ್ಲಿಂ ಸಮಾಜದ ದುರಂತ ಹಾಗೂ ನಮ್ಮೆಲ್ಲರ ದುರಂತ-ರಾಷ್ಟ್ರೀಯ ದುರಂತ."[೩೦]

ನಮ್ಮ ದೇಶಕ್ಕೆ ಇಂದು ಬೇಕಾಗಿರುವುದು ನೂರಕ್ಕೆ ನೂರು ಶಿಕ್ಷಣ. ಅದು ನಮ್ಮಲ್ಲಿ ಭಾವೈಕ್ಯತೆಯನ್ನು ಉಂಟುಮಾಡುವಂತಿರಬೇಕು. ೧೧೦ ಕೋಟಿ ಜನರಲ್ಲಿ ಅನಕ್ಷರಸ್ಥರು ಇನ್ನೂ ೪೦ ಪ್ರತಿಶತ ಇದ್ದಾಗ, ಅಜ್ಞಾನಿಗಳು ಭಯೋತ್ಪಾದಕ ಸಂಘಟನೆಗಳ ಆಮಿಷಕ್ಕೆ ಒಳಗಾಗುತ್ತಾರೆ. ಇದನ್ನು ತಪ್ಪಿಸಬೇಕಾದರೆ ವಿದ್ಯೆ ಕಡ್ಡಾಯವಾಗಬೇಕು. ಅಂತೆಯೇ ಕುಮಾರ ಕಕ್ಕಯ್ಯ ಹೇಳುತ್ತಾರೆ-

ಒಂದೇ ಆವಿಯ ಗಡಿಗೆ
ಹಾಲು ಹಾಕಿದ್ದು ಪಾವನವಾಯಿತು
ಮುಸುರೆಗೆ ಇಟ್ಟದ್ದು ಮೈಲಿಗೆಯೆನಿಸಿತು.
ಒಂದೇ ತಾಯಿಯ ಮಕ್ಕಳು
ವಿದ್ಯೆಕಲಿತವ ಜಾಣನಾದ.
ವಿದ್ಯೆಕಲಿಯದವ ಧಡ್ಡನೆನಿಸಿದ.
ಅಕ್ಷರಜ್ಞಾನ ಇಲ್ಲದವನು ಆ ಮುಸುರೆಯ ಗಡಿಗೆಗೂ
ಕಡೆಯೆಂದ ಕುಮಾರ ಕಕ್ಕಯ್ಯ.[೩೧]

ಇಂದು ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳು ವ್ಯಾಪಕವಾಗಿ ಜಗತ್ತನ್ನು ವ್ಯಾಪಿಸತೊಡಗಿವೆ. ಎಲ್ಲೆಡೆಯಲ್ಲಿ ಬಹುರಾಷ್ಟ್ರೀಯ ಒಪ್ಪಂದಗಳು, ಅಂತರರಾಷ್ಟ್ರೀಯ ಹಣಕಾಸು ನಿಧಿ, ಜಾಗತಿಕ ವಾಣಿಜ್ಯ ಸಂಘಟನೆಗಳು ಮೈದಾಳಿವೆ. ಇವು ಮುಂದುವರೆದ ಹಾಗೂ ಹಿಂದುಳಿದ ರಾಷ್ಟ್ರಗಳ ನಡುವೆ

---

೨೯. -ಅದೇ- ಪುಟ-೧೬

೩೦. ವಿಚಾರ ಸಾಹಿತ್ಯ-ವಂದೇ ಮಾತರಂ ಮತ್ತು ಸೆಕ್ಯಾಲಾರಿಸಂ-ಡಿ.ಎಸ್. ನಾಗಭೂಷಣ ಪು-೩೭

೩೧. ಕುಮಾರ ಕಕ್ಕಯ್ಯನವಚನಗಳು-ಪು-೨೫೯, ವ-೧೦೦೨

ಇನ್ನಷ್ಟು ವಿಶಾಲವಾದ ಹಾಗೂ ಆಳವಾದ ಕಂದಕವನ್ನುಂಟು ಮಾಡಿವೆ. ಆಯಾ ರಾಷ್ಟ್ರಗಳ ಒಳಗೊಳಗೆಯೇ ಬಡವ–ಬಲ್ಲಿದ ಎಂಬ ವರ್ಗಭೇದವನ್ನು ಹೆಚ್ಚಿಸಿವೆ. ಇಂತಹ ಸಂದರ್ಭದಲ್ಲಿ ನಮ್ಮ ನೈತಿಕಶಕ್ತಿ ಹಾಗೂ ದೃಢ ಸಂಕಲ್ಪವೊಂದೇ ನಮ್ಮ ರಾಷ್ಟ್ರವನ್ನು ಸಂಪದ್ಭರಿತ ಹಾಗೂ ಸದೃಢವನ್ನಾಗಿ ರೂಪಿಸಬಲ್ಲುದು. ನಿಜವಾದ ಶಿಕ್ಷಣ, ಜ್ಞಾನ–ವಿಜ್ಞಾನ ಶಿಕ್ಷಣ ಕ್ರಾಂತಿಯಾಗಿ, ಮೂಲೋದ್ಯೋಗ ಶಿಕ್ಷಣ ಏಕಕಾಲಕ್ಕೆ ಸಮತೋಲನ ಸಾಧಿಸಿದರೆ, ನಮ್ಮ ಜನ ಸ್ವಾವಲಂಬಿಗಳಾಗುತ್ತಾರೆ, ಆಗ ನಮ್ಮ ಸ್ವರಾಜ್ಯವು ಸುರಾಜ್ಯವಾಗುತ್ತದೆ.

## ಉ) ಕುಮಾರ ಕಕ್ಕಯ್ಯನ ವಚನಗಳಲ್ಲಿ ವೈಚಾರಿಕ ವಿಚಾರಗಳು

### (i) ಕರ್ಮಠ ಸಂಪ್ರದಾಯಗಳು :

ಜಗತ್ತಿನಲ್ಲಿ ಹುಟ್ಟಿದ ೮೪ ಲಕ್ಷ ಜೀವರಾಸಿಗಳಲ್ಲಿ ಮಾನವ ಜೀವಿಯೂ ಒಂದು. ಎಲ್ಲ ಜೀವಿಗಳೂ ಪ್ರಕೃತಿದತ್ತವಾಗಿ ಬಂದಿರುವ ಸಹಜ ಕ್ರಿಯೆಗಳನ್ನು ಮಾಡುತ್ತಿದ್ದರೆ, ಮಾನವ ಮಾತ್ರ ಒಂದು ವಿಶೇಷವಾದ ಶಕ್ತಿ ಹೊಂದಿ ಸ್ಪಂದಿಸುತ್ತಾನೆ. ಆ ಶಕ್ತಿಗೆ ವಿಚಾರಶಕ್ತಿ, ಚಿಂತನಶಕ್ತಿ, Reasoning power ಎಂದು ಕರೆಯಲಾಗಿದೆ. "Man is an animal, He is a social animal, He is a rational amimal'' ಎಂದು ಗ್ರೀಕ ತತ್ವಜ್ಞಾನಿಗಳು ಹೇಳುತ್ತಾ ಬಂದಿದ್ದಾರೆ. ಮನುಷ್ಯನು ಒಬ್ಬ ಪ್ರಾಣಿ, ಆತ ಸಾಮಾಜಿಕ ಪ್ರಾಣಿ, ಆತ ವೈಚಾರಿಕ ಪ್ರಾಣಿ ಎಂದು ಅರ್ಥ.

"ವಿಚಾರ ಎನ್ನುವುದು ವ್ಯಕ್ತಿ ವಿಶಿಷ್ಟವಾದುದು. ಅದು ಅವರವರ ಕಾಣ್ಕೆ. ಈ ವಿಚಾರ ಎನ್ನುವ ಪದ 'ವಿಚ್' ಎನ್ನುವ ಧಾತುವಿನಿಂದ ಬಂದಿದೆ. ವಿಚ್ ಎಂದರೆ ಕತ್ತರಿಸಿ ನೋಡು, ಒಡೆದು ನೋಡು, ಒಳಹೊಕ್ಕು ನೋಡು ಮುಂತಾದ; ವಿಚಾರ ಎಂದರೆ ವಿಮರ್ಶೆ ವಿವೇಕ, ಆಲೋಚನೆ, ಪರೀಕ್ಷೆ, ವಿಂಗಡಿಸುವಿಕೆ ಮುಂತಾದ ಅರ್ಥಗಳಿವೆ"[೧]

ಆದಿಕಾಲದ ಮಾನವ ಕಾಡಿನಲ್ಲಿ ವಾಸಮಾಡುತ್ತಿದ್ದಾಗ ಪಶುಗಳಂತೆಯೇ ಜೀವನ ಸಾಗಿಸುತ್ತಿದ್ದ. ಕ್ರಮೇಣ ಆತನಲ್ಲಿ ಬೌದ್ಧಿಕ ವಿಕಾಸವಾಗತೊಡಗಿತು. ಬೌದ್ಧಿಕ ವಿಕಾಸವು ಚಿಂತನಕ್ಕೆ, ವೈಚಾರಿಕತೆಗೆ ದಾರಿ ಮಾಡಿಕೊಟ್ಟಿತು. "ಮಾನವ ಸ್ವಭಾವತಃ ವಿಚಾರವಾದಿ. ಚಿಂತನಶೀಲತೆ ಅವನ ಸಹಜ ಧರ್ಮ. ಆ ಕಾರಣದಿಂದಲೇ ಅವನು ತನ್ನ ಅನುಭವ ಮತ್ತು ಅನಿಸಿಕೆಗಳನ್ನು ವಿಚಾರದ ರಕ್ಷೆಯಲ್ಲಿ ನಿಯಂತ್ರಿಸಲು ಬಯಸುತ್ತಾನೆ. ಹಾಗೆ ಮಾಡಿದಾಗ, ಆ ಸಿದ್ಧಾಂತಕ್ಕೆ ಒಂದು ಹೊಸ ಆಯಾಮ ದೊರೆತು ಅದು ಹೆಚ್ಚು ನೈಜ ಹಾಗೂ ಕ್ರಿಯಾಶೀಲ ಎನ್ನುವಂತಾಗುತ್ತದೆ."[೨]

ಪ್ರಪಂಚದ ಬೇರೆ ಬೇರೆ ದೇಶಗಳು ಇನ್ನೂ ಅನಾಗರಿಕ ಅವಸ್ಥೆಯಲ್ಲಿದ್ದಾಗ, ಭಾರತದಲ್ಲಿ ನಾಗರಿಕತೆ-ಸಂಸ್ಕೃತಿಗಳು ವಿಕಾಸವಾಗಿ ಜಗತ್ತಿನಾದ್ಯಂತ ಜ್ಞಾನದ ಪರಿಮಳ ಹೊರಸೂಸುತ್ತಿದ್ದವು. ಸಾವಿರಾರು ವರುಷಗಳ ಹಿಂದೆ ವೇದೋಪನಿಷತ್ತುಗಳಲ್ಲಿಯ ಜ್ಞಾನವು ಋಷಿ-ಮುನಿಗಳಿಂದ ಪ್ರಕಟವಾಗಿತ್ತು. 'ಭಾ' ಎಂದರೆ ಬೆಳಕು 'ರತ' ಎಂದರೆ ತಲ್ಲೀನ ಎಂದರ್ಥ. ಭಾರತ ಎಂದರೆ ಜ್ಞಾನದ ಬೆಳಗಿನಲ್ಲಿ ತಲ್ಲಿನವಾದ, ಒಂದಾದ ಜನಾಂಗದವರ ದೇಶ ಎಂದು ಕರೆಯಲ್ಪಡುತ್ತಿತ್ತು.

ಇಂತಹ ವೇದಕಾಲದಲ್ಲಿಯೇ 'ದೀಪದ ಕೆಳಗೆ ಕತ್ತಲೆ' ಎಂಬಂತೆ ಜ್ಞಾನಕಾಂಡದ ಜೊತೆ ಜೊತೆಯಾಗಿಯೇ ಕರ್ಮಕಾಂಡವು ಬೆಳೆದು, ಪುರೋಹಿತಶಾಹಿಯು

---

೧. ಚೈತನ್ಯರೂಪಿ ಕುವೆಂಪುः ವಿಚಾರವಾದ-ಜ.ಹೊ.ನಾರಾಯಣಸ್ವಾಮಿ ಪು-೯೬

೨. ಬಸವ ಮತ್ತು ವಿಚಾರವಾದ: ಧಾರ್ಮಿಕ ರಂಗದಲ್ಲಿ ಬಸವನ ವಿಚಾರವಾದ-ಡಾ॥ ಎ. ಎಲ್. ಶಿವರುದ್ರಪ್ಪ ಪು-೧

ಕರ್ಮಠ ಸಂಪ್ರದಾಯಗಳಿಗೆ ಜನ್ಮಕೊಟ್ಟಿತ್ತು. ಯಜ್ಞ–ಯಾಗ, ಹೋಮ–ಹವನ, ಪ್ರಾಣಿಬಲಿ, ನರಬಲಿ ಮುಂತಾದವುಗಳು ವ್ಯಾಪಕವಾಗಿ ನಡೆದಿದ್ದವು. ಧರ್ಮ–ದೇವರ ಹೆಸರಿನಲ್ಲಿ ನೂರೆಂಟು ವ್ರತ–ನಿಯಮಗಳು ಪ್ರಾಯಶ್ಚಿತ್ತ–ದಂಡನೆಗಳು ಹೇರಲ್ಪಟ್ಟಿದ್ದವು. ವ್ಯಕ್ತಿ ಸ್ವಾತಂತ್ರ್ಯವು ಸಂಪೂರ್ಣ ನಶಿಸಿ ಹೋಗಿತ್ತು. ಮಾನವನಲ್ಲಿದ್ದ ಬುದ್ಧಿಯು ಮಂಕಾಗಿ ಹೋಗಿತ್ತು. "ಮತಿ ಮಾನವನ ಸರ್ವೋತ್ಕೃಷ್ಟ ಆಯುಧ, ಮತಿಯೇ ಕತ್ತಲಲ್ಲಿ ದಾರಿತೋರುವ ಕೈದೀವಿಗೆ. ಮೌಢ್ಯದಿಂದಲೂ, ಮತಾಚಾರಗಳಿಂದಲೂ, ಸಮಾಜ ಭೀತಿಯಿಂದಲೂ, ರಾಜಭಯದಿಂದಲೂ, ಸ್ವರ್ಗ ನರಕ ದೇವಾನುದೇವತೆಗಳ ಮೋಹ–ಮಾಯೆಗಳಿಂದಲೂ ಅದು ಸತ್ವರಹಿತವಾಗಿದೆ. ಕಾಂತಿಹೀನವಾಗಿದೆ. ಚಕ್ರವರ್ತಿಯಂತೆ ಸಿಂಹಾಸನದಲ್ಲಿ ಮಂಡಿಸಬೇಕಾದುದು ತೊತ್ತಾಗಿ ಕಾಲೊತ್ತಬೇಕಾಗಿದೆ. ಎಂದರೆ ಮತಿಗೆ ಅಂಕುಶಗಳು ಅತಿಯಾಗಿ ಹೋಗಿ ಅದರ ಜೀವವೇ ನಿಸ್ತೇಜವಾಗಿದೆ... ದೊಡ್ಡ ನಮಗೊಂದು ದೊಡ್ಡ ಬಂಧನವಾಗಿದೆ...[೩]

ಇಂತಹ ಮೌಢ್ಯದ ಮಧ್ಯದಲ್ಲಿಯೇ, ಕರ್ಮಠ ಸಂಪ್ರದಾಯಗಳನ್ನು ತಮ್ಮ ವೈಚಾರಿಕತೆಯಿಂದ ಪ್ರಶ್ನಿಸಿದವರೇ ಚಾರ್ವಾಕ, ಬೌದ್ಧ, ಜೈನ್, ಲಿಂಗಾಯತ ಚಿಂತಕರು. ಇಂಥವರನ್ನು ವೈದಿಕ ಕರ್ಮಠರು ನಾಸ್ತಿಕರು, ಅವೈದಿಕರೆಂದು ಸಾರಾಸಗಟಾಗಿ ಇವರಿಗೆ ಪಟ್ಟಗಟ್ಟಿ, ಇವರ ಚಿಂತನೆಗಳನ್ನು ರಾಜಪ್ರಭುತ್ವದ ಸಹಾಯದಿಂದ ಹತ್ತಿಕ್ಕಲು ಪ್ರಯತ್ನಿಸಿದರು,ಆದರೂ ಅದು ಸಂಪೂರ್ಣ ಯಶಸ್ವಿಯಾಗಲಿಲ್ಲ.

'ಕನ್ನಡ ಸಹಿತ್ಯದಲ್ಲಿ ವೈಚಾರಿಕತೆಗೆ ತನ್ನದೇಯಾದ ಒಂದು ಪರಂಪರೆಯಿದೆ. ಆ ಪರಂಪರೆ ವಚನಕಾರರಿಂದ ಪ್ರಾರಂಭವಾಗುತ್ತದೆ. ವಚನಸಾಹಿತ್ಯ ಸಂದರ್ಭವನ್ನು ಸಂಕ್ರಮಣಕಾಲವೆಂದು ಗುರುತಿಸಬಹುದಾಗಿದೆ. ಹೆಣ್ಣು–ಹೊನ್ನು–ಮಣ್ಣುಗಳಿಗಾಗೇ ಬಡದಾಡಿ ಸತ್ತ ರಾಜ–ಮಹಾರಾಜರ ಬದುಕೇ ನಮ್ಮ ಸಾಹಿತ್ಯದಲ್ಲಿ, ಚರಿತ್ರೆಯಲ್ಲಿ ವಿಜೃಂಭಿಸುತ್ತಿರುವಾಗ, ವಿಚಾರ ಸಂಘರ್ಷ ನಡೆಸಿ ಜನಪರ ಹೋರಾಟವನ್ನು ಹುಟ್ಟು ಹಾಕಿದ ವಚನಕಾರರ ಮಹತ್ವ–ಪ್ರಾಮುಖ್ಯತೆ ಗೊತ್ತಾಗದೇ ಹೋಗಿದೆ"[೪]

೧೨ ನೆಯ ಶತಮಾನದಲ್ಲಿ ಬಸವಾದಿ ಶರಣರು ವೈದಿಕ ಸಂಪ್ರದಾಯ, ಮೌಢ್ಯ, ದುರಾಚಾರಗಳ ವಿರುದ್ಧ ದನಿ ಎತ್ತಿದರು. ಈ ದನಿಯೇ ಮುಂದೆ ಧ್ವನಿಯಾಗಿ, ವೈಚಾರಿಕ ಕಹಳೆಯನ್ನು ಊದಿತು, ಆಚಾರದ ಕ್ರಾಂತಿಯನ್ನೇ ಮಾಡಿತು. ಈ ಕ್ರಾಂತಿಯ ನೇತಾರ ಬಸವಣ್ಣನವರು ಮತ್ತು ಅವರ ಸಮಕಾಲೀನ ಶರಣ ಸಮೂಹವೆನ್ನಬಹುದು. 'ಮನುಷ್ಯನಿಗೆ ಭಾವುಕತೆಯಂತೆಯೇ ವಿಚಾರಶಕ್ತಿಯೂ ಮುಖ್ಯ. ಮನುಷ್ಯ ಮಾತ್ರ ವಿಚಾರ ಮಾಡಬಲ್ಲ, ಪ್ರಾಣಿಗಳು ಅಲ್ಲ. ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ ಎನ್ನುತ್ತಾರೆ ಸಕಲೇಶ ಮಾದರಸ. ಮನುಷ್ಯನಿಗೆ ನಿಜವಾದ ಸಹಾಯಕ ಅವನ ವೈಚಾರಿಕ ಶಕ್ತಿಯೇ. ಬಸವಣ್ಣನವರು ಅಂತಹ ವೈಚಾರಿಕ

---

೩. ವಚನಗಳಲ್ಲಿ ವೈಚಾರಿಕತೆ–ಡಾ॥ ದೇ. ಜವರೇಗೌಡ ಪು–೨

೪. ವಚನ ಚಳವಳಿ–ಡಾ॥ ಬಸವರಾಜ ಸಬರದ. ಪು–೨೨

ಶಕ್ತಿಯ ಪ್ರತೀಕ. ಇಡೀ ಸಮಾಜವು ಜಾತಿಭೇದದ ಪರವಾಗಿ ನಿಂತಿರುವಾಗ ಅದನ್ನು ಒಪ್ಪಿಕೊಂಡು ಮುಂದುವರೆಯುವಲ್ಲಿ ಕ್ಷೇಮವಿತ್ತು. ಆದರೆ ತಮ್ಮ ವೈಯಕ್ತಿಕ ಕ್ಷೇಮವನ್ನು ಬದಿಗೊತ್ತಿ ವಿಚಾರ ಮಾಡಿ, ಅಂತಹ ವ್ಯವಸ್ಥೆಯ ವಿರುದ್ಧ ಬಸವಣ್ಣ ನಿಂತರು.[೫]

ಬಸವಣ್ಣನವರ ವೈಚಾರಿಕ ಕ್ರಾಂತಿಯನ್ನು ಗಮನಿಸಿದ, ಚಿಂತನಗೈದ ಬ್ರಿಟೀಶ ವಿಚಾರವಾದಿ ಸರ್ ಆರ್ಥರ್ ಮೈಲ್ಸನು ತನ್ನ 'ದಿ ಲ್ಯಾಂಡ್ ಆಫ್ ಲಿಂಗಮ್' ಎಂಬ ಪುಸ್ತಕದಲ್ಲಿ ಹೇಳುತ್ತಾನೆ–

Whatever the legend may say about Basava, the fact is pretty clear that He is the first Indian free thinker. ಅಂದರೆ ಪುರಾಣದ ದಂತಕಥೆಗಳು ಏನೇ ಹೇಳಲಿ, ಅವರೊಬ್ಬ ಭಾರತೀಯ ಮೊಟ್ಟ ಮೊದಲನೆಯ ಸ್ವತಂತ್ರ್ಯ ವಿಚಾರವಾದಿ.[೬]

ಸಹಸ್ರ ಜನ ಸಂಪ್ರದಾಯವಾದಿಗಳು ಸಿಗಬಹುದು, ಒಬ್ಬ ವಿಚಾರವಾದಿ ಸಿಗುವುದು ದುರ್ಲಭ. ಕೋಟಿ ಕೋಟಿ ಜನರು ಕರ್ಮಠ ಸಂಪ್ರದಾಯಗಳ ಪ್ರವಾಹದಲ್ಲಿ ಪತಿತರಾಗಿ ಸತ್ತ ಮೀನುಗಳಂತೆ ಕೊಚ್ಚಿಕೊಂಡು ಹೋಗುತ್ತಿರುವಾಗ, ಆ ಪ್ರವಾಹದ ವಿರುದ್ಧ ಜೀವಂತ ಮೀನಿನಂತೆ ಈಜುವ ಸಾಹಸವನ್ನು ಕೇವಲ ವಿಚಾರವಾದಿ ಮಾತ್ರ ಮಾಡಬಲ್ಲ. "ವೈಚಾರಿಕತೆ–ಎರಡು ನೆಲೆಗಳಲ್ಲಿ ಅಸ್ತಿತ್ವ ಹೊಂದಿರುತ್ತದೆ. ಒಂದು ಬೌದ್ಧಿಕ, ಮತ್ತೊಂದು ಕ್ರಿಯೆ, ಆಧುನಿಕ ವೈಚಾರಿಕತೆಗೆ ಜಾತ್ಯತೀತತೆ, ಪ್ರಜಾಪ್ರಭುತ್ವ, ಹೊಂದಾಣಿಕೆ, ಪರ್ಯಾಯ ಚಿಂತನೆ,ಬದ್ಧತೆಗಳೇ ಬುನಾದಿ. ಪ್ರತಿಭಟನೆ, ಕ್ರಾಂತಿ, ಹೋರಾಟ, ಸಂಘಟನೆಗಳೇ ಅಂಗ–ಅಂಶಗಳು... ಹೀಗಿದ್ದೂ ವಚನ ಸಾಹಿತ್ಯ ಒಂದು ಜಾತಿಗೆ, ಧರ್ಮಕ್ಕೆ ಸಂಬಂಧ ಪಟ್ಟದ್ದೆಂಬ ಗ್ರಹಿಕೆ ಬೆಳೆದಿದೆ. ಅಲ್ಲಮನ ಕಟು ಟೀಕೆ, ಬಸವನ ಅನುನಯದ ಮಾತು, ಅಕ್ಕನ ಪ್ರತಿಭಟನೆ, ಸಿದ್ಧರಾಮನ ಕ್ರಿಯೆಗಳನ್ನು ಗಮನಿಸಿದಾಗ 'ವಚನಗಳು' ವಿಶಾಲ ತಳಹದಿಯು ಗ್ರಹಿಕೆ ದಕ್ಕುತ್ತದೆ. ಜಾತಿ, ಭಾಷೆ ವ್ಯವಸ್ಥೆ, ಪ್ರಭುತ್ವಗಳನ್ನು ವಿರೋಧಿಸಿ, ಗಂಡು–ಹೆಣ್ಣಿನ ವ್ಯಕ್ತಿ ಸ್ವಾತಂತ್ರ್ಯಕ್ಕೆ ಭಾಷ್ಯ ಬರೆದು ಈ ಚಿಂತನಾ ಕ್ರಮ ಭಾಷಿಕ ಸಂರಚನೆಗಳಾಗಿಯೂ ಬೆರಗುಂಟು ಮಾಡುತ್ತದೆ."[೭]

ವೈದಿಕ ಧರ್ಮ–ಸಮಾಜ–ಸಂಪ್ರದಾಯಗಳ ಗರ್ಭದಿಂದಲೇ ಜನಿಸಿ, ಹೊರಬಂದ ಬಸವಣ್ಣನವರು, ಆ ಕರ್ಮಠ ಸಂಪ್ರದಾಯಗಳ ವಿರುದ್ಧ ಸಿಡಿದೆದ್ದು, ವರ್ಣ–ಆಶ್ರಮ–ಜಾತಿ–ಲಿಂಗ–ವರ್ಗ ಭೇದಗಳನ್ನು ಸಾರಾಸಗಟಾಗಿ ತಿರಸ್ಕರಿಸಿ, ವೈಚಾರಿಕ ನೆಲಗಟ್ಟಿನ ಮೇಲೆ ಆಚಾರದ ಕ್ರಾಂತಿಯನ್ನು ಮಾಡಿದರು. ಕರ್ಮಠ

---

೫. ಬಸವಣ್ಣನವರು–ಡಾ॥ ಎಂ.ಚಿದಾನಂದಮೂರ್ತಿ ಪು–೧೫೫

೬. ಜಗಜ್ಯೋತಿ ಬಸವಣ್ಣ–ದಿಕ್ಕುಗೆಟ್ಟ ಆಧುನಿಕ ಯುಗಕ್ಕೆ ಮಾರ್ಗದರ್ಶಿ–ಪ್ರೊ.ಎಸ್.ವಿ. ಪಾಟೀಲ ಪು–೭

೭. ವಿಚಾರಸಾಹಿತ್ಯ : ವಚನ–ವೈಚಾರಿಕತೆ–ಎಸ್. ಪ್ರಸಾದಸ್ವಾಮಿ ಪು–೧೯೯

ಸಂಪ್ರದಾಯದ ಪುರೋಹಿತಶಾಹಿಯನ್ನು ನಿಷ್ಠುರವಾಗಿ ಎದುರುಹಾಕಿಕೊಂಡು ಪ್ರಶ್ನಿಸಿದರು. 'ಏನಯ್ಯಾ ವಿಪ್ರರು, ನುಡಿದಂತೆ ನಡೆಯರು, ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ?'ಈ ರೀತಿಯ ಪ್ರಶ್ನೆಯೇ ಅವರನ್ನು ಒಬ್ಬ ಸ್ವತಂತ್ರ ವಿಚಾರವಾದಿಯನ್ನಾಗಿ ರೂಪಿಸಿದ್ದು ಎನ್ನಬಹುದು.

ಇದೇ ವಚನಕಾರರ ಬಳಿವಿಡಿದು ಬಂದ ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರು ತಮ್ಮ ವಚನಗಳಲ್ಲಿ ಕರ್ಮಠ ಧರ್ಮ, ಸಮಾಜ, ಸಂಪ್ರದಾಯಗಳ ವಿರುದ್ಧ ಸಿಡಿದೆದ್ದರು. ವೈಚಾರಿಕ ಕ್ರಾಂತಿಯನ್ನು ಹುಟ್ಟುಹಾಕಿದರು.

ಚಲಿಸಲಿಕ್ಕಾಗದ ಬಳ್ಳಿಯು
ಹತ್ತಿರದ ಕಳ್ಳಿಯನ್ನೇ ಸುತ್ತಿಕೊಳ್ಳುವದು
ವಿವೇಚನೆ ಇಲ್ಲದ ಮನುಷ್ಯ
ಹಳೆಯ ಸಂಪ್ರದಾಯಗಳಿಗೇ ಅಂಟಿಕೊಳ್ಳುವನು.
ತಳದಿಂದ ಏಳಲಾರದವನೇ
ದೊಡ್ಡ ಧಾರ್ಮಿಕನೆಂದ ಕುಮಾರ ಕಕ್ಕಯ್ಯ[೮]

ವಿಚಾರಹೀನ, ದುರ್ಬಲ ಮನುಷ್ಯ ಹಳೆಯ ಸಂಪ್ರದಾಯಗಳಿಗೆ ಅಂಟಿಕೊಂಡು ಬದುಕುತ್ತಾನೆ. ಆತನು ಸಂಪ್ರದಾಯಗಳ ಹುದುಲಿನಿಂದ ಸಿಕ್ಕು ಹಾಕಿಕೊಂಡಿದ್ದಾನೆ. ಮೆಲೇಳಲು ಸಾಧ್ಯವಾಗುತ್ತಿಲ್ಲ. ಅಂತೆಯೇ ದೊಡ್ಡ ಧಾರ್ಮಿಕನಂತೆ ವರ್ತಿಸುತ್ತಾನೆ. ಇಂತಹ ಸಂಪ್ರದಾಯವಾದಿಗಳಿಗೆ ಕರೆನೀಡುತ್ತಾರೆ–

ತನ್ನ ಕಣ್ಣು ತಾನೇ ತೆರೆಯಬೇಕು.
ತನ್ನ ಅನುಭಾವ ತಾನೇ ಪಡೆಯಬೇಕು.
ತನ್ನ ದಾರಿ ತಾನೇ ನಡೆಯಬೇಕು.
ತನ್ನ ಗುರಿ ತಾನೇ ಮುಟ್ಟಬೇಕು
ಪರರಿಂದ ತನ್ನ ಉದ್ಧಾರ ಎಂದಿಗೂ
ಆಗದೆಂದ ಕುಮಾರ ಕಕ್ಕಯ್ಯ[೯]

ಮನುಷ್ಯ ತನ್ನ ಅರಿವಿನ ಕಣ್ಣು ತಾನೇ ತೆರೆಯಬೇಕು, ತನ್ನ ಅನುಭವಗಳಿಂದಲೇ ಅನುಭಾವ ಪಡೆಯಬೇಕು. ಸಂಪ್ರದಾಯದ ಮಕಾಠ ಆಚರಣೆಗಳನ್ನು ತಾನೇ ತೊರೆಯಬೇಕು.

ಧರ್ಮ ಕೇವಲ ಉಪದೇಶಕ್ಕೆ ಸೀಮಿತವಾಗಬಾರದು, ಅದು ಆಚರಣೆಯಲ್ಲಿ ಬರಬೇಕು. ಶಾಸ್ತ್ರ ಗ್ರಂಥಗಳು ಕೇವಲ ಪಾರಾಯಣ ಮಾಡುವದಕ್ಕೆ ಸೀಮಿತವಾಗಬಾರದು, ಅವು ವಿಚಾರ ಮಾಡಲಿಕ್ಕೆ ಹಚ್ಚಬೇಕು. ಇಲ್ಲದಿದ್ದರೆ ಮನುಷ್ಯ

---

೮. ಕುಮಾರ ಕಕ್ಕಯ್ಯನ ವಚನಗಳು–ಪು–೧೨೯ ವ–೪೯೩
೯. –ಅದೇ– ಪು–೯೩ ವ–೩೬೭

ಭ್ರಾಂತಿಗೆ ಒಳಗಾಗುತ್ತಾನೆ. ಸ್ವಂತ ವೈಚಾರಿಕತೆ ಬೆಳೆಸಿಕೊಳ್ಳದವರು ಅನಧಿಕೃತ ಗುಲಾಮರೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ –

ಕಾರ್ಮಿಕರು ವಿಚಾರಕ್ಕಿಳಿದರೆ, ಕುಬೇರರೆಲ್ಲಿ?
ರೈತರು ವಿಚಾರಕ್ಕಿಳಿದರೆ, ಜಮೀನುದಾರರೆಲ್ಲಿ?
ಧಾರ್ಮಿಕರು ವಿಚಾರಕ್ಕಿಳಿದರೆ, ಪುರೋಹಿತರೆಲ್ಲಿ?
ಶೂದ್ರರು ವಿಚಾರಕ್ಕಿಳಿದರೆ ಸವರ್ಣೀಯರೆಲ್ಲಿ?
ಸ್ವತಂತ್ರ ವಿಚಾರ ಮಾಡದ ಮನುಜರೆಲ್ಲರೂ
ಅನಧಿಕೃತ ಗುಲಾಮರೆಂದ ಕುಮಾರ ಕಕ್ಕಯ್ಯ.[೧೦]

ಮನುಷ್ಯ ವಿಚಾರವಾದಿಯಾಗಬೇಕು. ವಿಚಾರವಾದವೇ ಆತನ ಎಲ್ಲ ಸಮಸ್ಯೆಗಳಿಗೆ, ತೊಂದರೆ–ಕಷ್ಟಗಳಿಗೆ ಪರಿಹಾರವಾಗಬಲ್ಲದು. ಇಲ್ಲದಿದ್ದರೆ ಮೂಢ ನಂಬಿಕೆಗಳ ದಾಸನಾಗಿ, ಅಂಧಾನುಕರಣೆ ಮಾಡುತ್ತಾ ಸಂಪ್ರದಾಯಗಳ ಕೊಳಕು, ದುರ್ವಾಸನೆಯ ಹೊಂಡದಲ್ಲಿಯೇ ಸಾಯಬೇಕಾಗುತ್ತದೆ.

**ii) ಅಂಧಾನುಕರಣೆ–ಮೂಢನಂಬಿಕೆಗಳು**

ಎಲ್ಲಿ ಅಜ್ಞಾನವಿದೆಯೋ ಅಲ್ಲಿ ಅಂಧಾನುಕರಣೆ ಇರುತ್ತದೆ. ಎಲ್ಲಿ ಮೌಢ್ಯವಿದೆಯೋ ಅಲ್ಲಿ ಮೂಢನಂಬಿಕೆಯಿದೆ. "ಮೂಢ ನಂಬಿಕೆಗಳು ಜನರ ಅಸಹಾಯಕತೆಯಿಂದ ಹಾಗೂ ಅಜ್ಞಾನದಿಂದ ಹುಟ್ಟಿಕೊಂಡಿರುತ್ತವೆ. ಅಂಧಶ್ರದ್ಧೆಯೆಂದರೆ– ಈ ಜಗತ್ತು ಮತ್ತು ಮಾನವನ ಜೀವಿತಗಳಿಗೆ ಸಂಬಂಧಿಸಿದ, ಕಾರಣವನ್ನು ನೀಡಲು ಸಾಧ್ಯವಾಗದ, ಒಂದು ವ್ಯಕ್ತಿಗೋ ಅಥವಾ ಜನಾಂಗಕ್ಕೋ ವಿಶಿಷ್ಟವಾದ ನಂಬಿಕೆಗಳು, ಅಭ್ಯಾಸಗಳು, ಕಲ್ಪನೆಗಳು. ಇವುಗಳನ್ನು ಅಂಧ ಶ್ರದ್ಧೆಗಳೆಂದು ಎನ್‌ಸೈಕ್ಲೋಪೀಡಿಯಾ ಆಫ್ ರಿಲಿಜನ್ ಹಾಗೂ ಎಥಿಕ್ಸದಲ್ಲಿ ಹೇಳಲಾಗಿದೆ.[೧೧]

ಅಂಧಾನುಕರಣೆಯ ಬಗ್ಗೆ ಬಸವಣ್ಣನವರು ತಮ್ಮ ವಚನದಲ್ಲಿ ಹೇಳುವಂತೆ – "ಭಕ್ತರ ಕಂಡರೆ ಬೋಳಪ್ಪಿರಯ್ಯಾ, ಶ್ರವಣರ ಕಂಡರೆ ಬತ್ತಲೆಯಪ್ಪಿರಯ್ಯಾ, ಹಾರುವರ ಕಂಡರೆ ಹರಿನಾಮವೆನ್ನುವಿರಯ್ಯಾ, ಅವರವರ ಕಂಡರೆ ಅವರವರಂತೆ... ಹೇಗೋ ತಮ್ಮ ಕಾರ್ಯವನ್ನು ಮಾಡಿಕೊಂಡು ಹೋಗುವವರು ಯಾವ ಒಂದು ಮಾರ್ಗವನ್ನೂ ಸೃಷ್ಟಿಸುವದಿಲ್ಲ. ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಯಾವುದೇ ರಂಗದಲ್ಲಾಗಲೀ ಸ್ವತಂತ್ರ ವಿಚಾರಶೀಲರಿಂದ ಹೊಸದೊಂದು ಮಾರ್ಗ ರೂಪಿತವಾಗುವುದನ್ನು ಇತಿಹಾಸದುದ್ದಕ್ಕೂ ಕಾಣಬಹುದು. ಅವರು ನಡೆದದ್ದೇ ಮಾರ್ಗವಾಗುತ್ತದೆ... ಮುಂದಿನ ಅವರ ಅನುಯಾಯಿಗಳು ಅವರ ನಿರೀಕ್ಷಿತ ಮಟ್ಟಕ್ಕೆ ಏರಲಾರದೆ ಹೋದಾಗ ಆಚರಣೆಯ ಮಾರ್ಗ ಸಂಪ್ರದಾಯವಾಗಿ ಜಡವಾಗುತ್ತದೆ."[೧೨]

---

೧೦. –ಅದೇ– ಪು–೭೪ ವ–೨೮೮

೧೧. ಶರಣರ ಆಂದೋಲನ – ಡಾ॥ ಎಂ. ಬಿ. ಹೂಗಾರ ಪು –೧೦೩

೧೨. ವಚನಸಾಹಿತ್ಯ–ವೈಚಾರಿಕ ಅಧ್ಯಯನ : ಡಾ॥ ಎಚ್. ತಿಪ್ಪೇರುದ್ರಸ್ವಾಮಿ. ಪು–೮೧.

ಇಂತಹ ಮೂಢ ಸಂಪ್ರದಾಯಗಳಲ್ಲಿ ಸಿಲುಕಿದ ಜನರು ಬರ ಬರುತ್ತಾ ಅದರಿಂದ ಹೊರ ಬರಲು ಸಾಧ್ಯವಾಗದೇ ಒದ್ದಾಡುತ್ತಾರೆ. ಅವರನ್ನು ಇನ್ನಷ್ಟು ಆಳಕ್ಕೆ ಪೂಜಾರಿ–ಪುರೋಹಿತರು ಭಯ ಹುಟ್ಟಿಸಿ, ನೂಕುತ್ತಾರೆ.

ಬೌ ಬೌ ಬಂತು, ಕಡ್ಡಿ ಬಂತು ಎಂದು ಮಕ್ಕಳಿಗೂ
ದ್ಯಾಮವ್ವ, ದುರ್ಗವ್ವ ಬಂದಳು ಎಂದು ಧಡ್ಡರಿಗೂ
ದೆವ್ವ ಭೂತ ಪಿಶಾಚಿ ಎಂದು ಅಲ್ಪರಿಗೂ
ಸ್ವರ್ಗ ನರಕ ಪುನರ್ಜನ್ಮ ಎಂದು ಎಲ್ಲರಿಗೂ
ಕತೆ ಕಟ್ಟಿ ಹೇಳುವದು ಭೀತಿಗಾಗಿಯೇ
ಹೊರತು, ಸೋಸಿ ನೋಡಿದಡೆ ಹುರುಳಿಲ್ಲೆಂದ
ಕುಮಾರ ಕಕ್ಕಯ್ಯ.[೧೩]

ಮನುಷ್ಯನು ಮೂಜಾರಿ–ಪುರೋಹಿತರು ಕಟ್ಟುವ ಕಾಲ್ಪನಿಕ ಭಯದ ಕತೆಗಳಿಗೆ ಒಳಗಾಗಿ, ಭೀತಿಯಿಂದ ತನ್ನ ಸೋಸಿ ನೋಡುವ ವಿವೇಚನಾ ಶಕ್ತಿಯನ್ನು ಕಳೆದುಕೊಂಡು ಕುರಿಯು ಕುರುಬನನ್ನು ಬೆನ್ನತ್ತುವಂತೆ, ಪುರೋಹಿತ ಶಾಹಿಯ ಬೆನ್ನುಹತ್ತಿ ಅಂಧಾನುಕರಣೆ ಆಚರಿಸತೊಡಗುತ್ತಾನೆ. ಅವರು ಹೇಳುವ ಕರ್ಮಠ –ಕರ್ಮಾಚರಣೆಗೆ ತೊಡಗಿ, ಮತ್ತೆ ಮತ್ತೆ ಬದುಕನ್ನು ಹಾಳು ಮಾಡಿಕೊಳ್ಳುತ್ತಲೇ ಸಾಗುತ್ತಾನೆ.

'ಭಕ್ತಿ, ಶ್ರದ್ಧೆ, ವಿಶ್ವಾಸಗಳು ಜೀವನದಲ್ಲಿ ಬೇಕು ನಿಜ, ಆದರೆ ಅವು ಮೌಢ್ಯದಿಂದ ಕೂಡಿರಬಾರದು. ಅಜ್ಞಾನದಿಂದ ಭಕ್ತಿಯ ಆಚರಣೆ ಮಾಡಿದರೆ ಮಹಾ ದುರಂತಕ್ಕೆ ಒಳಗಾಗುತ್ತಾನೆ. ಇದನ್ನು ಅನೇಕ ಉದಾಹರಣೆಗಳೊಂದಿಗೆ ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ತಿಳಿಸುತ್ತಾರೆ –

ಗಂಡು ದೇವರಿಗೆ ತಲೆ ಬೋಳಿಸುವ ಹರಕೆ,
ಹೆಣ್ಣು ದೇವರಿಗೆ ಸೂಳೆ ಬಿಡುವ ಹರಕೆ,
ಮಾರಿ ದೇವತೆಗೆ ಬಲಿ ಕೊಡುವ ಹರಕೆ,
ಭ್ರಷ್ಟದೇವರಿಗೆ ಹುಂಡಿ ಅರ್ಪಿಸುವ ಹರಕೆ
ಆಶೆ ಆಮಿಷ ವಿಷಯಂಗಳಿಗಾಗಿ ಮಾಡುವ
ಭಕ್ತಿ ಹರಕೆ ದೊಡ್ಡ ದುರಂತವೆಂದ
ಕುಮಾರ ಕಕ್ಕಯ್ಯ.[೧೪]

ಇಂದು ಮುಗ್ಧ ಜನರ ಮೌಢ್ಯವನ್ನು ಬಂಡವಾಳವಾಗಿಸಿಕೊಂಡು, ಅವರ ಬದುಕಿನೊಂದಿಗೆ ಚೆಲ್ಲಾಟವಾಡುತ್ತಾ, ತಂತ್ರ–ಕುತಂತ್ರಗಳನ್ನು ಹೆಣೆದು, ಕೋಟಿ ಕೋಟಿಗಟ್ಟಲೆ ಹಣ ಸಂಪಾದಿಸುವ ಧಾರ್ಮಿಕ ಶೋಷಣೆ ಎಲ್ಲೆಡೆಯಲ್ಲಿಯೂ

೧೩. ಕುಮಾರ ಕಕ್ಕಯ್ಯನ ವಚನಗಳು – ಪು– ೨೨೫ ವ–೮೬೫.
೧೪. ಕುಮಾರ ಕಕ್ಕಯ್ಯನ ವಚನಗಳು – ಪು– ೨೨೦ ವ–೮೪೯.

ಕಂಡು ಬರುತ್ತದೆ. ತಿರುಪತಿ ತಿಮ್ಮಪ್ಪನಿಗೆ ಕೂದಲು ಅರ್ಪಿಸುವ ಹರಕೆಯಿಂದ ಪ್ರತಿವರ್ಷ ೧೦ ಕೋಟಿಗೂ ಮಿಗಿಲು 'ಕೂದಲ ವ್ಯಾಪಾರ'ದ ಗಳಿಕೆಯಾಗುತ್ತದೆಯಂತೆ! ಬೆಳಗಾವಿ ಜಿಲ್ಲೆಯ ಸವದತ್ತಿಯ ಎಲ್ಲಮ್ಮ ಹಾಗೂ ಕೊಕಟನೂರ ಎಲ್ಲಮ್ಮ ದೇವತೆಗಳಿಗೆ ದೇವದಾಸಿ ಬಿಡುವ ಪದ್ಧತಿ ನಡೆದುಕೊಂಡು ಬರುತ್ತಿದೆ. ಮಾರಮ್ಮ-ದುರ್ಗಮ್ಮ ದೇವತೆಗಳಿಗೆ ಕೋಣಗಳ, ಹೋತಗಳ ಬಲಿ ನಡೆದಿದೆ. ಇನ್ನು ಕೆಲವು ಪ್ರಸಿದ್ಧ ದೇವಸ್ಥಾನಗಳ ಹುಂಡಿಗೆ ಲಕ್ಷಾಂತರ, ಕೋಟ್ಯಾಂತರ ಚಿನ್ನ-ಬೆಳ್ಳಿ-ರೂಪಾಯಿಗಳ ಸಾಗರವೇ ಹರಿದು ಬರುತ್ತಿದೆ. ಇದೆಲ್ಲ ಮೌಢ್ಯದಿಂದಲೇ ನಡೆದಿದೆ. ಅದೇ ರೀತಿಯಾಗಿ ಆಶೆ-ಆಮಿಷಗಳಿಗಾಗಿ ಹರಕೆ ಬೇಡಿಕೊಳ್ಳುವ, ಹರಕೆ ಹೊರವ ಭಕ್ತರ ಭಕ್ತಿಯೂ ಕೂಡ ಮಹಾದುರಂತವಾಗಿದೆಯೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ.

ನಿಜವಾದ ದೇವರು ಎಂದರೇನು? ಆತ ಎಲ್ಲಿರುವನು ಎಂಬ ಬಗ್ಗೆ ತುಂಬಾ ವೈಚಾರಿಕವಾಗಿ ಕುಮಾರ ಕಕ್ಕಯ್ಯ ಹೇಳುತ್ತಾರೆ –

ಗುಡಿ ಗುಂಡಾರಗಳಲ್ಲಿ ದೇವನಿಲ್ಲ.
ತೀರ್ಥ ಕ್ಷೇತ್ರಗಳಲ್ಲಿಯೂ ದೇವನಿಲ್ಲ.
ವೇದ ಆಗಮಗಳಲ್ಲಿ ದೇವನಿಲ್ಲ.
ಯೋಗ ಸಮಾಧಿಗಳಲ್ಲಿಯೂ ದೇವನಿಲ್ಲ.
ಸತ್ಯ, ಸದಾಚಾರ, ಆತ್ಮವಿಶ್ವಾಸಗಳಲಿ
ದೇವನುಂಟೆಂದ ಕುಮಾರ ಕಕ್ಕಯ[೧೫]

ಗುಡಿ-ಗುಂಡಾರಗಳಲ್ಲಿ ದೇವರ ಕಾಲ್ಪನಿಕ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿ ಅವುಗಳ ಹೆಸರಿನಲ್ಲಿ ಪೂಜಾರಿ-ಪುರೋಹಿತರು, ಹತ್ತು-ಹಲವು ಪೂಜೆ, ಅಭಿಷೇಕಗಳನ್ನು ಮಾಡಿಸುತ್ತಾ ಭಕ್ತರ ಸುಲಿಗೆ ಮಾಡುತ್ತಾರೆ. ತೀರ್ಥ-ಕ್ಷೇತ್ರಗಳಲ್ಲಿಯೂ ಇದೇ ವ್ಯಾಪಾರ ದೊಡ್ಡ ಪ್ರಮಾಣದಲ್ಲಿ ನಡೆದಿರುತ್ತದೆ. ದೇವರನ್ನು 'ಆತ ಅತ್ಯತಿಷ್ಠ ದಶಾಂಗುಲ' ಎಂದು ವೇದ-ಆಗಮಗಳು ಹೇಳುತ್ತಿವೆಯಾದ್ದರಿಂದ ಅವುಗಳಲ್ಲಿಯೂ ದೇವನಿಲ್ಲ. ಯೋಗ-ಸಮಾಧಿ ಎಂಬುದು ಮನಸ್ಸನ್ನು ಸ್ಥಿರಗೊಳಿಸುವುದು, ಯೋಗಃ ಚಿತ್ತ ವೃತ್ತಿ ನಿರೋಧಃ ಎಂದು ಹೇಳುವುದರಿಂದ ಅದು ಮನಸ್ಸಿಗೆ ಸಂಬಂಧಿಸಿದೆ, ಅಲ್ಲಿಯೂ ದೇವನಿಲ್ಲ ಎಂದು ಇಂತಹ ಮೂಢ ವಿಚಾರಗಳನ್ನು ಖಂಡಿಸುತ್ತಾರೆ.

ಸ್ಮಶಾನದ ಗೋರಿಗಳಲಿ
ದೆವ್ವಗಳೆಂದು ಹೆದರಿ ಓಡುವ
ಮಠದ ಗೋರಿಗಳಲಿ
ದೇವರೆಂದು ಭಕ್ತಿಯಿಂದ ಪೂಜಿಸುವ
ಮಂದಮತಿ ಜನ ಜಂಗುಳಿಗೆ

೧೫. ಕುಮಾರ ಕಕ್ಕಯ್ಯನ ವಚನಗಳು – ಪು– ೧೧೮ ವ– ೪೫೩.

ದೆವ್ವ ದೇವರುಗಳ ಕಲ್ಪನೆಯೊಂದು
ದೊಡ್ಡ ಆಭಾಸವೆಂದ ಕುಮಾರ ಕಕ್ಕಯ್ಯ.[೧೬]

ಜನಸಾಮಾನ್ಯರು ನಿಧನರಾದಾಗ ಅವರನ್ನು ಸಮಾಧಿ ಮಾಡುವದು ರೂದ್ರಭೂಮಿಯಲ್ಲಿ, ಸ್ವಾಮಿ–ಸನ್ಯಾಸಿಗಳು ನಿಧನರಾದಾಗ ಅವರನ್ನು ಸಮಾಧಿ ಮಾಡುವದು ಮಠದ ಆವರಣದಲ್ಲಿ. ಜನನ –ಮರಣಗಳು ಎಲ್ಲರಿಗೂ ಒಂದೇ ಬಗೆಯವು. ರೋಗ–ರುಜಿನಗಳೂ ಒಂದೇ ಬಗೆಯವು. ವ್ಯಕ್ತಿಯು ತೀರಿಕೊಂಡಾಗ (ಕೈಲಾಸವಾಸಿ, ಶಿವಾಧೀನ, ಲೀಗೈಕ್ಯ) ಆತನನ್ನು ಅಂತ್ಯ ಸಂಸ್ಕಾರ ಮಾಡುವುದೂ ಒಂದೇ ರೀತಿಯಾಗಿದ್ದರೂ ಕೂಡ, ಊರ ಹೊರಗಿನ ರುದ್ರಭೂಮಿಗೆ ಸ್ಮಶಾನವೆಂದು, ಮಠದೊಳಗಣ ಸ್ಥಳಗಳಿಗೆ ಗದ್ದುಗೆ, ಕರ್ತೃಗದ್ದುಗೆ ಎಂದು ಕರೆಯಲಾಗುತ್ತಿದೆ. ಯಾವುದನ್ನು ಏನೇ ಕರೆದರೂ ದೇಹದೊಳಗಣ ಚೈತನ್ಯ ಹೊರಹೋಗಿ ಮಹಾಬಯಲಿನಲಿ ಬಯಲಾದಾಗ ಉಳಿಯುವುದು 'ಜಡದೇಹ' ಮಾತ್ರ. ಪಂಚಮಹಾಭೂತಗಳ ಪಂಚೀಕರಣದ ಹಂಚಿಕೆಯಿಂದಾದ ಈ ದೇಹ ಮರಳಿ ಅದೇ ಪಂಚ ಮಹಾಭೂತಗಳಲ್ಲಿ ಲೀನವಾಗಿ ಹೋಗುವುದು. ಸ್ಮಶಾನದ ಗೋರಿ(ಗದ್ದುಗೆ) ಗಳಿಗೆ ಭಕ್ತಿಯಿಂದ ಅಭಿಷೇಕ ಮಾಡಿಸುವುದು ಬುದ್ಧಿಗೇಡಿ ಜನರ ದೊಡ್ಡ ಆಭಾಸ (ಭ್ರಮೆ) ವೆಂದು ಕುಮಾರ ಕಕ್ಕಯ್ಯನವರು ಕಟುವಾಗಿ ಟೀಕಿಸುತ್ತಾರೆ.

ರಾಜಮಹಾರಾಜರಿಗೆ
ಸಿಂಹಾಸನ ಕಿರೀಟಬೇಕು.
ಮಠ ಮಾನ್ಯರಿಗೆ ಪೀಠ ಪಲ್ಲಕ್ಕಿ ಬೇಕು.
ನಮ್ಮ ದೇವತೆಗಳಿಗೆ ಬರಿ ಅಪ್ಸರೆಯರು
ಸಾಕೆಂದ ಕುಮಾರ ಕಕ್ಕಯ್ಯ.[೧೭]

ಜನಸಾಮಾನ್ಯರು ಜಾಗೃತರಾಗುವುದು ಯಾವಾಗ? ಅವರಲ್ಲಿ ಮೌಢ್ಯ ದೂರಾಗಿ ಅಂಥ ಸಂಪ್ರದಾಯಗಳಿಂದ ದೂರಾಗುವುದು ಎಂದು ? ಈ ಬಗ್ಗೆ ತುಂಬಾ ಕಟುವಾಗಿ ಹಾಸ್ಯಮಯವಾಗಿ ವಿಡಂಬಿಸುತ್ತಾರೆ– ಹಿಂದಿನ ಕಾಲದಲ್ಲಿ ರಾಜ ಮಹಾರಾಜರುಗಳಿಗೆ ಸಿಂಹಾಸನ–ಕಿರೀಟಗಳು ಬೇಕಾಗಿದ್ದವು. ಇಂದು ನಮ್ಮ ಮಠಮಾನ್ಯಗಳ ಸ್ವಾಮಿ, ಗುರು, ಜಗದ್ಗುರುಗಳಿಗೆ ಪೀಠ–ಪಲ್ಲಕ್ಕಿಗಳ ಮೋಹ! ನಮ್ಮ ಪುರಾಣಗಳ ದೇವತೆಗಳಿಗಾದರೋ ದೇವ ಲೋಕದಲ್ಲಿ ರಂಭೆ, ಊರ್ವಶಿ, ಮೇನಕೆ ಮುಂತಾದ ಅಪ್ಸರೆಯರ ವ್ಯಾಮೋಹ!!.

ಇದನ್ನರಿತಾದರೂ ನಮ್ಮ ಜನ ಮೂಢನಂಬಿಕೆ–ಅಂಧಾನುಕರಣೆಗಳನ್ನು ತ್ಯಜಿಸಬೇಕು ಎಂಬ ಕಳಕಳಿ ಕುಮಾರ ಕಕ್ಕಯ್ಯನವರ ವಚನಗಳಲ್ಲಿದೆ.

---

೧೬. –ಅದೇ– ಪು–೧೧೪ ವ–೪೩೯

೧೭. ಕುಮಾರ ಕಕ್ಕಯ್ಯನ ವಚನಗಳು : ಪು–೧೧೬ ವ–೪೪೬

**(iii) ಜ್ಞಾನ–ವಿಜ್ಞಾನ–ಸುಜ್ಞಾನ :** ಇಂದಿನದು ವಿಜ್ಞಾನಯುಗ. ಸಹಸ್ರಾರು ವರುಷಗಳ ಹಿಂದೆಯೇ ಜ್ಞಾನಯುಗ ಪ್ರಾರಂಭವಾಗಿ, ಅದು ಇಂದು ವಿಜ್ಞಾನಯುಗಕ್ಕೆ ಜನ್ಮ ಕೊಟ್ಟಿದೆ. ವೈಚಾರಿಕತೆಗೂ–ವೈಜ್ಞಾನಿಕತೆಗೂ ನಿಕಟ ಸಂಬಂಧವಿದೆ. ವೈಚಾರಿಕತೆ ಇದ್ದಲ್ಲಿ ವೈಜಾನಿಕತೆ ಇದೆ. ವೈಜ್ಞಾನಿಕತೆ ಇದ್ದಲ್ಲಿ ವೈಚಾರಿಕತೆ ಇದೆ. ಇವೆರಡೂ ಮೂಢನಂಬಿಕೆಗಳನ್ನು ವಿರೋಧಿಸುತ್ತವೆ. ಕಾರಣ ಮೂಢನಂಬಿಕೆಗಳನ್ನು ಖಂಡಿಸುವ, ವೈಚಾರಿಕತೆಯನ್ನು ಪ್ರತಿಪಾದಿಸುವ ಶರಣರ ವಚನಗಳಲ್ಲಿ ನಾವು ವೈಚಾರಿಕತೆಯನ್ನು ಕಾಣುತ್ತೇವೆ.... ಕಾಲ (Time) ಅಖಂಡವಾದದ್ದು. ಅದಕ್ಕೆ ಯಾವ ಸೀಮೆಗಳೂ ಇಲ್ಲ. ಮಾನವ ತನ್ನ ಅನುಕೂಲಕ್ಕಾಗಿ ದಿನ, ವಾರ, ತಿಂಗಳು, ತಿಥಿ ಮತ್ತು ನಕ್ಷತ್ರಗಳನ್ನು ಗುರುತಿಸಿಕೊಂಡಿದ್ದಾನೆ. ವಿಶ್ವಕ್ಕೆ ಒಡೆಯನಾದ ಕೂಡಲಸಂಗಮದೇವನ ದೃಷ್ಟಿಯಲ್ಲಿ ದಿನ ವಾರ ತಿಥಿ ನಕ್ಷತ್ರಗಳಲ್ಲಿ ಒಳ್ಳೆಯವು, ಕೆಟ್ಟವು ಎಂಬ ಭೇದಭಾವವಿಲ್ಲ."[೧೮]

ಮಾನವ ತನ್ನಲ್ಲಿ ಅರಿವು ಸ್ವಯಂ ತದ್ಗತವಾಗಿದ್ದರೂ ಸಹ, ಅದನ್ನು ಅರಿಯದೇ ಏನೆಲ್ಲ ತಪ್ಪು ಗ್ರಹಿಕೆಗಳನ್ನು ಅಳವಡಿಸಿಕೊಂಡಿದ್ದಾನೆ. ಸ್ವತಂತ್ರವಾಗಿ ವಿಚಾರಮಾಡದೇ ಪುರೋಹಿತಶಾಹಿಯ ನಯವಾದ ತಂತ್ರಗಾರಿಕೆಗೆ ಮರುಳಾಗಿದ್ದಾನೆ. ಜ್ಞಾನ ಸೂರ್ಯಪ್ರಕಾಶದಷ್ಟು ನಿಚ್ಚಳವಾಗಿದ್ದರೂ ಸಹ ಆತನು ಇನ್ನೂ ಅಂಧಕಾರದತ್ತಲೇ ಹಿಂದೆ ಸರಿಯುತ್ತಿದ್ದಾನೆ. "ಬೆಣ್ಣೆಯೆಂದು ಸುಣ್ಣವನ್ನು, ಚಿನ್ನವೆಂದು ಬೆಂಕಿಯನ್ನು ಭ್ರಮಿಸುತ್ತಾನೆ. ಧಾರ್ಮಿಕ ವಿಚಾರ ಬಂದಾಗ ಆತ ವಿವೇಚನಾ ಶಕ್ತಿಯನ್ನು ಕಳೆದುಕೊಂಡು ಹೇಳಿದ್ದಕ್ಕೆಲ್ಲಾ ತಲೆಬಾಗುವ ಪ್ರವೃತ್ತಿ ಬೆಳೆಸಿಕೊಳ್ಳುತ್ತಾನೆ. ಕೊನೆಗೆ ತಾನೇ ತನ್ನ ಅವನತಿಗೆ ಕಾರಣನಾಗುತ್ತಾನೆ."[೧೯]

ಆಧುನಿಕ ಜಗತ್ತಿನಲ್ಲಿ ವಿಜ್ಞಾನವು ೧೭ ನೆಯ ಶತಮಾನದಿಂದ ಇತ್ತೀಚೆಗೆ ಫ್ರಾನ್ಸಿಸ್ ಬೇಕನ್, ಬ್ರೂನೋ ಮುಂತಾದ ವಿಜ್ಞಾನಿಗಳಿಂದ ಬೆಳೆಯತೊಡಗಿತು. "ಸೃಷ್ಟಿಯಲ್ಲಿ ನಡೆಯುತ್ತಿರುವ ಅನೇಕ ಘಟನೆಗಳನ್ನು ಅವಲೋಕಿಸುವುದು, ಅವುಗಳನ್ನು ಪ್ರಯೋಗದ ಒರೆಗಲ್ಲಿಗೆ ಹಚ್ಚುವುದು, ಪ್ರಯೋಗಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಒಂದು ಸಾಮಾನ್ಯ ನಿಯಮಕ್ಕೊಳಪಡಿಸುವುದು, ಈ ವಿಧಾನವೇ ವೈಜ್ಞಾನಿಕ ವಿಧಾನ (Scientific Method). ಈ ಕ್ರಮವನ್ನು ಅನುಸರಿಸಿ ಪಡೆದ ಜ್ಞಾನವೇ ವಿಜ್ಞಾನ."[೨೦]

ವಿಜ್ಞಾನದಲ್ಲಿ ಜ್ಞಾನವು ಅಡಕವಾಗಿದೆ. ಯಾಕೆಂದರೆ ವಿಶೇಷವಾದ ಜ್ಞಾನವೇ ವಿಜ್ಞಾನವೆನಿಸಿದೆ. ಇಂತಹ ವಿಜ್ಞಾನವನ್ನು ಬೋಧಿಸುವ ವಿಜ್ಞಾನ ಅಧ್ಯಾಪಕರು, ವಿಜ್ಞಾನದ ಸಂಶೋಧಕರೆನಿಸಿರುವ ವಿಜ್ಞಾನಿಗಳೇ ವೈಚಾರಿಕ ಪ್ರಜ್ಞೆಯಿಲ್ಲದೇ ಮೂಢ ನಂಬಿಕೆಗಳ ದಾಸರಾಗಿರುವುದನ್ನು ಕಾಣುತ್ತೇವೆ. ಪ್ರತಿಯೊಬ್ಬರು 'ಮುಹೂರ್ತ'ಗಳ

---

೧೮. ಶರಣರ ತತ್ವ ಚಿಂತನೆ –ಸಂ.ಟಿ.ಆರ್. ಮಹಾದೇವಯ್ಯ ಪು–೨೧೨–೨೧೩.

೧೯. ಸಮಕಾಲೀನತೆ–ವಚನಸಾಹಿತ್ಯ –ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಪು–೭೯.

೨೦. ಶರಣದೀಪಿಕೆ : ವಚನಗಳಲ್ಲಿ ವಿಜ್ಞಾನ – ಪ್ರೊ. ಬಿ.ವಿರೂಪಾಕ್ಷಪ್ಪ ಪು ೯೭.

ಗುಲಾಮರಂತೆ ವರ್ತಿಸುತ್ತಿದ್ದಾರೆ. ಯಾವುದೇ ಒಂದು ಉಪಗ್ರಹ ಉಡಾವಣೆ ಮಾಡಬೇಕಾದರೂ ಸಹ ಈ ವಿಜ್ಞಾನಿಗಳು ಜ್ಯೋತಿಷಿ–ಪಂಚಾಗದವರ ಹತ್ತಿರ ಮುಹೂರ್ತ ನಿಶ್ಚಯಪಡಿಸಿ ಉಡಾವಣೆ ಮಾಡುತ್ತಾರೆ. ಆ ಉಪಗ್ರಹ ಇವರ ನಿರ್ಮಾಣ ಮತ್ತು ನಿರ್ವಹಣೆಯ ದೋಷದಿಂದ ಆಕಾಶದಲ್ಲಿ ಉರಿದು ನಾಶವಾದರೆ ಅದನ್ನು ಜ್ಯೋತಿಷಿಯ ಪಂಚಾಂಗದ ಮೇಲೆ ಸಹಜವಾಗಿ ಹಾಕಿಬಿಡುತ್ತಾರೆ. ಅಂತೆಯೇ ರಾಷ್ಟ್ರಕವಿ ಕುವೆಂಪು ಹೇಳುತ್ತಾರೆ – 'ವೈಜ್ಞಾನಿಕ ದೃಷ್ಟಿ ಮತ್ತು ವಿಚಾರವಾದಗಳನ್ನು ಬೋಧಿಸಿ, ಪ್ರಚೋದಿಸಿ ಸಾಧಿಸುವ ಕಾರ್ಯ ಯಾವ ಸಂಸ್ಥೆಗಳಿಗೆ ಮೀಸಲಾಗಬೇಕೋ ಆ ಸಂಸ್ಥೆಗಳಲ್ಲಿಂಯೆ ಅದು ಅವಮಾನಿತವಾಗುತ್ತಿರುವುದು ಅತ್ಯಂತ ನಿರಾಶಜನಕವಾಗಿದೆ'.[೨೧]

ವಚನಕಾರರು ತಮ್ಮ ವಚನಗಳ ಮೂಲಕ ಎಲ್ಲಾ ಪ್ರಕಾರದ ಅಜ್ಞಾನ, ಮೌಢಾಚರಣೆ, ಶುಷ್ಕಾಚರಣೆಗಳನ್ನು ಕಟುವಾಗಿ ಖಂಡಿಸಿದ್ದಾರೆ. ಸಾವಿರಾರು ವರುಷಗಳಿಂದ ಸಾಗಿ ಬಂದಿದ್ದ ಮತ–ಧರ್ಮ, ದೇವರು–ದಿಂಡರು, ಜ್ಯೋತಿಷ್ಯ–ಪಂಚಾಂಗಗಳ ಪೊಳ್ಳುತನವನ್ನು ಪ್ರಶ್ನಿಸಿ, ಅದರ ಕಪಟತನವನ್ನು ಜನರಿಗೆ ತೆರೆದು ತೋರಿಸಿದರು. 'ದೇಹ ನಶ್ವರ ದೇವ ಶಾಶ್ವತ' ಎಂಬ ತಳಬುಡವಿಲ್ಲದ ವಾದವನ್ನು ತಿರಸ್ಕರಿಸಿದರು. "ಧರ್ಮದ ಹೆಸರಿನಲ್ಲಿ ಜಾತಿಯ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆಯ ಮೂಲಬೇರನ್ನು ಹುಡುಕುತ್ತಾ ಹುಡುಕುತ್ತಾ ಹೋದಾಗ ಅವರಿಗೆ ಅದು ಪುರೋಹಿತಶಾಹಿ, ಪ್ರಭುತ್ವಶಾಹಿ ಮನಸ್ಸುಗಳಲ್ಲಿ, ಅಂಥ ಮನಸ್ಸುಗಳ ಅರ್ಥೈಸಿದ ಹಿಂದೂ ಧರ್ಮದ ವೇದ ಪುರಾಣಗಳಲ್ಲಿ, ಯಜ್ಞಯಾಗಗಳಲ್ಲಿ ಇರುವುದು ಅರಿವಿಗೆ ಬಂದಿತು."[೨೨] ಅಂತೆಯೇ ಅವುಗಳನ್ನು ಖಂಡಿಸಿ ಅರಿವೇ ಗುರು ಎಂದು ತಿಳಿಸಿಕೊಟ್ಟರು.

'ತನ್ನ ತಾನರಿದಡೆ ತಾನೇ–ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವ', 'ನಾ ದೇವನಲ್ಲದೆ ನೀ ದೇವನೆ? ನಾ ದೇವ ಕಾಣಾ ಗುಹೇಶ್ವರಾ' ಎಂಬ ಶರಣರ ವಚನವಾಣಿಯಲ್ಲಿಯ ಜ್ಞಾನ–ವಿಜ್ಞಾನ–ಸುಜ್ಞಾನವನ್ನು ಅಂಗವಿಸಿಕೊಂಡು ವಿಚಾರವಾದಿ ಕುಮಾರ ಕಕ್ಕಯ್ಯ ತಮ್ಮ ವಚನಗಳಲ್ಲಿ ಮಾನವಕುಲಕ್ಕೆ ಸ್ಪಷ್ಟವಾಗಿ ಸಂದೇಶ ನೀಡುತ್ತಾರೆ –

ಭಕ್ತನಿಗೆ ದೇವನೊಲಿಯುವ ಹಾಗಿದ್ದರೆ
ಭಕ್ತನಿಗೆ ದೇವ ಕೊಡುವ ಹಾಗಿದ್ದರೆ
ಆ ದೇವನಿಗೆ ಈ ಸೃಷ್ಟಿಯ ಅವಶ್ಯಕತೆ ಏನಿತ್ತು ?
ದೇವನು ಫಸಲು ಕೊಡುವ ಹಾಗಿದ್ದರೆ,
ದೇವನು ಮಕ್ಕಳ ಕೊಡುವ ಹಾಗಿದ್ದರೆ,

---

೨೧. ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ – ಕುವೆಂಪು, ಮುನ್ನುಡಿ ಪು–೫
೨೨. ಶರಣರ ಬಂಡಾಯ – ಡಾ॥ ಸರಜೂ ಕಾಟ್ಕರ ಪು–೫.

ಭೂಮಿಗೆ ಬೀಜ, ಹೆಣ್ಣಿಗೆ ಗಂಡಿನ ಅವಶ್ಯಕತೆ ಏನಿತ್ತು ?
ದೇವನು ಪಾಪ ಪುಣ್ಯದ ಲೆಕ್ಕ ಇಡುವ ಹಾಗಿದ್ದರೆ,
ಪರದಲ್ಲಿ ಸ್ವರ್ಗ ನರಕ ಕೊಡುವ ಹಾಗಿದ್ದರೆ
ತಲೆಯಲ್ಲಿ ಮತಿ, ಇಹದಲ್ಲಿ ಸುಖ ದುಃಖದ ಅವಶ್ಯಕತೆ ಏನಿತ್ತು?
ದೇವರು ಗುಡಿ ಗುಂಡಾರಗಳಲ್ಲಿ ಇರುವ ಹಾಗಿದ್ದರೆ,
ತೀರ್ಥ ಕ್ಷೇತ್ರ–ಕೈಲಾಸದಲಿ ಇರುವ ಹಾಗಿದ್ದರೆ
ನಿನ್ನ ಶರೀರದಲ್ಲಿ ಆತ್ಮನ ಅವಶ್ಯಕತೆ ಏನಿತ್ತು?
ನಿನ್ನ ಧರ್ಮ ಕರ್ಮ ಪಾಪ ಪುಣ್ಯ ನಿನ್ನಾತ್ಮನಿಗೆ
ಗೊತ್ತು. ಅದು ಕಾರಣ,
ಭಜಿಸುವ ಬೇಡುವ ಭಕ್ತನೂ ನೀನೇ
ನೀಡುವ ಕೊಡುವ ದೇವನೂ ನೀನೆಯೆಂದ
ಕುಮಾರ ಕಕ್ಕಯ್ಯ.[೨೩]

'ಅನಾದಿ ಕಾಲದಿಂದಲೂ ಮನುಷ್ಯನನ್ನು ಕಾಡುತ್ತಾ ಅವನ ಹೃದಯ, ಮನಸ್ಸುಗಳನ್ನು ಆಕ್ರಮಿಸಿ ಅವನ ಮೇಲೆ ತಮ್ಮ ಅಧಿಪತ್ಯವನ್ನು ಸ್ಥಾಪಿಸಿರುವುವೆಂದರೆ ಒಂದು ಭಯ, ಮತ್ತೊಂದು ಸ್ವಾರ್ಥ. ಪ್ರಕೃತಿಯ ಬಗ್ಗೆ ಅರಿವಿರದ ಆದಿ ಮಾನವನ ಈ ಭಯ ಮತ್ತು ಸ್ವಾರ್ಥಗಳು ಸ್ವಲ್ಪವೂ ಕ್ಷಯಿಸದೆ ಇಂದಿಗೂ ಆಧುನೀಕರಣಗೊಂಡು ಅಂತರಂಗದಲ್ಲಿ ಅಡಗಿ ಕುಳಿತಿವೆ. ಇದರಿಂದಾಗಿ ಬದುಕಿನ ರಥ ತನ್ನ ಪಥ ತಪ್ಪಿ ವಿನಾಶದತ್ತ ಅತಿವೇಗವಾಗಿ ಉರುಳುತ್ತಿದೆ. ಇಂದಿನ ಅಗತ್ಯ ನಮ್ಮನ್ನು ವಂಚಿಸುತ್ತಿರುವ ಈ ಮತ ಮೌಢ್ಯದ ಬಗ್ಗೆ ಎಚ್ಚರಗೊಳ್ಳುವುದು."[೨೪]

ಅಂತೆಯೇ, ಕುಮಾರ ಕಕ್ಕಯ್ಯನವರು ಜ್ಞಾನ ಸಂಪತ್ತಿನ ಬಗ್ಗೆ ತಿಳಿಹೇಳುತ್ತಾರೆ–

ಕುರುಬನ ಸಂಪತ್ತು ಹಟ್ಟಿಯಲ್ಲಿ
ಗೌಳಿಗನ ಸಂಪತ್ತು ಕೊಟ್ಟಿಗೆಯಲ್ಲಿ
ಪೂಜಾರಿಯ ಸಂಪತ್ತು ಗುಡಿಯಲ್ಲಿ
ಸಾಹುಕಾರನ ಸಂಪತ್ತು ತಿಜೋರಿಯಲ್ಲಿ
ಒಕ್ಕಲಿಗನ ಸಂಪತ್ತು ಹೊಲದಲ್ಲಿ
ಜ್ಞಾನಿಯ ಸಂಪತ್ತು ತಲೆಯಲ್ಲೆಂದ
ಕುಮಾರ ಕಕ್ಕಯ್ಯ.[೨೫]

ಪ್ರತಿಯೊಬ್ಬರೂ ಜ್ಞಾನಸಂಪತ್ತು ತನ್ನಲ್ಲಿಯೇ ಇದೆ ಎಂಬುದನ್ನು ಅರಿತು, ಅದನ್ನು ವೃದ್ಧಿಸಿಕೊಳ್ಳಬೇಕು. ಜ್ಞಾನದ ಮಹತ್ವವನ್ನು ಅರಿಯಬೇಕು. ಉಳಿದ

---

೨೩. ಕುಮಾರ ಕಕ್ಕಯ್ಯನ ವಚನಗಳು – ಪು–೧೪೯, ವ–೫೭೫.
೨೪. ಬೆಳಕಿನ ದಾರಿ–ಜ.ಹೊ. ನಾರಾಯಣಸ್ವಾಮಿ ಪು – ೪೦–೪೧
೨೫. ಕುಮಾರ ಕಕ್ಕಯ್ಯನ ವಚನಗಳು – ಪು–೯೪, ವ–೩೬೧.

ಸಂಪತ್ತುಗಳಿಗೆ ಕಳ್ಳ–ಕಾಕರ, ದರೋಡೆಖೋರರ ಭಯವಿದ್ದರೆ ಜ್ಞಾನಿಯ ಸಂಪತ್ತಿಗೆ ಭಯವಿಲ್ಲ. ಅದು ಬಳಸಿದಷ್ಟೂ ಹೆಚ್ಚುತ್ತದೆಯೆಂದು ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ಹೇಳುತ್ತಾರೆ –

> ಶರೀರಕ್ಕೆ ರೋಗ ರುಜಿನುಗಳ ಭಯವಾದರೆ
> ಯೌವನಕ್ಕೆ ಮುಪ್ಪು ಸಾವುಗಳ ಭಯವುಂಟು.
> ಧನ ಕನಕಕ್ಕೆ ಕಳ್ಳಕಾಕರ ಭಯವಾದರೆ
> ಅಧಿಕಾರಕ್ಕೆ ವಿರೋಧಿಗಳ ಭಯವುಂಟು.
> ಬಳಸಿದಷ್ಟೂ ಬೆಳೆಯುವ ಜ್ಞಾನಭಂಡಾರಕ್ಕೆ
> ಯಾವುದೇ ಭಯವಿಲ್ಲೆಂದ ಕುಮಾರ ಕಕ್ಕಯ್ಯ.[೨೬]

ಇಂತಹ ಜ್ಞಾನವನ್ನು ಮನುಷ್ಯ ತನ್ನ ವಿಚಾರಶಕ್ತಿಯಿಂದ ಬಳಸಿಕೊಂಡು ಸತ್ಯ–ಅಸತ್ಯಗಳ ಬಗ್ಗೆ ನಿರ್ಧಾರಕ್ಕೆ ಬರಬೇಕು. ಇಂದು ಮೂಲಭೂತವಾಗಿ ವಿಚಾರವಾದಿಗಳಿಗೆ ಕಾಡುವ ಪ್ರಶ್ನೆಯೆಂದರೆ–ದೇವರಿದ್ದಾನೆಯೆ? ಇದ್ದರೆ ಎಲ್ಲಿದ್ದಾನೆ? ಆತ್ಮವಿದೆಯೆ? ಇದ್ದರೆ ಎಲ್ಲಿದೆ? ದೇವರ ಹಾಗೂ ಆತ್ಮನ ಸ್ವರೂಪಗಳೇನು? ಪರಸ್ಪರ ಸಂಬಂಧವೇನು? ಸ್ವರ್ಗ –ನರಕ ಎಲ್ಲಿವೆ? ಇವು ವಾಸ್ತವಿಕವಾಗಿ ಇರುವವೇ? ಸತ್ಯವೇ? ಕಾಲ್ಪನಿಕವೇ? ಇಂದಿಗೂ ಈ ಗೊಂದಲದಲ್ಲಿ ಸಿಲುಕಿ ತತ್ತರಿಸುವ ಜನರಿಗೆ ತಿಳಿವಳಿಕೆ ಕೊಡುವವರಾರು ? ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಸುಜ್ಞಾನಿಗಳಿಗೆ ಅಂದರೆ ಅನುಭಾವಿಗಳಿಗೆ ಮಾತ್ರ ಸಾಧ್ಯ. ಪ್ರತಿಯೊಂದನ್ನು ಜ್ಞಾನ –ವಿಜ್ಞಾನದ ಒರೆಗಲ್ಲಿಗೆ ಹಚ್ಚಿ ಸುಜ್ಞಾನದಿಂದ ಅರಿತು, ಅದನ್ನು ಲೋಕಹಿತಕ್ಕೆ ಬಳಸಬೇಕು.

ಕುಮಾರ ಕಕ್ಕಯ್ಯನವರು ತಮ್ಮ ವಚನಗಳಲ್ಲಿ ಈ ಕುರಿತು ಚಿಂತನೆ ಮಾಡುತ್ತಾ, ತಿಳಿ ಹೇಳುತ್ತಾರೆ–

> ಕಲ್ಲು ಪೂಜೆ, ಮೂರ್ತಿಪೂಜೆ
> ಪಾಮರರಿಗೇ ಹೊರತು ಪಂಡಿತರಿಗಲ್ಲ.
> ಭೂತ ಪ್ರೇತ ಪವಾಡ
> ಭಾವುಕರಿಗೇ ಹೊರತು ಬಲ್ಲವರಿಗಲ್ಲ.
> ಸ್ವರ್ಗ ನರಕ ದೇವಲೋಕ
> ಅವಿಚಾರಿಗಳಿಗೇ ಹೊರತು, ವಿಚಾರಿಗಳಿಗಲ್ಲೆಂದ
> ಕುಮಾರ ಕಕ್ಕಯ್ಯ.[೨೭]

ಇಂದು, ಕಾಣುವ ಜಗತ್ತನ್ನು, ಬದುಕುವ ಮರ್ತ್ಯಲೋಕವನ್ನು ಮಿಥ್ಯವೆಂದು ಸಾರುತ್ತಾ, ಕಣ್ಣಿಗೆ ಕಾಣದ ದೇವರನ್ನು ಸತ್ಯವೆಂದು ಹೇಳುತ್ತಾ, ಸಾವಿರಾರು

---

೨೬. ಕುಮಾರ ಕಕ್ಕಯ್ಯನ ವಚನಗಳು – ಪು–೯೪ ವ–೩೫೯.
೨೭. ಕುಮಾರ ಕಕ್ಕಯ್ಯನ ವಚನಗಳು – ಪು–೧೨೨ ವ–೪೭೦

ವರುಷಗಳಿಂದ ಜನರನ್ನು ಅಜ್ಞಾನ ಕತ್ತಲೆಯಲ್ಲಿಯೇ ಮುನ್ನಡೆಸಿಕೊಂಡು ಸ್ವಾರ್ಥಿಗಳು ಹೊರಟಿದ್ದಾರೆ. ಇದನ್ನು ವಿರೋಧಿಸಿದ ಶರಣರು "ಸತ್ತ ಮೇಲೆ ಸ್ವರ್ಗ ಕಾಣುವದಕ್ಕಿಂತ ಸತ್ಯ ಸದಾಚಾರದಿಂದ ಬಾಳಿ ಈ ಭೂಮಿಯನ್ನು ಸ್ವರ್ಗವನ್ನಾಗಿ ಪರಿವರ್ತಿಸಿದರು. ಮೃಣ್ಮಯ ಜಗತ್ತನ್ನು ತಮ್ಮ ವೈಚಾರಿಕ ಪ್ರಜ್ಞೆಯಿಂದ ಚಿನ್ಮಯವನ್ನಾಗಿ ಕಂಡರು. ಚಿನ್ಮಯ ಚೇತನದ ದಿವ್ಯ ಸ್ಮರಣೆ ಅನುದಿನ ನಮ್ಮದಾಗಬೇಕು."[೨೮] ಇದನ್ನು ಮರೆತು ಕೇವಲ ಬ್ರಹ್ಮೇವ ಸತ್ಯ-ಜಗನ್ಮಿಥ್ಯಾ ಎಂಬುವವರಿಂದ ದೇಶವೇ ಹಾಳಾಗುತ್ತದೆಂದು ಕುಮಾರ ಕಕ್ಕಯ್ಯ ಎಚ್ಚರಿಸುತ್ತಾರೆ-

ಸೋಮಾರಿಗಳಿಂದ ಸಂಸಾರ ಹಾಳಾದರೆ
ಸನ್ಯಾಸಿಗಳಿಂದ ಸಮಾಜ ಹಾಳು.
ಕೇಡಿಗಳಿಂದ ಕೇರಿ ಹಾಳಾದರೆ
ಪುಢಾರಿಗಳಿಂದ ಊರು ಹಾಳು
ಜಗನ್ಮಿಥ್ಯ ಬ್ರಹ್ಮ ಸತ್ಯ ಎನ್ನುವವರಿಂದ
ದೇಶವೇ ಹಾಳೆಂದ ಕುಮಾರ ಕಕ್ಕಯ್ಯ.[೨೯]

ದೇವನೊಬ್ಬ ಇದ್ದನೆಯೆ? ಬಲ್ಲವರಾರು? ಆತ್ಮ ಅಮರವೇ-ಆಧಾರವೇನು? ಸೃಷ್ಟಿಯು ದೇವ ನಿರ್ಮಿತವೇ-ಸಿದ್ಧಾಂತವಾವುದು? ಕೇವಲ ತರ್ಕ, ಊಹೆಗಳಲ್ಲಿಯೇ ಪರದಾಡುತ್ತಾ ಕಾಣುವ ಇಹಲೋಕವನ್ನು ತಿಳಿಯದ ಮಾನವನಿಗೆ ಪರಲೋಕದ ಗೊಡವೆ ಯಾಕೆ ಬೇಕು? ಎಂದು ಕುಮಾರ ಕಕ್ಕಯ್ಯ ಕೇಳುತ್ತಾರೆ. ಇದು ಮರ್ತ್ಯಲೋಕ, ಇದಕ್ಕಿಂತಲೂ ಭಿನ್ನವಾದ ಸತ್ಯಲೋಕ ಬೇರೊಂದಿದೆ, ಎಂಬುದಾಗಿ ಇದರಿಂದ ವಿಮುಖನಾದವನು, ಬದುಕಿನ ಸಾರ್ಥಕತೆಯನ್ನು ಮರೆತು ಅಜ್ಞಾನಿಯೆನಿಸುತ್ತಾನೆ.'[೩೦] ಅಂತೆಯೇ ಸುಜ್ಞಾನಿ ಬಸವಣ್ಣನವರು ಎಂಟುನೂರು ವರುಷಗಳ ಹಿಂದೆಯೇ ಎಚ್ಚರಿಸಿದ್ದಾರೆ -

ಶ್ವಾನ ಜ್ಞಾನ, ಗಜಜ್ಞಾನ, ಕುಕ್ಕುಟಜ್ಞಾನವೆಂಬ
ಜ್ಞಾನತ್ರಯಂಗಳೇನಾದವು ?
ಕೂಡಲಸಂಮದೇವಾ
ನಿಮ್ಮನರಿಯದ ಜ್ಞಾನವೆಲ್ಲಾ ಅಜ್ಞಾನ.[೩೧]

ಸ್ವಾಮಿ ವಿವೇಕಾನಂದರು ನಿಷ್ಠುರವಾಗಿ, ಕಟು ನುಡಿಗಳಿಂದ ಹೇಳಿದ ಮಾತುಗಳನ್ನು ಇಂದು ಚಿಂತನ ಮಾಡಬೇಕಿದೆ. "ಎಲ್ಲಾ ಮೂಢನಂಬಿಕೆಗಳನ್ನು ಧ್ವಂಸ ಮಾಡಿ. ಈ ಎಲ್ಲವೂ ನೆಲೆ ಇಲ್ಲದವು. ಎದ್ದು ನಿಲ್ಲಿ, ಭಯಬೇಡ. ದೇವರನ್ನು

---

೨೮. ಶರಣರ ಸಂಸ್ಕೃತಿ -ಮುಖಾಮುಖಿ -ಡಾ॥ ಚನ್ನಕ್ಕ ಪಾವಟೆ ಪು-೪೪
೨೯. ಕುಮಾರ ಕಕ್ಕಯ್ಯನ ವಚನಗಳು - ಪು-೧೨೫, ವ-೪೮೦
೩೦. ಬಸವ ಮತ್ತು ವಿಚಾರವಾದ : ಡಾ॥ ಎ.ಎಲ್. ಶಿವರುದ್ರಪ್ಪ ಪು-೫.
೩೧. ಬಸವಣ್ಣನವರ ವಚನ ಸಂಪುಟ - ಸಂ.ಡಾ॥ ಎಂ.ಎಂ. ಕಲಬುರ್ಗಿ ವ-೭೯

ಕುರಿತ, ಮೂಢನಂಬಿಕೆಗಳನ್ನು ಕುರಿತ ಮಾತು ಬೇಡ! ಸತ್ಯಕ್ಕೆ ಜಯ, ಇದು ನಿಜ. ನಾನು ಅನಂತ, ಎಲ್ಲಾ ಮೂಢನಂಬಿಕೆಗಳೂ ಹುರುಳಿಲ್ಲದ ಕಲ್ಪನೆಗಳು."೩೨

ಇಂದು, ಆಧುನಿಕಯುಗದ ಮಾನವನಿಗೆ ಬೇಕಾಗಿರುವುದು ಜ್ಞಾನ ಸಮ್ಮತವಾಗಿರುವ, ವಿಜ್ಞಾನ ಸಮ್ಮತವಾಗಿರುವ ಸುಜ್ಞಾನ ಹಾಗೂ ಸದಾಚಾರವೆಂದು ಕುಮಾರ ಕಕ್ಕಯ್ಯ ತಮ್ಮ ವಚನಗಳಲ್ಲಿ ಪ್ರತಿಪಾದಿಸಿರುವುದನ್ನು ಕಾಣುತ್ತೇವೆ.

**iv) ಮಾನವೀಯತೆ–ವಿಶ್ವಬಂಧುತ್ವ–ವಿಶ್ವಕಲ್ಯಾಣ :**

Man has learnt to fly like a bird in air,
He has learnt to swim like a fish in water,
But he has not learnt to live like a man on Earth.

ಎಂಬ ಪ್ರಸಿದ್ಧ ಆಂಗ್ಲ ಉಕ್ತಿಯಂತೆ ಮಾನವನು ಇಂದು ವಿಜ್ಞಾನದ ಸಹಾಯದಿಂದ ವಾಯುವಿನಲ್ಲಿ ಹಕ್ಕಿಯಂತೆ ಹಾರಾಡಬಲ್ಲ, ನೀರಿನಲ್ಲಿ ಮೀನಿನಂತೆ ಈಜಬಲ್ಲ, ಆದರೆ ಭೂಮಿಯ ಮೇಲೆ ಮನುಷ್ಯನಾಗಿ ಬಾಳುವದನ್ನು ಮಾತ್ರ ಕಲಿಯಲಿಲ್ಲ.

ದೇವರು ಈ ಭೂಮಿಯ ಮೇಲೆ ಮಾನವನನ್ನು ಸೃಷ್ಟಿಸಿದ, ಮಾನವನು ಜಾತಿಗಳನ್ನು ಸೃಷ್ಟಿಸಿಕೊಂಡ. ತಾನೇ ಸೃಷ್ಟಿಸಿದ ಜಾತಿಗಳಲ್ಲಿ ಮೇಲು–ಕೀಳುಗಳನ್ನು ಕಲ್ಪಿಸಿಕೊಂಡು, ಪರಸ್ಪರರಲ್ಲಿ ರಾಗ–ದ್ವೇಷ, ಅಸೂಯೆ –ಮತ್ಸರಗಳನ್ನು ಹುಟ್ಟುಹಾಕಿಕೊಂಡು ಪಶುಗಳಿಗಿಂತಲೂ ಕೀಳಾಗಿ ವರ್ತಿಸತೊಡಗಿದ. ತಾನು ಬದುಕಿರುವ ಈ ಭೂಮಿಯೇ 'ಸ್ವರ್ಗ'ವೆಂಬುದನ್ನು ಮರೆತು, ಇದನ್ನು 'ನರಕ'ವಾಗಿಸಿಕೊಂಡು ಕಣ್ಣಿಗೆ ಕಾಣದ ಸ್ವರ್ಗದ ಸುಂದರ ಕನಸನ್ನು ಕಾಣತೊಡಗಿದ.

ದೇವಲೋಕ–ಮರ್ತ್ಯಲೋಕ, ಸ್ವರ್ಗ–ನರಕಗಳನ್ನು ಈ ಜಗತ್ತಿನಲ್ಲಿ ಹುಟ್ಟು ಹಾಕಿದವರೇ ಪೂಜಾರಿ–ಪುರೋಹಿತರು, ಪಾದ್ರಿ–ಮೌಲ್ವಿಗಳು. ಪ್ರತಿಯೊಂದು ಧರ್ಮದ ದಾರ್ಶನಿಕರು, ಬುದ್ಧ, ಏಸುಕ್ರಿಸ್ತ, ಮಹಮ್ಮದ ಪೈಗಂಬರ, ಬಸವಣ್ಣ ಮುಂತಾದವರೆಲ್ಲ ಈ ಭೂಮಿಯ ಮೇಲೆ ದಯೆ, ಪ್ರೇಮ, ಕರುಣೆ, ಅಹಿಂಸೆ, ಮಾನವೀಯತೆಗಳಿಂದ ಬದುಕಬೇಕು ಎಂದು ಹೇಳಿದರೆ, ಈ ಪುರೋಹಿತಶಾಹಿ ವರ್ಗ (Priest class) ಅವರ ವಿರುದ್ಧವಾಗಿ ಹಿಂಸೆ, ಕ್ರೌರ್ಯ, ಅಸಹನೆ, ದ್ವೇಷ, ಅಮಾನವೀಯತೆಯ ದುರ್ಭಾವನೆಗಳನ್ನು ಬಿತ್ತಿದರು ತಮ್ಮ ಸ್ವಾರ್ಥಕ್ಕಾಗಿ, ಭೋಗಕ್ಕಾಗಿ ನೂರೆಂಟು ಕಥೆಗಳನ್ನು ಹುಟ್ಟು ಹಾಕಿ ಪುರಾಣಗಳನ್ನು (legends) ರಚಿಸಿ, ಜನರಲ್ಲಿ ಭಯ–ಭೀತಿಗಳನ್ನು ಬಿತ್ತಿದರು. ಇದರ ಪರಿಣಾಮವಾಗಿ ಭೂಮಿಯ ಮೇಲೆ ಮಾನವ ಜೀವನ ನರಕ ಸದೃಶವಾಯಿತು.

ಇಂತಹ ಧಾರ್ಮಿಕ ಮೌಢ್ಯವನ್ನು ಕಂಡು ೧೨ ನೆಯ ಶತಮಾನದಲ್ಲಿ ಬಸವಣ್ಣನವರು ಪ್ರಶ್ನಿಸಿದರು–

ದೇವಲೋಕ–ಮರ್ತ್ಯಲೋಕವೆಂಬುದು
ಬೇರೆ ಮತ್ತುಂಟೇ?

---

೩೨. ವಿವೇಕಾನಂದ ಕೃತಿ ಶ್ರೇಣಿ : ಸಂಪುಟ–೧ ಪು–೫೦೨.

ಈ ಲೋಕದೊಳಗೆ ಮತ್ತೆ ಅನಂತಲೋಕ!
ಶಿವಲೋಕ ಶಿವಾಚಾರವಯ್ಯಾ.
ಶಿವಭಕ್ತನಿದ್ದ ಠಾವೇ ದೇವಲೋಕ,
ಭಕ್ತನ ಅಂಗಳವೇ ವಾರಣಾಸಿ,
ಕಾಯವೇ ಕೈಲಾಸ, ಇದು ಸತ್ಯ,
ಕೂಡಲಸಂಗಮದೇವಾ.[೩೩]

ಈ ವಿಶ್ವದಲ್ಲಿ ಸ್ವರ್ಗ–ನರಕ ಎಂಬುವು ಲೋಕಗಳಿಲ್ಲ. ಇರುವ ಭೂಲೋಕದಲ್ಲಿಯೇ, ನಮ್ಮ ಬದುಕಿನ ರೀತಿಯಲ್ಲಿ, ನಮ್ಮ ಆಚಾರ–ವಿಚಾರಗಳಲ್ಲಿ, ನಡೆ–ನುಡಿಗಳಲ್ಲಿ ಸ್ವರ್ಗ–ನರಕಗಳಿವೆಯೆಂದು ತಿಳಿಸಿಹೇಳಿದರು. 'ಅಯ್ಯಾ ಎಂದಡೆ ಸ್ವರ್ಗ, ಎಲ್ಲವೋ ಎಂದಡೆ ನರಕ' ಎಂಬುದನ್ನು ಮನಗಾಣಿಸಿದರು.

ಈ ಮರ್ತ್ಯಲೋಕವು ದೇವರ ಮಹಾಮನೆ, ಕರ್ತಾರನ ಕಮ್ಮಟ. ಇಲ್ಲಿರುವ ಮಾನವರೆಲ್ಲ ದೇವರ ಮಕ್ಕಳು. ಪರಸ್ಪರ ಪ್ರೇಮದಿಂದ ಬದುಕಬೇಕೆಂದು ಹೇಳಿದರು.

ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ.
ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ.
ಕೂಡಲಸಂಗಮದೇವಾ,
ನಿಮ್ಮ ಮನೆಯ ಮಗನೆಂದೆನಿಸಯ್ಯಾ[೩೪]

ಪ್ರತಿಯೊಬ್ಬರೂ ಈ ರೀತಿಯಾಗಿ ಭಾವಿಸಿಕೊಂಡು, ಅದರಂತೆ ಬದುಕಿದರೆ ವಿಶ್ವಬಂಧುತ್ವ ತಾನೇ ತಾನಾಗಿ ಒಡಮೂಡುತ್ತದೆ. 'ಯದ್‌ಭಾವಂ ತದ್‌ಭವತಿ' ಎಂಬ ಉಕ್ತಿಯು ಸಾಕಾರಗೊಳ್ಳುತ್ತದೆ, ಮಾನವಕಲ್ಯಾಣ–ವಿಶ್ವಕಲ್ಯಾಣ ಸಾಧಿತವಾಗುತ್ತದೆ.

'ಇದು ವಿಜ್ಞಾನಯುಗ. ಆದರೆ ಮಾನವೀಯ ಮೌಲ್ಯಗಳಿಲ್ಲದ ಭೌತಿಕ ಶೋಧನೆಗಳಿಂದ ಮಾನವ ಕಲ್ಯಾಣ ಸಾಧ್ಯವಿಲ್ಲ. ಕೇವಲ ಸಾಂಪ್ರದಾಯಿಕ ಅಂಧಶ್ರದ್ಧೆಯೇ ಪ್ರಧಾನವಾಗಿರುವ ಧಾರ್ಮಿಕ ಆಚಾರ ವಿಚಾರಗಳಿಂದಲೂ ಅದು ಸಾಧ್ಯವಿಲ್ಲ. ಧರ್ಮದಲ್ಲಿ ವೈಜ್ಞಾನಿಕತೆ ಬೇಕು; ವೈಚಾರಿಕತೆ ಬೇಕು. ಇಂತಹ ಸಮನ್ವಯದಿಂದ ಮಾತ್ರ ಮಾನವ ಕಲ್ಯಾಣ ಸಾಧ್ಯ. ಅಂತೆಯೇ ಡಾ॥ ಐನ್‌ಸ್ಟೈನ್‌ರವರು ಹೀಗೆ ಹೇಳಿದ್ದಾರೆ–

Science without religion is lame,
Religion without science is blind.

ಅಂದರೆ ಧರ್ಮವಿಲ್ಲದ ವಿಜ್ಞಾನ ಕುಂಟನಂತೆ, ವಿಜ್ಞಾನವಿಲ್ಲದ ಧರ್ಮ ಕುರುಡನಂತೆ! ಕುಂಟ ಕುರುಡರು ತಮ್ಮ ಕಲ್ಯಾಣಕ್ಕಾಗಿ ಪೂರಕವಾಗಲು

---

೩೩. ಬಸವಣ್ಣನವರ ವಚನ ಸಂಪುಟ–ಸಂ. ಡಾ॥ ಎಂ.ಎಂ. ಕಲಬುರ್ಗಿ ವ–೧೩೯.
೩೪ ಬಸವಣ್ಣನವರ ವಚನ ಸಂಪುಟ – ಸಂ.ಡಾ॥ ಎಂ.ಎಂ. ಕಲಬುರ್ಗಿ ವ–೬೨.

ಸಾಧ್ಯವಿರುವಂತೆ ಧರ್ಮ ಮತ್ತು ವಿಜ್ಞಾನ ಒಂದಕ್ಕೊಂದು ಮಾನವ ಕಲ್ಯಾಣಕ್ಕಾಗಿ ಪೂರಕವಾಗಿರಬೇಕು.'[೩೫]

ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರು ಧರ್ಮ–ವಿಜ್ಞಾನಗಳೆರಡರ ಚಿಂತಕರಾಗಿ ತಮ್ಮ ವಚನಗಳಲ್ಲಿ ಮಾನವೀಯತೆ– ವಿಶ್ವಕಲ್ಯಾಣ ಜಗದಲ್ಲಿ ಬೆಳೆಯಬೇಕೆಂಬ ಕಳಕಳಿ ವ್ಯಕ್ತಪಡಿಸಿರುವುದನ್ನು ಕಾಣುತ್ತೇವೆ.

ಅನ್ನದಿಂದ ದೇಹದ ಬೆಳವಣಿಗೆಯಾದರೆ
ಸಾಧನೆಯಿಂದ ಸಾಮರ್ಥ್ಯದ ಬೆಳವಣಿಗೆ.
ಓದಿನಿಂದ ಶಿಕ್ಷಣದ ಬೆಳವಣಿಗೆ.
ಪ್ರಯೋಗದಿಂದ ಬುದ್ಧಿಯ ಬೆಳವಣಿಗೆ.
ವಿಚಾರ ವಿವೇಚನೆಯಿಂದ ಮಾನವೀಯತೆಯ
ಬೆಳವಣಿಗೆಯೆಂದ ಕುಮಾರ ಕಕ್ಕಯ್ಯ.[೩೬]

'ದೇಹ ಬೆಳೆದು ಪ್ರಳಯಕ್ಕೊಳಗು, ಬುದ್ಧಿ ಬೆಳೆದು ವಿಕಾರಕ್ಕೊಳಗು' ಎಂಬಂತೆ ಆಗಬಾರದು. ಜೀವನದಲ್ಲಿ ಶ್ರದ್ಧೆ ಬೇಕು, ಆದರೆ ಅಂಧಶ್ರದ್ಧೆ ಬೇಡ; ವೈಚಾರಿಕತೆ ಬೇಕು, ಆದರೆ ಶುಷ್ಕತೆ ಬೇಡ. ಇಂದು ನಮಗೆ ಬೇಕಿರುವ ಶಿಕ್ಷಣವು ನಮ್ಮ ಐಹಿಕ ಸುಖ–ಭೋಗಗಳಿಗೆ ಮಿತಿಹಾಕಿ, ನಮ್ಮ ಜೀವನವನ್ನು ಶಾಂತಿ,ಸಹಬಾಳ್ವೆ, ನೆಮ್ಮದಿಯನ್ನು ತರುವಂತಾಗಬೇಕು. ಅಂತೆಯೇ ಕುಮಾರ ಕಕ್ಕಯ್ಯ ಹೇಳುತ್ತಾರೆ–

ಶಿಸ್ತಿನಿಂದ ಶಿಕ್ಷಣ
ಶಿಕ್ಷಣದಿಂದ ಸಂಸ್ಕಾರವು
ಸಂಸ್ಕಾರದಿಂದ ಧರ್ಮ
ಧರ್ಮದಿಂದ ಸದಾಚಾರವು
ಸದಾಚಾರದಿಂದ ಸತ್ಯ
ಸತ್ಯದಿಂದ ಶಿವನೆಂದ ಕುಮಾರ ಕಕ್ಕಯ್ಯ[೩೭]

ಜೀವನದಲ್ಲಿ ಶಿಸ್ತು ಬಹಳ ಅವಶ್ಯ. ಪಶು–ಪಕ್ಷಿಗಳನ್ನು ನೋಡಿಯಾದರೂ ಮಾನವ ಶಿಸ್ತನ್ನು ಕಲಿಯಬೇಕಿದೆ. ಆಕಾಶದಲ್ಲಿ ಪಕ್ಷಿಗಳು ಸಾಲಾಗಿ ಹಾರಾಡುವುದನ್ನು, ಭೂಮಿಯ ಮೇಲೆ ಪಶುಗಳು ಗುಂಪಾಗಿ ಚಲಿಸುವದನ್ನು ನೋಡಿಯಾದರೂ ಮಾನವ ಕಲಿಯಬೇಕಾಗಿದೆ. ಶಿಸ್ತಿನಿಂದ ಶಿಕ್ಷಣ ದೊರೆಯುವಂತೆ, ಶಿಕ್ಷಣದಿಂದ ಮಾನವನ ತನು–ಮನ, ಬುದ್ಧಿ–ಭಾವಗಳಿಗೆ ಸಂಸ್ಕಾರವಾಗುತ್ತದೆ. ಇಂತಹ ಸಂಸ್ಕಾರದಿಂದಲೇ ದಯೆ, ಪ್ರೇಮದ ಧರ್ಮಭಾವನೆ ಉದಿಸುತ್ತದೆ. ಇದರಿಂದಾಗಿ ಸದಾಚಾರ ಅಳವಡುತ್ತದೆ. ಸದಾಚಾರದಿಂದ ಸತ್ಯದ ದರ್ಶನವಾಗುತ್ತದೆ. ಸತ್ಯ ದರ್ಶನದಿಂದಲೇ ವಿಶ್ವಕಲ್ಯಾಣ, ವಿಶ್ವಮಂಗಲ (ಶಿವ ಎಂದರೆ ಮಂಗಲ ಎಂಬ ಅರ್ಥವೂ ಇದೆ) ಉಂಟಾಗುತ್ತದೆ ಎಂಬುದು ಕುಮಾರ ಕಕ್ಕಯ್ಯನವರ ವಚನದ ಆಶಯವಾಗಿದೆ.

---

೩೫. ಶರಣತತ್ವ ಚಿಂತನ : ವೈಜ್ಞಾನಿಕ ದೃಷ್ಟಿ – ಪ್ರೊ.ಬಿ. ವಿರೂಪಾಕ್ಷಪ್ಪ ಪು–೨೧೪–೨೧೫.
೩೬. ಕುಮಾರ ಕಕ್ಕಯ್ಯನ ವಚನಗಳು – ಪು–೨೮೬ ವ–೧೧೦೫
೩೭. –ಅದೇ– ಪು– ೩೦೧ ವ–೧೧೬೪.

## ಊ. ಕುಮಾರ ಕಕ್ಕಯ್ಯನ ವಚನಗಳಲ್ಲಿ ಕೌಟುಂಬಿಕ ವಿಚಾರಗಳು:

### (i) ವ್ಯಕ್ತಿ – ಕುಟುಂಬ – ಸಂಸಾರ.

ವ್ಯಕ್ತಿ – ಕುಟುಂಬ – ಸಂಸಾರವೆಂಬವು ಪರಸ್ಪರ ಅವಿನಾಭಾವ ಸಂಬಂಧ ಹೊಂದಿರುವಂತಹ ಶಬ್ದಗಳಾಗಿವೆ. 'ಕುಟುಂಬವೆಂಬುದು ಗಂಡು ಮತ್ತು ಹೆಣ್ಣು ತಮ್ಮ ನಡುವೆ ಸಹಸಂಬಂಧಗಳನ್ನು ಸ್ಥಾಪಿಸಲು ಪ್ರಯತ್ನಿಸಿದಾಗ ಅಸ್ತಿತ್ವಕ್ಕೆ ಬರುವಂತಹದಾಗಿದ್ದು ಇದು ಮದುವೆಯೆಂಬ ಸಂಸ್ಥೆಯ ಮೂಲಕ ಸ್ಥಾಪಿತವಾಗುತ್ತದೆ. ಮದುವೆಯ ಜೊತೆಗೆ ರಕ್ತ ಅಥವಾ ದತ್ತು ಸಂಬಂಧದಿಂದ ಬಂಧಿತರಾದ ವ್ಯಕ್ತಿಗಳ ಗುಂಪಾಗಿದ್ದು ಒಬ್ಬರ ನೇತೃತ್ವದಲ್ಲಿ ಪರಸ್ಪರ ಕೆಲಸ ಮಾಡುವ ಮತ್ತು ಗಂಡ–ಹೆಂಡತಿ, ತಾಯಿ–ತಂದೆ, ಮಗ–ಮಗಳು, ಸೊಸೆ–ಅಳಿಯ, ಸಹೋದರ– ಸಹೋದರಿಯರೆಂಬ ಸಾಮಾಜಿಕ ಪಾತ್ರಗಳಲ್ಲಿ ಅಂತರ್ ಸಂವಹನಗಳನ್ನು ಸೃಷ್ಟಿಸುತ್ತದೆ. ಸಾಮಾನ್ಯವಾಗಿ ಕುಟುಂಬವೆಂಬುದು ಪೋಷಕರು ಮತ್ತು ಮಕ್ಕಳಿಂದ ಕೂಡಿರುವುದಾಗಿದ್ದು ಅದೊಂದು ಸಂಘ ಮತ್ತು ಸಂಸ್ಥೆ ಎರಡೂ ಆಗಿದ್ದು ಸಮುದಾಯವು ಬೆಳೆಸುವ ಪ್ರಾಥಮಿಕ ಘಟಕವಾಗಿದೆ'[೧]

ಕುಟುಂಬದಲ್ಲಿರುವ ಎಲ್ಲ ಸದಸ್ಯರು ಅರಿತು ಸಂಸಾರ ನಡೆಸಿದರೆ ಅದು ಸಸಾರವಾಗುತ್ತದೆ, ಇಲ್ಲದಿದ್ದರೆ ಅದು ವಿರಸವೆನಿಸುತ್ತದೆ. ಸಂಸಾರ ನಡೆಸಬೇಕಾದ ಗಂಡ–ಹೆಂಡತಿ ಪರಸ್ಪರ ಅರಿತು ಜೀವನ ನಡೆಸಬೇಕಾಗುತ್ತದೆ. ಇಲ್ಲದಿದ್ದರೆ, ಅದು 'ಎತ್ತು ಎರೆಗೆ ಎಳೆದರೆ ಕೋಣ ಕೆರೆಗೆ ಎಳೆಂದತೆ' ಆಗಿ, ಸಂಸಾರ ಹಾಳಾಗುತ್ತದೆ.

ಈ ಪ್ರಪಂಚ ಸತ್ಯವೆಂದು ಅರಿತು ಸಂಸಾರ ಸಾಗಿಸಬೇಕು. ಅನೇಕರು ಸಂಸಾರವನ್ನು ಹೇಯ, ಮಾಯೆ, ನೀರಮೇಲಣ ಗುಳ್ಳೆ, ಮಿಥ್ಯೆ ಎಂದು ಕರೆಯುತ್ತಾ ಬಂದಿರುವುದನ್ನು ಕಾಣುತ್ತೇವೆ. ಆದರೆ, ಬಸವಾದಿ ಶರಣರು 'ಮಾಯಾ ಪ್ರಪಂಚ'ವೆಂಬ ವಾದವನ್ನು ತಿರಸ್ಕರಿಸಿ, ಇದು 'ಶಿವಮಯ ಪ್ರಪಂಚ'ವೆಂದು ಸಾಧಿಸಿ ತೋರಿದರು.

ಸಂಸಾರವೆಂಬ ಬಂಡಿಗೆ ಸತಿ–ಪತಿಗಳಿಬ್ಬರೂ ಎರಡು ಗಾಲಿಗಳಿದ್ದಂತೆ. ಎರಡೂ ಗಾಲಿಗಳು ಸಮ – ಸಮವಾಗಿದ್ದರೆ ಬಾಳ ಬಂಡಿ ಸುರಳೀತ ಚಲಿಸುತ್ತದೆ. ಅವೆರಡೂ ಅಸಮವಾಗಿದ್ದರೆ ಜೀವನಗಾಡಿ ಉರುಳಿ ಬೀಳುತ್ತದೆ.

### (ii) ಸತಿ–ಪತಿ ದಾಂಪತ್ಯ :

ಕುಟುಂಬದಲ್ಲಿ ಸತಿ–ಪತಿಗಳು ಮಹತ್ವದ ಘಟಕಗಳು. ಸತಿಯನ್ನು ಕೀಳು, ಕನಿಷ್ಠ, ಪತಿಯದಾಸಿ, ಗುಲಾಮಳು ಎಂದು ಬಸವಪೂರ್ವದ ಸಮಾಜ ಕಾಣುತ್ತಾ

---

೧. ಭಕ್ತಿಪಂಥದಲ್ಲಿ ಸಮಾಜಕಾರ್ಯದ ಬೇರುಗಳು – ಸಂ. ಡಾ॥ ಎಚ್.ಎಂ. ಮರುಳಸಿದ್ದಯ್ಯ ಪು–೧೧೪.

ಬಂದಿತ್ತು. ಅವಳಿಗೆ ಯಾವುದೇ ರೀತಿಯ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ವಾತಂತ್ರ್ಯವಿರಲಿಲ್ಲ. ಹೆಣ್ಣನ್ನು 'ಮಾಯೆ' ಎಂದು ಭಾವಿಸಿ, ಅವಳ ಮೋಹದಿಂದ ಪಾರಾಗಿ ಮೋಕ್ಷಸಾಧಿಸಲು ಸನ್ಯಾಸ ಜೀವನವನ್ನು ಅಪ್ಪಿಕೊಂಡಿದ್ದರು.

ಬಸವಣ್ಣನವರು ಇಂತಹ 'ಜೀವನ ಪಲಾಯನವಾದ'ವನ್ನು ಖಂಡಿಸಿ, ತಮ್ಮ ವಚನದಲ್ಲಿ 'ಸತಿವಿಡಿದು ನಿರ್ವಾಣಸತಿ' ಅಂದರೆ ಮೋಕ್ಷವನ್ನು ಸಾಧಿಸಬೇಕೆಂದು ಪಲಾಯನವಾದಿಗಳಿಗೆ ಹೇಳುತ್ತಾರೆ –

ಹುಳಿವಿಡಿದು ಘೃತವ ಕಾಣ್ಬಂತೆ
ಅಕ್ಷರವಿಡಿದು ವಿದ್ಯೆಯನರಿವಂತೆ
ಅನ್ನವ ಭೋಗಿಸಿ ಚೈತನ್ಯವಕೊಂಬಂತೆ
ಕೂಡಲಸಂಗನ ಶರಣರು
ಸತಿವಿಡಿದು ನಿರ್ವಾಣಸತಿ ಕಾಣ್ಬರು
ಕೇಳಾ ಪ್ರಭುವೆ.[೨]

ಮಾನವನು ಪ್ರಕೃತಿಯ ಶಿಶುವಾಗಿರುವುದರಿಂದ, ಹೆಣ್ಣು–ಗಂಡು ಎಂಬ ಭೇದ ಭಾವವಿಲ್ಲದೆ ಪ್ರತಿಯೊಬ್ಬರಲ್ಲಿಯೂ ಲೈಂಗಿಕ ಆಸಕ್ತಿಯು ಪ್ರಕೃತಿದತ್ತ ಗುಣವಾಗಿ ಆತ/ ಆಕೆಯಲ್ಲಿ ಸಹಜವಾಗಿಯೇ ಇದೆ. ವಯೋಮಾನ ಗುಣಧರ್ಮಕ್ಕನುಸರಿಸಿ ಪರಸ್ಪರರಲ್ಲಿ ಆಕರ್ಷಣೆ ಉಂಟಾಗಿ ಸಂಭೋಗಕ್ಕೆಳಸುವ ಬಯಕೆ ಒಡಮೂಡುತ್ತದೆ. ಸ್ತ್ರೀ–ಪುರುಷರು ಹಾಗೆಯೇ ಕೂಡಿದರೆ ಅದು ಅನೈತಿಕ ಸಂಬಂಧ ಹೀಗಾಗಬಾರದೆಂದು ಸಮಾಜವು ವಿವಾಹ, ಮದುವೆ ಎಂಬ ವ್ಯವಸ್ಥೆಯನ್ನು ಹುಟ್ಟುಹಾಕಿದೆ. ಸಮಾಜದ ಗುರುಹಿರಿಯರು ಒಪ್ಪಿಗೆಯನ್ನಿತ್ತು ವಿವಾಹ ಮಾಡಿ, ವಧು–ವರರನ್ನು ಸತಿ–ಪತಿಗಳನ್ನಾಗಿಸಿದ ನಂತರ, ಅವರ ಸಂಬಂಧವು ನೈತಿಕವೆನಿಸುತ್ತದೆ.

ಸತಿ–ಪತಿ ದಾಂಪತ್ಯವೇ ಸಂಸಾರವೆನಿಸುತ್ತದೆ. ಇಂದ್ರಿಯಗಳ ಹಿತ–ಮಿತ ಬಳಕೆಯೇ ಗೃಹಸ್ಥ ಜೀವನವನ್ನು ಸುಖಮಯವನ್ನಾಗಿಡುತ್ತದೆ. ಪ್ರಾಚೀನಕಾಲದಲ್ಲಿ "ಮದುವೆ ಸಂಸ್ಥೆಯು ಶ್ವೇತಕೇತುವಿನಿಂದ ಸಂಸ್ಥಾಪಿತವಾಗಿ, ವಿವಾಹವೆಂಬ ಮುದ್ರೆ ಪಡೆದು ಕಾಲಾನುಕ್ರಮದಲ್ಲಿ ಹಲವು ಪ್ರಕಾರಗಳಲ್ಲಿ ಕವಲೊಡೆಯಿತು, ಮಾನ್ಯಗೊಂಡ ಬ್ರಾಹ್ಮಿ, ಪ್ರಜಾಪತ್ಯ, ಅರ್ಷ್ಯ, ದೈವ ವಿವಾಹಗಳಲ್ಲದೆ ಅಸುರ, ಗಂಧರ್ವ, ರಾಕ್ಷಸ, ಪೈಶಾಚಿಕ ಮದುವೆಗಳು ಪಟ್ಟಿಯಲ್ಲಿ ಸೇರಿದವು. ಗೃಹ್ಯಸೂತ್ರಗಳು ಮದುವೆಯ ವಿಧಿ ವಿಧಾನ – ಸಂಸ್ಕಾರಗಳನ್ನು ಇನ್ನಷ್ಟು ಸಿಕ್ಕುಗೊಳಿಸಿದವು....... ಮದುವೆ ಕಲ್ಪನೆಯ ಹಾಗೆ ಸತಿ–ಪತಿಗಳ ಕಲ್ಪನೆ, ಹೊಣೆಗಾರಿಕೆ, ಅವರ ಸ್ಥಾನಮಾನ; ಧಾರ್ಮಿಕ ರೀತಿಯಲ್ಲಿ ನಿಯಂತ್ರಣಗೊಳ್ಳುತ್ತಾ ಹೋದಂತೆ, ಸ್ತ್ರೀ–ಪುರುಷರ ಅರ್ಥಾತ್ ಸತಿ–ಪತಿಗಳ ವ್ಯಕ್ತಿತ್ವ ಕಲ್ಪನೆಗಳು ಬದಲಿಸುತ್ತಾ ಹೋದವು"[೩]

೨. ಬಸವಣ್ಣನವರ ಷಟ್‌ಸ್ಥಲ ವಚನಗಳು – ಸಂ. ಡಾ॥ಆರ್.ಸಿ.ಹಿರೇಮಠ. ವ –೧೧೫೮.
೩. ಕಾಯಕ ಪರಿಣಾಮಿಃ ಶರಣರ ದಾಂಪತ್ಯ – ಡಾ॥ಶೈಲಜಾ ಉಡಚಾಣ ಪು–೧೦೫೨.

ಮನುಸ್ಮೃತಿಯ ಕಾಲಕ್ಕೆ ಪುರೋಹಿತಶಾಹಿಯ ಧಾರ್ಮಿಕ ಕಾನೂನು-ಕಟ್ಟಳೆಗಳು ಬಿಗಿಗೊಂಡು ವರ್ಣವ್ಯವಸ್ಥೆಯಲ್ಲಿ ಸ್ತ್ರೀಯು ಪುರುಷನ ಭೋಗವಸ್ತುವಾದಳು. ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಗಟ್ಟಿಗೊಂಡಿದ್ದರಿಂದಾಗಿ, ಸ್ತ್ರೀಯ ಮೇಲೆ ದೌರ್ಜನ್ಯ. ಅತ್ಯಾಚಾರ ಅವ್ಯಾಹತವಾಗಿ ಸಾಗತೊಡಗಿತು. ಅವಳ ಸಾಮಾಜಿಕ, ಧಾರ್ಮಿಕ ಸ್ವಾತಂತ್ರ್ಯ ಕಿತ್ತುಕೊಳ್ಳಲಾಯಿತು. ಅವಳನ್ನು ಮಾಯೆ, ಚಂಚಲೆ, ಪುರುಷನ ಸಾಧನೆಗೆ ಅಡ್ಡಿ ಆತಂಕವೆಂದು ಪರಿಗಣಿಸಲಾಯಿತು. ಇದರ ಪರಿಣಾಮವಾಗಿ ದಾಂಪತ್ಯ ಜೀವನವನ್ನು ಪವಿತ್ರವೆಂದು ಪರಿಗಣಿಸದೇ 'ಹೇಯ'ವೆಂದು ಭಾವಿಸಲಾಯಿತು.

ಇಂತಹ 'ಸಂಸಾರ ಹೇಯ' ಎಂಬ ಕಲ್ಪನೆಯನ್ನು ವಚನಕಾರ ಕುಮಾರ ಕಕ್ಕಯ್ಯನವರು ತಮ್ಮ ವಚನಗಳಲ್ಲಿ ಕಟುವಾಗಿ ಖಂಡಿಸಿ, ಪ್ರಶ್ನಿಸುತ್ತಾರೆ –.

ಹೆಣ್ಣು ಗಂಡು ದೇವನೆ ಸೃಷ್ಟಿಸಿರುವಾಗ
ಶರೀರಕ್ಕೆ ಹಸಿವು ತೃಷೆ ನಿದ್ರೆ ಅವಶ್ಯವಿರುವಾಗ
ಈ ಸಂಸಾರ ಹೇಯಸ್ಥಳ ಅದೇಕಯ್ಯಾ?
ಅಂಗದ ಜನನಾಂಗ ದೇವನೇ ಮಾಡಿರುವಾಗ
ವೀರ್ಯ ರೇತಸ್ಸು ಜೀವೋತ್ಪತ್ತಿಯ ಶಕ್ತಿಯಾಗಿರುವಾಗ
ಸಂಭೋಗ ಸುರತಿ ಅಶ್ಲೀಲ ಅದೇಕಯ್ಯಾ?
ಸತಿ ಪತಿಗಳಲ್ಲಿ ಮೇಳಿಲ್ಲದ ಸಂಸಾರವೇ ಹೇಯಸ್ಥಳ,
ಇತಿ ಮಿತಿ ಇಲ್ಲದ ಭೋಗವೇ ಅಶ್ಲೀಲವೆಂದ
ಕುಮಾರ ಕಕ್ಕಯ್ಯ.[೪]

ಹೆಣ್ಣು-ಗಂಡುಗಳೆರಡೂ ದೇವನ ಸೃಷ್ಟಿಯಾಗಿರುವದರಿಂದ, ಈ ಸೃಷ್ಟಿಯು ಮುಂದುವರೆಯಬೇಕಾದರೆ ಸಂತಾನೋತ್ಪತ್ತಿಯು ಆಗಲೇಬೇಕು. ಈ ಸಂತಾನೋತ್ಪತ್ತಿಯ ಕ್ರಿಯೆಯು ಸಹಜವಾಗಿ ನೈಸರ್ಗಿಕ ಕ್ರಿಯೆಯಾಗಿರುವುದರಿಂದ ಇದನ್ನು ಅಶ್ಲೀಲ, ಹೇಯವೆಂದು ಪರಿಗಣಿಸದೇ, ಅದನ್ನು ಪ್ರೇಯವೆಂದು ಭಾವಿಸಿ ಸಂಸಾರ ಸಾಗಿಸಿದರೆ ಅದುವೇ ಶ್ರೇಯವಾಗುತ್ತದೆ.

ಶರೀರವೊಂದು ಜೀವಂತ ದೋಣಿಯಾದರೆ
ಪಂಚ ಇಂದ್ರಿಯಗಳೇ ಅದರ ಪಯಣಿಗರು
ಪಯಣಿಗರು ಕಂಡಂತೆ ಕುಣಿದರೆ
ದೋಣಿ ಸೆಳವಿನಲಿ ಮುಳುಗಬಹುದು.
ಇಂದ್ರಿಯಗಳ ನಿಗ್ರಹಿಸಿ, ನೀತಿಯ ಹುಟ್ಟುಹಾಕಿದರೆ
ಬಾಳ ದೋಣಿ ಭವಸಾಗರ ದಾಟುವದೆಂದ
ಕುಮಾರ ಕಕ್ಕಯ್ಯ.[೫]

೪. ಕುಮಾರ ಕಕ್ಕಯ್ಯನ ವಚನಗಳು – ಪು–೭ ವ–೨೭.
೫. – ಅದೇ – –ಪು–೨೦೭ ವ–೭೮೮.

ಪ್ರತಿಯೊಬ್ಬ ವ್ಯಕ್ತಿಯಲ್ಲಿ ಪಂಚಜ್ಞಾನೇಂದ್ರಿಯಗಳಾದ ಕಣ್ಣು,ಕಿವಿ,ಮೂಗು, ನಾಲಿಗೆ,ಚರ್ಮಗಳು; ಪಂಚ ಕರ್ಮೇಂದ್ರಿಯಗಳಾದ ವಾಕ್, ಪಾಣಿ, ಪಾದ, ಗುದ, ಗುಹ್ಯಗಳು ಇವೆ. ಇವುಗಳ ಭೋಗವನ್ನೇ ಸಂಸಾರ ಭೋಗ ಎನ್ನಲಾಗಿದೆ. ಈ ದಶೇಂದ್ರಿಯಗಳಲ್ಲಿ ಮನಸ್ಸು ಸೇರಿ ಪುರುಷನು ಸ್ತ್ರೀಯನ್ನು, ಸ್ತ್ರೀಯು ಪುರುಷನನ್ನು ಆಕರ್ಷಿಸುವಂತೆ, ಪರಸ್ಪರ ಮಿಲನಕ್ಕೆ ಪ್ರೇರೇಪಿಸುತ್ತದೆ. ಈ ಭೋಗ ಕ್ರಿಯೆಗೆ ಮಿತಿ ಹಾಕಿದರೆ ಸಂಯಮದ ಸುಖ ಸಂಸಾರವೆನಿಸುತ್ತದೆ. ಮಿತಿ ಹಾಕದೇ ಹೋದರೆ ಅದು ನಿಯಂತ್ರಣ ತಪ್ಪಿ ದುಃಖದ ಆಗರವಾಗುತ್ತದೆ.

ಸಂಸಾರ ಜೀವನವು ಭಾರವಾಗಬಾರದು, ಹಗುರಾಗಿ ಸಾಗಬೇಕು. ಮನೆಯಲ್ಲಿರುವ ಜನ ಇದನರಿತು ಸಂಸಾರ ನಡೆಸಬೇಕು ಎಂದು ಎಚ್ಚರಿಸುತ್ತಾರೆ ಕುಮಾರ ಕಕ್ಕಯ್ಯ –.

ಮಾತಿನಲ್ಲಿಲ್ಲದ ತಂದೆ, ರೀತಿಯಲ್ಲಿಲ್ಲದ ತಾಯಿ,
ದುಡಿಯಲೊಲ್ಲದ ಮಗ, ಮಾಡಲೊಲ್ಲದ ಸೊಸೆ,
ಕೊಡಲೊಲ್ಲದ ವ್ಯವಹಾರ, ನೆಲೆಯಿಲ್ಲದ ಸಂಸಾರ,
ಹುಟ್ಟಿದ ತಪ್ಪಿಗೆ ಸಾಯುವವರೆಗೆ ಬದುಕುವ
ದರಿದ್ರರ ಬಾಳು ಭೂಮಿಗೆ ಭಾರ, ಸಮಾಜಕ್ಕೆ
ದೊಡ್ಡ ಹೊರೆಯೆಂದ ಕುಮಾರ ಕಕ್ಕಯ್ಯ.[೬]

ದಾಂಪತ್ಯ ಜೀವನ ನೀತಿಯ ತಳಹದಿಯಲ್ಲಿರಬೇಕು. ಸತಿ–ಪತಿಗಳಿಬ್ಬರಿಗೂ ಒಂದೇ ತೆರನಾದ ನೀತಿಯಿರಬೇಕು. ದುರ್ವ್ಯಸನ – ದುರಾಚಾರಗಳಿಗೆ ಬಲಿಯಾದರೆ ಅವರ ಜೀವನ ನರಕಮಯವಾಗುತ್ತದೆ ಎಂದು ಕುಮಾರ ಕಕ್ಕಯ್ಯನವರು ಬುದ್ಧಿವಾದ ಹೇಳುತ್ತಾರೆ –

ಕುಡುಕ ಗಂಡ ಹೆಂಡದ ಅಂಗಡಿಯಲ್ಲಿ
ಕುಡುಕನ ಹೆಂಡತಿ ಪರರ ಮನೆಯಲ್ಲಿ
ಗತಿಗೆಟ್ಟು ಕಳ್ಳನಾದ ಮಗ ಸೆರೆಮನೆಯಲ್ಲಿ
ಮತಿಗೆಟ್ಟು ಸೂಳೆಯಾದ ಮಗಳು ಬಜಾರದಲ್ಲಿ
ಅಯ್ಯಾ ಇವರ ನರಕಮಯ ಬಾಳಿಗೆ
ಕುಡಿತವೇ ಕಾರಣವೆಂದ ಕುಮಾರ ಕಕ್ಕಯ್ಯ.[೭]

ಕುಮಾರ ಕಕ್ಕಯ್ಯನವರು ಭಂಡ ಗಂಡಸರಿಗೆ ನೇರವಾಗಿಯೇ ಬೈದು, ಮನುಷ್ಯತ್ವದಿಂದ ಬದುಕಲು ತಿಳಿಸುತ್ತಾರೆ–.

ಮದ್ಯ ಮಾಂಸಕ್ಕೆ ಬಲಿಯಾಗಬೇಡ
ಪರಸ್ತ್ರೀಯ ವ್ಯಾಮೋಹಕ್ಕೆ ಬೀಳಬೇಡ

---

೬. ಕುಮಾರ ಕಕ್ಕಯ್ಯನ ವಚನಗಳು : ಪು –೧೦೬ ವ – ೪೦೮
೭. – ಅದೇ –ಪು –೫೯ ವ–೨೨೬.

ದೀನ ದಲಿತ ಬಡಪಾಯಿಗಳ ಕಾಡಬೇಡ
ಪಶು ಪಕ್ಷಿ ಪ್ರಾಣಿಗಳ ಹಿಂಸಿಸಬೇಡ
ಪಶುತ್ವ ಬಿಟ್ಟಾಗಲೇ ಮಾನವನಿಗೆ
ಮನುಷ್ಯತ್ವವೆಂದ ಕುಮಾರ ಕಕ್ಕಯ್ಯ[೮]

ದಾಂಪತ್ಯ ಜೀವನ ಹಾಳಾಗುವುದು ಸತಿ–ಪತಿಗಳು ಚಟಗಳಿಗೆ ಒಳಗಾಗಿ ನೀತಿತಪ್ಪಿದಾಗ ಎಂಬುದನ್ನು ತಿಳಿಯಬೇಕು. ೧೨ ನೆಯ ಶತಮಾನದ ಹಿರಿಯ ಶರಣ ಜೇಡರದಾಸಿಮಯ್ಯನ ವಚನವಾಣಿಯನ್ನು ಅರಿಯಬೇಕು– 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿ–ಪತಿಗಳೊಂದಾಗದವರ ಭಕ್ತಿಯು ಹಾಲೊಳು ವಿಷ ಬೆರೆಸಿದಂತೆ'[೯] ಎಂಬುದನ್ನು ಪರಸ್ಪರರು ತಿಳಿದಿರಬೇಕು. ಅಂತೆಯೇ ವಚನಕಾರ ಕುಮಾರ ಕಕ್ಕಯ್ಯ ಹೇಳುತ್ತಾರೆ–

ಮನಸ್ಸು ಕೊಡದ ಸತಿ
ತಾಳಿ ಕಟ್ಟಿದ್ದರೂ ಅವಳೊಬ್ಬ ಪರಸ್ತ್ರೀ.
ಮನಸ್ಸು ಕೊಡದ ಪತಿ
ಮದುವೆಯಾಗಿದ್ದರೂ ಅವನೊಬ್ಬ ಪರಪುರುಷ
ಮನಸ್ಸು ಬೆರೆಯದ ದಾಂಪತ್ಯ
ಅದೊಂದು ಆಜೀವ ಶಿಕ್ಷೆಯೆಂದ
ಕುಮಾರ ಕಕ್ಕಯ್ಯ[೧೦]

ದಾಂಪತ್ಯ ಜೀವನದಲ್ಲಿ ಕೇವಲ ಸತಿ–ಪತಿಗಳ ದೇಹ ಭಿನ್ನ ಭಿನ್ನವಾಗಿದ್ದರೂ ಕೂಡ ಮನಸ್ಸು ಒಂದಾಗಿರಬೇಕು. ಕೇವಲ ತಾಳಿ ಕಟ್ಟಿದ ಮಾತ್ರಕ್ಕೆ, ಕಟ್ಟಿಕೊಂಡ ಮಾತ್ರಕ್ಕೆ ಇಬ್ಬರೂ ಒಂದಾದರೆಂತಲ್ಲ. ಅವರ ಮನಸ್ಸುಗಳು ಒಂದಾಗಬೇಕು.

ಗಂಡನಾದವವನು ಪತ್ನಿಯನ್ನು ಪ್ರೀತಿ–ಪ್ರೇಮದಿಂದ ಕಾಣಬೇಕು. ಅವಳು ತನ್ನ ಸಹಧರ್ಮಿಣಿ ಎಂದು ಭಾವಿಸಬೇಕೇ ವಿನಃ ಅವಳನ್ನು ದಾಸಿ, ಸೇವಕಿ, ತೊತ್ತು ಎಂದು ಭಾವಿಸಬಾರದು. ಸತಿಯನ್ನು ಪಶುವಿನಂತೆ ಕಾಣುವ ಗಂಡ ಕಾಡು ಮೃಗವಿದ್ದಂತೆ ಎಂದು ಕುಮಾರ ಕಕ್ಕಯ್ಯ ಖಂಡಿಸುತ್ತಾರೆ–

ಬಾ–ಎಂದೊಡೆ ಓಡಿ ಬರಲು ಸಾಕಿದ ನಾಯಿಯೇ?
ನಡೆ–ಎಂದೊಡೆ ಹೊರಡಲು ಕುಂಬಾರನ ಕತ್ತೆಯೆ?
ಕುಣಿ–ಎಂದೊಡೆ ನೆಗೆಯಲು ಮುಗುದಾಣದ ಕರಡಿಯೇ?
ಹೂಂ–ಎಂದೊಡೆ ಡೊಗ್ಗಿ ಜಗ್ಗಲು ಗಾಣದ ಎತ್ತೇ?
ಕೈ ಹಿಡಿದ ಮಡದಿಯನು ಪಶುವಿನಂತೆ ಕಾಣುವ ಗಂಡ
ಕೋರೆಹಲ್ಲಿನ ಕಾಡುಮೃಗವೆಂದ ಕುಮಾರ ಕಕ್ಕಯ್ಯ.[೧೧]

---

೮. – ಅದೇ –ಪು–೨೩೮ ವ–೯೧೯.
೯. ಸಂಕೀರ್ಣ ವಚನ ಸಂಪುಟ–ಸಂ. ಡಾ॥ ಎಸ್. ವಿದ್ಯಾಶಂಕರ ವ–೮೬೧
೧೦. ಕುಮಾರ ಕಕ್ಕಯ್ಯನ ವಚನಗಳು–ಪು–೧೯ ವ–೭೪
೧೧. –ಅದೇ– ಪು–೫೧ ವ–೧೯೫

ಇನ್ನು ಹೆಂಡತಿಯಾದಳು ಸಹ ಗಂಡನನ್ನು ಪ್ರೀತಿ–ಪ್ರೇಮದಿಂದ ಕಂಡು, ಆತನ ಸುಃಖ–ದುಃಖಗಳಲ್ಲಿ ಸಹಭಾಗಿಯಾಗಿ ಸ್ಪಂದಿಸಬೇಕು. ಜೀವನದ ಎಡರು–ತೊಡರುಗಳಿಗೆ ಎದೆಗುಂದದೇ ಧೈರ್ಯ ಹೇಳಿ ಜೀವನದ ರಥ ಸರಾಗವಾಗಿ ಚಲಿಸುವಂತೆ ನೋಡಿಕೊಳ್ಳಬೇಕು. ಇದನ್ನು ಮರೆತು., ಚಂಡಿಯಂತೆ ವರ್ತಿಸತೊಡಗಿದರೆ, ಪತಿಯಾದವನು ಈ ಸಂಸಾರವೇ ಬೇಡವೆಂದು ವೈರಾಗ್ಯ ತಾಳಿ ಸನ್ಯಾಸಿಯಾಗಿ ಹೋಗುವಂತೆ ಮಾಡಬಾರದೆಂದು ಅವಳಿಗೂ ನಿಷ್ಠುರವಾಗಿ ಬುದ್ಧಿವಾದ ಹೇಳುತ್ತಾರೆ–

ಸ್ತ್ರೀ ಮೂರ್ಖನನ್ನು ಜಾಣನನ್ನಾಗಿ ಮಾಡಬಹುದು.
ಅದೇ ಸ್ತ್ರೀ ಜಾಣನನ್ನು ಮೂರ್ಖನನ್ನಾಗಿಯೂ ಮಾಡಬಹುದು.
ಸ್ತ್ರೀ ಗುಡಿಸಲನ್ನು ಸ್ವರ್ಗವನ್ನಾಗಿ ಮಾಡಬಹುದು.
ಅದೇ ಸ್ತ್ರೀ ಅರಮನೆಯನ್ನು ನರಕವನ್ನಾಗಿಯೂ ಮಾಡಬಹುದು.
ಗೃಹಸ್ಥರು ಆಧ್ಯಾತ್ಮಕ್ಕೆ ಮೊರೆಹೋಗಲು,
ಸನ್ಯಾಸಿಗಳಾಗಲು ಕರ್ಮಠ ಹೆಂಡರೇ ಕಾರಣರೆಂದ
ಕುಮಾರ ಕಕ್ಕಯ್ಯ[೧೨]

ಸತಿಯಾದವಳು ಹಟಮಾರಿತನ, ಸಿಟ್ಟು ಸೆಡವುಗಳಿಂದ ದೂರವಿರಬೇಕು. ಪತಿಯಾದವನು ಅಹಂಕಾರ, ಕೋಪ ತಾಪಗಳಿಂದ ಹೊರತಾಗಿರಬೇಕು. ಅಂದರೆ ಆ ದಾಂಪತ್ಯ ಸುಮಧುರವಾಗಿರುತ್ತದೆ. ಬಹುತೇಕ ಮನೆಯ ಜವಾಬ್ದಾರಿ ಪತ್ನಿಯ ಮೇಲಯೇ ಇರುತ್ತದೆ. ಅವಳು ಸಹನೆ–ತಾಳ್ಮೆಯಿಂದ ಸಂಸಾರ ತೂಗಿಸಿಕೊಂಡು ಸಾಗಬೇಕು.

ಹದವರಿತು ಅಡಿಗೆ ಮಾಡಿ
ಹಸಿವೆ ತಿಳಿದು ಉಣಬಡಿಸುವವಳು
ಉತ್ಪನ್ನವರಿತು ಖರ್ಚುಮಾಡಿ
ಇದ್ದುದರಲ್ಲಿಯೇ ಉಳಿತಾಯ ಮಾಡುವವಳು
ನಗು ನಗುತ್ತಲೇ ಸಂಸಾರ ಮಾಡಿ
ಎಲ್ಲರಿಗೂ ಬೇಕಾದವಳು ಆದರ್ಶಸತಿಯೆಂದ
ಕುಮಾರ ಕಕ್ಕಯ್ಯ[೧೩]

ಇಂತಹ ಸತಿಯಿಂದಲೇ ಮನೆಯ ಸಂಸಾರ ಶ್ರೇಯಸ್ಕರವಾಗುತ್ತದೆ. ಮನೆಯ ಮಾನ ಮರ್ಯಾದೆ, ವಂಶೋದ್ಧಾರವಾಗುತ್ತದೆ. ಪತಿಯಾದವನೂ ಸಹ ತನ್ನ ಸತಿ–ಸುತರು ಹೇಗೆ ನೀತಿವಂತರಾಗಿರಬೇಕೆಂದು ಬಯಸುವನೋ, ಹಾಗೆಯೇ ತಾನೂ ಸಹ ನೀತಿವಂತನಾಗಿ ಬಾಳಬೇಕು. ನೀತಿ–ನಡತೆ ಎಂಬುದು ಒಮ್ಮುಖವಲ್ಲವೆಂಬುದನ್ನು ಅರಿತಿರಬೇಕು. "ಮದುವೆ ಒಂದು ವೈಯಕ್ತಿಕ

೧೨. ಕುಮಾರ ಕಕ್ಕಯ್ಯನ ಕಕ್ಕಯ್ಯನ ವಚನಗಳು – ಪು–೪೫, ವ–೧೭೧.
೧೩. –ಅದೇ– ಪು–೨೨ ವ–೮೫.

ಸಮಾರಂಭವಾದಂತೆ, ಸಾಮಾಜಿಕ ಸಂಬಂಧವೂ ಆಗಿದೆ. ಅದರ ಮೂಲ ಉದ್ದೇಶ ಸಂತಾನೋತ್ಪತ್ತಿಗಾಗಿ, ವಂಶೋದ್ಧಾರಕ್ಕಾಗಿ ನಡೆಯುವ ಗಂಡು ಹೆಣ್ಣಿನ ಸಂಬಂಧವನ್ನು ಪವಿತ್ರೀಕರಿಸುವುದು. ತನ್ಮೂಲಕ ಗಂಡು ಹೆಣ್ಣು ಪರಸ್ಪರ ಕಷ್ಟಸುಖಗಳನ್ನು ಹಂಚಿಕೊಂಡು ಸಂಸಾರ ರಥವನ್ನು ಸಾರ್ಥಕವಾಗಿ ನಡೆಸಿ ಪುರುಷಾರ್ಥ ಚತುಷ್ಟಯಗಳಾದ ಧರ್ಮ, ಅರ್ಥ, ಕಾಮ,, ಮೋಕ್ಷ ಇವುಗಳನ್ನು ಸಾಧಿಸುವುದೇ ಆಗಿದೆ."[೧೪]

ವೈದಿಕ ಪರಂಪರೆಯ ಅಸಮಾನತೆಯ, ಪುರುಷಪ್ರಧಾನ ಸಂಸಾರ ಜೀವನವನ್ನು ಬಸವಾದಿ ಶರಣರು ತಿರಸ್ಕರಿಸಿ, ಆದರ್ಶವಾದ ಶರಣ ದಾಂಪತ್ಯ ಜೀವನವನ್ನು ಬಾಳಿ ತೋರಿದರು. "ಶಿವಶರಣರು ಸ್ತ್ರೀ ಪುರುಷ ಭೇದರಹಿತ ಉಭಯ ಪ್ರಧಾನ ಕುಟುಂಬ ಪದ್ಧತಿಗೆ ಅಸ್ತಿಭಾರ ಹಾಕಿದರು. ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಎರಡೂ ನೆಲೆಗಳಲ್ಲಿ ಆಕೆಗೆ ಸಮಾನ ಅವಕಾಶವಿತ್ತು. ಸ್ತ್ರೀಯು ತಲೆ ಎತ್ತಿ ಬದುಕಲು ಅನುಕೂಲ ಕಲ್ಪಿಸಿಕೊಟ್ಟರು."[೧೫]

ದಾಂಪತ್ಯ ಜೀವನದಲ್ಲಿ ಸತಿ–ಪತಿಗಳ ನಡುವೆ ಭಿನ್ನಾಭಿಪ್ರಾಯ ಬರುವುದು ಸಹಜ, ಆಗ ಇಬ್ಬರಲ್ಲಿ ಒಬ್ಬರಾದರೂ ಹೊಂದಾಣಿಕೆ ಮಾಡಿಕೊಂಡು ಮುಂದುವರೆಯಬೇಕು. ಯಾರಿಂದಲೇ ತಪ್ಪುಗಳಾದರೂ ಸಹ, ಅದನ್ನು ತಿದ್ದಿಕೊಂಡು ಬಾಳುವೆ ನಡೆಸಬೇಕು. ಕಲಹಗಳನ್ನು ಮರೆತುಬಿಡಬೇಕು, ಇದುವೇ ದಂಪತಿಗಳ ನಿಜವಾದ ಧರ್ಮವೆಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ –

ಮನೆಯಲ್ಲಿ ಕಸ ಬೀಳುವುದು ಸಹಜ
ಹಸನಾಗಿಡುವುದು ಗೃಹಿಣಿಯ ಧರ್ಮ
ಬಾಳಿನಲಿ ಭಿನ್ನಾಭಿಪ್ರಾಯ ಸಾಮಾನ್ಯ
ಹೊಂದಾಣಿಕೆ ಮಾಡಿಕೊಳ್ಳುವುದು ಗೃಹಸ್ಥ ಧರ್ಮ
ಸಂಸಾರದಲಿ ತಪ್ಪುಗಳು ಸ್ವಾಭಾವಿಕ,
ಮರೆತು ಬಿಡುವುದು ದಂಪತಿಗಳ
ಧರ್ಮವೆಂದ ಕುಮಾರ ಕಕ್ಕಯ್ಯ.[೧೬]

### (iii) ತಂದೆ–ತಾಯಿ–ಮಕ್ಕಳು :

ಕುಟುಂಬದಲ್ಲಿ ತಂದೆ–ತಾಯಿ–ಮಕ್ಕಳು ಸಂಬಂಧ ಆತ್ಮೀಯವಾಗಿರಬೇಕು. ಮನೆಯ ಯಜಮಾನತಿ ತಾಯಿಯು, ಅವಳು ವಾತ್ಸಲ್ಯದ ಮೂರ್ತಿಯಾಗಿರಬೇಕು. ಮಕ್ಕಳನ್ನು ಅನುನಯದಿಂದ, ಅಂತಃಕರಣದಿಂದ ಬೆಳೆಸಬೇಕು. ತಂದೆಯಾದವನು ಮಕ್ಕಳ ತಪ್ಪಿಗೆ, ಅವಗುಣಕ್ಕೆ ಮುನಿಯಬೇಕು, ತಿದ್ದಬೇಕು. ಸತಿ–ಪತಿಗಳ ದಾಂಪತ್ಯದ ಬಳ್ಳಿಯಲ್ಲಿ ಅರಳಿರುವ ಸುಂದರ ಪುಷ್ಪಗಳೇ ಮಕ್ಕಳು ಎಂಬುದನ್ನು ಅರಿಯಬೇಕು. ಮಕ್ಕಳ ಮನಸ್ಸು ತುಂಬಾ ಕೋಮಲವಾಗಿರುತ್ತದೆ. ಅದು ತಂದೆ–ತಾಯಿಯರ

---

೧೪. ಶರಣ ತತ್ವ ವಿವೇಚನೆ ಭಾಗ–೨. – ಪ್ರೊ.ಬಿ. ವಿರುಪಾಕ್ಷಪ್ಪ ಪು–೨೦.
೧೫. ಶರಣಸಂಸ್ಕೃತಿ ಮುಖಾ–ಮುಖಿ – ಡಾ॥ ಚೆನ್ನಕ್ಕ ಪಾವಟೆ. ಪು–೭೧.
೧೬. ಕುಮಾರ ಕಕ್ಕಯ್ಯನ ವಚನಗಳು – ಪು–೧೧೫ ವ–೪೦೨.

ವರ್ತನೆಯಿಂದ, ಜಗಳಗಳಿಂದ ಮುರುಟಬಾರದು. ತಂದೆಯಾದವನು ಮಡದಿ–ಮಕ್ಕಳಿಂದಲೇ ಸಂಸಾರವೆಂಬುದನ್ನು ಅರಿತು ವರ್ತಿಸಬೇಕೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ –

ಮುತ್ತು ರತ್ನಗಳಿಗಿಂತ
ಪಕ್ಷಿಗಳಿಗೆ, ದವಸ ಧಾನ್ಯಗಳಿಂದಲೇ ಜೀವನ.
ವಜ್ರ ವೈಢೂರ್ಯಗಳಿಗಿಂತ
ಪಶುಗಳಿಗೆ, ಅನ್ನ ಆಹಾರಗಳಿಂದಲೇ ಬದುಕು.
ಭೂಮಿ ಸೀಮಿಗಳಿಗಿಂತ
ಮಾನವನಿಗೆ, ಮಡದಿ ಮಕ್ಕಳಿಂದಲೇ
ಸಂಸಾರವೆಂದ ಕುಮಾರ ಕಕ್ಕಯ್ಯ[೧೭]

ತಂದೆಯಾದವನು ಮಕ್ಕಳಿಗೆ ಆದರ್ಶವಾಗಿರಬೇಕು. ಆತನು ಚಾರಿತ್ರ್ಯವಂತ, ಸದಾಚಾರಿಯಾಗಿದ್ದರೆ ಮಕ್ಕಳಲ್ಲಿ ಗೌರವ–ಭಕ್ತಿ ಉಂಟಾಗುತ್ತವೆ. ತಾಯಿಯಾದವಳು ಮಕ್ಕಳಲ್ಲಿ ವಾತ್ಸಲ್ಯ ತೋರುತ್ತಿರಬೇಕು. ತಂದೆ–ತಾಯಿಯರೇ ವ್ಯಸನಾದಿಗಳಿಗೆ ಬಲಿಯಾಗಿದ್ದರೆ, ಮಕ್ಕಳಲ್ಲಿ ಎಂತಹ ಭಾವನೆ ಉಂಟಾದೀತು?

ಶೆರೆ ಕುಡಿದು ತೂರಾಡುವ ತಂದೆ
ಮರೆಮಾಚಿ ಹರಿದಾಡುವ ತಾಯಿ
ಹೇರಳ ಹಣಗಳಿಸಿ ಮಹಡಿ ಮನೆ ಕಟ್ಟಿಸಿದರೂ,
ಸಮಾಜದಲ್ಲಿ ಅಗ್ರಗಣ್ಯರೆನಿಸಿದರೂ
ಹುಟ್ಟಿದ ಮಕ್ಕಳಲಿ ಹೆತ್ತವರ ಬಗ್ಗೆ
ಸದ್ಭಾವನೆ ತಾರದೆಂದ ಕುಮಾರ ಕಕ್ಕಯ್ಯ.[೧೮]

ಹೆತ್ತವರಾದವರು ಮಕ್ಕಳು ಬೆಳೆದು ದೊಡ್ಡವರಾದ ನಂತರ, ಅನುರೂಪವಾದ ಕನ್ಯೆಯನ್ನು ತಂದು ಮದುವೆ ಮಾಡಬೇಕು. ವರದಕ್ಷಿಣೆಯ ದಾಹಕ್ಕೆ ಬಿದ್ದು, ಮಕ್ಕಳ ಭವಿಷ್ಯ ಹಾಳು ಮಾಡಬಾರದು. ಧನ ಪಿಶಾಚಿ ಹೆತ್ತವರಿಗೆ ನೀತಿಯ ಹೇಳುವದು ತುಂಬಾ ಕಷ್ಟ, ಅವರಿಗೆ ನೀತಿಯ ಬೀಜ ನಾಟದು ಎಂದು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ತಿಳಿಸುತ್ತಾರೆ –

ಮನೆ ಹೊಕ್ಕ ಕಳ್ಳನಿಗೆ ನೀತಿಯ ಹೇಳಬಹುದು
ಕೊಲೆ ಮಾಡುವ ಖಳನಿಗೆ ನೀತಿಯ ಹೇಳಬಹುದು
ವ್ಯಭಿಚಾರಕ್ಕಿಳಿದ ಹೆಣ್ಣಿಗೆ ನೀತಿ ಹೇಳಬಹುದು
ಲಂಚ ಬೇಡುವ ಅಧಿಕಾರಿಗೆ ನೀತಿ ಹೇಳಬಹುದು

೧೭. ಕುಮಾರ ಕಕ್ಕಯ್ಯನ ವಚನಗಳು – ಪು–೩೧೪ ವ–೧೨೧೫.
೧೮. –ಅದೇ– ಪು– ೭೯ ವ–೩೦೮

ವರದಕ್ಷಿಣೆ ಬೇಡುವ ಹೆತ್ತವರ ಮುಂದೆ ನೀತಿಯ
ಬೀಜ ನಾಟದೆಂದ ಕುಮಾರ ಕಕ್ಕಯ್ಯ.[೧೯]

**iv) ಅತ್ತೆ-ಸೊಸೆ-ನಾದಿನಿಯರು :**

ಕುಟುಂಬದಲ್ಲಿ ಗೃಹಕಲಹಗಳು ಸಾಮಾನ್ಯವಾಗಿ ಅತ್ತೆ-ಸೊಸೆ-ನಾದಿನಿಯರಿಂದಲೇ ಪ್ರಾರಂಭವಾಗುತ್ತವೆ. ಅತ್ತೆಯಾದವಳು ತಾನೂ ಒಂದು ಕಾಲಕ್ಕೆ ಈ ಮನೆಗೆ ಸೊಸೆಯಾಗಿ ಬಂದವಳು ಎಂಬುದನ್ನು ಮರೆಯುತ್ತಾಳೆ. ತನ್ನ ಅತ್ತೆಯು ತನಗೆ ಕೊಟ್ಟಿರುವ ತೊಂದರೆಗಳನ್ನು ನೆನಪಿಸಿಕೊಂಡು, ಹೊಸದಾಗಿ ಮನೆಗೆ ಬಂದಿರುವ ಸೊಸೆಗೆ ತ್ರಾಸುಕೊಡಲು ಪ್ರಾರಂಭಿಸುತ್ತಾಳೆ. ಇದು ಅತ್ತೆಯ ಹಕ್ಕು ಎಂದು ಭಾವಿಸುತ್ತಾಳೆ. ಸರ್ವಾಧೀಕಾರಿಯಂತೆ ವರ್ತಿಸುತ್ತಾಳೆ. ಸೊಸೆಯಾದವಳು ಅತ್ತೆಯನ್ನು ತಾಯಿಯೆಂದು ಭಾವಿಸದೇ ಅವಳನ್ನು ವೈರಿಯಂತೆ ನೋಡಿ, ವರ್ತಿಸತೊಡಗುತ್ತಾಳೆ. ನಾದಿನಿ-ನೆಗೆಣ್ಣಿಯರು ಮತ್ಸರದಿಂದ ಕಾಡುತ್ತಾರೆ. ಇಂತಹ ಕುಟುಂಬಗಳೇ ಸಮಾಜದಲ್ಲಿ ತುಂಬಿರುವುದನ್ನು ಕುಮಾರ ಕಕ್ಕಯ್ಯ ಕಂಡಿರುವುದರಿಂದ ಆ ಚಿತ್ರಣವನ್ನು ತಮ್ಮ ವಚನದಲ್ಲಿ ಕೊಡುತ್ತಾರೆ –

ಅತ್ತೆಯ ಸರ್ವಾಧಿಕಾರ ಒಂದೆಡೆಯಾದರೆ
ಸೊಸೆಯ ಒಳ ಪ್ರತೀಕಾರ ಇನ್ನೊಂದೆಡೆಗೆ.
ತಂದೆ ಮಕ್ಕಳ ಮನಸ್ತಾಪ ಒಂದೆಡೆಯಾದರೆ
ನಾದಿನಿ ನೆಗೆಣ್ಣಿಯರ ಮತ್ಸರ ಇನ್ನೊಂದೆಡೆ.
ಮನೆಯೊಳಗೆ ಮುಸುಕಿನಲಿ ಮಸೆದಾಡುವ
ರಕ್ತ ಸಂಬಂದಿಗಳ ತಂಡವೇ
ಕುಟುಂಬವೆಂದ ಕುಮಾರ ಕಕ್ಕಯ್ಯ.[೨೦]

ಸಮಾಜದಲ್ಲಿ ಕುಟುಂಬಗಳು ನಾಶವಾಗುವುದು ಅತ್ತೆ-ಸೊಸೆ-ನಾದಿನಿಯರ ಜಗಳ, ವೈರತ್ವ, ಮತ್ಸರಗಳಿಂದಲೇ ಎಂಬುದನ್ನು ಮನಂಬುಗುವಂತೆ ತಿಳಿಸುತ್ತಾರೆ-

ವೈರಿಗಳಿಂದ ನಾಶವಾದವುಗಳಿಗಿಂತ
ದಾಯಾದಿಗಳಿಂದ ನಾಶವಾದ ರಾಜ್ಯಗಳೇ ಹೆಚ್ಚು.
ಬೇರೆಯವರಿಂದ ಹಾಳಾದವುಗಳಿಗಿಂತ
ಸದಸ್ಯರಿಂದಲೇ ಹಾಳಾದ ಸಂಸ್ಥೆಗಳೇ ಹೆಚ್ಚು.
ಪರರಿಂದ ಮುರಿದವುಗಳಿಗಿಂತ
ಅತ್ತೆ ನಾದಿನಿಯರಿಂದ ಮುರಿದ ಮನೆಗಳೇ
ಹೆಚ್ಚೆಂದ ಕುಮಾರ ಕಕ್ಕಯ್ಯ.[೨೧]

---

೧೯. -ಅದೇ- ಪು-೨೭೬ ವ-೧೧೦೬.
೨೦. ಕುಮಾರ ಕಕ್ಕಯ್ಯನ ವಚನಗಳು – ಪು- ೫೭ ವ-೨೨೧.
೨೧. -ಅದೇ- ಪು-೭ ವ-೨೪.

"ಸಮಾಜವು ಸುಭದ್ರವಾಗಿರಬೇಕಾಗಿದರೆ ಸಾಂಸಾರಿಕ ಜೀವನದ ಸಾಮರಸ್ಯವು ಬಹಳ ಮಹತ್ವದ್ದು. ಅನೇಕ ಜನ ಮಾನಸಿಕ ನೆಮ್ಮದಿಯಿಲ್ಲದೆ, ಸಾಂಸಾರಿಕ ಜೀವನದಲ್ಲಿ ಹೊಂದಾಣಿಕೆಯಿಲ್ಲದೆ ಇರುವುದರಿಂದ ಅವರು ದುಶ್ಚಟಗಳಿಗೆ ಬಲಿಯಾಗಿ ಬದುಕನ್ನು ಹಾಳು ಮಾಡಿಕೊಳ್ಳುತ್ತಾರೆ. ಆದ್ದರಿಂದ ನೈತಿಕ ನೆಲಗಟ್ಟಿನ ಮೇಲೆ ನಿಂತ ಜನ ಸುಂದರ ಸಂಸಾರ ನಡೆಸಲು ಸಾಧ್ಯವೆಂಬುದನ್ನು ಶರಣರು ತೋರಿಸಿಕೊಟ್ಟಿದ್ದಾರೆ. ಸಮಾಜದ ಘಟಕವಾದ ವ್ಯಕ್ತಿಗಳು ಚಾರಿತ್ರ್ಯವಂತರಾಗಿರದಿದ್ದರೆ ಸಾಮಾಜಿಕ ಶೀಲ ಬೆಳೆಯಲಾರದು, ಸಾಮಾಜಿಕ ಸ್ವಾಥ್ಯ ಅದರಿಂದ ಕೆಡುವ ಸಾಧ್ಯತೆಯಿದೆ."[೨೨]

ಸೊಸೆಯ ತಪ್ಪು ಮನೆಯ ಹೊರಗೆ ರಟ್ಟಾದರೆ,
ಮಗಳ ತಪ್ಪು ಮನೆಯ ಒಳಗೇ ಗುಟ್ಟು.
ಪರರ ಅಪರಾಧ ನಾಲಿಗೆಯ ಮೇಲೆ ಛಿದ್ರವಾದರೆ,
ತಮ್ಮ ಅಪರಾಧ ಗಂಟಲೊಳಗೇ ಭದ್ರ.
ನಡೆ ನುಡಿ, ಆಚಾರ ವಿಚಾರ, ಶೀಲ ಚಾರಿತ್ರ್ಯ,
ಬರೀ ಮಾತಾಡುವವರೇ ಹೆಚ್ಚೆಂದ
ಕುಮಾರ ಕಕ್ಕಯ್ಯ[೨೩]

ಇಂದು ಸಮಾಜದಲ್ಲಿ, ಕುಟುಂಬದಲ್ಲಿ ನಡೆ–ನುಡಿಗಳ ಬಗ್ಗೆ, ಆಚಾರ–ವಿಚಾರಗಳ ಬಗ್ಗೆ, ಶೀಲ–ಚಾರಿತ್ರ್ಯಗಳ ಬಗ್ಗೆ ಉಪದೇಶ ಮಾಡುವ ಜನರೇ ಬಹಳ. ಸ್ವತಃ ತಮ್ಮ ಬದುಕನ್ನು ಶುದ್ಧವಾಗಿಟ್ಟುಕೊಂಡು ಜೀವನ ಸಾಗಿಸುವವರೇ ವಿರಳವಾಗಿದ್ದಾರೆ. ಮನೆಯಲ್ಲಿ ತಂದೆ –ತಾಯಿಯರು ತಮ್ಮ ಮಗಳ ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡಂತೆ, ಸೊಸೆಯ ತಪ್ಪುಗಳನ್ನು ಊರ ತುಂಬೆಲ್ಲಾ ರಟ್ಟು ಮಾಡುತ್ತಾರೆ ಇದು ಕುಟುಂಬ ವ್ಯವಸ್ಥೆಯ ದುರಂತವೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ.

**v. ಕುಟುಂಬದಲ್ಲಿ ತಾಯಿಯ ಸ್ಥಾನ :**

ತಾಯಿಯ ಮಾತೃಹೃದಯ ಅಪ್ರತಿಮವಾದುದು. ತಾಯಿಯ ಅಕ್ಕರೆ, ಲಾಲನೆ, ಪಾಲನೆಯಲ್ಲಿ ಬೆಳೆಯುವ ಮಗು, ಬೆಳೆದು ದೊಡ್ಡವನಾದ ಬಳಿಕ ಎಂದೆಂದಿಗೂ ಆ ಋಣವನ್ನು ತೀರಿಸಲು ಸಾಧ್ಯವಿಲ್ಲ. ತಾಯಿಯ ಋಣ ಕುರಿತು ಕುಮಾರ ಕಕ್ಕಯ್ಯ ಹೇಳುತ್ತಾರೆ –

ಸಾಗರಕ್ಕಿಂತಲೂ ಆಳ
ಪರ್ವತಕ್ಕಿಂತಲೂ ಎತ್ತರ
ಭೂಮಿಗಿಂತಲೂ ಮಿಗಿಲು
ಆಕಾಶಕ್ಕಿಂತಲೂ ವಿಶಾಲ

---

೨೨. ಶರಣರ ಆಂದೋಲನ ಹಾಗೂ ಹೊಸ ಸಮಾಜದ ಪರಿಕಲ್ಪನೆ ಡಾ॥ ಎಂ.ಬಿ. ಹೂಗಾರ ಪು–೨೬೫

೨೩. ಕುಮಾರ ಕಕ್ಕಯ್ಯನ ವಚನಗಳು – ಪು–೨೭೭ ವ–೧೦೭೯.

ತಾಯಿಯ ಋಣಕ್ಕೆ ಎಣೆಯೇ
ಇಲ್ಲೆಂದ ಕುಮಾರ ಕಕ್ಕಯ್ಯ.[೨೪]

ಕುಮಾರ ಕಕ್ಕಯ್ಯನವರು ತಾಯಿಯು ಮಕ್ಕಳಿಗೆ ಮಾಡಿದ ಸೇವೆಯನ್ನು ಸ್ಮರಿಸುತ್ತಾ–ಹತ್ತು ಜನ ದಾಯಿಯರು (ನರ್ಸಗಳು) ಮಾಡುವ ಸೇವೆಗಿಂತ ಶ್ರೇಷ್ಠವಾದದ್ದು, ಫಲಾಪೇಕ್ಷೆಯಿಲ್ಲದ್ದು ಎಂದು ತಿಳಿಸುತ್ತಾರೆ–

ಸಕ್ಕರೆ ತುಪ್ಪ ಮೃಷಾನ್ನಕ್ಕಿಂತ
ಅಕ್ಕರೆಯಿಂದ ಕೊಟ್ಟ ಅಂಬಲಿ ಲೇಸು
ರೂಪ ಲಾವಣ್ಯ ಒನಪು ವೈಯಾರಗಿಂತ
ಅಕ್ಕರೆಯಿಂದ ಕೂಡಿದ ಕುರೂಪಿ ಲೇಸು
ಹತ್ತು ಜನ ದಾಯಿಯರಿಗಿಂತ ಒಬ್ಬ
ಅಕ್ಕರೆಯ ತಾಯಿ ಬಹುಲೇಸೆಂದ
ಕುಮಾರ ಕಕ್ಕಯ್ಯ[೨೫]

ಈ ರೀತಿಯಾಗಿ ತಾಯಿ–ತಂದೆ, ಅಣ್ಣಾ–ತಮ್ಮ, ಅಕ್ಕಾ–ತಂಗಿ, ಗುರು–ಹಿರಿಯರು, ಮಡದಿ–ಮಕ್ಕಳು, ಮೊಮ್ಮಕ್ಕಳು, ಬಂಧು–ಬಳಗ ನೆರೆ–ಹೊರೆ ಇರುವ ಕುಂಟುಬ ಜೀವನ ಪದ್ದತಿಯು ಶ್ರೇಷ್ಠವಾದುದು, ಸತ್ಯವಾದುದು. ಇಂತಹ ಸಂಸಾರವನ್ನು ಮಾಯೆ, ಮಿಥ್ಯೆ ಎಂದು ಕರೆಯುವ ಮತಿ ಭ್ರಾಂತರನ್ನು ಕುಮಾರ ಕಕ್ಕಯ್ಯ ನಿಷ್ಠುರವಾಗಿ ಪ್ರಶ್ನಿಸುತ್ತಾರೆ–

ಹೊತ್ತು ಹೆತ್ತು ಬೆಳೆಸಿದ ಮಾತಾ ಪಿತೃಗಳರುವಾಗ
ಅಣ್ಣ–ತಮ್ಮ ಅಕ್ಕ–ತಂಗಿ ಗುರು–ಹಿರಿಯರು ಇರುವಾಗ
ಮಡದಿ–ಮಕ್ಕಳು ಕುಂಟುಬ ಪರಿವಾರ ಇರುವಾಗ
ಬಂಧು–ಬಳಗ ನೆರೆ–ಹೊರೆ ಅಪಾರ ಸಮಾಜ ಇರುವಾಗ
ಎಲ್ಲರಿಗಾಗಿ ನಾನು, ನನ್ನಗಾಗಿ ಎಲ್ಲರೆಂಬುದು
ಬಾಳ ಸೂತ್ರವಾಗಿರುವಾಗ
ಯಾರಿಗೆ ಯಾರಿಲ್ಲ ಎರವಿನ ಸಂಸಾರವೆಂಬುದೇ
ಸಿದ್ಧಾಂತವಾದರ್ರೆ, ಈ ಜನ್ಮ ಈ ವಂಶ ಈ ಸೃಷ್ಠಿ
ಇರುವುದಾದರೂ ಯಾತಕ್ಕಾಗಿ? ಯಾರಿಗಾಗಿ?
ಬಲ್ಲವರು ಪೇಳಿರೆಂದ ಕುಮಾರ ಕಕ್ಕಯ್ಯ.[೨೬]

ಒಟ್ಟಿನಲ್ಲಿ ಕುಮಾರ ಕಕ್ಕಯ್ಯನ ವಚನಗಳಲ್ಲಿ ಕುಂಟುಬ, ಕುಂಟುಬದ ಸದಸ್ಯರು, ಅವರ ಪರಸ್ಪರ ಸಂಬಂಧಗಳು, ಇತ್ಯಾದಿ ವಿಷಯಗಳ ಬಗ್ಗೆ ಜೀವನಾನುಭವದ ದರ್ಶನವನ್ನು ಕಾಣುತ್ತೇವೆ.

---

೨೪. ಕುಮಾರ ಕಕ್ಕಯ್ಯನ ವಚನಗಳು – ಪು–೧೦೦ ವ–೩೮೨
೨೫. –ಅದೇ– ಪು– ೪ ವ–೧೩
೨೬ ಕುಮಾರ ಕಕ್ಕಯ್ಯ ವಚನಗಳು ಪು–೨೬೪ ವ–೧೦೨೦

# ಅಧ್ಯಾಯ – ೪

# ಕುಮಾರ ಕಕ್ಕಯ್ಯನ ವಚನಗಳಲ್ಲಿ ಜಾನಪದ ವಿಚಾರಗಳು

i) ನಾಡು–ನುಡಿ–ಜನಪದರು

ii) ಸೃಷ್ಟಿ–ಪ್ರಕೃತಿ– ಪರಿಸರ

iii) ಕೃಷಿ–ಕೃಷಿಕರು–ಕಸಬುದಾರರು

iv) ಒಗಟುಗಳು

v) ಗಾದೆ ಮಾತುಗಳು

vi) ನೀತಿಯ ಮಾತುಗಳು.

# ಅಧ್ಯಾಯ – ೪

# ಕುಮಾರ ಕಕ್ಕಯ್ಯನ ವಚನಗಳಲ್ಲಿ ಜಾನಪದ ವಿಚಾರಗಳು

**i) ನಾಡು–ನುಡಿ–ಜನಪದರು :**

ಕನ್ನಡ ನಾಡು ಎರಡುಸಾವಿರ ವರುಷಗಳ ಮೇಲ್ಪಟ್ಟು ಇತಿಹಾಸವುಳ್ಳ ಪ್ರದೇಶವಾಗಿದೆ. ಭಾರತದ ಇತಿಹಾಸದಲ್ಲಿ ಕರ್ನಾಟಕವೆಂಬುದು ಅತ್ಯುಜ್ವಲವಾದ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ನಾಡಾಗಿದೆ. ಕರ್ನಾಟಕದ ಹೆಸರು ಮತ್ತು ಪ್ರಾಚೀನತೆಯನ್ನು ಕುರಿತು ಖ್ಯಾತ ಸಂಶೋಧಕ ಡಾ॥ ಎಂ. ಚಿದಾನಂದ ಮೂರ್ತಿಯವರು – "ಕರ್ನಾಟಕ ಎಂಬುದು ಈ ನಾಡಿನ ಹೆಸರನ್ನೂ ಅದರ ತದ್ಭವವಾದ ಕನ್ನಡ ಎಂಬುದು ಈ ನಾಡಿನ ಜನ ಆಡುವ ಭಾಷೆಯನ್ನೂ ಸೂಚಿಸುತ್ತದೆ"[೧] ಎಂದು ಹೇಳುತ್ತಾರೆ.

ಕನ್ನಡ ಮಾತನಾಡುವವರ ನಾಡು ಎಂಬ ಅರ್ಥದಲ್ಲಿ ಇದನ್ನು ಕನ್ನಡ ನಾಡು ಎಂದೂ ಕರ್ನಾಟಕ ಎಂದರೆ ಎತ್ತರದ ನಾಡು ಎಂದೂ, ಕಪ್ಪುಮಣ್ಣಿನ ನಾಡು–ಕರಿಯನಾಡು ಎಂದೂ ಶ್ರೀಗಂಧದ ಕಂಪನ್ನುಳ್ಳ ನಾಡು ಕಮ್ಮಿತ್ತು ನಾಡು ಎಂದೂ ವಿಧವಿಧವಾಗಿ ಅರ್ಥೈಸುತ್ತಾರೆ.

ಕನ್ನಡ ಭಾಷೆಯೂ ಕೂಡ ಭಾರತದ ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ಒಂದಾಗಿದೆ. ಉಪನಿಷತ್ತುಗಳಲ್ಲಿ ಒಂದಾದ ಛಾಂದೋಗ್ಯ ಉಪನಿಷತ್ತಿನಲ್ಲಿ ಕನ್ನಡ ಪದಗಳು, ಕ್ರಿ.ಪೂ. ಮೂರನೇ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ 'ಇಸಿಲ' ಎಂಬ ಅಚ್ಚಗನ್ನಡಪದಗಳು ಉಲ್ಲೇಖಿಸಲ್ಪಟ್ಟಿವೆಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ವ್ಯಾಸರ ಸಂಸ್ಕೃತ ಮಹಾಕಾವ್ಯ 'ಮಹಾಭಾರತ'ದಲ್ಲಿ ಕರ್ಣಾಟ ಎಂಬ ಹೆಸರು ಉಲ್ಲೇಖವಾಗಿದೆ. ತಮಿಳಿನ ಪ್ರಾಚೀನ ಕಾವ್ಯವಾಗಿರುವ 'ಶಿಲಪ್ಪದಿಗಾರಮ್' ದಲ್ಲಿ ಕರುನಾಡರ್ ಎಂಬ ಪದ ಉಲ್ಲೇಖಿತವಾಗಿದೆ.

---

೧. ಸಿರಿಗನ್ನಡ : ಕರ್ನಾಟಕ – ಡಾ॥ ಎಂ. ಚಿದಾನಂದ ಮೂರ್ತಿ ಪು–೨೩೫.

ಕನ್ನಡ ನಾಡಿನ ವಿಶಾಲತೆ ಕುರಿತು ಕವಿರಾಜ ಮಾರ್ಗದಲ್ಲಿ –
ಕಾವೇರಿಯಿಂದ ಮಾ ಗೋ –
ದಾವರಿವರಮಿರ್ದ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು –
ಧಾವಲಯ ವಿಲೀನ ವಿಶದ ವಿಷಯ ವಿಶೇಷಮ್ ॥[೨]

ಎಂದು ಹೇಳಲಾಗಿದೆ. ಅಂದರೆ ಕನ್ನಡ ನಾಡು ಕಾವೇರಿಯಿಂದ ಗೋದಾವರಿ ನದಿಯವರೆಗೆ ವಿಶಾಲವಾಗಿ ಹರಡಿತ್ತು. ಈ ನಾಡಿನ ಜನಪದರು ಹಾಗೂ ಅವರ ಸಂಸ್ಕೃತಿಯು ಈ ಭೂಮಿಯಲ್ಲಿ ವಿಶೇಷವಾದ ಸ್ಥಾನವನ್ನು ಪಡೆದಿತ್ತು. ಇಲ್ಲಿಯ ಜನರು– 'ನಾಡ ವರ್ಗಳ್ ಚದುರರ್ ನಿಜದಿಂ ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಆಗಿದ್ದರೆಂದು ಕವಿರಾಜಮಾರ್ಗಕಾರನು ಹೇಳುತ್ತಾನೆ.

"ಕರ್ನಾಟಕ 'ಕರ್ನಾಟಕ'ವೇ ಆಗುವುದರಲ್ಲಿ ಯಾವ ಮೋಡಿ, ಯಾವ ಗಾರುಡಿ, ಯಾವ ಇಂದ್ರಜಾಲವಿದೆಯೆಂದರೆ – ಕರ್ನಾಟಕ ಎಂದೊಡನೆ, ಒಂದು ಉಜ್ವಲವಾದ, ಗೌರವಶಾಲಿಯಾದ ಪುರಾತನವಾದ, ಅಪರಂಪಾರವಾದ ಸಾಂಸ್ಕೃತಿಕ ಪರಂಪರೆಯ ವಿರಾಟ್ ದೃಶ್ಯದ ಮಹಾದ್ವಾರವೇ ತೆರೆದಂತಾಗುವುದು"[೩]

ಇಂತಹ ಭವ್ಯ ಪರಂಪರೆಯ ನಾಡಿನ ಇತಿಹಾಸದ, ಸಂಸ್ಕೃತಿಯ ಬೇರುಗಳು ಇರುವುದು ಕನ್ನಡದ ಗ್ರಾಮಗಳಲ್ಲಿ, ಅಲ್ಲಿ ವಾಸಿಸಿದ, ವಾಸಿಸುತ್ತಿರುವ ಜನರ ನಡೆನುಡಿಗಳಲ್ಲಿ. ಇದನ್ನೇ ಜನಪದ ಎಂದು ಕರೆಯಲಾಗುತ್ತದೆ. "ಜನಪದ ಎಂದರೆ ನಿರ್ದಿಷ್ಟವಾದ ಪ್ರದೇಶದಲ್ಲಿ ವಾಸಿಸುವ ಜನರ ಗುಂಪು. ಪ್ರದೇಶ, ಭಾಷೆ, ಧರ್ಮ, ಕಸಬು, ಜಾತಿ ಇತ್ಯಾದಿಗಳು ಜನಪದರನ್ನು ಸಮಾನ ನೆಲೆಯಲ್ಲಿ ಒಗ್ಗೂಡಿಸುವ ಅಂಶಗಳು. ಯಾವುದೇ ಸಮಾನ ನೆಲೆಯಲ್ಲಿ ಒಗ್ಗೂಡಿ ಬದುಕುತ್ತಿರುವ ಪ್ರತಿಯೊಂದು ಜನಪದಕ್ಕೂ ತನ್ನದೇ ಆದ ಪರಂಪರೆ ಇರುತ್ತದೆ. ತನ್ನ ಪರಂಪರೆಯ ಹಲವು ಸಂಗತಿಗಳನ್ನು, ಆಚಾರ ವಿಚಾರಗಳನ್ನು ನೆನವು ಮತ್ತು ನಡೆವಳಿಕೆಗಳ ಮುಖೇನ ಜನಪದ ತಲೆಮಾರಿನಿಂದ ತಲೆಮಾರಿಗೆ ಹೊತ್ತು ತರುತ್ತದೆ. ನಂಬಿಕೆ ಅನುಭವ, ಆಸೆ, ಆಕಾಂಕ್ಷೆ, ಉಡುಗೆ ತೊಡುಗೆ, ಕ್ರೀಡೆ,ಕಲೆ, ಸಾಹಿತ್ಯ, ಮನರಂಜನಾ ವಿಧಾನ,ಧಾರ್ಮಿಕ ವಿಧಿನಿಷೇಧ ಪದ್ಧತಿ ಮುಂತಾದ ಜೀವನ ವಿಧಾನಗಳು ಜನಪದ ಪರಂಪರೆಯಲ್ಲಿ ಹರಿದು ಬರುವ ಅಂಶಗಳು. ಈ ಎಲ್ಲ ಅಂಶಗಳನ್ನು ಪೂರ್ಣವಾಗಿ ಒಳಗೊಳ್ಳುವ ಚೌಕಟ್ಟನ್ನು ಜಾನಪದ ಎಂದು ಕರೆಯುತ್ತೇವೆ. ಜನಪದ ಪರಂಪರೆಯ ವಿಶಿಷ್ಟ ಲಕ್ಷಣವೆಂದರೆ ಇದು ಕಂಠಸ್ಥ ಸಂಪ್ರದಾಯಕ್ಕೆ ಸೇರಿರುವುದು ಅಂದರೆ ಬಾಯಿಂದ ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ ಹರಿದುಬರುವಂಥದ್ದು"[೪]

೨. –ಅದೇ– ಪು– ೨೩೯.

೩. ಕರ್ನಾಟಕ :ಕರ್ನಾಟಕ ವಿರಾಟ್‌ಸ್ವರೂಪ ದರ್ಶನ –ಕಲ್ಲೂರ ಕೃಷ್ಣಕುಮಾರ ಪು–೧೧

೪. ಸಿರಿಗನ್ನಡ : ಕರ್ನಾಟಕ ಜನಪದ ಸಂಸ್ಕೃತಿ –ಎಸ್. ಜಿ. ಸಿದ್ಧರಾಮಯ್ಯ ಪು –೨೯೩

ಜಾನಪದ ಸಾಹಿತ್ಯ ಓದು ಬರಹ ಬಾರದ ಜನರ ಬಾಯಿಂದ ಬಾಯಿಗೆ ಹರಿದು ಬಂದ ಜೀವಂತ ಸಾಹಿತ್ಯವಾದುದರಿಂದ ಇದು ಅನುಭವಪೂರ್ಣ, ಸತ್ವಪೂರ್ಣ ಸಾಹಿತ್ಯವಾಗಿದೆ. "ಜನಪದ ಸಾಹಿತ್ಯ ಹುಟ್ಟಿ ಬೆಳೆದು ಬಂದದ್ದು ವಿಶೇಷವಾಗಿ ಹಳ್ಳಿಗಳಲ್ಲಿ, ಅದರಲ್ಲಿಯೂ ಒಕ್ಕಲು ಮಕ್ಕಳಿಂದ. ಶ್ರೀ ಸಾಮಾನ್ಯರು ದಿನನಿತ್ಯದ ಆಡುವ ಭಾಷೆಯಲ್ಲಿ ಹಾಡಿದ ಹಾಡು, ಹೇಳಿದ ಕಥೆ, ಒಡ್ಡಿದ ಒಗಟು ಬಳಸಿದ ಗಾದೆ, ಆಟೋಟಗಳಲ್ಲಿ ಬರುವ ಸುಂದರ ಮಾತುಗಳು ಜಾನಪದ ಸಾಹಿತ್ಯವೆನಿಸಿವೆ".[೫] ಗ್ರಾಮೀಣ ಜನರ ಆಡು-ನುಡಿಯ ಕಣಜವೆನಿಸಿರುವ ಜಾನಪದ ಸಾಹಿತ್ಯವು ಅನಂತ ಜೀವನಾನುಭವಗಳ ರಾಶಿಯಾಗಿದೆ. ಇದು ಓದು ಬರಹಬಲ್ಲ ಪಂಡಿತ, ವಿದ್ವಾನ್,ಶಾಸ್ತ್ರಿಗಳಿಂದ ರಚಿತವಾದುದಲ್ಲ. ಓದು-ಬರಹ ಬಾರದ ಜನ ತಮ್ಮ ತಮ್ಮ ಕಾಯಕಗಳ ಸಂದರ್ಭದಲ್ಲಿಯೇ ಶ್ರಮ ಪರಿಹಾರಕ್ಕಾಗಿ, ಬೇಸರ ಕಳೆದುಕೊಳ್ಳಲು, ಸುಖ-ದು:ಖ ಹೊರಹಾಕಿ ಮನ ಹಗುರಮಾಡಿಕೊಳ್ಳಲು, ತಮ್ಮ ಚಾತುರ್ಯ ತೋರಿಸಲು, ಭಾವನೆಗಳಿಗೆ ಆಡುಮಾತಿನ, ಹಾಡಿನ ಮೂಲಕ ಹೊರ ಹೊಮ್ಮಿಸಿದ ನುಡಿಗಡಣವೇ ಜಾನಪದ ಸಾಹಿತ್ಯವಾಗಿದೆ. ಅಂತೆಯೇ "ಇದು ಜೀವಂತ ಸಾಹಿತ್ಯ. ಜನ ಸಾಮಾನ್ಯರ ಬಳಕೆಯ ಮಾತುಗಳಲ್ಲಿಯೇ ಸೊಗಸಾದ ರೀತಿಯಲ್ಲಿ ನಿರ್ಮಿತವಾದ ಈ ಸಾಹಿತ್ಯ ನೇರವಾಗಿ ಜನರ ಮನಸ್ಸನ್ನು ತಟ್ಟುತ್ತದೆ. ಅವರ ಭಾವನೆಗಳಿಗೆ ಸ್ಪಂದಿಸುತ್ತದೆ. ಅಂತೆಯೇ ಇದು ಎಂದೂ ಬತ್ತದ ಹೊಳೆಯಾಗಿದೆ"[೬]

ಜಾನಪದ ಅಂದರೆ ಇಂಗ್ಲೀಷನಲ್ಲಿ Folk-lore ಎನ್ನುತ್ತಾರೆ.Folk ಇದು ಜರ್ಮನ್ ಶಬ್ದ. ಇದು Volk ದಿಂದ ಬಂದಿದೆ. ಕೆ.ಡಬ್ಲ್ಯು. ಕ್ಲಾರ್ಕ ಮತ್ತು ಎಂ.ಡ್ಲೂ ಕ್ಲಾರ್ಕ ಪ್ರಕಾರ Folk ಅಂದರೆ ಜನರು,Lore ಅಂದರೆ ಜ್ಞಾನ, ಬುದ್ಧಿವಂತಿಕೆ, ಕ್ರಿಯೆ (knowledge, wisdom, Action)[೭] ಎಂದು ಅರ್ಥವಿದೆ.

"ಜನಪದ ಜೀವನದ ಸಮಷ್ಟಿ ಅಭಿವ್ಯಕ್ತಿಯೇ ಜಾನಪದ, ಜಾನಪದದ ಉಗಮಸ್ಥಾನ ಜನಪದ.ಈ ಕಾರಣದಿಂದಾಗಿ ಜಾನಪದವನ್ನು ಕೇವಲ ಸಂಪ್ರದಾಯವೆಂದು ಪರಿಗಣಿಸುವುದಕ್ಕಿಂತ ಹೆಚ್ಚಾಗಿ ಅದೊಂದು ಜನಪದದ ಸಮಷ್ಟಿ ಕ್ರಿಯೆ ಎಂದು ತಿಳಿದುಕೊಳ್ಳುವುದು ಹೆಚ್ಚು ವೈಜ್ಞಾನಿಕ"[೮]ವೆಂದು ಡಾ॥ವಿಲ್ಯಂಮಾಡ್ತ ಅಭಿಪ್ರಾಯ ಪಡುತ್ತಾರೆ.

---

೫. ಹೊನ್ನು ತೂಗಿದ ನೆಲ : ಜಾನಪದ ಸಾಹಿತ್ಯದಲ್ಲಿ ಹೆಣ್ಣಿನಪಾತ್ರ ಚಿತ್ರಣ-ಶ್ರೀಮತಿ ನೀಲಮ್ಮ ಕತ್ನಳ್ಳಿ ಪು -೩೫

೬. ಹೊನ್ನತೂಗಿದ ನೆಲೆ : ಜಾನಪದ ಸಾಹಿತ್ಯ ಬೆಳೆದು ಬಂದ ಬಗೆ -ಶಂ. ಗು. ಬಿರಾದಾರ ಪು -೩೯

೭. ಭಕ್ತಿಪಂಥದಲ್ಲಿ ಸಮಾಜಕಾರ್ಯದ ಬೇರುಗಳು: ಜಾನಪದ-ಎಸ್.ಎಫ್.ಪೂಜಾರ ಪು-೮೫

೮. ಜಾನಪದ ಅಧ್ಯಯನ ವಿಚಾರ ಸಂಕಿರಣ: ಜಾನಪದ ವಿಜ್ಞಾನ- ಡಾ॥ ವಿಲ್ಯಂ ಮಾಡ್ತ ಪು-೮೧-೮೨

ಒಟ್ಟಿನಲ್ಲಿ "ನಿತ್ಯದ ಪ್ರಪಂಚವು ಇದ್ದಕ್ಕಿದ್ದಂತೆ ಒಡಮೂಡಿದ್ದು ಜಾನಪದ ಸಾಹಿತ್ಯದಲ್ಲಿ.ಇದಕ್ಕೆ ವೇಷಭೂಷಣಗಳಿಲ್ಲ, ಲಕ್ಷಣಗಳ ಕಟ್ಟುನಿಟ್ಟುಗಳಿಲ್ಲ. ಓದುಬರಹವನ್ನರಿಯದ ಹಳ್ಳಿಗರ ಲಹರಿಯ ಝರಿಯಲ್ಲಿ ಕನ್ನಡವೇ ತನ್ಮಯವಾಗಿ ಒಂದೆ ಸವನೆ ಧಾರಾಳವಾಗಿ ಪ್ರವಹಿಸುತ್ತಾ ಬಂದಿದೆ. ಕನ್ನಡ ಮನೆ ಮಾತುಗಳು ಜಿನುಗಾಗಿ ಪೋಣಿಸಲ್ಪಟ್ಟು ರಾಗವನ್ನೊಳಗೊಂಡು ಕಿವಿಗೆ ಅತಿ ಇಂಪಾಗಿ ಕೇಳಿ ಬರುವವು."[೯] ಎಂದು ಡಾ॥ ಬಿ.ಎಸ್.ಗದ್ದಗಿಮಠ ಅವರ ಅಭಿಪ್ರಾಯವು ಜಾನಪದ ಸಾಹಿತ್ಯದ ಸ್ವರೂಪದರ್ಶನ ಮಾಡಿಸುತ್ತದೆ. ಜಾನಪದ ಸಾಹಿತ್ಯದ ಬಳಿವಿಡಿದು, ಕಾಯಕಜೀವಿಗಳಾದ ಬಸವಾದಿ ಶರಣರಿಂದ ಮೂಡಿ ಬಂದ ವಚನಗಳೂ ಸಹ ಆಡು–ನುಡಿಯ, ಅಚ್ಚಗನ್ನಡದ ಅನುಭಾವ ಸಂಪತ್ತಾಗಿವೆ. ಅಂದಿನ ಕಾಲದಲ್ಲಿ ಸಂಸ್ಕೃತಭಾಷೆಯು ವಿದ್ವಜ್ಜನರ, ಪಂಡಿತರ ಭಾಷೆಯಾಗಿ, ದೇವಭಾಷೆಯೆಂದು ಕರೆಯಿಸಿಕೊಂಡು ಜನಸಾಮಾನ್ಯರ ಬಳಿಗೆ ಸುಳಿಯದೇ ಹೋದಾಗ, ಜನಪದರ ಆಡುನುಡಿಯಾಗಿದ್ದ ಕನ್ನಡವನ್ನೇ ವಚನರಚನೆಗೆ ಬಳಸಿ, ಅದಕ್ಕೆ ದೇವತ್ವ ತಂದುಕೊಟ್ಟವರು ವಚನಕಾರರು. ಅಂತೆಯೇ ಆಧುನಿಕ ಯುಗದಲ್ಲಿ, ರಾಷ್ಟ್ರಕವಿ ಕುವೆಂಪು ಅವರಿಗೆ ಕರ್ನಾಟಕ, ಕನ್ನಡ ಎಂಬುದು–

ಮಂತ್ರಕಣಾ ! ಶಕ್ತಿ ಕಣಾ!
ತಾಯಿ ಕಣಾ ! ದೇವಿ ಕಣಾ!
ಬೆಂಕಿ ಕಣಾ ! ಸಿಡಿಲು ಕಣಾ![೧೦]

ಎಂದು ನುಡಿದಿರುವುದು ಗಮನಾರ್ಹವಾಗಿದೆ. ೧೨ ನೇ ಶತಮಾನದಲ್ಲಿ ಬಸವಾದಿ ಶರಣರು 'ಕನ್ನಡ' ಭಾಷೆಯನ್ನು ಸಶಕ್ತವಾಗಿ ಬಳಸಿಕೊಂಡು, ಜನಮಾನಸವನ್ನು ಅಜ್ಞಾನದಿಂದ ಸುಜ್ಞಾನಕ್ಕೆ, ನಿರಕ್ಷರತೆಯಿಂದ ಸಾಕ್ಷರತೆಗೆ ಮುನ್ನಡೆಸಿದರು. ಒಂದು ಅರ್ಥದಲ್ಲಿ ಕನ್ನಡ ನಾಡು–ನುಡಿಯನ್ನು ಸ್ವತಂತ್ರವಾಗಿ ಬೆಳೆಸಿದರು. "ಈ ಸಾಹಿತ್ಯದ ಸೃಷ್ಟಿಯಾದದ್ದು ಒಂದು ವಿಸ್ಮಯ. ಅದು ದಂದಣ–ದತ್ತಣ ವೆಂಬಂತಹುದಾಗಿ ಮಾತಿಲ್ಲದವರಿಗೆ ಮಾತುಕೊಟ್ಟದ್ದು."[೧೧] ಎಂದು ಜಾನಪದ ವಿದ್ವಾಂಸರಾದ ಹೆಚ್. ವಿ. ವೀರಭದ್ರಯ್ಯನವರು ಹೇಳುತ್ತಾರೆ. ದಲಿತ ಸಾಹಿತಿ, ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರು ಜಾನಪದ ಹಿನ್ನೆಲೆಯಿಂದಲೇ ಬಂದು ವಚನ ರಚನೆ ಮಾಡಿದರು. ಅಂತೆಯೇ ಅವರ ವಚನಗಳಲ್ಲಿ ಕನ್ನಡ ನುಡಿಯ ಬಗ್ಗೆ ಅಪಾರ ಅಭಿಮಾನ ಕಾಣುತ್ತೇವೆ.

ಸಿರಿಯು ಕನ್ನಡ, ಸೊಬಗು ಕನ್ನಡ
ಸಾಕ್ಷ್ಯ ಕನ್ನಡ, ಮೋಕ್ಷ ಕನ್ನಡ

---

೯. ಕನ್ನಡ ಜಾನಪದ ಗೀತಗಳು–ಡಾ॥ ಬಿ.ಎಸ್.ಗದ್ದಗಿಮಠ ಪು–೮
೧೦. ಸಿರಿಗನ್ನಡ: ಸಂಕ್ಷೇಪದಲ್ಲಿ ಕರ್ನಾಟಕ ಸಂಸ್ಕೃತಿ–ಎಂ.ಚಿದಾನಂದಮೂರ್ತಿ ಪು–೨೮೮
೧೧. ಶರಣ ತತ್ವಚಿಂತನ: ಶರಣಸಾಹಿತ್ಯದಲ್ಲಿ ಜಾನಪದ– ಹೆಚ್.ವಿ. ವೀರಭದ್ರಯ್ಯ ಪು–೧೮೨

ಕೆಚ್ಚು ಕನ್ನಡ, ವಜ್ರ ಕನ್ನಡ
ಸುಂದರ ಕನ್ನಡ, ಸಂಪೂರ್ಣ ಕನ್ನಡ
ಕನ್ನಡ ನುಡಿ ಎಲ್ಲದರಲ್ಲಿಯೂ
ಪರಿಪೂರ್ಣವೆಂದ ಕುಮಾರ ಕಕ್ಕಯ್ಯ.[೧೨]

ಕನ್ನಡ ಭಾಷೆಯು ದ್ರಾವಿಡ ಭಾಷಾ ಪರಿವಾರದ ಪ್ರಮುಖ ಭಾಷೆಗಳಲ್ಲೊಂದಾಗಿದ್ದು, ಅದು ಪರಿಪೂರ್ಣ ಭಾಷಾ ಲಕ್ಷಣಗಳನ್ನೊಳಗೊಂಡಿದೆ. ಸಂಸ್ಕೃತವು ಶಬ್ದಗಳನ್ನು ಅರ್ಥೈಸುವ ಭಾಷೆಯಾಗಿದ್ದರೆ, ಕನ್ನಡವು ಅನುಭಾವದ ಭಾಷೆಯಾಗಿದೆ. ಇದು ಪಂಡಿತ-ಪುರೋಹಿತರಿಂದ ಶೂದ್ರಭಾಷೆಯೆಂದು ಅವಹೇಳನಕ್ಕೆ ಒಳಗಾದ ಕಾಲವೊಂದಿತ್ತು. ಗ್ರಾಮ್ಯ ಶಬ್ದಗಳ, ಆಡು ಮಾತುಗಳ ನುಡಿಯೆಂದು ಹಿಯಾಳಿಸಲ್ಪಡುತ್ತಿತ್ತು. ಅಂತೆಯೇ ಕುಮಾರ ಕಕ್ಕಯ್ಯನವರು ಅಂಥವರನ್ನು ಕುರಿತು ನಿಷ್ಠುರವಾಗಿ ನುಡಿಯುತ್ತಾರೆ–

ತಾಯಿ ಮಗುವಿನ ಕರುಳಿನ ಭಾಷೆ
ಹೆಣ್ಣು ಗಂಡಿನ ಪ್ರೇಮದ ಭಾಷೆ
ಬಡವ ಬಲ್ಲಿದರ ಹೃದಯದ ಭಾಷೆ
ಸಮಸ್ತ ಜೀವರಾಶಿಯ ಜೀವಾಳದ ಭಾಷೆ
ಹೀಗಿರುವಾಗ ಮಿಕ್ಕಬಾಷೆಗಳಿಗಾಗಿ
ಬಡಿದಾಡುವವರು ಭಾಷಾಂಧರೆಂದ
ಕುಮಾರ ಕಕ್ಕಯ್ಯ[೧೩]

ಕನ್ನಡವು ತಾಯಿ-ಮಗುವಿನ ಕರುಳಿನ ಭಾಷೆ. ಅದು ತಾಯಿಯ ಎದೆ ಹಾಲಿನೊಂದಿಗೆ ಮಕ್ಕಳಿಗೆ ಬಂದ ಭಾಷೆ; ಇದೇ ಭಾಷೆಯು ಹೆಣ್ಣು ಗಂಡುಗಳಿಗೆ ಮಧುರ ಭಾವನೆ ಹಂಚಿಕೊಳ್ಳುವ ಪ್ರೇಮದ ಭಾಷೆಯಾಗಿದೆ. ಇದೇ ಭಾಷೆಯು ಬಡವ-ಬಲ್ಲಿದರೆಂಬ ಭೇದಭಾವವಿಲ್ಲದ ಎಲ್ಲರ ಹೃದಯದ ಭಾಷೆಯಾಗಿದೆ. ಈ ನಾಡಿನ ಸಮಸ್ತ ಜೀವಿಗಳ ಜೀವಾಳದ ಭಾಷೆಯಾಗಿದೆ. ಇದನ್ನು ಮರೆತು ಪರಭಾಷೆಯ ಮೋಹಕ್ಕೆ ಒಳಗಾಗುವವರನ್ನು ಖಂಡಿಸಿ, ಅದು ಪ್ರತ್ಯಕ್ಷ ಗುಲಾಮಗಿರಿ ಎಂದು ಎಚ್ಚರಿಸುತ್ತಾರೆ ಕುಮಾರ ಕಕ್ಕಯ್ಯ–

ಸಮಸ್ತ ಪ್ರಾಣಿ ಕೋಟಿಯಲ್ಲಿ
ಭಾಷೆಯಿಂದಲೇ ಮಾನವನ ಶ್ರೇಷ್ಠತೆ.
ಯಾರಿಗೆ ಅವರದೇ ಆದ
ಭಾಷೆ ಇಲ್ಲವೋ ಅವರು ಇದ್ದೂ ಸತ್ತಂತೆ.
ಆಡಳಿತದಲ್ಲಿ ಪರಭಾಷೆ

---

೧೨. ಕುಮಾರ ಕಕ್ಕಯ್ಯನ ವಚನಗಳು–ಪು–೪೩ ವ–೧೬೪
೧೩. –ಅದೇ– ಪು–೨೨೪ ವ–೮೬೩

ಪ್ರತ್ಯಕ್ಷ ಗುಲಾಮಗಿರಿಯೆಂದ
ಕುಮಾರ ಕಕ್ಕಯ್ಯ[೧೪]

ನಮ್ಮ ನಾಡಿನಲ್ಲಿ ನಮ್ಮ ಭಾಷೆಯೇ ಆಡಳಿತಭಾಷೆಯಾಗಬೇಕು. ನಮ್ಮ ಗ್ರಾಮೀಣ ಜನರು ಈ ಆಡಳಿತದ ಒಳಹೊರಗನ್ನು ತಿಳಿದುಕೊಳ್ಳುವಂತಾಗಬೇಕಾದರೆ ಕನ್ನಡವೇ ಮಾಧ್ಯಮವಾಗಬೇಕು. ಇಂದು ಎಷ್ಟೋ ಜನ ಮೇಲಾಧಿಕಾರಿಗಳು ಕನ್ನಡ ಮರೆತು ಇಂಗ್ಲೀಷಿನಲ್ಲಿಯೇ ವ್ಯವಹರಿಸುವುದು ಸಾಮಾನ್ಯ ಜನರಿಗೆ ತಿಳಿಯುವುದೇ ಇಲ್ಲ. ಇಂತಹ ಅಧಿಕಾರಿಗಳಿಗಿಂತ ಅವರ ಕಚೇರಿಗಳಲ್ಲಿರುವ ಚಪರಾಸಿ–ಸಿಪಾಯಿಗಳೆ ಲೇಸು ಎಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ–

ಹಿಂಡದ ಆಕಳಿಗಿಂತ
ಹಿಂಡುವ ಕುರಿ ಲೇಸು
ಎಳೆಯದ ಎತ್ತಿಗಿಂತ
ಹೊರುವ ಕತ್ತೆ ಲೇಸು
ಭಾಷೆ ಬಾರದ ಅಧಿಕಾರಿಗಿಂತ
ಭಾಷೆಬಲ್ಲ ಚಪರಾಸಿ
ಬಲು ಲೇಸೆಂದ ಕುಮಾರ ಕಕ್ಕಯ್ಯ.[೧೫]

ದೇಶಕ್ಕೆ ಸ್ವಾತಂತ್ರ್ಯ ಬಂದು ೬೩ ವರುಷಗಳು ಗತಿಸುತ್ತ ಬಂದರೂ ಇನ್ನೂ ನಮ್ಮ ನಾಡಿನ ಜನರು ಶೋಷಣೆಯಿಂದ ಮುಕ್ತರಾಗಿಲ್ಲ. ಜನಪದರ ಬದುಕು ಸುಖ–ಶಾಂತಿ–ನೆಮ್ಮದಿಯಿಂದ ಕೂಡಿಲ್ಲ. ಗ್ರಾಮೀಣ ಶ್ರಮಿಕರು ಇಂದಿಗೂ ತುತ್ತು ಅನ್ನಕ್ಕಾಗಿ ಪರದಾಡಬೇಕಾಗಿದೆ. ರಾಜಕೀಯ ನೇತಾರರು,ಆಡಳಿತ'ರಂಗದ ಅಧಿಕಾರಶಾಹಿಗಳು, ಧಾರ್ಮಿಕ ರಂಗದ ಪೂಜಾರಿ–ಪುರೋಹಿತರು ಇಂದಿಗೂ ಕೂಡ ಜನರ ಶೋಷಣೆಯಲ್ಲಿ ನಿರತರಾಗಿದ್ದಾರೆ. ಹೀಗಿರುವಾಗ ನಾಡಿನ ಉದ್ಧಾರ ಸಾಧ್ಯವಿಲ್ಲ. ಅಂತೆಯೇ ಕುಮಾರ ಕಕ್ಕಯ್ಯನವರು ತಮ್ಮ ವಚನದಲ್ಲಿ ಈ ಕುರಿತು ಎಚ್ಚರಿಸುತ್ತಾರೆ–

ದುಡಿಯದೇ ಮಾಡುವವರ ಗಳಿಕೆ
ಮಾಡದೇ ಪಡೆಯುವವರ ಲಾಭ
ದುಡಿಯದೇಹೇಳುವವರ ಕೆಲಸ
ಮಾಡದೇ ಭೋಗಿಸುವವರ ಆಸ್ತಿ
ಶ್ರಮಿಕರ ಶೋಷಣೆಯಷ್ಟೇ ಅಲ್ಲ
ನಾಡಿಗೇ ಕೇಡೆಂದ ಕುಮಾರ ಕಕ್ಕಯ್ಯ[೧೬]

---

೧೪. –ಅದೇ– ಪು–೧೫೮ ವ–೬೧೧
೧೫ .ಕುಮಾರ ಕಕ್ಕಯ್ಯನ ವಚನಗಳು – ಪು– ೨೨೪ ವ ೮೬೪
೧೬ .–ಅದೇ– ಪು–೧೪೪ ವ – ೫೫೩

**ii) ಸೃಷ್ಟಿ– ಪ್ರಕೃತಿ–ಪರಿಸರ :**

ಮಾನವ ಪ್ರಕೃತಿಯ ಕೂಸು, ಈ ಪ್ರಕೃತಿ, ಈ ನಿಸರ್ಗ ಇಂದು–ನಿನ್ನೆಯದಲ್ಲ. ಸಹಸ್ರಾರು ಕೋಟಿ ವರುಷಗಳ ಹಿಂದೆ, ಅದಕ್ಕಿಂತ ಹಿಂದೆ, ಮಾನವನ ಊಹೆಗೂ ನಿಲುಕದಷ್ಟು ಹಿಂದೆ ಸೃಷ್ಟಿಯಾಯಿತು. ಹೇಗೆ ಸೃಷ್ಟಿಯಾಯಿತು? ಯಾಕೆ ಸೃಷ್ಟಿಯಾಯಿತು? ಯಾರಿಂದ ಸೃಷ್ಟಿಯಾಯಿತು? ಇದಕ್ಕೆ ಸ್ಪಷ್ಟ ಉತ್ತರವಿಲ್ಲ, ಇದು ರಹಸ್ಯ. ಇಂತಹ ನಿಗೂಢವಾಗಿರುವ ಪ್ರಕೃತಿಯ ರಹಸ್ಯವನ್ನು ಭೇದಿಸಲು ಮಾನವ ನಿರಂತರ ಪ್ರಯತ್ನಿಸುತ್ತಲೇ ಬಂದಿದ್ದಾನೆ, ಆದಾಗ್ಯೂ ಪ್ರಕೃತಿ ಸಂಪೂರ್ಣವಾಗಿ ತನ್ನ ರಹಸ್ಯ ತೋರಿಸಿಲ್ಲ. ಮಾನವ ಮಾತ್ರ ತನ್ನ ಪ್ರಯತ್ನಬಿಟ್ಟಿಲ್ಲ.

"ವಿಚಾರಿಸಿದಷ್ಟೂ ವಿಚಿತ್ರವೆನಿಸುವ ಲೀಲಾಮಯವಾದ ಜಗತ್ತು. ನೀಲಗಗನದಲ್ಲಿ ಥಳ ಥಳಿಸಿ ಬೆಳಗುವ ಸೂರ್ಯ ಚಂದ್ರರು, ನಭೋಮಂಡಲದಲ್ಲಿ ಮಿನು ಮಿನುಗಿ ಮಾಯವಾಗುವ ನಕ್ಷತ್ರ ಸಾಗರ, ಪ್ರಕೃತಿ ದರಿ ಕಮದರಗಳ ಮೋಹಕ ನೋಟ. ಹೊಳೆ ಹಳ್ಳ ಸರೋವರಗಳ ರಮ್ಯ ಸಿರಿ, ಕಿಲಿ ಕಿಲಿ ಧ್ವನಿಗೈಯುವ ಸುಂದರ ಪಕ್ಷಿಗಳ ಇಂಪು, ಗರ್ಜಿಸುವ ಸಿಂಹ, ಹುಲಿ, ಕಾಡು ಮೃಗಗಳ ಅರ್ಭಟ, ಪ್ರಕೃತಿಯ ಮಡಿಲಲ್ಲಿ ಹಾಯಾಗಿ ನಲಿಯುವ ಸಾವಿರಾರು ಜೀವರಾಶಿಗಳು. ಎಷ್ಟೊಂದು ತರಹದ ಕ್ರಿಮಿಗಳು! ಅದೆಷ್ಟು ತರಹದ ಪಶು ಪಕ್ಷಿಗಳು! ಒಂದೊಂದರ ಇರುವಿಕೆ ಒಂದೊಂದು ವಿಚಿತ್ರ. ಒಂದು ಪಾತಾಳದಲ್ಲಿದ್ದರೆ ಇನ್ನೊಂದು ಗಗನದಲ್ಲಿ. ಒಂದು ಪರ್ವತ ಶಿಖರದಲ್ಲಿದ್ದರೆ ಇನ್ನೊಂದು ಸಮುದ್ರದ ತಳದಲ್ಲಿ. ಒಂದರಂತೆ ಮತ್ತೊಂದಿಲ್ಲ. ಅದೆಷ್ಟೋ ಕೋಟಿ ಮನುಷ್ಯರಲ್ಲಿ ಒಬ್ಬರಂತೆ ಮತ್ತೊಬ್ಬರಿಲ್ಲ. ಪ್ರಕೃತಿಯ ನಿರ್ಮಾಣ ಕಾರಖಾನೆಯಲ್ಲಿ ಅದೆಷ್ಟು ತರಹದ ಪಡಿಯಚ್ಚುಗಳಿರಬಹುದು? ಎಂತಹ ಸೂಕ್ಷ್ಮ ನಿರ್ಮಾಣ! ಎಷ್ಟು ಅಗಾಧ!! ಅದೆಷ್ಟು ಅದ್ಭುತ!!![೧೭] ಎಂದು ಕುಮಾರ ಕಕ್ಕಯ್ಯ ಆಶ್ಚರ್ಯಚಕಿತರಾಗುತ್ತಾರೆ.

ಪೃಥ್ವಿಯ ಆಯುಷ್ಯ ನಾಲ್ಕುನೂರಾ ಐವತ್ತೈದು ಕೋಟಿ
ಪೃಥ್ವಿಯಿಂದ ಸೂರ್ಯನ ದೂರ ಹತ್ತು ಸಹಸ್ರ ಕೋಟಿ
ಪೃಥ್ವಿಗಿಂತ ಸೂರ್ಯ ದೊಡ್ಡವನು ನೂರು ಕೋಟಿ
ನಕ್ಷತ್ರಗಳು ಸೂರ್ಯನಿಗಿಂತ ದೊಡ್ಡವು ಸಾವಿರಕೋಟಿ
ಆಕಾಶ ಗಂಗೆಯಲಿ ನಮ್ಮಂಥ ಪೃಥ್ವಿಗಳು ಸಾವಿರಕೋಟಿ
ಗ್ರಹ ತಾರೆ ಸೂರ್ಯ ನಕ್ಷತ್ರಗಳು ಕೋಟಿ ಕೋಟಿ
ಅದ್ಭುತ ಅಗಣಿತ ಅಪ್ರತಿಮ ವಿಶ್ವದ ರಹಸ್ಯ
ಚಿಂತಿಸಿದಾಗ ನಾನೆನ್ನುವ ಮಾನವ ಜೀವನ
ಯಾವಗಿಡದ ತೊಪ್ಪಲೆಂದ ಕುಮಾರ ಕಕ್ಕಯ್ಯ.[೧೮]

---

೧೭. ಧರ್ಮಕ್ರಾಂತಿ– ಶ್ರೀ ಭೀಮರಾವ ಎಸ್. ಪೋಳ ಪು–೧
೧೮. ಕುಮಾರ ಕಕ್ಕಯ್ಯನ ವಚನಗಳು – ಪು–೨೬೫ ವ–೧೦೨೩

ಇಂತಹ ಅದ್ಭುತವಾದ ಸೃಷ್ಟಿಯ ನಿರ್ಮಾಣದ ಬುನಾದಿ ಂಗಿಯಾವುದಿರಬಹುದು? ಎಂದು ಅನುಭಾವಿ ಶರಣ, ಕುಮಾರ ಕಕ್ಕಯ್ಯ ಚಿಂತನೆ ಮಾಡಿ, ತಮ್ಮ ವಚನದಲ್ಲಿ ತಿಳಿಸುತ್ತಾರೆ –

> ಸೂರ್ಯ ಗಂಡು, ಪ್ರಕೃತಿ ಹೆಣ್ಣು.
> ಚಂದ್ರ ಗಂಡು, ಸಾಗರ ಹೆಣ್ಣು
> ಗಾಳಿ ಗಂಡು, ಅಗ್ನಿ ಹೆಣ್ಣು.
> ಮಳೆ ಗಂಡು, ಭೂಮಿ ಹೆಣ್ಣು
> ಇಂತು ಶಿವ ಶಕ್ತಿಯರ ಸಮರಸವೇ
> ಸೃಷ್ಟಿಗೆ ಬುನಾದಿಯೆಂದ
> ಕುಮಾರ ಕಕ್ಕಯ್ಯ.[೧೯]

ಈ ವಿಶ್ವದ ರಚನೆಯ ಪೂರ್ವದಲ್ಲಿ ಒಂದು ಅಗಮ್ಯ, ಅಗೋಚರ, ಅಪ್ರತಿಮವಾದ ಪರಮಚೇತನ ಇದ್ದಿರಲೇ ಬೇಕು. ಅದು ತನ್ನ ಸ್ವ ಇಚ್ಛೆಯಿಂದ ಲೀಲಾವಿನೋದದಿಂದ 'ಒಂದು ಎರಡಾಗಿ' ಅಂದರೆ ಶಿವ ಮತ್ತು ಶಕ್ತಿ (ಗಂಡು–ಹೆಣ್ಣು) ತತ್ವಗಳಲ್ಲಿ ವಿಭಜನೆಗೊಂಡು, ಮಿಲನವಾಗಿ ಈ ಅದ್ಭುತವಾದ ಸೃಷ್ಟಿಗೆ ಬುನಾದಿಯಾಗಿರಬಹುದೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ.

> ಗೋಧಿ ಕಡಲೆ ಬೆಲ್ಲ ಕೂಡಿ ಹೋಳಿಗೆಯಾಗುವಂತೆ
> ಹಾಲು ಹಣ್ಣು ಸಕ್ಕರೆ ತುಪ್ಪ ಕೂಡಿ ಕ್ಷೀರವಾಗುವಂತೆ
> ಗಡ್ಡೆ ಗೆಣಸು ಗಿಡಮೂಲಿಕೆಗಳು ಕೂಡಿ ಔಷಧಿಯಾಗುವಂತೆ
> ಹಳೆ ಬೆಲ್ಲ ಕೊಳೆ ಹಣ್ಣು ಕೂಡಿ ಮಾದಕವಾಗುವಂತೆ
> ಭೂಮಿ ಆಕಾಶ ಅಗ್ನಿವಾಯು ನೀರು ಪಂಚಭೂತಗಳು ಕೂಡಿ
> ಜೀವರಾಸಿಯ ಸೃಷ್ಟಿಗೆ ಆದಿಯಾಯಿತೆಂದ ಕುಮಾರ ಕಕ್ಕಯ್ಯ.[೨೦]

ಪರಶಿವ–ಪರಾಶಕ್ತಿಯರೆಂಬ ಎರಡು ತತ್ವಂಗಳ ವಿಘಟನೆ–ಸಂಘಟನೆಯಿಂದ ಪಂಚಮಹಾಭೂತಂಗಳ ಉತ್ಪತ್ತಿ (ಸೃಷ್ಟಿಯ ರಚನೆ) ಯಾಯಿತೆಂದು ತಿಳಿಸಿ, ಅನಂತರ ಈ ಪಂಚಮಹಾಭೂತಂಗಳ ಪಂಚೀಕರಣದ ಹಂಚಿಕೆಯಿಂದ ೨೫ ತತ್ವಂಗಳು ಅವಿರ್ಭವಿಸಿದವು. ಆಕಾಶತತ್ವದಿಂದ ವಾಯುತತ್ವ, ವಾಯುತತ್ವದಿಂದ ಅಗ್ನಿತತ್ವ, ಅಗ್ನಿತತ್ವದಿಂದ ಜಲತತ್ವ, ಜಲತತ್ವದಿಂದ ಪೃಥ್ವಿ ರೂಪುತಾಳಿತು. ಈ ಪೃಥ್ವಿಯ ಮೇಲೆ ಪಂಚಮಹಾಭೂತಂಗಳ ಸತ್ವದಿಂದ ಶಿವ–ಶಕ್ತಿ ದಿಟ–ಸಂಪುಟವಾಗಿ ಅನಂತ ಜೀವರಾಶಿಗಳ ಉದಯಕ್ಕೆ ಪ್ರಾರಂಭವಾಯಿತು.

ಈ ಜೀವರಾಸಿಗಳಲ್ಲಿ ಸಸ್ಯಪ್ರಪಂಚ, ಅನಂತರ ಪ್ರಾಣಿ ಪ್ರಪಂಚ ಉದಿಸಿದವು. ಪ್ರಾಣಿಪ್ರಪಂಚದ ಅದ್ಭುತ ಪ್ರಾಣಿಯೇ 'ಮಾನವ'. ಈ ಮಾನವ ತನ್ನ ಬುದ್ಧಿಶಕ್ತಿಯು

೧೯. -ಅದೇ- ಪು-೩೦೨ ವ-೧೧೬೬

೨೦. ಕುಮಾರ ಕಕ್ಕಯ್ಯನ ವಚನಗಳು – ಪು-೩೩೯ ವ-೧೩೧೨.

ವಿಕಾಸವಾದಂತೆಲ್ಲಾ ಸೃಷ್ಟಿಯ ರಹಸ್ಯದ ಬಗ್ಗೆ ಕ್ರಿಯಾಶೀಲನಾದ. "ಪ್ರಕೃತಿಯ ವಿಕಾಸದ ಒಂದು ಸಂಕೀರ್ಣ ಘಟ್ಟದಲ್ಲಿ ಮೂಡಿ ಬಂದ ಮನುಷ್ಯ, ಸ್ವಯಂ ಜಾಗೃತಿಯ ವಿಶೇಷಗುಣವನ್ನು ಪಡೆದಿದ್ದಾನೆ. ಹಾಗಾಗಿ ಉಳಿದೆಲ್ಲ ಜೀವಜಾತಿಗಳೂ ತಮ್ಮ ಸುತ್ತಲಿನ ಪರಿಸರಕ್ಕೆ ಹೊಂದಿಕೊಳ್ಳಲು ತಮ್ಮ ಗಾತ್ರ, ಆಕಾರ, ವಿನ್ಯಾಸಗಳನ್ನೇ ಬದಲಿಸಿಕೊಂಡರೆ, ಮನುಷ್ಯಮಾತ್ರ ತನ್ನ ಪರಿಸರವನ್ನೇ ತನಗೆ ಬೇಕಾದಂತೆ ಒಗ್ಗಿಸಿಕೊಳ್ಳಲು ಆರಂಭಿಸಿದ"[೨೧] ಆದಾಗ್ಯೂ ಕೂಡ ಅದು ಸಾಧ್ಯವಾಗುತ್ತಿಲ್ಲ.

ಬೀಸುವ ಗಾಳಿ ಇದೆ.
ಆದರೆ ಅದನ್ನು ಹಿಡಿಯಲಿಕ್ಕಾಗದು
ಗುರುತ್ವಾಕರ್ಷಣೆ ಇದೆ
ಆದರೆ ಅದನ್ನು ತೋರಲಿಕ್ಕಾಗದು
ಸೃಷ್ಟಿಗೆ ಶಕ್ತಿ ಇದೆ
ಆದರೆ ಅದನ್ನು ಒಲಿಸಿಕೊಳ್ಳಲಿಕ್ಕಾಗದೆಂದ
ಕುಮಾರ ಕಕ್ಕಯ್ಯ.[೨೨]

ಈ ಸೃಷ್ಟಿಯು ಅಭೇಧ್ಯವಾಗಿದೆ. ಅದನ್ನು ಭೇದಿಸಲು ಸಾಧ್ಯವಾಗುವುದಿಲ್ಲ. ಸೃಷ್ಟಿಯನ್ನು ದುರುಪಯೋಗ ಮಾಡಿಕೊಳ್ಳದೇ, ಅದರ ಕೊಡುಗೆಗಳನ್ನು ಸದುಪಯೋಗ ಮಾಡಿಕೊಂಡು ತನ್ನ ಹಾಗೂ ಪರಿಸರದ ಎಲ್ಲ ಜೀವಿಗಳ ಬದುಕನ್ನು ನೆಮ್ಮದಿಯಾಗಿರುವಂತೆ ನೋಡಿಕೊಳ್ಳುವದರಲ್ಲಿಯೇ ಮಾನವನ ಹಿತವಿದೆ, ಗತಿ–ಮತಿಯಿದೆ.

ಮಲ್ಲಿಗೆಯ ಪರಿಮಳ, ಸಂಪಿಗೆಯ ಸೊಗಸು
ಗುಲಾಬಿಯ ಕೋಮಲತೆ, ಕೇದಿಗೆಯ ಕಂಪು
ಕೋಗಿಲೆಯ ಇಂಪು, ನವಿಲಿನ ಬಿಂಕು,
ಇರುವೆಯ ತಂತ್ರ, ಆನೆಯ ಗಾತ್ರ
ವಿಸ್ಮಯ ಸೃಷ್ಟಿಯ ನಿಗೂಢ ರಹಸ್ಯ
ಅಂದಿನಿಂದ ಇಂದಿನವರೆಗೆ ಅಭೇದ್ಯವೆಂದ
ಕುಮಾರ ಕಕ್ಕಯ್ಯ.[೨೩]

ಈ ಸೃಷ್ಟಿ, ಈ ನಿಸರ್ಗದಲ್ಲಿ ಎಷ್ಟೊಂದು ವೈವಿದ್ಯಮಯ ಜೀವರಾಸಿಗಳು ಜನಿಸಿವೆ, ತಮ್ಮ ವೈಶಿಷ್ಯ ತೋರುತ್ತಿವೆ! ಪ್ರಕೃತಿಯ ಮೇಲೆ ದೌರ್ಜನ್ಯ ಮಾಡಿದರೆ ಪ್ರಕೃತಿಯ ನಾಶದೊಂದಿಗೆ ತನ್ನ ವಿನಾಶವೂ ಕಟ್ಟಿಟ್ಟ ಬುತ್ತಿ ಎಂದು ಮಾನವ ಅರಿಯಬೇಕಿದೆ.

---

೨೧. ಪರಿಸರ ಸಾಹಿತ್ಯ ಸಂಪದ :ಭೂಮಾತೆಯ ಎಚ್ಚರದ ಗಂಟೆ ಡಾ॥ ನಿ. ಮುರಾರಿ ಬಲ್ಲಾಳ ಪು–೧೫.

೨೨. ಕುಮಾರ ಕಕ್ಕಯ್ಯನ ವಚನಗಳು೧ ಪು–೩೪೦ ವ–೧೩೧೬.

೨೩. ಕುಮಾರ ಕಕ್ಕಯ್ಯನ ವಚನಗಳು – ಪು–೧೩, ವ–೪೮

ಕ್ರಿಮಿ ಕೀಟಗಳಿಗೆ ಗಿಡಬಳ್ಳಿ ಪೈರು ಆಹಾರವಾದರೆ
ಪಶು ಪಕ್ಷಿಗಳಿಗೆ ಕ್ರಿಮಿಕೀಟ ಹುಲ್ಲು ಆಹಾರವು.
ಖಗ ಮೃಗಗಳಿಗೆ ಪಶುಪಕ್ಷಿಗಳು ಆಹಾರವಾದರೆ
ಖಗ ಮೃಗ ಸತ್ತು ಬಿದ್ದಾಗ ಕ್ರಿಮಿಕೀಟಗಳಿಗೆ ಆಹಾರವು.
ಭೂಮಿಯ ಮೇಲೆ ಹುಟ್ಟಿ ಬಂದದ್ದೇ ಒಂದು ಇನ್ನೊಂದಕ್ಕೆ
ಆಹಾರವಾಗುವ ಈ ಜಗದ ಅಟ್ಟಹಾಸ ನೋಡಿದರೆ
ಈ ಸೃಷ್ಟಿ ಎಷ್ಟೊಂದು ಸೂಕ್ಷ್ಮ ಸುಂದರವೋ
ಅಷ್ಟೇ ಕ್ರೂರ ಘೋರವೆಂದ ಕುಮಾರ ಕಕ್ಕಯ್ಯ.[೨೪]

ಪ್ರಕೃತಿಯು ನಿಗೂಢ ರಹಸ್ಯ, ತೋರಲು ಒಂದು ಮುಖ ಸುಂದದರವಾಗಿದ್ದರೂ, ಅದರ ಇನ್ನೊಂದು ಮುಖ ಅಷ್ಟೇ ಭಯಾನಕವಾಗಿದೆಯೆಂಬುದನ್ನು ತಿಳಿಸಿ ಹೇಳುತ್ತಾರೆ ಕುಮಾರ ಕಕ್ಕಯ್ಯ. ಮಾನವ ತನ್ನ ವಿಪರೀತ ಬುದ್ಧಿಯಿಂದ ಭೂಮಿಯ ಮೇಲಣ ತನ್ನ ಬದುಕನ್ನು ನರಕ ಸದೃಶ ಮಾಡಿಕೊಂಡು ದುಃಖಿಯಾಗಿದ್ದಾನೆ. ಆತನಿಗಿಂತ ಪಶು–ಪಕ್ಷಿ ಖಗ–ಮೃಗಗಳೇ ಸುಖಿಗಳೆಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ–

ಪಶು ಪಕ್ಷಿ ಖಗ ಮೃಗಗಳಲಿ
ಶೀಲ ಕುಲೀನತೆಗಳಿಲ್ಲ,
ದುರಾಚಾರ ವ್ಯಭಿಚಾರಗಳೂ ಇಲ್ಲ.
ಪಶು ಪಕ್ಷಿ ಖಗ ಮೃಗಗಳಲಿ
ಜಾತಿ ಮತಗಳಿಲ್ಲ,
ಶೋಷಣೆ ದಬ್ಬಾಳಿಕೆಗಳೂ ಇಲ್ಲ.
ವಿಪರೀತ ಬುದ್ಧಿಯ ಮಾನವನಿಗಿಂತ
ಪಶು–ಪಕ್ಷಿ ಖಗ–ಮೃಗಗಳು
ಬಹಳೇ ಸುಖಿಗಳೆಂದ ಕುಮಾರ ಕಕ್ಕಯ್ಯ.[೨೫]

ಪಶು ಪಕ್ಷಿ ಖಗ ಮೃಗಗಳಿಗೆ ನಿಸರ್ಗದತ್ತವಾದ ಹಸಿವು, ತೃಷೆ,ಆಸೆ, ಬಯಕೆ, ಮೈಥುನಗಳ ಬಗ್ಗೆ ಧರ್ಮವಿದೆ. ಮಾನವ ಮಾತ್ರ ಪ್ರಕೃತಿಯ ವಿರುದ್ಧವಾಗಿ ತನ್ನ ದುರಾಸೆಯಿಂದ, ದುರ್ಬುದ್ಧಿಯಿಂದ ಪಶು–ಪಕ್ಷಿಗಳಿಗಿಂತ ಕೀಳಾಗಿ ವರ್ತಿಸುತ್ತಾನೆ ಎಂದು ಮಾರ್ಮಿಕವಾಗಿ ತಿಳಿಸುತ್ತಾರೆ–

ಖಗ ಮೃಗ ಪಶು ಪಕ್ಷಿ ಪ್ರಾಣಿಗಳಿಗೆ
ಹಸಿವು ನೀರಡಿಕೆ ಮೈಥುನಗಳ ಧರ್ಮವುಂಟು.
ಧರ್ಮ ಧರ್ಮವೆಂದು ಬಡ ಬಡಿಸುತ್ತಾ

೨೪. ಕುಮಾರ ಕಕ್ಕಯ್ಯನ ವಚನಗಳು – ಪು–೬೬, ವ–೨೫೫
೨೫. ಕುಮಾರ ಕಕ್ಕಯ್ಯನ ವಚನಗಳು ಪು–೧೬೪ ವ–೬೩೨

ಹಸಿವೆ ಇಲ್ಲದೆ ತಿನ್ನುವ
ನೀರಡಿಕೆಯಿಲ್ಲದೆ ಕೂಡಿಯುವ
ಬೆದೆಯಿಲ್ಲದೆ ಭೋಗಿಸುವ ಮಾನವನಿಗೆ
ಧರ್ಮದ ಗಂಧವೇ ಇಲ್ಲೆಂದ
ಕುಮಾರ ಕಕ್ಕಯ್ಯ.[೨೬]

ಮಾನವ ಪ್ರಕೃತಿಸಹಜವಾದ ಗುಣಧರ್ಮಗಳನ್ನು ಪಾಲಿಸುವದಿಲ್ಲ. ಪಶು-ಪಕ್ಷಿಗಳು ಹಸಿವೆಯಾದಾಗ ಆಹಾರ ತಿನ್ನುತ್ತವೆ, ನೀರಡಿಕೆಯಾದಾಗ ನೀರು ಕುಡಿಯುತ್ತವೆ. ಸಂತಾನೋತ್ಪತ್ತಿಗಾಗಿ ಬೆದೆಗೆ ಬಂದಾಗ ಮಾತ್ರ ಲೈಂಗಿಕ ಆಕರ್ಷಣೆಗೊಳಗಾಗಿ ಮಿಲನ ನಡೆಸುತ್ತವೆ. ಬುದ್ಧಿವಂತ ಪ್ರಾಣಿಯೆಂದು ಹೇಳಿಕೊಳ್ಳುವ ಮಾನವನು ಮಾತ್ರ ಹಸಿವಿಲ್ಲದೇ ತಿನ್ನುತ್ತಾನೆ, ನೀರಡಿಕೆಯಾಗದೇ ನೀರು ಬೀರು-ಬ್ರ್ಯಾಂಡಿ-ಸೆರೆ-ಸಿಂದಿ ಕುಡಿಯುತ್ತಾನೆ. ಬೆದಯಿಲ್ಲದೇ ವಿಷಯಾಸಕ್ತನಾಗಿ ಅತಿಕಾಮಿಯಾಗಿ ಹೊತ್ತು ಗೊತ್ತಿನ ಪರಿವೆಯಿಲ್ಲದೇ ಭೋಗಿಸುತ್ತಾನೆ.

ಮಾನವನ ದುರಾಸೆಗೆ ಇತಿ-ಮಿತಿಗಳಿಲ್ಲವೆಂಬುದನ್ನು ತಮ್ಮದೊಂದು ವಚನದಲ್ಲಿ ಕುಮಾರ ಕಕ್ಕಯ್ಯ ಹೇಳುತ್ತಾರೆ-

ಎಷ್ಟೇ ಭೂಮಿ ಸೀಮಿ ಸಿರಿ ಸಂಪತ್ತಿದ್ದರೂ
ಮಾನವನಿಗೆ ಇನ್ನೂ ಬೇಕು,
ಎಲ್ಲರಿಗಿಂತ ಹೆಚ್ಚು ಬೇಕು,
ಎಷ್ಟೇ ಹಿರಿಮೆ ಗರಿಮೆ ಅಧಿಕಾರವಿದ್ದರೂ
ಮಾನವನಿಗೆ ಇನ್ನೂ ಬೇಕು,
ದೇವರಿಗಿಂತ ಹೆಚ್ಚಿಗೆ ಬೇಕು.
ಅರಮನೆಯಲ್ಲಿಯ ರಾಜ ಮಹಾರಾಜರಿಗಿಂತ
ಗೂಡಿನಲ್ಲಿಯ ಹಕ್ಕಿಗಳು ಹೆಚ್ಚು ಸಂತೃಪ್ತವೆಂದ
ಕುಮಾರ ಕಕ್ಕಯ್ಯ.[೨೭]

ಎಲ್ಲ ಪ್ರಾಣಿಗಳಲ್ಲಿಯೇ ಶ್ರೇಷ್ಠನೆಂದು ಜಂಬಕೊಚ್ಚಿಕೊಳ್ಳುವ ಮಾನವನಲ್ಲಿ ಇರುವದಾದರೂ ಏನು? ರಾಗ-ದ್ವೇಷ, ಅಸೂಯೆ-ಮತ್ಸರ, ಆಸೆ-ಆಮಿಷ, ಕಾಮ-ಕ್ರೋಧ, ಲೋಭ-ಮೋಹ,ಮದ-ಮತ್ಸರ,ಸಂಶಯ-ಅಪನಂಬಿಕೆ ಈ ಗುಣಗಳ ವಿಕಾರ ಮನೋಪ್ರವೃತ್ತಿಯ ರಾಕ್ಷಸೀ ಸ್ವಭಾವ ಬೆಳೆಸಿಕೊಂಡಿರುವ ಮನುಷ್ಯರಲ್ಲಿ ಪ್ರಾಣಿಗಳ ಸದ್ಗುಣಗಳಾದರೂ ಇವೆಯೇ? ಪ್ರಾಣಿಗಳ ಗುಣ ಸ್ವಭಾವಗಳ ಹಿರಿಮೆಯನ್ನು ಕುಮಾರ ಕಕ್ಕಯ್ಯ ಎತ್ತಿ ತೋರಿಸುತ್ತಾರೆ-

---

೨೬ . ಕುಮಾರ ಕಕ್ಕಯ್ಯನ ವಚನಗಳು ಪು-೧೮೪ ವ-೭೦೯
೨೭ . ಅದೇ- ಪು-೩೧೩ ವ-೧೨೦೯

ನಾಯಿಗಿಂತ ನಂಬಿಗಸ್ಥರಿಲ್ಲ
ಗೋವಿಗಿಂತ ಉಪಕಾರಿಗಳಿಲ್ಲ
ಗೀಜಗನಿಗಿಂತ ಕಲಾಕಾರರಿಲ್ಲ
ಕೋಗಿಲೆಗಿಂತ ಸಂಗೀತಗಾಗಾರರಿಲ್ಲ
ಜೇಡನಿಗಿಂತ ತಂತ್ರಜ್ಞಾನನಿಗಳಿಲ್ಲ
ಜೇನ್ನೊಣಕ್ಕಿಂತ ಮೇಧಾವಿಗಳಿಲ್ಲೆಂದ
ಕುಮಾರ ಕಕ್ಕಯ್ಯ[೨೮]

ಈ ವಚನದಲ್ಲಿ ಪ್ರಾಣಿ–ಪಕ್ಷಿಗಳ, ಹುಳ–ಹುಪ್ಪಡಿಗಳ ವಿಶೇಷತೆಯನ್ನು ಇಲ್ಲಿ ನೋಡಬಹುದಾಗಿದೆ. ನಾಯಿಯು ತನಗೆ ಅನ್ನಹಾಕಿದ ಯಜಮಾನನಿಗೆ ನಿರಂತರ ನಂಬಿಗಸ್ತನಾಗಿದ್ದು, ಆತನ ಮನೆ–ಹೊಲ, ಸಂಪತ್ತನ್ನು ಕಳ್ಳಕಾಕರರಿಂದ ರಕ್ಷಿಸುತ್ತದೆ. ಆಕಳು ಹುಲ್ಲು ತಿಂದು ಅಮೃತರೂಪದ ಹಾಲನ್ನು, ಕೃಷಿಕಾರ್ಯಗಳಿಗೆ ಕರುಗಳನ್ನು ಕೊಡುತ್ತದೆ. ಗೀಜಗ ಸುಂದರವಾದ ಗೂಡುಕಟ್ಟುತ್ತದೆ. ಕೋಗಿಲೆ ಸುಮಧುರವಾಗಿ ಹಾಡುತ್ತದೆ. ಜೇಡ ಅಧ್ಭುತ ತಂತ್ರಜ್ಞಾನದಿಂದ ಬಲೆ ಹೆಣೆಯುತ್ತದೆ. ಸಹಸ್ರಾರು ಹೂಗಳಿಂದ ಮಕರಂದ ತಂದು ಜೇನ್ನೊಣ ರುಚಿಕಟ್ಟಾದ ಜೇನುತುಪ್ಪ (ಮಧು) ವನ್ನು ತಯಾರಿಸುತ್ತದೆ. ಇಂತಹ ಒಂದಾಂದರೂ ಸದ್ಗಣ–ಸತ್ಕ್ರಿಯೆ–ಪರೋಪಕಾರ ಅಳವಡಿಸಿಕೊಳ್ಳದಿದ್ದರೆ ಮಾನವ ದಾನವನೆನಿಸುತ್ತಾನೆ.

ಈ ನಿಸರ್ಗವು ಮಾನವನಿಗೆ ಏನೆಲ್ಲವನ್ನೂ ಕರುಣಿಸಿದೆ. ಅದನ್ನು ವಿವೇಕದಿಂದ ಬಳಸಿಕೊಳ್ಳದೆ, ಭಿಕ್ಷುಕನಾಗಿ ದೇವನಲ್ಲಿ ಯಾಚಿಸುವ ಪರಿಯನ್ನು ವಿಡಂಬಿಸುತ್ತಾರೆ ಕುಮಾರ ಕಕ್ಕಯ್ಯ–

ಸೂರ್ಯ ಚಂದ್ರರು ಬೆಳೆಗುವುದು,
ಮಳೆ ಗಾಳಿ ಬೀಸುವದು ಯಾರಿಗಾಗಿ?
ಗಿರಿ ಪರ್ವತ, ಹೊಳೆ ಹಳ್ಳಗಳು ಹರಿವುದು
ಋತುಮಾನ, ಭೂಮಿ ಬೆಳೆಯುವದು ಯಾರಿಗಾಗಿ?
ಪ್ರಾಣಿಕೋಟಿಗಾಗಿ ಸೃಷ್ಟಿಯನೇ ಕೊಟ್ಟಿರುವಾಗ
ದೇವನಲಿ ಮತ್ತೆ ಮತ್ತೆ ಯಾಚಿಸುವದೇಕೆಂದ
ಕುಮಾರ ಕಕ್ಕಯ್ಯ[೨೯]

'ಮಾನವ ನಿಸರ್ಗ ನಿರ್ಮಿತ, ಗಾಳಿ ಬಿಸಿಲು ಕಂಡ ಪ್ರಕೃತಿ ಸದೃಢವಾಗಿ ಶೋಭಿಸುವದು. ಪ್ರಕೃತಿಯ ನೈಜ ಸುಖ ಸಿಗುವದು. ಪ್ರಕೃತಿಯಲ್ಲಿ ಸ್ವತಂತ್ರವಾಗಿ ದುಡಿದು ಹೂ ಗಿಡ ಬಳ್ಳಿಗಳನ್ನು ಹಚ್ಚಿ ಬೆಳೆಸಿ, ಅವು ಅರಳುವುದನ್ನು ಕಂಡು ನಕ್ಕು ನಲಿ, ಗಿಡಮರಗಳನ್ನು ನೆಟ್ಟು ಬೆಳೆಸು. ನಿನ್ನಿಂದಾಗಿ ಸಾವಿರಾರು ಪ್ರಾಣಿ ಪಕ್ಷಿಗಳು,

೨೮ .ಕುಮಾರ ಕಕ್ಕಯ್ಯನ ವಚನಗಳು ಪು–೨೬೨ ವ–೧೦೧೩
೨೯ .–ಅದೇ– ಪು–೨೬೩ ವ–೧೦೧೭

ಅದರ ಹಣ್ಣು ತಿಂದು ಆನಂದ ಪಡೆಯಲಿ. ನೀನೇ ಬಿತ್ತಿ ಬೆಳೆಯಿಸಿದ ಸೊಗಸಾದ ಬೆಳೆಯುಲ್ಲಿ ಪ್ರಿಯು ಪತ್ನಿ ಮಕ್ಕಳೊಂದಿಗೆ ಕುಣಿದಾಡು, ನಿಸರ್ಗದಲ್ಲಿ ನಿಸರ್ಗಮಯಿಯಾಗು.'[೩೦] ಎಂದು ಕುಮಾರ ಕಕ್ಕಯ್ಯ ಪ್ರಕೃತಿ ಪರಿಸರದ ಪ್ರೇಮವನ್ನು ತಿಳಿಯಪಡಿಸುತ್ತಾರೆ.

**(iii) ಕೃಷಿ–ಕೃಷಿಕರು, ಕಸುಬುದಾರರು–ಶ್ರಮಜೀವನ :**

ಭಾರತ ಕೃಷಿ ಪ್ರಧಾನ ದೇಶ. ಅಂತೆಯೇ ನಮ್ಮ ದೇಶದ ನೂರಕ್ಕೆ ೭೦ ರಷ್ಟು ಜನ (ಕೃಷಿಕರು) ಕೃಷಿಯನ್ನೇ ಅವಲಂಬಿಸಿ ಜೀವಿಸುವ ಜನರು. ನಮ್ಮ ದೇಶದಲ್ಲಿ ಇಂದಿಗೂ ಹಳ್ಳಿಗಳಲ್ಲಿಯೇ ವಾಸವಾಗಿದ್ದಾರೆ. 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು, ಕೃಷಿಯಿಂದಲೇ ದೇಶ ಖುಷಿ' ಮುಂತಾದ ಅನುಭವ ಜನ್ಯ ನಾಣ್ಣುಡಿಗಳಲ್ಲಿ ಕೃಷಿಯ ಮಹತ್ವವನ್ನು ಗಮನಿಸನಹುದು.

"ಈ ಕೃಷಿಯೊಂದು ಸಾಗದಿದ್ದರೆ ಸಕಲ ವ್ಯಾಪಾರಿಗಳು, ಸಮಸ್ತ ಶಾಸ್ತ್ರಜ್ಞರು, ಮೂಢರು, ಪ್ರೌಢರು, ಮೂರ್ಖರು, ಪಂಡಿತರು, ಮೊದಲಾದರೆಲ್ಲರೂ ದು:ಖಾಬ್ದಿಯೊಳು ಮುಳುಗುವರಲ್ಲದೆ ಯಾರಿಗೂ ಪರಿಣಾಮವಿಲ್ಲ. ವ್ಯಾಪಾರಕ್ಕಾದರೂ ಕೃಷಿಯೇ ಮುಖ್ಯ. ರಾಜಕಾರ್ಯ ಸಮರ್ಥರಾದ ಭೂಪಾಲರಿಗಾದರೂ, ವೀರರಿಗೂ, ಧೀರರಿಗೂ, ವೇದಾಗಮ ಶಾಸ್ತ್ರ ಪುರಾಣ ಪಂಡಿತರಿಗೂ ಸೇವಾಯಾಚನಾದಿ ಷಟ್ ಕೃತ್ಯಗಳಿಗಾದರೂ ಕೃಷಿಯೇ ಮುಖ್ಯವು. ಅನ್ನವೇ ಆನಂದದ ಬೀಜವು, ಭೂಮಿಯಿಂದ ಬೆಳೆಯುವ ಸಕಲ ಪದಾರ್ಥಗಳು ಬೆಳೆಯದಿದ್ದರೆ ಲೋಕ ವ್ಯವಹಾರವೇ ನಿಲ್ಲುವದು. ಮತ್ತು ವ್ಯಾಪಾರಿಗಳು ತಂದು ಮಾರುವ ಪದಾರ್ಥಗಳೆಲ್ಲ ಭೂಮಿಯಿಂದ ಉತ್ಪನ್ನವಾಗತಕ್ಕವುಗಳಾದ ಕಾರಣ ಕೃಷಿಯು ತಡೆದರೆ ಸಕಲ ವ್ಯಾಪಾರವೇ ತಡೆಯುವದು (ನಿಲ್ಲವುದು)."[೩೧]

ಕೃಷಿಕಾಯಕ ತುಂಬಾ ಮಹತ್ವಪೂರ್ಣವಾದುದು. ಕೃಷಿಕಾಯಕದ ಉತ್ಪನ್ನಗಳ ಮೇಲೆಯೇ ಇಡೀ ಪ್ರಪಂಚದ ಜೀವರಾಶಿಗಳು ಅವಲಂಬಿತವಾಗಿವೆ. ಅಂತೆಯೇ ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರು 'ಭಾರತದ ಆತ್ಮವು ಹಳ್ಳಿಗಳಲ್ಲಿದೆ, ಅದೂ ಹಳ್ಳಿಯ ರೈತರಲ್ಲಿದೆ' ಎಂದು ಹೇಳುತ್ತಿದ್ದ ಮಾತು ಕೃಷಿಯ ಮಹತ್ವವನ್ನು ತಿಳಿಸುತ್ತದೆ. "ನೂರಕ್ಕೆ ತೊಂಬತ್ತೈದು ಹಳ್ಳಿಗಳುಳ್ಳ ನಮ್ಮ ದೇಶದಲ್ಲಿ ಜನಜೀವನವೆಂದರೆ ನಮ್ಮ ಹಳ್ಳಿಗರ ಜೀವನವೆಂದೇ ಒಪ್ಪಬೇಕಾಗುವುದು. ಒಕ್ಕಲುತನವೇ ಮೂಲಬೇಸಾಯವಾದ ನಮ್ಮ ದೇಶದ ಆಧಾರ ಸ್ತಂಭವೆಂದರೆ ರೈತನು. ಅವನ ಜೀವನವೇ ಹಳ್ಳಿಯ ಜೀವನ. ಅವನ ಸಂಸ್ಕೃತಿಯೇ ಆ ಜೀವನದಲ್ಲಿ ಒಡಮೂಡಿದ ಸಂಸ್ಕೃತಿ. ಅದೇ ಭರತಖಂಡದ ಸಂಸ್ಕೃತಿ.... ಶಿವಶರಣರ ಹೆದ್ದಾರಿಯಾದ ಕಾಯಕದಲ್ಲಿ ದೃಢವಾದ ಶ್ರದ್ಧೆಯಿದೆ. ಅಂತೆಯೇ ಅವನು ನಮ್ಮ ದೇಶದ ಬೆನ್ನು ಮೂಳೆಯಾಗಿದ್ದಾನೆ, ಜನಾಂಗದ ಜೀವಾಳವಾಗಿದ್ದಾನೆ."[೩೨]

---

೩೦ .ಧರ್ಮಕ್ರಾಂತಿ– ಬಿ.ಎಸ್. ಪೋಳ. ಪು–೬೯.

೩೧. ಕೃಷಿಜ್ಞಾನ ಪ್ರದೀಪಿಕೆ – ಸಂ. ರಾ॥ ಫ.ಗು. ಹಳಕಟ್ಟಿ ಪು–೫

೩೨. ಕನ್ನಡ ಜಾನಪದ ಗೀತಗಳು – ಡಾ॥ ಬಿ.ಎಸ್. ಗದ್ದಗಿಮಠ ಪು–೧೮೧.

ರೈತರು ನಂಬಿದ್ದು ದೇವರನ್ನು, ಶರಣರನ್ನು, ತಮ್ಮ ಬದುಕಿಗೆ ಜೀವನಕ್ಕೆ ಜೀವಾಳವಾದ ಭೂಮಿತಾಯಿಯನ್ನು. ಅಂತೆಯೇ ಜನಪದರ ಹಾಡುಗಳಲ್ಲಿ ಇದನ್ನು ನಾವು ಕಾಣುತ್ತೇವೆ.

ಏಳುತಾಲೆ ಎದ್ದು ಯಾರ್‍ಯಾರ ನೆನೆಯಾಲೆ
ಎಳ್ಳು ಜೀರಿಗೆ ಬೆಳೆಯೋಳ। ಭೂತಾಯಿ
ಎದ್ದೊಂದು ಗಳಿಗೆ ನೆನದೇನು॥[೩೩]

ಶರಣರ ನೆನೆದಾರ ಸರಗೀಯ ಇಟ್ಟಾಂಗ
ಅರಳ ಮಲ್ಲೀಗೆ ಮುಡಿದಾಂಗ। ಕಲ್ಯಾಣ
ಶರಣರ ನೆನೆಯೋ ನನ ಮನವೆ॥[೩೪]

೧೨ ನೆಯ ಶತಮಾನದ ಕಲ್ಯಾಣದ ಬಸವಣ್ಣನವರು ಕೃಷಿಕಾಯಕಕ್ಕೆ ತುಂಬಾ ಮಹತ್ವಕೊಟ್ಟವರು. ಕೃಷಿಕನಂತೂ ಬಸವಣ್ಣನವರಿಗೆ ಗುರು–ಲಿಂಗ–ಜಂಗಮ ಸ್ವರೂಪನು ಕೃಷಿಕೃತ್ಯ ಕಾಯಕವ ಮಾಡುವ ಪರಮಸದ್ಭಕ್ತನ ಶ್ರೀಪಾದವ ತೋರು ಎಂದು ದೇವರಲ್ಲಿ ಪ್ರಾರ್ಥಿಸಿದವರು. ಯಾಕೆಂದರೆ ರೈತನ ತನು ಶುದ್ಧ, ಮನಶುದ್ಧ, ಭಾವ ಶುದ್ಧ, ನಡೆ ಶುದ್ಧ, ನುಡಿಶುದ್ಧವಾಗಿರುವುದರಿಂದ ಆತನು ಪವಿತ್ರನು. ಇಂತಹ ಕೃಷಿ ಕಾಯಕ ಮತ್ತು ಕಾಯಕ ಜೀವಿಗಳನ್ನೇ ದೇವರೆಂದು ಕಂಡವರು ಬಸವಣ್ಣ. ಅಂತೆಯೇ ಜನಪದರಿಗೆ ಬಸವಣ್ಣ ಮಂತ್ರ ಪುರುಷ.

ಉತ್ತಿ ಬಿತ್ತುವ ಮಂತ್ರ ಬಿತ್ತಿ ಬೆಳೆಯುವ ಮಂತ್ರ
ಸತ್ಯ ಶಿವಮಂತ್ರ ನಿನ್ಹೆಸರು। ಬಸವಣ್ಣ
ಮರ್ತ್ಯದೊಳು ಮಂತ್ರ ಜೀವನಕೆ ॥[೩೫]

ಬಸವ ರಾಜ್ಯದ ಸಿರಿಯು ಬಸವ ಬಡವರ ನಿಧಿಯು
ಬಸವ ಮಳೆ ಬೆಳೆಯು ನಾಡೊಳಗೆ। ನಿಜ ದೀಪ
ಬಸವನೇ ಸಗ್ಗ ಸೋಪಾನ॥[೩೬]

ರೈತರ ಉಸಿರು, ಪ್ರಾಣ, ಜೀವ, ದೇವ, ಎಲ್ಲವೂ ಬಸವಣ್ಣ. ಬಸವ ಎಂಬ ಮಂತ್ರ ರಾಜ್ಯದ ಸಿರಿ, ಬಡವರ ನಿಧಿ, ಮಳೆ ಬೆಳೆ, ಜೀವನದ ಬೆಳಕು, ಸ್ವರ್ಗ ಸರ್ವವೂ ಬಸವಮಯ. ಅಂತೆಯೇ ಜನಪದರು ಪ್ರಾರ್ಥಿಸುತ್ತಾರೆ –

---

೩೩. –ಅದೇ– ಪು–೧೨
೩೪. ಕನ್ನಡ ಜಾನಪದ ಗೀತಗಳು– ಡಾ॥ ಬಿ.ಎಸ್. ಗದ್ದಗಿಮಠ ಪು–೨೩
೩೫. ಹೊನ್ನು ತೂಗಿದ ನೆಲ : ಜಾನಪದರು ಕಂಡ ಶರಣರು – ಈಶ್ವರಚಂದ್ರ ಚಿಂತಾಮಣಿ ಪು–೫೨
೩೬. –ಅದೇ– ಪು–೫೩

ಕರುಣ ಬಂದರೆ ಕಾಯೊ, ಮರಣ ಬಂದರೆ ಒಯ್ಯೊ
ಕರುಣಿ ಕಲ್ಯಾಣ ಬಸವಣ್ಣ। ಶಿವಲಿಂಗ
ಕಡೆತನಕ ಕಾಯೊ ಅಭಿಮಾನ ॥[೩೭]

ನಮ್ಮ ಜನಪದ ಜನರು ಹುಟ್ಟು-ಸಾವುಗಳಿಗೆ ಅಂಜಿದವರಲ್ಲ, 'ಅಭಿಮಾನ' ದಿಂದ ಬದುಕಿದವರು, ಬದುಕುವವರು. ತಾವು ಬದುಕಿರುವವರೆಗೆ ತಮ್ಮ ಮಾನ-ಮರ್ಯಾದೆ, ಅಭಿಮಾನವನ್ನು ಕಾಯಬೇಕೆಂದು ಬಸವಣ್ಣನವರಲ್ಲಿ ಬೇಡಿಕೊಳ್ಳುತ್ತಾರೆ.

ಇಂತಹ ಜನಪದರ ಉಸಿರಾದ ಕನ್ನಡ ಭಾಷೆಯಲ್ಲಿ, ಜನಪದರ ಆಡು ನುಡಿಯಲ್ಲಿ, ಕಾಯಕಜೀವಿಗಳಿಂದ ರಚಿತವಾದ ವಚನ ಸಾಹಿತ್ಯದಲ್ಲಿ ಜಾನಪದರ ಜೀವನ ದರ್ಶನ, ಜೀವನ ಮೌಲ್ಯಗಳು ವ್ಯಕ್ತವಾಗಿವೆ. ರೈತನನ್ನು ಕುಮಾರ ಕಕ್ಕಯ್ಯ ತಮ್ಮ ವಚನಗಳಲ್ಲಿ 'ಕಾಯಕಯೋಗಿ' ಎಂದು ಗೌರವಿಸಿರುವುದನ್ನು ಕಾಣುತ್ತೇವೆ-

ಕಾಯಕಯೋಗಿಗೆ ಬೇಸರದ ಬಾಧೆಯಿಲ್ಲ
ಅನಾರೋಗ್ಯದ ಭಯವಿಲ್ಲ.
ಕಾಯಕಯೋಗಿಗೆ ಬಡತನದ ಚಿಂತೆಯಿಲ್ಲ
ದುರಾಚಾರದ ನಂಜಿಲ್ಲ.
ಕಾಯಕಯೋಗಿಗೆ ಭೂಮಿಯೇ ಕೈಲಾಸ
ಸಂಸಾರವೇ ಸ್ವರ್ಗವೆಂದ
ಕುಮಾರ ಕಕ್ಕಯ್ಯ.[೩೮]

ಕಾಯಕಯೋಗಿಯಾಗಿರುವ ರೈತ ಎಂದೆಂದಿಗೂ ತನ್ನ ಕೃಷಿಕಾಯಕದಲ್ಲಿ ಬೇಸರಪಟ್ಟುಕೊಳ್ಳುವುದಿಲ್ಲ. ಪ್ರಕೃತಿಯ ಶುದ್ಧ ಗಾಳಿ, ನೀರು, ಸೂರ್ಯಪ್ರಕಾಶದಲ್ಲಿ ಬೆವರು ಸುರಿಸಿ ದುಡಿಯುವದರಿಂದ ಆತನ ಶರೀರ ಸದೃಢ ಹಾಗೂ ಆರೋಗ್ಯಪೂರ್ಣವಾಗಿರುತ್ತದೆ. ಬಡತನದ ಬಗ್ಗೆ ಚಿಂತೆಯಿಲ್ಲ, ದುಡಿತದ ಪ್ರತಿಫಲವನ್ನು ಭೂಮಿತಾಯಿ ಕೊಡುತ್ತಾಳೆಯೆಂಬ ದೃಢವಾದ ವಿಶ್ವಾಸವಿದೆ. ದುರಾಚಾರ ದುರ್ವ್ಯಸನಗಳು ಆತನಲ್ಲಿ ಇಲ್ಲ. ಆತನಿಗೆ ಭೂಮಿಯೇ ಕೈಲಾಸ, ಸಂಸಾರವೇ ಸ್ವರ್ಗವಾಗಿದೆ.

"ಈ ಭೂಮಿಯು ಕಲ್ಪವೃಕ್ಷಕ್ಕೂ, ಕಾಮಧೇನುವಿಗೂ, ಚಿಂತಾಮಣಿಗೂ, ಪರುಷದ ಗಣಿಗೂ ಸಮಾನವಾಗಿದೆ. ಇಂಥ ಭೂಮಿ ಇದ್ದು ಮನುಷ್ಯರು ಕಾಯಶಕ್ತಿಯಿಂದಲೂ, ಬುದ್ಧಿಶಕ್ತಿಯಿಂದಲೂ, ದ್ರವ್ಯಶಕ್ತಿಯಿಂದಲೂ ಮೆಹನತು ಮಾಡಿ ಶ್ರಮಪಟ್ಟು ಸಕಲಸಂಪತ್ತನ್ನು ದೊರಕಿಸಿಕೊಳ್ಳಬೇಕು. ಮೈಗಳ್ಳರಾಗಿ ದರಿದ್ರರಾಗಬಾರದು. ಮೈಗಳ್ಳತನವು ದರಿದ್ರಕ್ಕೆ ಮುಖ್ಯ ಕಾರಣವಾಗಿದೆ. ಈ

---

೩೭ ಕನ್ನಡ ಜಾನಪದ ಗೀತಗಳು- ಡಾ॥ ಬಿ.ಎಸ್. ಗದ್ದಗಿಮಠ ಪು-೨೩

೩೮. ಕುಮಾರ ಕಕ್ಕಯ್ಯನ ವಚನಗಳು- ಪು-೫೪ ವ-೨೦೬

ಭೂಮಿಯನ್ನು ವಿಶ್ವಾಸದಿಂದ ನಂಬಿ ಅದರ ವಿಷಯದಲ್ಲಿ ಖರ್ಚು ಮಾಡಿದ ದ್ರವ್ಯವು ಮೆಹನತು ಮಾಡಿದ ಶ್ರಮವು ಫಲವನ್ನು ಕೊಡದೇ ಹೋಗಲಾರದು."[೩೯]

ಒಕ್ಕಲಿಗನು ಭೂದೇವಿಯ ಔರಸಪುತ್ರನೆಂದು ಕುಮಾರ ಕಕ್ಕಯ್ಯ ತಮ್ಮ ವಚನದಲ್ಲಿ ಹೇಳುತ್ತಾರೆ –

ಹಸಿವೆಗಿಂತ ರುಚಿಯಾದ ಅಡಿಗೆಯಿಲ್ಲ.
ದಣಿವಿಗಿಂತ ಮೆತ್ತನ್ನ ಹಾಸಿಗೆಯಿಲ್ಲ.
ತೋಟಕ್ಕಿಂತ ಸುಂದರವಾದ ಸ್ಥಳವಿಲ್ಲ
ಕೃಷಿಗಿಂತ ಪವಿತ್ರವಾದ ಉದ್ಯೋಗವಿಲ್ಲ.
ಪ್ರಕೃತಿಯ ಮಡಿಲಲ್ಲಾಡುವ ಒಕ್ಕಲಿಗ
ಭೂದೇವಿಯ ಔರಸಪುತ್ರನೆಂದ
ಕುಮಾರ ಕಕ್ಕಯ್ಯ.[೪೦]

ಒಕ್ಕಲಿಗನ ಸುಂದರ ಚಿತ್ರಣವನ್ನು ಕುಮಾರ ಕಕ್ಕಯ್ಯ ತಮ್ಮ ಕೆಳಗಿನ ವಚನದಲ್ಲಿ ಚಿತ್ರಿಸುತ್ತಾರೆ–

ಒಕ್ಕಲಿಗನ ಶಾಸ್ತ್ರ ಶ್ರಮದಲ್ಲಿ
ಒಕ್ಕಲಿಗನ ಧರ್ಮ ಹೊಲದಲ್ಲಿ
ಒಕ್ಕಲಿಗನ ಮನೆದೇವರು ಎತ್ತಿನಲ್ಲಿ
ಒಕ್ಕಲಿಗನ ಕುಲದೇವರು ಕೂರಿಗೆಯಲ್ಲಿ
ಒಕ್ಕಲಿಗನ ಸಾಕ್ಷಾತ್ಕಾರ ಬೆಳೆಯಲ್ಲಿ
ಒಕ್ಕಲಿಗನ ಸ್ವರ್ಗ ಸುಗ್ಗಿಯಲ್ಲೆಂದ
ಕುಮಾರ ಕಕ್ಕಯ್ಯ. (೪೧)

ಒಕ್ಕಲಿಗನಿಗೆ ಧರ್ಮ, ದೇವರು, ಶಾಸ್ತ್ರ, ಸಾಕ್ಷಾತ್ಕಾರ, ಸ್ವರ್ಗ ಎಲ್ಲವೂ ಆತನ ಕಾಯಕದಲ್ಲಿ, ಕಾಯಕದ ನೆಲದಲ್ಲಿ, ಎತ್ತು–ಬಿತ್ತಿನಲ್ಲಿ ಎಂಬುದನ್ನು ವಚನದ ಮೂಲಕ ಬಿಂಬಿಸುತ್ತಾರೆ.

ಒಕ್ಕಲಿಗ ಮತ್ತು ಎತ್ತುಗಳು ಅವಿನಾಭಾವ ಸಂಬಂಧವುಳ್ಳವುಗಳಾಗಿವೆ. ರೈತನ ನಿಜವಾದ ಕಾಯಕಸಂಗಾತಿಗಳೆಂದರೆ ಎತ್ತುಗಳು. ಎತ್ತು–ಆಕಳುಗಳು ರೈತಜೀವನದಲ್ಲಿ ಪರಸ್ಪರ ಸಹಬಾಳ್ವೆಯ ದ್ಯೋತಕ ಗಳಾಗಿವೆಯೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ.

ಒಕ್ಕಲಿಗ ಬಿತ್ತುವನು ಎತ್ತುಗಳಿಂದ.
ಕಾಳುಕಡಿ ಒಕ್ಕಲಿಗನಿಗೆ ಆಹಾರವಾಯಿತು.

---

೩೯. ಕೃಷಿಜ್ಞಾನ ಪ್ರದೀಪಿಕೆ – ಸಂ. ರಾ॥ ಫ.ಗು. ಹಳಕಟ್ಟಿ ಪು–೧೮
೪೦ ಕುಮಾರ ಕಕ್ಕಯ್ಯನ ವಚನಗಳು ಪು– ೨೨೬ ವ–೮೭೧.
೪೧. ಕುಮಾರ ಕಕ್ಕಯ್ಯನ ವಚನಗಳು ಪು– ೩೭ ವ–೧೪೪

ಕಣಿಕೆ ಹೊಟ್ಟು ಎತ್ತು ಆಕಳಿಗೆ ಮೇವಾಯಿತು.
ಹಾಲು ಹೈನು ಮಕ್ಕಳು ಮರಿಗಳಿಗೆ ಅಮೃತವಾಯಿತು
ಇಂತೀ ಒಕ್ಕಲಿಗ ಎತ್ತಿನ ಸಹಬಾಳ್ವೆ
ಸೃಷ್ಟಿಯ ಕೌತುಕವೆಂದ ಕುಮಾರ ಕಕ್ಕಯ್ಯ.[೪೨]

ಮಾನವನ ಬದುಕಿನ ನಿರ್ವಹಣೆಗೆ ದವಸ–ಧಾನ್ಯ, ಧನ–ಕನಕ ಸಂಪತ್ತು ಬೇಕು. ಅದನ್ನು ಆತ ಗಳಿಸಲೇ ಬೇಕು. ಈ ಗಳಿಕೆಯು ಮೂರು ಪ್ರಕಾರದ್ದು ಇರುತ್ತದೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ –

ಕೃಷಿ ಕಾಯಕದ ಗಳಿಕೆ ಸಾತ್ವಿಕ
ಬಡ್ಡಿ ಬಾಡಿಗೆಯ ಗಳಿಕೆ ರಾಜಸಿಕ
ಲಂಚ ವಂಚನೆಯ ಗಳಿಕೆ ತಾಮಸಿಕ.
ಹೆಚ್ಚಿನ ಗಳಿಕೆಯನು ರಾಜಸಿಕರು
ತಾಮಸಿಕರೇ ದೋಚುವದರಿಂದ
ಸಾತ್ವಿಕರ ಗಳಿಕೆಯು ಹೊಟ್ಟೆ ಬಟ್ಟೆಗೂ
ಸಾಲದೆಂದ ಕುಮಾರ ಕಕ್ಕಯ್ಯ.[೪೩]

ಕೃಷಿ ಕಾಯಕದ ಗಳಿಕೆ ಸತ್ಯ ಶುದ್ಧವಾಗಿರುವುದರಿಂದ ಅದು ಸಾತ್ವಿಕ ಗುಣವುಳ್ಳದ್ದಾಗಿರುತ್ತದೆ.

ಬಡ್ಡಿ ವ್ಯವಹಾರದಿಂದ ಸರಳಬಡ್ಡಿ–ಚಕ್ರಬಡ್ಡಿ ಹಾಕಿ ಗಳಿಸುವ ಹಣ ರಾಜಸಿಕ ಗುಣವುಳ್ಳದ್ದು, ಲಂಚ–ವಂಚನೆಯ ಮೂಲಕ ಅಧಿಕಾರಶಾಹಿ ವರ್ಗ ಗಳಿಸುವ ಗಳಿಕೆ ತಾಮಸಿಕ ಗುಣವುಳ್ಳದ್ದು. ರೈತನ ಸಾತ್ವಿಕ ಗಳಿಕೆಯ ಸಂಪತ್ತನ್ನು ವ್ಯಾಪಾರಸ್ಥರು ಮತ್ತು ಅಧಿಕಾರಶಾಹಿ ವರ್ಗದವರೇ ದೋಚುವದರಿಂದ, ಸಾತ್ವಿಕರ ಗಳಿಕೆಯು ಹೊಟ್ಟೆ ಬಟ್ಟೆಗೂ ಸಾಲದೆ, ರೈತರು ನಿರಂತರವಾಗಿ ಬಡತನ, ದಾರಿದ್ರ್ಯ, ಕಷ್ಟ–ತೊಂದರೆಗಳನ್ನೇ ಅನುಭವಿಸುವಂತಾಗುತ್ತದೆ.

ಹುದ್ದೆ ಎಷ್ಟೇ ದೊಡ್ಡದಾದರೂ
ಅಧಿಕಾರಿ ಏನನ್ನೂ ಬಿತ್ತಲಾರ.
ಹಣ ಎಷ್ಟೇ ಗಳಿಸಿದರೂ
ವ್ಯಾಪಾರಿ ಏನನ್ನೂ ಬೆಳೆಯಲಾರ.
ಏನನ್ನಾದರೂ ಉತ್ಪತ್ತಿ ಮಾಡುವವರದೇ
ಸಾರ್ಥಕ ಜನ್ಮವೆಂದ ಕುಮಾರ ಕಕ್ಕಯ್ಯ. (೪೪)

---

೪೨. –ಅದೇ– ಪು–೩೨೪ ವ–೧೨೫೩
೪೩. –ಅದೇ– ಪು–೩೨೫ ವ–೧೨೫೪
೪೪. ಕುಮಾರ ಕಕ್ಕಯ್ಯನ ವಚನಗಳು – ಪು–೩೨೬ ವ–೧೨೬೧

ಅಧಿಕಾರಿಗಳು, ವ್ಯಾಪಾರಸ್ತರು, ಮಂತ್ರಿ ಮಾನ್ಯರು, ರಾಜ–ಮಹಾರಾಜರು ಇವರು ಬದುಕಿರುವುದೇ ಉತ್ಪತ್ತಿ ಮಾಡುವ ಕೃಷಿಕರ, ಕೃಷಿ ಕಾರ್ಮಿಕರ ಕೈ ಕಸಬುದಾರರ ಕಾಯಕದ ಉತ್ಪನ್ನಗಳ ಮೇಲೆಯೇ. ಅಂತೆಯೇ ಇವರದು ನಿಜವಾಗಿಯೂ ಸಾರ್ಥಕ ಜನ್ಮವೆಂದೂ, ಭೂಮಾತೆಗೆ ಮಣ್ಣಿನ ಮಕ್ಕಳೇ ಅತಿ ಪ್ರೀತಿಯುಳ್ಳವರೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ –

ಶೆಟ್ಟಿ ಬೇಡ, ಸಿರಿಯಾಳ ಬೇಡ.
ಸಿಪಾಯಿ ಬೇಡ, ಸರದಾರನೂ ಬೇಡ.
ಮಂತ್ರಿ ಬೇಡ, ಮಾಂಡಲೀಕ ಬೇಡ.
ರಾಜ ಬೇಡ, ಮಹಾರಾಜನೂ ಬೇಡ
ಭೂಮಾತೆಗೆ ಮಣ್ಣಿನ ಮಕ್ಕಳೇ
ಅತಿಮುದ್ದು ಎಂದ ಕುಮಾರ ಕಕ್ಕಯ್ಯ.[೪೫]

ಇಂದು ಆಧುನಿಕ ಯುಗದಲ್ಲಿ ಹೊನ್ನು ಬಲು ಶ್ರೇಷ್ಠವೆಂದು ಎಲ್ಲರೂ ಭಾವಿಸಿ, ಅದರ ಬೆನ್ನು ಹತ್ತಿದ್ದಾರೆ. ಚಿನ್ನ,ಬೆಳ್ಳಿ ಒಡವೆ ವಸ್ತ್ರಗಳು ತುಂಬಾ ಮಹತ್ವದ್ದೆನಿಸಿವೆ. ಅನ್ನ ಬೆಳೆಯುವ ಮಣ್ಣು ಗೌಣವೆನಿಸಿದೆ. ಮಣ್ಣಿನ ಮಹತ್ವವನ್ನು ಇಂದಿನ ನಾಗರಿಕ ಸಮಾಜ ಅರಿಯಬೇಕಾಗಿದೆ.

ಮಣ್ಣಿನಿಂದಲೆ ಅನ್ನ ವಸ್ತ್ರವು
ಮಣ್ಣಿನಿಂದಲೆ ಬಾಳು ಬದುಕು
ಮಣ್ಣಿನಿಂದಲೆ ಸಕಲ ಸಂಪದವು.
ಕೊನೆಗೊಮ್ಮೆ ಮಣ್ಣಿನ ಕಾಯ ಮಣ್ಣಿಗೆ
ಅದು ಕಾರಣ ಮಾನವನಿಗೆ ಹೊನ್ನಿಗಿಂತ
ಮಣ್ಣು ಅಮೂಲ್ಯವೆಂದ ಕುಮಾರ ಕಕ್ಕಯ್ಯ.[೪೬]

ಕೃಷಿಕರ ಬದುಕಿನ ಅವಿಭಾಜ್ಯ ಅಂಗಗಳಾಗಿರುವವರು ಗ್ರಾಮೀಣ ಕಸಬುದಾರರು. ಬಡಿಗ, ಕಂಬಾರ, ಕುಂಬಾರ, ಡೋಹರ, ಸಮಗಾರ, ನೇಕಾರ, ಶಿವಸಿಂಪಿಗ, ಗಾಣಿಗ, ಮೇದಾರ, ಪತ್ತಾರ, ಮುಂತಾದ ಕಾಯಕಗಳವರು, ಕೃಷಿ ಕೂಲಿ–ಕಾರ್ಮಿಕರು ಶ್ರಮಜೀವಿಗಳಾಗಿದ್ದಾರೆ. ರೈತನಿಗೆ ಉಪಯುಕ್ತ ಕೃಷಿ ಸಲಕರಣೆಗಳನ್ನು ಸಿದ್ಧಪಡಿಸಿ ಕೊಡುವವರು, ಪರಸ್ಪರ ಅವಲಂಬಿತರು, ಸಹಬಾಳ್ವೆಯ ಜೀವನ ನಡೆಸುವವರಾಗಿದ್ದಾರೆ. ಇಂತಹ ಶ್ರಮಜೀವಿಗಳೇ ರಾಷ್ಟ್ರದ ಶ್ರೇಷ್ಠ ಪ್ರಜೆಗಳೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ –

ದುಡಿಮೆಯೇ ಸಮಾಜದ ಸಂಸ್ಕೃತಿ
ದುಡಿಮೆಯೇ ನಾಡಿನ ನಾಗರಿಕತೆ

---

೪೫. –ಅದೇ– ಪು–೨೩೩ ವ–೮೯೮.
೪೬. ಕುಮಾರ ಕಕ್ಕಯ್ಯನ ವಚನಗಳು – ಪು–೨೩೩ ವ–೮೯೯

ದುಡಿಮೆಯೇ ಆಡಳಿತೆಯ ನೆಲಗಟ್ಟು
ದುಡಿಮೆಯೆ ದೇಶದ ಸಿರಿ ಸಂಪತ್ತು
ಬೆವರು ಹರಿಸಿ ದುಡಿಯುವ ಶ್ರಮಜೀವಿಗಳೇ
ರಾಷ್ಟ್ರದ ಶ್ರೇಷ್ಠ ಪ್ರಜೆಗಳೆಂದ
ಕುಮಾರ ಕಕ್ಕಯ್ಯ.[೪೭]

ಶ್ರಮದಿಂದ ಹೊಲ ಮನೆ, ಕೆರೆ ಕಾಲುವೆ, ಆಹಾರಧಾನ್ಯ, ಕುಲುಮೆ, ಕಾರಖಾನೆ ವಸ್ತು ಒಡವೆ, ಯಂತ್ರ ತಂತ್ರ ಮುಂತಾದವೆಲ್ಲವೂ ಇರುವುದರಿಂದ, ಶ್ರಮಿಕರು ಉತ್ಪಾದನೆಯ ಜನಕರು, ಅವರೇ ಸಂಪತ್ತಿನ ನಿಜವಾದ ಒಡೆಯರು ಎಂಬುದನ್ನು ಕುಮಾರ ಕಕ್ಕಯ್ಯ ತಿಳಿಸುತ್ತಾರೆ.

ಗ್ರಂಥ ಎಷ್ಟೇ ಶ್ರೇಷ್ಠವಾದರೂ
ಅಧ್ಯಯನ ಮಾಡದೇ ವಿದ್ಯೆಯಿಲ್ಲ.
ಭೂಮಿ ಎಷ್ಟೇ ಫಲವತ್ತಾದರೂ
ಉತ್ತಿ ಬಿತ್ತದೆ ಬೆಳೆಯಿಲ್ಲ.
ಸಿಂಹ ಎಷ್ಟೇ ಬಲಿಷ್ಠವಾದರೂ
ತಡಕಾಡದೇ ಬೇಟೆ ಎಟಕುವದಿಲ್ಲ.
ಈ ಜಗತ್ತು ಶ್ರಮಜೀವಿಗಳ
ಸ್ವರ್ಗವೆಂದ ಕುಮಾರ ಕಕ್ಕಯ್ಯ.[೪೮]

ಕೃಷಿ ಹಾಗೂ ಕಸಬುದಾರರ ಶ್ರಮದ ಫಲದ ಮೇಲೆ, ಪರಾವಲಂಬಿ ಜೀವಿಗಳಂತೆ ಬದುಕುತ್ತಿರುವ ಮಠಮಾನ್ಯರು, ರಾಜಕಾರಣಿಗಳು, ಪದವೀಧರರು ತಮ್ಮ ಕರ್ತವ್ಯಗಳನ್ನು ಮರೆತು ವಿಲಾಸಮಯ ಜೀವನ ಸಾಗಿಸುತ್ತಿದ್ದಾರೆ. ಇಂತಹ ಸಾಕ್ಷರರು ವಿಪರೀತವಾಗಿ ರಾಕ್ಷಸರಾಗುತ್ತಿದ್ದಾರೆ. ಇವರಿಗಿಂತ ನಿರಕ್ಷರಿ ಗ್ರಾಮೀಣ ಜನರೇ ಶ್ರೇಷ್ಠರೆಂದು ಕುಮಾರ ಕಕ್ಕಯ್ಯ ಹೇಳುತ್ತಾರೆ–

ಕಾವಿಧರಿಸಿ ಮೃಷ್ಟಾನ್ನ ಉಂಡು
ಮಠದಲಿ ಮಂಚದ ಮೇಲೆ ಮಲಗುವ ವಿರಕ್ತರಿಗಿಂತ,
ಬಾರಿನಲಿ ಕುಡಿದು ಕ್ಲಬ್ಬಿನಲಿ ಆಡಿ
ಲಾಜಿನಲಿ ಮೋಜು ಮಾಡುವ ಪದವೀಧರರಿಗಿಂತ,
ಹೊಲದಲಿ ದುಡಿದು, ಮನೆಯಲಿ ಉಂಡು
ಮಡದಿಯೊಡನೆ ಮಲಗುವ ನಿರಕ್ಷರಿ
ಬಹುಲೇಸೆಂದ ಕುಮಾರ ಕಕ್ಕಯ್ಯ.[೪೯]

---

೪೭. ಕುಮಾರ ಕಕ್ಕಯ್ಯನ ವಚನಗಳು ಪು–೩೧೦ ವ–೧೧೯೭
೪೮. –ಅದೇ– ಪು–೩೦೮ ವ–೧೧೯೦
೪೯ ಕುಮಾರ ಕಕ್ಕಯ್ಯನ ವಚನಗಳು – ಪು–೧೪೭ ವ–೫೬೮

ಆದರೆ, ಇಂದು ರೈತನ ಬದುಕು ಏನಾಗಿದೆ? "ದೇಶದ ಬೆನ್ನೆಲುಬು 'ರೈತ' ಎಂದು ಹೇಳುತ್ತಲೇ ಅವನನ್ನು ಬೆನ್ನ ಹಿಂದಯೇ ಜೋಪಾನವಾಗಿ ಕಾಯ್ದಿರಿಸಿದ್ದೇವೆ. ಎಲ್ಲರ ಉಸಿರಿಗೂ ಉಸಿರಾದವನ ಬಗ್ಗೆ ನಮಗೆ ಯೋಚನೆಯೇ ಇಲ್ಲ. ವಾಸ್ತವದಲ್ಲಿ ಅವನ ಸ್ಥಿತಿಗತಿ, ಬದುಕಿನ ರೀತಿ ನೀತಿ, ತಿಳಿವಳಿಕೆಯ ಮಟ್ಟ, ಆಸೆ ಅಕಾಂಕ್ಷೆಗಳನ್ನು ಅರಿವ ಅರಿವು ನಮಗಾಗಿಲ್ಲ".[೫೦]

ಮಣ್ಣಿನ ಮಗನೊಬ್ಬ ಬಿಡುವಿಲ್ಲದೆ ದುಡಿದು ನೆಲ ಹಸನು ಮಾಡಿ, ಉತ್ತಮ ಬೀಜ ಬಿತ್ತಿದ. ಅವನ ಬೆವರಿಗೆ ತಕ್ಕ ಬೆಲೆ ಕೊಡುವ ಸಮೃದ್ಧ ಪೈರು ಬೆಳೆದು ನಿಂತಿತು. ರೈತ ಸಡಗರದಿಂದ ಕೊಯ್ಲು ಮಾಡಿದ. ಕಣಕ್ಕೆ ಕೊಂಡೊಯ್ಯಬೇಕೆನ್ನುವಷ್ಟರಲ್ಲಿ ಬಿರುಗಾಳಿಯೊಂದಿಗೆ ಭೋರ್ಗರೆವ ಮಳೆ ಸುರಿಯಿತು. ಕೊಯ್ದ ಪೈರಿನಲ್ಲಿ ಎಷ್ಟೋ ಗಾಳಿಗೆ ಹಾರಿಹೋಯಿತು. ಹರಿದ ನೀರಿನಲ್ಲಿ ಎಷ್ಟೋ ಕೊಚ್ಚಿ ಹೋಯಿತು"[೫೧] ಇಂತಹ ಪ್ರಕೃತಿಯ ವಿಕೋಪಕ್ಕೆ ರೈತ ಪ್ರತಿವರುಷ ತುತ್ತಾಗುತ್ತಾನೆ. ಮನೆ– ಮಾರು ಬಿದ್ದು ಹೋಗುತ್ತವೆ, ಹೋಲದ ಬೆಳೆ, ಫಲವತ್ತಾದ ಮಣ್ಣು ನಾಶವಾಗುತ್ತದೆ. ರೈತನು ಅನಿವಾರ್ಯವಾಗಿ ಆತ್ಮ ಹತ್ಯೆಗೆ ಶರಣಾಗುವ ದುಸ್ಥಿತಿಗೆ ತಲಪುತ್ತಾನೆ. ಇಂತಹ ದಾರುಣ ಸ್ಥಿತಿಯಿಂದ ಮೇಲೆತ್ತುವ ಮನುಷ್ಯತ್ವವಿಲ್ಲದ ಮನಸ್ಸುಗಳು ಪಟ್ಟಣದ ಮಹಲುಗಳಲ್ಲಿ ನಿದ್ರಿಸುತ್ತವೆ, ರೈತನ ಬಗ್ಗೆ ಮೊಸಳೆ ಕಣ್ಣೀರು ಸುರಿಸುತ್ತವೆ. ಅತಿವೃಷ್ಟಿ–ಅನಾವೃಷ್ಟಿಗಳ ಪರಿಹಾರ ನಿಧಿಯಲ್ಲಿ ತಾವು ಎಷ್ಟು ಹಣ ಕೊಳ್ಳೆಹೊಡೆಯಬಹುದೆಂದು ಜೊಲ್ಲು ಸುರಿಸುತ್ತಲೇ ಪಂಚತಾರಾ ರೆಸಾರ್ಟಗಳಲ್ಲಿ ಮೋಜುಮಾಡುತ್ತಾ ಸುಖದ ಕನಸು ಕಾಣುತ್ತವೆ.

**iv) ಒಗಟುಗಳು :**

ಜಾನಪದ ಸಾಹಿತ್ಯದಲ್ಲಿ ಒಗಟುಗಳು ಮನರಂಜನೆಗಾಗಿ ನಮ್ಮ ಹಳ್ಳಿ ಜನ ಸೃಷ್ಟಿಸಿದ ಬುದ್ಧಿವಂತಿಕೆ, ಜಾಣ್ಮೆಯ ನುಡಿಗಳಾಗಿವೆ. ನಮ್ಮ ಗ್ರಾಮೀಣ ಜನರು ಅನಕ್ಷರಸ್ಥರಾಗಿದ್ದರೂ ತುಂಬಾ ಬುದ್ಧಿವಂತರು.ಪಟ್ಟಣಗಳ ಅಕ್ಷರಸ್ಥ ಪಂಡಿತರೂ ಸಹ ಇವರ ಮಾತಿನ ಜಾಣ್ಮೆಯ ಎದರು ನಿರುತ್ತರರಾಗಿ ತಲೆತಗ್ಗಿಸುವ ಪ್ರಸಂಗಗಳೂ ಉಂಟಾಗುತ್ತವೆ.

"ಕನ್ನಡದಲ್ಲಿ ಒಗಟನ್ನು ಸೂಚಿಸಲು ಅನೇಕ ಶಬ್ದಗಳನ್ನು ಬಳಸಲಾಗುತ್ತದೆ. ಒಗಂಟೆ, ಒಗಟು, ಓಗಟೆ, ಒಂಟು, ಒಡಪು, ಒಡಗತೆ, ವಡಚುಕತೆ–ಇತ್ಯಾದಿ. ಇವುಗಳ ಪೈಕಿ ಈಗ ತುಂಬಾ ಪ್ರಚುರವಿರುವವು ಒಗಟು ಅಥವಾ ಒಗಟಿ, ಒಡಪು, ಒಡಚು ಅಥವಾ ವಡಚು ಎಂಬ ಶಬ್ದ ರೂಪಗಳು"[೫೨]

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–ಮೊದಲ ಸಂಪುಟದಲ್ಲಿ ಒಗಂಟು, ಒಗಂಟೆ, ಒಗಟು, ಒಗಟೆ ಎಂದು ತಿಳಿಸಿ ಇದು ನಾಮಪದವಾಗಿದೆ.

---

೫೦. ಬೆಳಕಿನ ದಾರಿ–ಜ.ಹೊ.ನಾರಾಯಣಸ್ವಾಮಿ ಪು–೭೬

೫೧. ಕರ್ನಾಟಕ ಜನಪದ ಕಲೆಗಳು– ಗೋ. ರು. ಚನ್ನಬಸಪ್ಪ ಪು–xv

೫೨. ಕನ್ನಡ ಒಗಟುಗಳ ಸಮೀಕ್ಷೆ–ಡಾ.ನಂ.ತಪಸ್ವೀಕುಮಾರ ಪು–೧

ಒಗಟು ಎಂದರೆ – "ಸುಲಭವಾಗಿ ತಿಳಿಯಲು ಅಥವಾ ಬಿಡಿಸಲು ಸಾಧ್ಯವಾಗದ ಮಾತು ಗೂಢವಾದ ಮಾತು."[೫೩] ಎಂದು ಅರ್ಥ ಕೊಡಲಾಗಿದೆ.

"ಒಗಟು ಬುದ್ಧಿಪೂರ್ವಕವಾಗಿ ಕಟ್ಟಿದ ಪ್ರಶ್ನೆ. ಗಾದೆ ಅನುಭವಜನ್ಯವಾದರೆ ಒಗಟು ಬುದ್ಧಿಜನ್ಯ. ಒಗಟುಗಳನ್ನು ಬಿಡಿಸಬೇಕಾದರೆ ಬುದ್ಧಿಯು ಚುರುಕಾಗಿ ಕೆಲಸ ಮಾಡಬೇಕು. ನಮ್ಮ ಜನಪದರು ಅಕ್ಷರ ಕಲಿಯದೆ ಕಾವ್ಯ ರಚಿಸುವಂತೆಯೇ ವಿದ್ಯೆ ಓದದೆಯೂ ಬುದ್ಧಿವಂತರು. ಅವರ ಬುದ್ದಿವಂತಿಕೆಯ ಪ್ರತೀಕಗಳು ಈ ಒಗಟುಗಳು"[೫೪] ಎಂದು ಜಾನಪದ ವಿದ್ವಾನ್ ಶ್ರೀ ಎಸ್.ಜಿ.ಸಿದ್ಧರಾಮಯ್ಯ ಅಭಿಪ್ರಾಯ ಪಡುತ್ತಾರೆ.

ಕನ್ನಡ ಸಾಹಿತ್ಯದಲ್ಲಿ ಒಗಟು, ಒಡಪು ಎಂಬ ಈ ಪ್ರಕಾರವು ಸಾವಿರಾರು ವರುಷಗಳ ಹಿಂದೆಯೇ ಜನಪದರಲ್ಲಿ ಬೆಳೆದು ಬಂದಿದ್ದು, ಅನಂತರ ಪ್ರಾಚೀನ ಕವಿಗಳು ಬಳಸಿರುವುದು ತಿಳಿದು ಬರುತ್ತದೆ. ಅಭಿನವ ಪಂಪನೆಂದೇ ಖ್ಯಾತಿವೆತ್ತ ನಾಗಚಂದ್ರನು ಕಂತಿಯೆಂಬ ಜಾಣ ಮಹಿಳೆಯೊಂದಿಗೆ ನಡೆಸಿದ ಸಂವಾದವನ್ನು ಶಂ.ಬಾ. ಜೋಶಿ ಅವರು 'ಸಮಸ್ಯಾಪೂರ್ತಿಯ ತೊಡಕುಗಳು, ಒಡಪುಗಳು' ಎಂದು ಕರೆದಿದ್ದಾರೆ. "ಅವರು ಹೇಳುವಂತೆ ಕಂತಿಯು ಅಭಿನವ ಪಂಪನಿಗೆ ಹಾಕಿದ ತೊಡಕು– 'ದನವಂ ಕಡಿ ಕಡಿದು ಬಸದಿಗೆಳೆಯುತಿರ್ದರ್' ಎಂಬುದು. ಪ್ರತಿಭಾಶಾಲಿಯಾದ ಅಭಿನವ ಪಂಪನೂ ಲೀಲೆಯಿಂದ ಕಂತಿಯ ತೊಡಕನ್ನು ಬಿಡಿಸಿ ಹೀಗೆ ಉತ್ತರವನ್ನಿತ್ತನು–

ವನದೊಳಗೆ ಪುಟ್ಟಿ ಬೆಳೆಯುತೆ
ತನಿಗಂಪಂ ಪತ್ತುದೆಸೆಗೆ ಬೀರುತಿರ್ಪಾ
ಘನಸುರುಚಿರ ಸಚ್ಚಂ–
ದನವಂ ಕಡಿಕಡಿದು ಬಸದಿಗೆಳೆಯುತ್ತಿರ್ದರ್॥[೫೫]

ಅಂದರೆ 'ದನವನ್ನು ಕಡಿಕಡಿದು ಬಸದಿಗೆಳೆಯುತ್ತಿದ್ದರು' ಎಂದು ಕಂತಿಯು ಒಡ್ಡಿದ ಪ್ರಶ್ನೆರೂಪದ ಒಗಟಿಗೆ, ನಾಗಚಂದ್ರನು ಕವಿತಾಶಕ್ತಿಯಿಂದ ಪದ್ಯ ರಚಿಸಿ ಚಂದನವನ್ನು ಕಡಿ ಕಡಿದು ಬಸದಿಗಳೆಯುತ್ತಿದ್ದರು ಎಂದು ಉತ್ತರ ಕೊಟ್ಟದ್ದು ರೋಮಾಂಚನ, ಮನರಂಜನೆಯನ್ನುಂಟು ಮಾಡುತ್ತದೆ. ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರುವಂತೆ ಜೈನಮತವು 'ಅಹಿಂಸಾ ಪರಮೋಧರ್ಮ' ಎಂದು ಪ್ರತಿಪಾದಿಸಿದ್ದು, ಅಲ್ಲಿ ಚಂದನವನ್ನು ಕಡಿ ಕಡಿದು ಬಸದಿಗೆಳೆಯುತ್ತಿದ್ದರು ಎಂದು ತಿಳಿದಾಗ ಅವರ ಜಾಣ್ಮೆಯನ್ನು ಕಂಡಾಗ ವಿಸ್ಮಯ, ಸಂತಸವನ್ನುಂಟು ಮಾಡುತ್ತದೆ.

೧೨ ನೇ ಶತಮಾನದ ಅನುಭವ ಮಂಟಪದಲ್ಲಿ ವಚನಸಾಹಿತ್ಯದ ಚರ್ಚೆ–ಚಿಂತನ ಕಾಲಕ್ಕೆ ಬೆಡಗಿನ ವಚನಗಳು ರಚನೆಯಾದವು. ಬೆಡಗು ಎಂದರೆ ರಹಸ್ಯ,

---

೫೩. ಕನ್ನಡ ನಿಘಂಟು–ಪ್ರಸಂಪಾದಕರು ಡಾ॥ ಡಿ.ಎಲ್. ನರಸಿಂಹಾಚಾರ್ ಪು–೧೧೯೦
೫೪. ಸಿರಿಗನ್ನಡ–ಕರ್ನಾಟಕ ಜನಪದ ಸಂಸ್ಕೃತಿ–ಎಸ್.ಜಿ.ಸಿದ್ಧರಾಮಯ್ಯ ಪು–೩೦೪
೫೫. ಕನ್ನಡ ಒಗಟುಗಳ ಸಮೀಕ್ಷೆ–ಡಾ.ನಂ.ತಪಸ್ವೀಕುಮಾರ ಪು ೩೯–೪೦.

ಗೂಢಾರ್ಥ ಎಂದು ಅರ್ಥ. ಇವೂ ಕೂಡ ಒಗಟಿನ ರೂಪದಲ್ಲಿ ಬೌದ್ಧಿಕ ಚಿಂತನಕ್ಕೆ ತೊಡಗಿಸುತ್ತವೆ. ಅಲ್ಲಮ ಪ್ರಭುದೇವರ ಒಂದು ಬೆಡಗಿನ ವಚನ ಹೀಗಿದೆ–

> ಸತ್ತಾತನೊಬ್ಬ, ಹೊತ್ತಾತನೊಬ್ಬ
> ಇವರಿಬ್ಬರನೂ ಒಯ್ದು ಸುಟ್ಟಾತನೊಬ್ಬ
> ಮದುವಣಿಗನಾರೊ, ಮದುವಳಿಗೆಯಾರೊ?
> ಮದುವೆಯ ನಡುವೆ ಮರಣವಡ್ಡಬಿದ್ದಿತ್ತು.
> ಮುನ್ನ ಮದುವಳಿಗನಳಿದ.
> ಗುಹೇಶ್ವರಲಿಂಗನೆಂದೂ ಅಳಿಯ[೫೬]

ಈ ವಚನ ಒಗಟಿನ ರೂಪದಲ್ಲಿದೆ. ಇಲ್ಲಿಯ ಒಂದೊಂದು ಶಬ್ದಗಳೂ ನೋಡಲು ಕ್ಲಿಷ್ಟವಾಗಿವೆ. ಅರ್ಥ ಬಿಡಿಸಿದಾಗ ಅಮಿತಾನಂದವುಂಟಾಗುತ್ತದೆ. ಅಧ್ಯಾತ್ಮಸಾಧನೆಯಲ್ಲಿ–ಸತ್ತಾತ (ದೇಹಭಾವ), ಹೊತ್ತಾತ (ಜೀವಭಾವ), ಇವರಿಬ್ಬರನೂ ಒಯ್ದು ಸುಟ್ಟಾತ (ಅರಿವಿನ ಗುರು). ಮದುವಣಿಗ ಲಿಂಗ (ಪರಮಾತ್ಮ) ಮದುವಳಿಗೆ ಅಂಗ (ಆತ್ಮ). ಅಂಗ–ಲಿಂಗದ ಮದುವೆ (ದೀಕ್ಷೆ)ಯ ನಡುವೆ ಮರೆವಿನ ಸಂಸಾರ ಭ್ರಮೆ ದ್ವೈತ ಭಾವ ಮೃತ್ಯು ಅಡ್ಡಬರುತ್ತದೆ.ಶರಣಸತಿ–ಲಿಂಗಪತಿ ಮದುವೆ, ಸಾಮರಸ್ಯದ ನಂತರ, ಅಂದರೆ ಲಿಂಗಾಂಗಯೋಗವಾಗಿ ಆತ್ಮತತ್ವವು ಪರಮಾತ್ಮತತ್ವದಲ್ಲಿ ಲೀನವಾಗುತ್ತದೆ. ಮದುವಳಿಗನಳಿಯುವುದು ಎಂದರೆ ಅಂಗ ಲಿಂಗದಲ್ಲಿ ಅಳಿದು, ಲಿಂಗವೊಂದೇ ಉಳಿಯುವುದು. ಅದನ್ನು ಗುಹೇಶ್ವರಲಿಂಗನೆಂದೂ ಅಳಿಯ ಎಂದು ಅನುಭಾವದ ಅರ್ಥವಿದೆ.

ಇದೇ ರೀತಿ ಅನಭಾವಿ ಶರಣೆ ಮುಕ್ತಯಕ್ಕ–ಪ್ರಭುದೇವರ ಸಂವಾದವೂ ಒಗಟಿನ ರೂಪದಲ್ಲಿರುವುದು ನೋಡಬಹುದಾಗಿದೆ ಪ್ರಭುದೇವರು– "ಅಂಗೈಯೊಳಗೊಂದು ಅರಳ್ದತಲೆ ಹಿಡಿದುಕೊಂಡು ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ?[೫೭] ಎಂದು ಬೆಡಗಿನ ವಚನ ರೂಪದಲ್ಲಿ ಕೇಳುತ್ತಾರೆ. ಆಗ ಮುಕ್ತಾಯಕ್ಕಳು ಕೊಟ್ಟ ಉತ್ತರ ಹೀಗಿದೆ –

> ಆರೆಂದು ಕುರುಹ ಬೆಸಗೊಳಲು ಏನೆಂದು ಹೇಳುವೆನಯ್ಯಾ?
> ಕಾಯದೊಳಗೆ ಮಾಯವಿಲ್ಲ. ಭಾವದೊಳಗೆ ಭ್ರಮೆಯಿಲ್ಲ.
> ಕರೆದುಬೆಸಗೊಂಬರೆ ಕುರುಹಿಲ್ಲ.
> ಒಬ್ಬರಿಗೂ ಹುಟ್ಟದೆ, ಅಯೋನಿಯಲ್ಲಿ ಬಂದು
> ದುರ್ಬುದ್ಧಿಯಾದವಳನೇನೆಂಬೆನಣ್ಣಾ!
> ತಲೆಯಳಿದು ನೆಲೆಗೆಟ್ಟು ಬೆಳಗುವ ಜ್ಯೋತಿ
> ಎನ್ನ ಅಜಗಣ್ಣತಂದೆಯ ಬೆನ್ನ ಬಳಿಯವಳಾನಯ್ಯಾ[೫೮]

---

೫೬. ಅಲ್ಲಮ ಪ್ರಭುದೇವರ ವಚನ – ನಿರ್ವಚನ ಶ್ರೀ ಸಿದ್ದೇಶ್ವರ ಸ್ವಾಮಿಗಳು ವ– ೬೨೯.
೫೭. ಶೂನ್ಯ ಸಂಪಾದನೆ –ಸಂ॥ ಸಂ.ಶಿ. ಭೂಸನೂರಮಠ ಪು–೨೭
೫೮. ಶೂನ್ಯ ಸಂಪಾದನೆ–ಸಂ॥ ಸಂ.ಶಿ. ಭೂಸನೂರಮಠ ಪು–೨೭

ಈ ಚರ್ಚೆಯಲ್ಲಿ ಅಲ್ಲಮಪ್ರಭು ಕೇಳಿದ ಪ್ರಶ್ನೆ ಅದ್ಭುತ ಬೆಡಗಿನಿಂದ, ಒಗಟಿನಿಂದ ಕೂಡಿದೆ. ಅಂಗೈಯಲ್ಲಿ ಅರಳ್ದ ತಲೆ ಎಂದರೆ ಅರಿವಿನ ಕುರುಹಾದ ಇಷ್ಟಲಿಂಗ, ಇಂತಹ ಲಿಂಗವ ನೋಡುತ್ತಾ ಕಂಗಳಲಿ ಮುತ್ತು ಪವಣಿಸುವುದು ಎಂದರೆ ಧಾರಾಕಾರವಾಗಿ ಕಣ್ಣೀರು ಸುರಿಸುವವಳು ಯಾರು? ಎಂದು ಅರ್ಥ.

ಈ ಬೆಡಗಿನ ಪ್ರಶ್ನೆಗೆ, ಮುಕ್ತಾಯಕ್ಕಳು ಅಷ್ಟೇ ಜಾಣ್ಮೆ ಹಾಗೂ ಅನುಭಾವದಿಂದ ಉತ್ತರ ಕೊಟ್ಟದ್ದು ರೋಮಾಂಚನಕಾರಿಯಾಗಿದೆ. ತನುವಿನಲ್ಲಿ ನಾನು ಎಂಬ ಮಾಯೆಯಿಲ್ಲ, ಭಾವದೊಳಗೆ ನನ್ನದು ಎಂಬ ಭ್ರಮೆಯಿಲ್ಲ. ಮಾತನಾಡಿಸಬೇಕೆಂದರೆ ಆಕಾರವಿಲ್ಲ. ಯೋನಿಜರಾಗಿ ಅಂದರೆ ಗರ್ಭದಲ್ಲಿ ಹುಟ್ಟುವವರಿಗೆ ಆಕಾರವಿರುತ್ತದೆ, ಅಯೋನಿಜರಾಗಿ ಅಂದರೆ ಗುರುಕರ ಸಂಜಾತರಾದವರಿಗೆ ಕುರುಹು ಇರುವದಿಲ್ಲ. ಅರಿವು ನಿರಸನವಾಗಿ, ಪರಂಜ್ಯೋತಿ ಸ್ವರೂಪವಾಗಿರುವ ಶರಣ ಅಜಗಣ್ಣನ ಬೆನ್ನಬಳಿಯವಳು, ಅಂದರೆ ಸಹೋದರಿ, ತಂಗಿ ನಾನು ಎಂದು ಉತ್ತರಿಸುತ್ತಾಳೆ.

ಇದೇ ತೆರನಾಗಿ ಬಸವಣ್ಣ, ಅಕ್ಕಮಹಾದೇವಿ, ಲಿಂಗಮ್ಮ, ಸತ್ಯಕ್ಕ ಬೊಂತಾದೇವಿ, ಚೆನ್ನಬಸವಣ್ಣ ಮುಂತಾದ ಶರಣರ ವಚನಗಳಲ್ಲಿ ಜಾನಪದ ಸಾಹಿತ್ಯದ ಬಗಟಿನ ರೂಪವು ಬೆಡಗಿನ ವಚನರೂಪವಾಗಿ ಅನುಭಾವದ ನೆಲೆಯಲ್ಲಿ ಹೊರಹೊಮ್ಮಿರುವುದು ಕಂಡು ಬರುತ್ತದೆ.

ಬಸವಾದಿ ಶರಣರ ವಚನಪರಂಪರೆಯ ಬಳಿವಿಡಿದು ಬಂದ ಕುಮಾರ ಕಕ್ಕಯ್ಯನವರು ಒಗಟಿನ ವಚನಗಳ ರಚನೆ ಮಾಡಿರುವುದನ್ನು ಕಾಣುತ್ತೇವೆ–

ತಲೆಯಿಲ್ಲ ಬಾಲಿಲ್ಲ ಕೆಸರಿನಲಿ ಬೀಡು.
ಚರ್ಮವಿಲ್ಲ ಮಾಂಸವಿಲ್ಲ ಎಲುಬಿನ ಗೂಡು
ಜಲದಲಿ ನೆಲಹಿಡಿದು ಈಸುವುದು
ಭೂಮಿಯ ಮೇಲೆ ಅಡ್ಡಡ್ಡ ಓಡುವದು.
ಕಣ್ಣುಚಾಚಿ ನೋಡಿ ಮತ್ತೆ ಮಡಚುವದು
ಹೊಟ್ಟೆಯಲಿ ಹಿಂಡು ಮರಿ ಬಚ್ಚಿಡುವ
ಜಗದಲಿ ಸೋಜಿಗದ ಪ್ರಾಣಿ (ಏಡಿ)ಯೆಂದ
ಕುಮಾರ ಕಕ್ಕಯ್ಯಾ[೫೯]

ಏಡಿಯ ವರ್ಣನೆಯು ಒಗಟಿನ ರೂಪದಲ್ಲಿ ಮುಂದುವರೆದು ಕೊನೆಗೆ ಆಶ್ಚರ್ಯಕರವಾಗಿ ಬೌದ್ಧಿಕ ಕಸರತ್ತಿನೊಂದಿಗೆ ಮುಗಿದು, ಉತ್ತರ ಅರಿತಾಗ ಆನಂದ ವಿಸ್ಮಯಗಳು ಏಕಕಾಲಕ್ಕೆ ಉಂಟಾಗುತ್ತವೆ.

ಗ್ರಾಮೀಣ ಪರಿಸರದಲ್ಲಿ ಕಸಬುದಾರರ ಕಾಯಕಗಳನ್ನು ಆಧರಿಸಿ ಇವರಾರು? ಬಲ್ಲವರು ಹೇಳಿರೆಂದು ಕೇಳುತ್ತಾರೆ.–

ಹುಳಿಯಿಲ್ಲ, ಸಪ್ಪಗಿಲ್ಲ
ಬೆರಳು ಚೀಪುವ ಸವಿಗಾರ

೫೯. ಕುಮಾರ ಕಕ್ಕಯ್ಯ ವಚನಗಳು ಪು–೩೪೧ ವ–೧೩೨೧

ಚಳಿಯಿಲ್ಲ ನೋವಿಲ್ಲ
ಉರಿ ಕಾಯಿಸುವ ಚಟಗಾರ
ಹುಚ್ಚಲ್ಲ ಪೆದ್ದಲ್ಲ
ಅರಿವೆ ಹರಿಯುವ ಚತುರ
ಬಿಸಿಲಿಲ್ಲ ಸೆಕೆಯಿಲ್ಲ
ನೀರಲಿ ನಿಲ್ಲುವ ಛಲಗಾರ
ಯುದ್ಧವಿಲ್ಲ ಕದನವಿಲ್ಲ
ಕತ್ತಿ ಮಸೆಯುವ ಬಹಾದ್ದೂರ
ಪತಿಯಲ್ಲ ಪ್ರೇಮಿಯಲ್ಲ
ಹೆಂಗಸರ ಕೈ ಹಿಡುಕುವ ಎದೆಗಾರ
ಊರಿಗೆ ಒಕ್ಕಲಾಗಿ, ಎಲ್ಲರಿಗೂ ಬೇಕಾಗಿ
ಕಾಯಕವೇ ಕೈಸಲಾವೆನ್ನುವ
ಇವರಾರು? ಬಲ್ಲವರು ಪೇಳಿರೆಂದ
ಕುಮಾರ ಕಕ್ಕಯ್ಯ[೬೦]

ಕುಮಾರ ಕಕ್ಕಯ್ಯನವರು ಜನಪದ ಜೀವನದ ವಿವಿಧ ಕಾಯಕಜೀವಿಗಳ ವೃತ್ತಿ ವಿಧಾನವನ್ನು ಸೂಕ್ಷ್ಮವಾಗಿ ಗಮನಿಸಿ ಒಗಟಿನ ರೂಪದಲ್ಲಿ ಈ ವಚನ ರಚಿಸಿದ್ದಾರೆ. ಹುಳಿಯಿಲ್ಲ ಸಪ್ಪಗಿಲ್ಲ ಬೆರಳು ಸೀಪುವ ಸವಿಗಾರನೆಂದರೆ – ನೇಕಾರ; ಚಳಿಯಿಲ್ಲ ನೋವಿಲ್ಲ ಉರಿಕಾಸುವ ಚಟಗಾರನೆಂದರೆ – ಕುಮ್ಮಾರ; ಹುಚ್ಚಲ್ಲ ಪೆದ್ದಲ್ಲ ಅರಿವೆ ಹರಿಯುವ ಚತುರನೆಂದರೆ – ಶಿವಸಿಂಪಿಗ; ಬಿಸಿಲಿಲ್ಲ ಸೆಕೆಯಿಲ್ಲ ನೀರಲಿ ನಿಲ್ಲುವ ಛಲಗಾರನೆಂದರೆ – ಅಗಸ; ಯುದ್ಧವಿಲ್ಲ ಕದನವಿಲ್ಲ ಕತ್ತಿ ಮಸೆಯುವ ಬಹಾದ್ದೂರನೆಂದರೆ – ಕ್ಷೌರಿಕ; ಪತಿಯಲ್ಲ, ಪ್ರೇಮಿಯಲ್ಲ ಹೆಂಗಸರ ಕೈಹಿಡುಕುವ ಎದೆಗಾರನೆಂದರೆ – ಬಳೆಗಾರ; ಇವರೆಲ್ಲರೂ ಊರಿಗೆ ಒಕ್ಕಲಮಕ್ಕಳು, ಗ್ರಾಮೀಣ ಜನರೆಲ್ಲರಿಗೂ ಬೇಕಾದವರು, ಕಾಯಕವೇ ಕೈಲಾಸವೆನ್ನುತ್ತಾ ಸತ್ಯ ಶುಧ್ಧ ದುಡಿಮೆಗೈಯುತ್ತಾ ಬದುಕು ಮಾಡುವ ಈ ಜನರು ಒಗಟಿಗೆ 'ವಿಷಯ'ವಾಗಿದ್ದಾರೆ.

ಕುಮಾರ ಕಕ್ಕಯ್ಯ ಇಂತಹ ಅನೇಕ ಒಗಟು, ಬೆಡಗು ರೀತಿಯ ವಚನಗಳನ್ನು ರಚಿಸಿ, ಜಾನಪದ ಸಾಹಿತ್ಯಕ್ಕೂ ಕೂಡ ತಮ್ಮದೇ ಆದ ರೀತಿಯಲ್ಲಿ ಕಾಣಿಕೆ ಸಲ್ಲಿಸಿದ್ದಾರೆ. ಒಟ್ಟಿನಲ್ಲಿ "ಕಾವ್ಯವಯವಾದ ಭಾಷೆ ನುಡಿಗಟ್ಟು – ಒಗಟುಗಳು ಸಂಕೇತ, ಪ್ರತಿಮೆ ರೂಪಕಗಳ ಬಳಕೆಯಿಂದಾಗಿ ಒಡಪುಗಳು ಗಂಭೀರ ಚಿಂತನೆಗೂ ವಿಪುಲವಾದ ಸಾಮಗ್ರಿಯನ್ನು ಒದಗಿಸುತ್ತವೆ. ಆದಿಪ್ರಾಸ, ಅನುಪ್ರಾಸ, ಛೇಕಾನುಪ್ರಾಸಗಳೇ ಇವುಗಳ ಜೀವಾಳ"[೬೧] ಜನಪದರ ಜೀವನದ ರಸಮಯವಾದ, ಮನರಂಜನೆಯ ಮಾಧ್ಯಮವಾಗಿ ಒಡಪು, ಒಗಟುಗಳು ಇಂದಿಗೂ ತಮ್ಮ ನಾವಿನ್ಯತೆಯನ್ನು ಉಳಿಸಿಕೊಂಡಿವೆ.

---

೬೦. ಕುಮಾರ ಕಕ್ಕಯ್ಯನ ವಚನಗಳು– ಪು–೩೧ ವ–೧೧೮

೬೧. ಜನಪದ ಒಡಪುಗಳು–ಬಿ.ಎಸ್.ಭಜಂತ್ರಿ, ಪು–೩.

**v) ಗಾದೆ ಮಾತುಗಳು :** ಕನ್ನಡ ಸಾಹಿತ್ಯದ ಪ್ರಪ್ರಥಮ ಅನುಭವದ ನುಡಿಗಳೆಂದರೆ ಗಾದೆ ಮಾತುಗಳು.ಗಾದೆ ಮಾತುಗಳು ಸಾವಿರಾರು ವರುಷಗಳಿಂದ ನಮ್ಮ ಜನಪದರ ಜೀವನಾನುಭವ ಮೂಸೆಯಲ್ಲಿ ಹಾಯ್ದು ಬಂದ ಸತ್ಯದ ನುಡಿಗಳು. 'ವೇದ ಸುಳ್ಳಾಗಬಹುದು, ಗಾದೆ ಸುಳ್ಳಾಗುವದಿಲ್ಲ' ಎಂಬ ನುಡಿಯಲ್ಲಿ ವೇದಕ್ಕಿಂತಲೂ ಗಾದೆಯು ಶ್ರೇಷ್ಠವಾದುದೆಂದು ತಿಳಿದುಬರುತ್ತದೆ. ಗಾದೆಯು ಗ್ರಾಮೀಣ ಜನರ ಅನುಭದ ಕೆನೆ, ಬೆಣ್ಣೆ ಎಂದು ಹೇಳಬಹುದು.

"ಗಾದೆ ಎಂಬ ಪದಕ್ಕೆ ಕನ್ನಡದಲ್ಲಿ ನಾಣ್ಣುಡಿ, ಅನುಭವದ ವಾಣಿ, ಲೋಕೋಕ್ತಿ ಎಂದೂ, ತಮಿಳಿನಲ್ಲಿ ಪೊವಿಮವೆ ಹಳೆಯ ಮಾತು ಎಂದೂ, ಪ್ರಾಕೃತದಲ್ಲಿ ಗಾಥಾಶಬ್ದದ ತದ್ಭವ ಗಾದೆ, ಗತಿಬದ್ಧ ನುಡಿ ಎಂದೂ ಸಂಸ್ಕೃತದಲ್ಲಿ ಸುಭಾಷಿತ, ನೀತಿವಚನ ಎಂದೂ ಸಮಾನಾರ್ಥಕ ಪದಗಳನ್ನು ಬಳಸಲಾಗಿದೆ."[೬೨]

"ಗಾದೆಗಳು ನಾಡಿನ ಜನತೆಯ ಆಲೋಚನೆ, ಭಾವನೆಗಳ ಪ್ರತೀಕಗಳು. ಗಾದೆಗಳನ್ನು ಯಾರು ಯಾವಾಗ ಸೃಷ್ಟಿಸಿದರು ಎಂಬುದನ್ನು ಹೇಳುಲಾಗುವದಿಲ್ಲ. ಜನಸಾಮಾನ್ಯರ ಆಡು ನುಡಿಯಲ್ಲಿ ಪರಂಪರಾಗತವಾಗಿ ಇವು ಹರಿದು ಬರುತ್ತವೆ. 'ಹಲವರ ಜ್ಞಾನ ಮತ್ತು ಒಬ್ಬನ ವಿವೇಕವೇ ಗಾದೆ' ಎಂದು ಲಾರ್ಡ ರಸೆಲ್ ಹೇಳಿರುವ ಮಾತು ಗಾದೆಯ ಗುಣ ಮತ್ತು ಮಹತ್ವವನ್ನು ಚೆನ್ನಾಗಿ ತಿಳಿಸುತ್ತದೆ."[೬೩] ಗಾದೆಗಳು ಸಮಸ್ತ ಜನಾಂಗದ, ವಿವಿಧ ಕಾಯಕಗಳ ಅನುಭವದಿಂದ ಮೂಡಿಬರುವುದರಿಂದ ಅವು ಸರ್ವಕಾಲಿಕ ಸತ್ಯ ಹಾಗೂ ನಿತ್ಯ ನಿತೂನವಾಗಿವೆ. 'ಗಾದೆಗಳು ಕಿರಿದರಲ್ಲಿ ಹಿರಿದಾದ ಅರ್ಥವನ್ನು ಹೇಳುತ್ತವೆ. ಆದಿ–ಅಂತ್ಯ ಪ್ರಾಸಗಳು ಇರುತ್ತವೆ. ಪದ್ಯದ ಚರಣ ತುಣುಕುಗಳಂತೆ ಗೋಚರಿಸುತ್ತವೆ. ಎರಡು ವತ್ತು ಇಲ್ಲವೆ ಕ್ರಿಯೆಗಳ ಅಥವಾ ವ್ಯಕ್ತಿಗಳ ವಿಷಯ ಇವುಗಳಲ್ಲಿ ಅಡಕವಾಗಿರುತ್ತದೆ. ವಾಚ್ಯಾರ್ಥಕ್ಕಿಂತ ಲಕ್ಷ್ಯಾರ್ಥ, ಒಮ್ಮೊಮ್ಮೆ ವ್ಯಂಗ್ಯಾರ್ಥದಿಂದ ಕೂಡಿದ ಗಾದೆಗಳನ್ನು ಕಾಣಬಹುದು. ಒಂದು ಭಾಗ ಸಹಜಾರ್ಥ ಸೂಚಿಸಿದರೆ ಇನ್ನೊಂದು ಭಾಗ ವಿಶೇಷಾರ್ಥವನ್ನು ಹೇಳುತ್ತದೆ. ಮನುಷ್ಯನ ಅಳವಿಗೆ ಸಿಲುಕಿದ ವಿಷಯವಸ್ತುಗಳೇ ದೃಷ್ಟಾಂತಕ್ಕಿಳಿದು ಗಾದೆಗಳಾಗಿ ಪರಿಣಾಮಿಸುತ್ತವೆ. ಆಡುಮುಟ್ಟದ ಗಿಡವಿಲ್ಲ, ಗಾದೆ ಹೇಳದ ವಿಷಯವಿಲ್ಲ ಎಂಬ ನಾಣ್ಣುಡಿಯೂ ಇದನ್ನೇ ಪುಷ್ಟೀಕರಿಸುತ್ತದೆ."[೬೪] ಸಾಮಾನ್ಯವಾಗಿ ಗಾದೆಗಳು ಕೃಷಿ ಜೀವನಕ್ಕೆ ಸಂಬಂಧಿಸಿದಂತೆ, ಜನಪದರ ಕೌಟುಂಬಿಕ, ಸಾಮಾಜಿಕ, ವ್ಯವಹಾರಿಕ, ಜೀವನಕ್ಕೆ ಸಂಬಂಧಿಸಿದಂತೆ ಹುಟ್ಟುಕೊಂಡಿವೆ. ಕೆಲವು ಗಾದೆಗಳು ಗ್ರಾಮೀಣ ಜನರ ಹಾಸ್ಯ ಪ್ರಜ್ಞೆಗೂ ದ್ಯೋತಕವಾಗಿವೆ.

–ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು
–ಡೋಣಿ ತುಂಬಿ ಹರಿದರೆ ಓಣಿ ತುಂಬ ಜೋಳ

---

೬೨. ಹೊನ್ನ ತೂಗಿದ ನೆಲ : ಜನಪದ ಗಾದೆಗಳು–ಡಾ॥ ಎಂ.ಎನ್ ವಾಲಿ ಪು–೪೪
೬೩. ಸಿರಿಗನ್ನಡ : ಕರ್ನಾಟಕ ಜನಪದ ಸಂಸ್ಕೃತಿ– ಎಸ್.ಜಿ. ಸಿದ್ದರಾಮಯ್ಯ ಪು–೩೦೨
೬೪. ಕಾಯಕ ಪರಿಣಾಮಿಃ ವಚನ ಸಾಹಿತ್ಯದಲ್ಲಿ ಗಾದೆಗಳು – ಡಾ॥ ಎಂ.ಎಸ್. ಲಠ್ಠೆ ಪು – ೧೨೩೬

–ಮಳೆ ಬಂದರೆ ಕೇಡಲ್ಲ ಮಗ ಉಂಡರೆ ಕೇಡಲ್ಲ
–ನೂಲಿನಂತೆ ಸೀರೆ ತಾಯಿಯಂತೆ ಮಗಳು
–ಊಟಬಲ್ಲವನಿಗೆ ರೋಗವಿಲ್ಲ ಮಾತುಬಲ್ಲವನಿಗೆ ಜಗಳವಿಲ್ಲ
–ಮಾತು ಆಡಿದರೆ ಹೋಯ್ತು ಮುತ್ತು ಒಡೆದರೆ ಹೋಯ್ತು.
–ಅಜ್ಜಿ ನೂತದ್ದು ಮೊಮ್ಮಗನ ಉಡದಾರಕ್ಕೆ ಸಾಲಲಿಲ್ಲ
–ಕದ್ದು ಹೋಳಗಿ ಕೊಟ್ಟರೆ ಬೆಲ್ಲ ಇಲ್ಲ ಅಂದರಂತೆ
–ಗಂಡ ಹೆಂಡರ ಜಗಳ ಉಂಡು ಮಲಗುವತನಕ
–ಊರ ಚಿಂತಿಗಿ ಮುಲ್ಲಾ ಸೊರಗಿದನಂತೆ
–ಗಡ್ಡಕ ಬೆಂಕಿ ಹತ್ತಿದಾಗ ಬಾವಿ ತೋಡಿದರಂತೆ
–ಸಾವಿರ ಕುದರೆ ಸರದಾರ ಮನೆ ಹೆಂಡತಿಗೆ ಪಿಂಜಾರ
–ಎಲ್ಲಾರ ಮನೆಯ ದೋಸೆ ತೂತೇ.
–ಮುಪ್ಪಿನ ಕಾಲಕ್ಕೆ ಸೂಳೆ ಗರತಿ ಆದಳಂತೆ.
–ತಾ ಗರತಿ ಇದ್ದರೆ ಸೂಳೆಗೇರೀಲಿ ಮನೆ ಕಟ್ಟಬಹುದು
–ಅವಸರದಲ್ಲಿ ಅಜ್ಜಿ ಮೈನೆರೆದಳಂತೆ.
–ಕುಂಬಳಕಾಯಿ ಕಳ್ಳ ಅಂದರೆ ಹೆಗಲ ಮುಟ್ಟಿ ನೋಡಿಕೊಂಡರಂತೆ.
–ತಿರಕೊಂಡು ತಂದರೂ ಕರಕೊಂಡು ಉಣ್ಣು.
–ಕೊಟ್ಟು ಕುದಿಬಾರದು ಇಟ್ಟು ಹಂಗಿಸಬಾರದು
–ತೋಟಕ್ಕ ಹೋಗಿ ತೊಕ್ ಅಂದ, ಮನೆಗ ಬಂದು ಇಕ್ ಅಂದ.
–ಕೆಲಸಕ್ಕೆ ಕರೀಬ್ಯಾಡ್ರಿ ಊಟಕ್ಕೆ ಮರಿಬ್ಯಾಡ್ರಿ
–ಕೋಣೆ ಮಕ್ಕಳು ಕೊಳೆತವು ಓಣಿಯ ಮಕ್ಕಳು ಬೆಳೆದವು
–ಮಾಡಿದವರು ಉಣತಾರ ಮಣಿಯಂತಹ ಕಡಬ
–ಎತ್ತು ಎರೆಗೆ ಎಳಿದ್ರ ಕೋಣ ಕೆರೆಗೆ ಎಳೀತು
–ಅತ್ತೆಗೊಂದು ಕಾಲ ಸೊಸೆಗೊಂದು ಕಾಲ
–ಬೀಜದಂತೆ ಬೆಳೆ ತಂದೆಯಂತೆ ಮಕ್ಕಳು
–ನೂಲಿನಂತೆ ಸೀರೆ ತಾಯಿಯಂತೆ ಮಗಳು

ಇದೇ ತೆರನಾದ ಸಹಸ್ರ ಸಹಸ್ರ ಗಾದೆಮಾತುಗಳು ಇಂದಿಗೂ ಜನರ ದಿನ ನಿತ್ಯದ ಮಾತು–ಕತೆಗಳಲ್ಲಿ, ಸಂವಾದ–ಚರ್ಚೆಗಳಲ್ಲಿ ಸಹಜವಾಗಿ ಹೊರಹೊಮ್ಮಿ ಬರುವುದನ್ನು ಕಾಣುತ್ತೇವೆ. ಬಸವಾದಿ ಶಿವಶರಣರು ತಮ್ಮ ವಚನಗಳಲ್ಲಿ ಜನಪದರ ಆಡುನುಡಿಯ ಗಾದೆಗಳನ್ನು ಸಹಜವಾಗಿ ಬಳಸಿರುವುದನ್ನು ಕಾಣುತ್ತೇವೆ. "ವಚನಕಾರರ ಸಮಕಾಲಿನ ಪ್ರಜ್ಞೆ ತುಂಬಾ ಆಳವಾದುದು. ಅವರು ಕೊಡುವ ಚಿತ್ರಗಳಲ್ಲಿ ಇದು ಹೇಗೋ ಹಾಗೆಯೇ ಅವರು ಉಪಯೋಗಿಸುವ ಭಾಷೆಯಲ್ಲಿಯೂ ಅವರು ಜನರ ಬಳಕೆಯ ಮಾತುಗಾರಿಕೆಯನ್ನು ಉಪಯೋಗಿಸಿಕೊಂಡಿರುವುದನ್ನು ಕಾಣುತ್ತೇವೆ. ಅದಕ್ಕಾಗಿಯೇ ಅವರ ಅಭಿವ್ಯಕ್ತಿ ವಿಧಾನದಲ್ಲಿ ಗಾದೆಗಳು ಮಹತ್ವದ

ಸ್ಥಾನವನ್ನು ಗಳಿಸಿಕೊಂಡಿವೆ. ಗಾದೆಗಳ ಬಳಕೆಯಿಂದಾಗಿ ವಚನಕಾರರ ಮಾತು ನಮಗೆ ಹತ್ತಿರದ, ಆತ್ಮೀಯತೆಯ ಭಾವನೆಯನ್ನು ತಂದುಕೊಡುತ್ತವೆ. ಅರ್ಥಾಭಿವ್ಯಕ್ತಿಗೆ ಒಂದು ಮೊನಚು ಉಂಟಾಗುತ್ತದೆ[೬೫] ಅಕ್ಕಮಹಾದೇವಿಯ ಒಂದು ವಚನ ಹೀಗಿದೆ–

ಬಂಜೆ ಬೇನೆಯನರಿವಳೆ?
ಮಲತಾಯಿ ಮುದ್ದುಬಲ್ಲಳೆ?
ನೊಂದವರ ನೋವ ನೋಯದವರೆತ್ತ ಬಲ್ಲರೋ?[೬೬]

ಇದೇ ರೀತಿ ಬಸವಣ್ಣನವರ ವಚನಗಳಲ್ಲಿ ಅದ್ಭುತವಾಗಿ ಗಾದೆಗಳ ಬಳಕೆ ನೋಡುತ್ತೇವೆ.

ಆಯುಷ್ಯ ತೀರಿದಲ್ಲದೆ ಮರಣವಿಲ್ಲ
ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ[೬೭]

ಗಿಳಿಯೋದಿ ಫಲವೇನು?
ಬೆಕ್ಕು ಬರುವುದ ಹೇಳಲರಿಯದು[೬೮]

ಇದೇ ರೀತಿ ಶರಣ – ಶರಣೆಯರ ವಚನಗಳಲ್ಲಿ ಅಸಂಖ್ಯಾತ ಗಾದೆಗಳ ಬಳಕೆಯಾಗಿದೆ.

ಕುಮಾರ ಕಕ್ಕಯ್ಯನವರ ಗ್ರಾಮೀಣ ಪ್ರದೇಶದ ಹಿಂದಳಿದ ಪರಶಿಷ್ಟಜಾತಿ ಜನಾಂಗದಲ್ಲಿ ಜನಿಸಿ, ಅಪಾರ ನೋವು, ಕಷ್ಟ–ತೊಂದರೆಗಳನ್ನು ಅನುಭವಿಸಿ ಬಂದವರಾದುದರಿಂದ ಅವರು ತಮ್ಮ ವಚನಗಳಲ್ಲಿ ಜನಮಾನಸದ ಪ್ರಚಲಿತ ಗಾದೆಮಾತೆಗಳನ್ನು ಬಳಸಿರುವುದಲ್ಲದೇ, ಅನೇಕ ಹೊಸ ಹೊಸ ಗಾದೆಗಳ ಮರುಹುಟ್ಟಿಗೂ ಕಾರಣಗಿದ್ದಾರೆ. ಕುಮಾರ ಕಕ್ಕಯ್ಯನ ವಚನಗಳಲ್ಲಿ ಬಂದಿರುವ ಗಾದೆ ಮಾತುಗಳನ್ನು ಅ) ಕೌಟುಂಬಿಕ ಆ)ಸಾಮಾಜಿಕ ಇ) ಧಾರ್ಮಿಕ ಈ) ರಾಜಕೀಯ–ಆಡಳಿತಾತ್ಮಕ ಉ)ಕೃಷಿ ಸಂಬಂಧಿತ ಊ)ಲೋಕಾನುಭವ–ಸಂದೇಶದ ಗಾದೆಗಳಾಗಿ ವಿಂಗಡಿಸಲಾಗಿದೆ. ಕಂಸಿನಲ್ಲಿ ಕುಮಾರ ಕಕ್ಕಯ್ಯನ ವಚನಗಳು ಗ್ರಂಥದ ವಚನಗಳ ಸಂಖ್ಯೆಯನ್ನು ಕೊಡಲಾಗಿದೆ.

**ಅ) ಕೌಟುಂಬಿಕ–ಸಂಸಾರಿಕ ಗಾದೆಗಳು:**

–ಹತ್ತು ಜನ ದಾಯಿಯರಿಗಿಂತ ಒಬ್ಬ ಅಕ್ಕರೆಯ ತಾಯಿ ಲೇಸು. (ವ–೧೩)

–ಮನೆಯನ್ನು ಕೊಳ್ಳಬಹುದೇ ಹೊರತು ಮಾನವನ್ನು ಕೊಳ್ಳಲಿಕ್ಕಾಗದು. (ವ–೨೫೦)

---

೬೫. ವಚನ ಪರಿಸರ: ವಚನಗಳಲ್ಲಿ ಗಾದೆಗಳು–ಡಾ॥ ಪಿ.ವಿ. ನಾರಾಯಣ ಪು–೩೦೧
೬೬. ಶಿವರಣೆಯರ ವಚನ ಸಂಪುಟ–ಸಂ.ಡಾ॥ ವೀರಣ್ಣ ರಾಜೂರ ವ–೨೯೦
೬೭. ಬಸವಣ್ಣನವರ ವಚನಗಳು– ಸಂ.ಡಾ॥ ಆರ್.ಸಿ.ಹಿರೇಮಠ ವ–೬೮೯
೬೮. –ಅದೇ– ವ–೧೨೩

–ಪ್ರೇಮವೆಂಬ ಸಕ್ಕರೆ ಲೇಪಿಸದಿದ್ದರೆ ಜೀವನವೆಂಬ ವಿಷದ ಗುಳಿಗೆಯನ್ನು ಯಾರೂ ನುಂಗುತ್ತಿರಲಿಲ್ಲ (ವ–೩೪೯)
–ಸಮರಸ ದಾಂಪತ್ಯವೇ ಸ್ವರ್ಗ ವಿರಸದಾಂಪತ್ಯವೇ ನರಕ (ವ–೪೦೩)
–ದುಡಿಯಲೊಲ್ಲದ ಮಗ ಮಾಡಲೊಲ್ಲದ ಸೊಸೆ (ವ–೪೦೮)
–ಸೋಮಾರಿಗಳಿಂದ ಸಂಸಾರ ಹಾಳಾದರೆ
–ಸನ್ಯಾಸಿಗಳಿಂದ ಸಮಾಜ ಹಾಳು. (ವ–೪೮೦)
–ಅಡಿಗೆ ಮಾಡಲಿಕ್ಕಾಗದ ಖೋಡಿ
ಗಡಿಗೆ ಬೋಡ ಎನ್ನುವಂತೆ (ವ–೪೮೪)
–ಹೆತ್ತವರ ವೃತ್ತಿಯಂತೆ ಮಕ್ಕಳ ಪ್ರವೃತ್ತಿ (ವ–೭೦೫)
–ಪ್ರೇಮ ಜೇನಿಗಿಂತಲೂ ಮಧುರ
–ಪ್ರೇಮ ವಜ್ರಕ್ಕಿಂಲೂ ಅಮೌಲ್ಯ (ವ–೭೨೮)
–ಸುಗಮ ಬಾಳೇ ಸ್ವರ್ಗ ವಿರಸ ಬಾಳೇ ನರಕ (ವ–೭೮೩)
–ಭೂಮಿ ಆಕಾಶಕ್ಕಿಂತಲೂ ಜನ್ಮಕೊಟ್ಟ ಮಾತೆ ದೊಡ್ಡವಳು (ವ–೯೬೧)
–ಹೆಣ್ಣಿನ ದೊಡ್ಡ ವೈರಿ ಹೆಣ್ಣೇ ಗಂಡಿನ ಕಡು ವೈರಿ ಗಂಡೇ (ವ–೯೭೪)
–ಬೀದಿಯ ಸೂಳೆಗಾಗಿ ಮನೆಯ ಮಡದಿಯ ಬಿಟ್ಟು ಕೊಟ್ಟವ ಶತಮೂರ್ಖ (ವ–೧೧೩೨)
–ಕಾಯಕ ಬಿಟ್ಟು ಕೈಲಾಸವಿಲ್ಲ ಸಂಸಾರ ಬಿಟ್ಟು ಸ್ವರ್ಗವಿಲ್ಲ (ವ–೧೧೫೨)
–ವೈಯಾರದಿಂದ ಹೆಣ್ಣು ಹಾಳಾದರೆ ಹಮ್ಮಿನಿಂದ ಗಂಡು ಹಾಳಾಗುವನು (ವ–೧೩೮೫)
–ತಾಯಿಗಿಂತ ಬಂಧುವಿಲ್ಲ ಅತ್ತೆಗಿಂತ ವಿರೋಧಿ ಇಲ್ಲ (ವ–೧೩೯)
–ಹೆಣ್ಣಿನ ಮನಸ್ಸು ಹೂವಿಗಿಂತಲೂ ಕೋಮಲ
–ಕೆರಳಿದಾಗ ಕಾಡು ಮೃಗಕ್ಕಿಂತಲೂ ಕಠೋರ (ವ–೧೪೪೦)
–ಹೆಣ್ಣಿನ ಶೀಲ ಹೆಣ್ಣನ್ನು ರಕ್ಷಿಸುವದು (ವ–೧೪೪೩)
–ಒಳ್ಳೆಯ ಹೆಂಡತಿಯಿದ್ದರೆ ಸಂಪತ್ತಿನ ಅವಶ್ಯಕತೆಯಿಲ್ಲ. (ವ–೧೪೫೬)

**ಆ. ಸಾಮಾಜಿಕ–ಗಾದೆಗಳು :**

–ಅಂತ್ಯಜರ ನೋವು ಅಂತ್ಯಜರಿಗಲ್ಲದೆ
ಕುಲಜರಿಗೆ ತಿಳಿಯದು. (ವ–೧೦)
–ಒಕ್ಕಟ್ಟೇ ಬಲ ಒಡಕೇ ಕೆಡಕು (ವ–೧೧)
–ಶೋಷಣೆಗೆ ಕೊನೆಯಿಲ್ಲ ದಬ್ಬಾಳಿಕೆಗೆ ಎಣೆಯಿಲ್ಲ (ವ–೫೦೬)
–ಅಜ್ಞಾನ ಆಲಸ್ಯ ಹೆಚ್ಚಿದಷ್ಟು ಬಡತನ ಹೆಚ್ಚು (ವ–೭೩೬)
–ಮರಣದ ದು:ಖ ಒಮ್ಮೆಯಾದರೆ ಬಡತನದ ದು:ಖ ಅನುಗಾಲ (ವ ೭೩೫)
–ಹಸಿದವನಿಂದ ಕಸಿದು ತಿನ್ನುವವ ರಾಕ್ಷಸ (ವ–೧೦೩೮)
–ಬಡವರ ಪುಣ್ಯ ಗುಣದಲ್ಲಿ (ವ–೧೧೮೯)
–ಬೇಕೆನ್ನುವವನೆ ಬಡವ, ಸಾಕೆನ್ನುವವ ಶ್ರಿಮಂತ (ವ–೧೧೯೫)

–ಹಸಿವೆಯಿಂದ ಸ್ವರ್ಗ, ಹಸಿವೆಯಿಂದ ನರಕ (ವ–೧೩೮೮)
–ಬಡಪಾಯಿ ಒಡೆಯನ ಗುಲಾಮನಲ್ಲ, ಹಸಿವೆಯ ಗುಲಾಮ (ವ–೧೩೮೯)
–ದಡ್ಡ ದೊಡ್ಡವನೆನಿಸಬೇಕಾದರೆ ದುಡ್ಡ ಗಳಿಸಬೇಕು (ವ–೧೪೧೫)

**ಇ. ಧಾರ್ಮಿಕ ಗಾದೆಗಳು :**

–ಭಕ್ತಿ ಧ್ಯಾನದಿಂದ ಹೊಟ್ಟೆಗೆ ಹಿಟ್ಟು ಸಿಗದು (ವ–೪೪)
–ಶಾಪದಿಂದ ಯಾರೂ ಸಾಯೂದಿಲ್ಲ (ವ–೫೯)
–ಆಶೀರ್ವಾದದಿಂದ ಯಾರೂ ಬದುಕೋದಿಲ್ಲ (ವ–೫೯)
–ಎದೆಯ ಮೇಲೆ ಲಿಂಗ, ಮನದಲ್ಲಿ ಮಂಗ (ವ–೩೬೪)
–ಕೊರಳಲಿ ಜನಿವಾರ, ಮನದಲ್ಲಿ ಮುಡಿದಾರ (ವ–೩೬೪)
–ಮೈಮೇಲೆ ಕಾವಿ ಮನದಲಿ ಭವಿ (ವ–೩೬೪)
–ಕೈಯಲ್ಲಿ ಧರ್ಮಗ್ರಂಥ ಮಾಡುವದು ಕುತಂತ್ರ (ವ–೩೬೪)
–ಹೊರಗ ತೋರುವುದು ಮಡಿ ಒಳಗ ತುಂಬಿಹುದು ಹುಡಿ(ವ–೩೬೪)
–ಕತ್ತೆ ಕಾಶಿಗೆ ಹೋದರೂ ಮೂಟೆಯ ಹೊರೆ ಬಿಡದು (ವ–೪೦೧)
–ನಿರಾಕಾರ ದೇವರು ಸಾತ್ವಕರಿಗೆ ಒಲಿದರೆ
ಸಾಕಾರ ದೇವರು ಒಲಿಯುವದು ಸಿರಿವಂತರಿಗೆ (ವ–೬೭೦)
–ಕಾಯಿಯಿಲ್ಲ ಕರ್ಪುರವಿಲ್ಲ ಬಂದೆ ನಿನ್ನಗುಡಿಗೆ
ಆಶೀರ್ವಾದವಿಲ್ಲ ಶಾಪವಿಲ್ಲ ಹೋಗುನಿನ್ನ ಮನೆಗೆ (ವ–೬೭೦)
–ಬಾಯಲ್ಲಿ ಮಂತ್ರ ಹೃದಯದಲ್ಲಿ ಕುತಂತ್ರ (ವ–೭೯೬)
–ದುಡಿಯದೇ ಬೇಡುವ ಭಕ್ತನ ಬಾಳು ದೊಡ್ಡಗೋಳು (ವ–೮೪೫)
–ಪ್ರಾಣಿಕೋಟಿಯನು ಪ್ರೀತಿಸುವವನೇ ಶರಣ (ವ–೯೫೩)
–ಗೊಡ್ಡ ಆಕಳ ಧರ್ಮಕ್ಕ ಕೊಟ್ಟಾರ ದಡ್ಡ ಮಗನಿಗೆ ಮಠಕ್ಕ ಬಿಟ್ಟಾರ (ವ–೯೫೪)
–ಕಾವಿ ಕಪನಿ ಹಾಕಿದವರೆಲ್ಲ ಸ್ವಾಮಿಗಳಲ್ಲ ಜಟಾ ಮಟಾ ಬಿಟ್ಟವರೆಲ್ಲ ಋಷಿಗಳಲ್ಲ(ವ–೧೧೧೨)
–ಸಂಸಾರ ಬಿಟ್ಟವರೆಲ್ಲ ಸನ್ಯಾಸಿಗಳಲ್ಲ ಪುರಾಣ ಹೇಳುವರಲ್ಲಾ ಸತ್ಪುರಷರಲ್ಲ (ವ–೧೨೨೫)

**ಈ. ರಾಜಕೀಯ–ಆಡಳಿತದ ಗಾದೆಗಳು :**

–ಲಂಚಕ್ಕೆ ನಿಂತ ಅಧಿಕಾರಿಗಿಂತ ಭಿಕ್ಷೆಗೆ ನಿಂತ ಭಿಕಾರಿಲೇಸು (ವ–೮೦೭)
–ಭಾಷೆ ಬಾರದ ಅಧಿಕಾರಿಗಿಂತ ಭಾಷೆ ಬಲ್ಲ ಚಪಾರಿಸಿ ಲೇಸು (ವ–೮೬೪)
–ಸಾವಕಾರ ದೇವರಿಗೆ ಬಡ್ಡಿಯ ನೈವೇದ್ಯ ಕರಣಿಕರ ದೇವರಿಗೆ ಲಂಚದ ನೈವೇದ್ಯ(ವ–೧೦೧೧)
–ಹೊಳೆ ದಾಟಿದ ಬಳಿಕ ಅಂಬಿಗನ ಮಿಂಡ
ಓಟು ಹಾಕಿದ ಬಳಿಕ ಮತದಾರನ ಗಂಡ (ವ–೧೧೪೭)

**ಉ. ಕೃಷಿಗೆ ಸಂಬಂಧಿಸಿದ ಗಾದೆಗಳು :**

–ಜಪತಪ ಸಮಾಧಿಯಿಂದ ಭೂಮಿ ಬೆಳೆಯದು (ವ–೪೪)
–ಒಕ್ಕಲಿಗನ ಸ್ವರ್ಗ ಸುಗ್ಗಿಯಲ್ಲಿ (ವ–೧೪೪)
–ಮೇವಿಲ್ಲದ ಎತ್ತು ಬೇವ ಮೆಲಿದಿತ್ತು (ವ–೬೨೧)
–ಮಣ್ಣಿನಿಂದ ಅನ್ನವಸ್ತ್ರ
ಮಣ್ಣಿನಿಂದ ಬಾಳು ಬದುಕು (ವ–೮೯)

**ಊ. ಲೋಕಾನುಭವದ ಗಾದೆಗಳು :**

–ಹಸಿವು ತೃಷೆಗೆ ಮಡಿಯಿಲ್ಲ ನಿದ್ರೆ ಮೈಥುನಕ್ಕೆ ಮೈಲಿಗೆಯಿಲ್ಲ (ವ–೯೪)
–ಆಶೆಯೇ ಜೀವನ ನಿರಾಶೆಯೇ ಮರಣ (ವ–೯೮)
–ಕುಡಕನಿಗೆ ಬುದ್ಧಿ ಹೇಳುವದೆಂದರೆ
ನಾಯಿ ಬಾಲ ನೆಟ್ಟಗೆ ಮಾಡಿದಂತೆ (ವ–೨೨೭)
–ಮಂಗನ ಕಟ್ಟಿಕೊಂಡು ತೋಟ
ಕೋಣನ ಕಟ್ಟಿಕೊಂಡು ಕೆರೆ ಹೊಗಬೇಡ (ವ–೨೩೪)
–ಹೊಟ್ಟೆಯಲ್ಲಿ ಅರಗುವಷ್ಟು ಉಣಬೇಕು (ವ–೩೨೫)
–ಆತ್ಮಸಾಕ್ಷಿಯೇ ದೇವ ಆತ್ಮವಂಚನೆಯೇ ದೆವ್ವ (–೪೬೨)
–ಕುಡುಕರ ಕದನದಲ್ಲಿ ಕೈಹಾಕಬೇಡ (ವ–೪೯೨)
–ಹೃದಯ ಇಲ್ಲದವ ವೈದ್ಯನಾಗಬಾರದು
ನಾಲಿಗೆ ಇಲ್ಲದವ ವಕೀಲನಾಗಬಾರದು (ವ–೫೪೮)
–ನೂರು ಮಾತಿಗಂತ ಒಂದು ಕೃತಿ ಲೇಸು (ವ–೬೯೨)
–ಸಿರಿವಂತನ ಸೂಳೆಯಾಗುವಕ್ಕಿಂತ ಬಡವನ ಪತ್ನಿಯಾಗುವದು ಲೇಸು (ವ–೭೪೧)
–ಹಗಲು ಸತ್ತರೆ ಧೂಪಕ್ಕಿಲ್ಲ
ರಾತ್ರಿ ಸತ್ತರೆ ದೀಪಕ್ಕಿಲ್ಲ (ವ–೭೪೬)
–ಬಂಡವಾಳ ಮೂರುಕಾಸು, ಬಡಾಯಿ ಆರು ಕಾಸು (ವ–೭೪೬)
–ತಿಳಿಯದೇ ಓದಬೇಡ, ಮಾಡದೇ ಮಾತಾಬೇಡ (ವ–೭೪೭)
–ಹಸಿವೆಗಿಂತ ರುಚಿಯಾದ ಅಡಿಗೆಯಿಲ್ಲ
ದಣಿವಿಗಿಂತ ಮೆತ್ತನ್ನ ಹಾಸಿಗೆಯಿಲ್ಲ (ವ–೮೭೧)
–ಮಳೆಗಾಲಕ್ಕೊಂದು ಕೊಡೆಯಿರಲಿ
–ಚಳಿಗಾಲಕ್ಕೊಂದು ಕಂಬಳಿಯಿರಲಿ
–ಬೇಸಿಗೆಗೊಂದು ಹೊರಸಿರಲಿ (ವ–೪೯೨)
–ಮಿಂಚುವದೆಲ್ಲ ಚೊಕ್ಕ ಚಿನ್ನವಲ್ಲ (ವ–೧೧೦೩)
–ಬಾಡಿಗೆ ಜರತಾರಿಗಿಂತ ಮನೆಯ ಕೋರಿ ಲೇಸು
ವಂಚಕ ಗೆಳೆಯನಿಗಿಂತ ವಿಶ್ವಾಸದ ನಾಯಿ ಲೇಸು (ವ–೧೧೦೬)
–ಅವರವರ ಮನಸ್ಸೇ ಅವರವರ ವ್ಯಕ್ತಿತ್ವ (ವ–೧೧೨೦)

-ತನ್ನವರೆಂದು ಕುಡಕರಿಗೆ ಹಣ ಕೊಡಬೇಡ (ವ-೧೩೬೭)
-ಬಡವರೆಂದು ಕುಡುಕರಿಗೆ ಹಣ ಕೊಬೇಡ (ವ-೧೩೬೭)
-ಹಣವಿದ್ದೆಡೆ ದೊಡ್ಡಸ್ತನ (ವ-೧೩೮೦)
-ವಿಜ್ಞಾನಯುಗದಲ್ಲಿ ಬ್ರೀಡಿಗಿಂತ ಹೈಬ್ರೀಡಿಗೆ ಬೆಲೆ (ವ-೧೪೬೫)

ಈ ರೀತಿಯಾಗಿ "ಗಾದೆಗಳಿಗೆ ಉಪಮೆ, ರೂಪಕ ಅಲಂಕಾರಗಳ ಲೇಪನ ಇದೆ. ರಸ, ಧ್ವನಿ, ರೀತಿಗಳ ಬೆಡಗು ಇದೆ. ಸಾಮಾನ್ಯರೂ ಅನುಭವಿಸುವ ಹಲವಾರು ಜೀವನದ ಜೀವಂತ ಘಟನೆಗಳ ತುಡಿತವಿದೆ, ತಂತ್ರವಿದೆ. ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡ ಜನತಾ ಸಂಸ್ಕೃತಿಯ ಸಿರಿವಂತಿಕೆಯಿದೆ."[೧೯]

**vi) ನೀತಿಯ ಮಾತುಗಳು :**

ಗಾದೆಯ ಮಾತುಗಳು ಅನುಭವಜನ್ಯ ಸಂದೇಶ ನೀಡಿದರೆ, ನೀತಿಯ ಮಾತುಗಳು ಬದುಕಿಗೆ ಉಪದೇಶ ನೀಡುತ್ತವೆ. ಹಿರಿಯರು, ಶರಣರು, ಮಹಾತ್ಮರು ವ್ಯಷ್ಟಿ-ಸಮಷ್ಟಿಯ ಕಲ್ಯಾಣದ ಸಲುವಾಗಿ ನೀತಿಯ ಉಪದೇಶ ಮಾಡುತ್ತಾರೆ. ಉಪದೇಶ ಮಾಡುವವರಲ್ಲಿ ನೈತಿಕತೆ, ಚಾರಿತ್ರ್ಯ ವಿರಬೇಕು. ಚಾರಿತ್ರ್ಯಹೀನರ ಮಾತುಗಳು ಪರಿಣಾಮ ಬೀರುವದಿಲ್ಲ. ಮಾತು ಮನಾರ ಕೃತಿ ಸುಮಾರ ಎಂಬ ಗಾದೆ ಮಾತು ಗಮನದಲ್ಲಿ ಇರಬೇಕು. ಮಣ ಉಪದೇಶಕ್ಕಿಂತ ಕಣ ಕೃತಿ ಲೇಸು ಎಂಬುದನ್ನು ಉಪದೇಶಕರು ಮರೆಯಬಾರದು.

ಕುಮಾರ ಕಕ್ಕಯ್ಯ ಪೋಳ ಅವರು ಬಸವಾದಿ ಶರಣರಂತೆಯೇ ಅರಿವು-ಆಚಾರ-ಅನುಭಾವ ಅಂಗವಿಸಿಕೊಂಡು ನೀತಿಯ ವಚನಗಳನ್ನು ಬರೆದಿರುವರು.

ಬಾಳೆಯದಿಂಡು ಎಷ್ಟೇ ದಪ್ಪಾದರೂ
ಮನೆಗೆ ತೊಲೆಯಲ್ಲ, ಒಲೆಗೆ ಸೌದೆಯಲ್ಲ.
ಪ್ರೇಮದ ಸೂಳೆ ಎಷ್ಟೇ ಸುಂದರಿಯಾದರೂ
ಮನೆಗೆ ಸೊಸೆ ಅಲ್ಲ, ವಂಶಕ್ಕೆ ತಾಯಿಯಲ್ಲ.
ಸೂಳೆಯ ಸಹವಾಸ ಬಾಳೆಯ ದಿಂಡು ತಂದು
ನಡಗಂಬ ಮಾಡಿದೆಂತೆಂದ ಕುಮಾರ ಕಕ್ಕಯ್ಯ[೨೦]

ಕೌಟುಂಬಿಕ ಜೀವನದಲ್ಲಿ ಮಾನವನು ಸೂಳೆಯ ಸಹವಾಸ ಮಾಡಿದರೆ, ತಾನೂ ಹಾಳಾಗುವನು ಮನೆತನವನ್ನೂ ಹಾಳುಮಾಡುವನು. ಇಂತಹ ಅನೀತಿಯುತ ವ್ಯಭಿಚಾರ ಮಾಡಬಾರದು ಎಂದು ಉಪದೇಶಿಸುತ್ತಾರೆ.

ಅಕ್ಕರೆ ಇಲ್ಲದ ಸ್ನೇಹ
ಒಕ್ಕಲಿಲ್ಲದ ಊರು ಹೊಕ್ಕಂತೆ
ಅಕ್ಕರೆ ಇಲ್ಲದ ದಾಂಪತ್ಯ

---

೧೯. ಕಾಯಕ ಪರಿಣಾಮಿ : ವಚನಸಾಹಿತ್ಯದಲ್ಲಿ ಗಾದೆಗಳು-ಡಾ॥ ಎಂ.ಎಸ್.ಲಠ್ಠೆ ಪು ೧೨೫೫.

೨೦ ಕುಮಾರ ಕಕ್ಕಯ್ಯ ವಚನಗಳು ಪು- ೩೩೮ ವ-೧೩೧೧

ಗೊಡ್ಡೆಮ್ಮೆಯ ಕೆಚ್ಚಲಕ್ಕೆ ಕೈಹಾಕಿದಂತೆ
ಅಕ್ಕರೆಯಿಲ್ಲದ ಸಕ್ಕರೆ ತುಪ್ಪ
ಮೃಷ್ಟಾನ್ನದೋಳ್ ವಿಷ ಬೆರೆಸಿದಂತೆಂದ
ಕುಮಾರ ಕಕ್ಕಯ್ಯ.[೭೧]

ಸಂಸಾರದಲ್ಲಿ ಅಕ್ಕರೆ ಇರಬೇಕು. ಎಂದರೆ ನಿಷ್ಕಲ್ಮಶವಾದ ಒಲವಿನ ಪ್ರೀತಿ, ಪ್ರೇಮ.ಇಂತಹ ಸುಮಧುರ ಜೀವನ ಬಾಳಿದರೆ ಬಾಳೆಲ್ಲವೂ ಅಮೃತಮಯ, ಇಲ್ಲದಿದ್ದರೆ ವಿಷಮಯವಾಗುತ್ತದೆ ಎಂದು ಕುಮಾರ ಕಕ್ಕಯ್ಯ ಹೇಳುತ್ತಾರೆ.

ವಕೀಲರ ವ್ಯವಹಾರ ಬೇಡ
ಸನ್ಯಾಸಿಯ ಸಹವಾಸವೂ ಬೇಡ
ಪೋಲೀಸರ ಗೆಳೆತನ ಬೇಡ
ಕುಲಕರ್ಣಿಯ ವಿಶ್ವಾಸವೂ ಬೇಡ
ಮನೆಯಲಿ ಅತ್ತೆಯ ಹಿರಿತನ
ಬೇಡವೇ ಬೇಡೆಂದ ಕುಮಾರ ಕಕ್ಕಯ್ಯ.[೭೨]

ಈ ವಚನದಲ್ಲಿಯ ನೀತಿಯ ಮಾತುಗಳು ಮನನೀಯವಾಗಿವೆ, ಬಾಳಿಗೆ ಬೆಳಕು ನೀಡುವಂಥವುಗಳಾಗಿವೆ. ವಕೀಲರೊಂದಿಗೆ ವ್ಯವಹಾರ, ಸನ್ಯಾಸಿಯ ಸಹವಾಸ, ಪೋಲೀಸರ ಗೆಳೆತನ, ಕುಲಕರ್ಣಿಯ ವಿಶ್ವಾಸ, ಅತ್ತೆಯ ಹಿರಿತನಗಳಿಂದ ಮನೆತನಗಳು ಸರ್ವನಾಶವಾಗಿ ಹೋಗುತ್ತವೆಯೆಂದು ಹೇಳಿತ್ತಾರೆ.

ಇಂದಿನ ಜಳಕ ಜಾಪತ್ರೆ ನಾಳೆನ್ನಲಿಕ್ಕಾಗದು
ಇಂದಿನ ಊಟ ಉಪಚಾರ ನಾಳೆನ್ನಲಿಕ್ಕಾಗದು
ಇಂದಿನ ವಿಶ್ರಾಂತಿ ನಿದ್ರೆ ನಾಳೆನ್ನಲಿಕ್ಕಾಗದು
ಇಂದಿನ ಕೆಲಸ ಬೊಗಸೆ ನಾಳೆನ್ನಲಿಕ್ಕಾಗದು
ಇಂದಿನ ಪ್ರಶ್ನೆ ನಾಳೆನ್ನುವ ಆಲಸಿಯ ಬಾಳು
ಬಹು ಗೋಳೆಂದ ಕುಮಾರ ಕಕ್ಕಯ್ಯ[೭೩]

ಮನುಷ್ಯನು ಅಂದಂದಿನ ಜೀವನದ ಕೆಲಸ–ಕಾರ್ಯಗಳನ್ನು ಅಂದಂದೇ ಮಾಡಿ ಪೂರೈಸಬೇಕು. ನಾಳೆ ಎಂದವನ ಬಾಳು ಹಾಳು ಎಂಬಂತೆ ಆತನ ಜೀವನ ದುಃಖಮಯವಾಗುತ್ತದೆ, ಕಷ್ಟಮಯವಾಗುತ್ತದೆ.

ಈ ರೀತಿಯಾಗಿ ಕುಮಾರ ಕಕ್ಕಯ್ಯನ ವಚನಗಳಲ್ಲಿ ಜಾನಪದ ವಿಚಾರಗಳು ಹಾಸುಹೊಕ್ಕಾಗಿ ಬಂದಿರುವುದನ್ನು ಕಾಣುತ್ತೇವೆ.

---

೭೧. ಕುಮಾರ ಕಕ್ಕಯ್ಯ ವಚನಗಳು ಪು– ೪ ವ–೧೪
೭೨ ಕುಮಾರ ಕಕ್ಕಯ್ಯ ವಚನಗಳು ಪು–೬ ವ–೨೩
೭೩. –ಅದೇ– ಪು–೨೭ ವ–೧೦೫

# ಅಧ್ಯಾಯ - ೫

# ಕುಮಾರ ಕಕ್ಕಯ್ಯನ ವಚನಗಳ ಭಾಷೆ-ಶೈಲಿ-ಛಂದಸ್ಸು.

i) ಭಾಷೆ-ಶೈಲಿ

ii) ಛಂದಸ್ಸು-ಅಲಂಕಾರ

iii) ಆಡುನುಡಿ

iv) ದ್ವಿರುಕ್ತಿ

v) ಜೋಡುನುಡಿ

vi) ನುಡಿಗಟ್ಟು

# ಅಧ್ಯಾಯ - ೫

# ಕುಮಾರ ಕಕ್ಕಯ್ಯನ ವಚನಗಳ ಭಾಷೆ-ಶೈಲಿ-ಛಂದಸ್ಸು

**i) ಭಾಷೆ-ಶೈಲಿ :** ಭಾರತದ ಭಾಷೆಗಳಲ್ಲಿ ದ್ರಾವಿಡ ಭಾಷಾ ಪರಿವಾರವು ಆರ್ಯಭಾಷಾ ಪರಿವಾರಕ್ಕಿಂತ ಭಿನ್ನವೂ, ವಿಶೇಷವೂ ಆಗಿದೆ. ಈ ಪರಿವಾರದಲ್ಲಿ ಕನ್ನಡ, ತಮಿಳು ತೆಲಗು, ಮಲೆಯಾಳಿ, ತುಳು ಮುಂತಾದ ಭಾಷೆಗಳು ಸ್ವತಂತ್ರವಾಗಿ ಬೆಳೆದು ಬಂದಿವೆ. ಕನ್ನಡ ಭಾಷೆಯು ಪ್ರಾರಂಭದಲ್ಲಿ ಆಡುಮಾತಿನಲ್ಲಿದ್ದು ಅನಂತರ ಬರಹದ ಭಾಷೆಯಾಗಿ ಬೆಳೆದು ಬಂದಿತು. ಇವೆರಡೂ ಒಂದಕ್ಕೊಂದು ಪರಿಸ್ಪರ ಪೂರಕವಾಗಿವೆ.

"ಕನ್ನಡ ಭಾಷೆಯ ಚರಿತ್ರೆಯನ್ನು ಕಟ್ಟುವಲ್ಲಿ ನಮ್ಮ ವಿದ್ವಾಂಸರು ಮುಖ್ಯವಾಗಿ ಎರಡು ವಿಧಾನಗಳನ್ನು ಬಳಿಸಿದ್ದಾರೆ. ೧. ವಿವಿಧ ಮೂಲಗಳಲ್ಲಿ ಕನ್ನಡ ಭಾಷೆ ಮತ್ತು ಕನ್ನಡ ನಾಡಿನ ಬಗ್ಗೆ ಸಿಗುವ ಲಿಖಿತ ದಾಖಲೆಗಳ ಮೂಲಕ ಕನ್ನಡ ಭಾಷೆಯ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಈಗಲೂ ಈ ವಿಧಾನ ಹೆಚ್ಚು ಪ್ರಚಲಿತದಲ್ಲಿದೆ. ೨. ಕನ್ನಡ ಭಾಷೆಯ ಆಂತರಿಕ ರಚನೆಯ ಮೂಲಕವೇ ಅದರ ಪ್ರಾಚೀನತೆಯನ್ನು ಹೇಳುವುದು. ಈ ವಿಧಾನ ಹೆಚ್ಚು ಬಳಕೆಯಲ್ಲಿಲ್ಲ. ಆದರೆ ತುಂಬಾ ಈಚೆಗೆ ಡಿ.ಎನ್.ಶಂಕರಭಟ್ಟರಿಂದ ಕನ್ನಡದಲ್ಲಿ ಜಾರಿಗೆ ಬಂದ ಈ ವಿಧಾನ ಅನೇಕ ವಿದ್ವಾಂಸರಿಗೆ ಕುತೂಹಲ ಮೂಡಿಸಿದೆ."[೧]

ಡಾ॥ ಡಿ.ಎನ್. ಶಂಕರಭಟ್ ಅವರ (ಕನ್ನಡ ಭಾಷೆಯ ಕಲ್ಪಿತ ಚರಿತ್ರೆಯ) ಪ್ರಕಾರ- "ಕನ್ನಡ ಭಾಷೆಯ ಚರಿತ್ರೆ ಕಟ್ಟುವದೆಂದರೆ ಮೂಲ ದ್ರಾವಿಡದಿಂದ ಕನ್ನಡ ಹೇಗೆ ಬದಲಾಯಿತು, ಮತ್ತು ಯಾವ ಯಾವ ರೀತಿಯಲ್ಲಿ ಬದಲಾವಣೆ ಪಡೆಯುತ್ತಾ ಹೋಯಿತು ಎನ್ನುವದನ್ನು ಕಲ್ಪಿಸಿಕೊಂಡು ಚರಿತ್ರೆಯನ್ನು ಕಟ್ಟುತ್ತ ಹೋಗುವುದು. ಇದನ್ನು ತುಲನಾತ್ಮಕವಾಗಿ ನೋಡಿ ಭಾಷೆಯ ಚರಿತ್ರೆಯನ್ನು ನಿರ್ಮಿಸುವುದು."[೨] ಕನ್ನಡದ ವಿದ್ವಾಂಸರು ಭಾಷೆಯ ನಾಲ್ಕು ಅವಸ್ಥೆಗಳನ್ನು ಹೇಳುತ್ತಾರೆ -

೧. ಪೂರ್ವದ ಹಳಗನ್ನಡ : ಕ್ರಿ.ಶ. ೫ ನೇ ಶತಮಾನದಿಂದ ೮ ನೇ ಶತಮಾನದವರೆಗೆ.
೨. ಹಳಗನ್ನಡ : ಕ್ರಿ.ಶ. ೯ ನೇ ಶತಮಾನದಿಂದ ೧೧ ನೇ ಶತಮಾನದವರೆಗೆ.
೩. ನಡುಗನ್ನಡ : ಕ್ರಿ.ಶ. ೧೨ ನೇ ಶತಮಾನದಿಂದ ೧೮ ನೇ ಶತಮಾನದವರೆಗೆ
೪. ಹೊಸಗನ್ನಡ : ಕ್ರಿ.ಶ. ೧೯ ನೇ ಶತಮಾನದಿಂದ ಇತ್ತೀಚಿನವರೆಗೆ.

---

೧. ಆಡಳಿತ ಕನ್ನಡ : ಕನ್ನಡ ಭಾಷೆಯ ಚರಿತ್ರೆ - ಡಾ॥ ಅಶೋಕ ಕುಮಾರ ರಂಜೇರೆ ಪು- ೧೧೦

೨. -ಅದೇ- ಪು-೧೧೨.

ಕನ್ನಡ ಭಾಷೆಯ ಮೊದಲನೆಯ ಅವಸ್ಥೆಯನ್ನು ಶಾಸನಗಳಲ್ಲಿ ಕಾಣುತ್ತೇವೆ. ಅದು ಕ್ರಿ.ಶ. ೪೫೦ ನೇ ಇಸ್ವಿಯ ಹಲ್ಮಿಡಿ ಶಾಸನದಲ್ಲಿ ಕಂಡುಬರುತ್ತದೆ. ಎರಡನೆಯ ಅವಸ್ಥೆಯು ಹಳಗನ್ನಡ ಗ್ರಂಥಗಳಾದ ಶ್ರೀವಿಜಯನ ಕವಿರಾಜ ಮಾರ್ಗ, ಶಿವಕೋಟ್ಯಾಚಾರ್ಯನ ವಡ್ಡಾರಾಧನೆ, ಪಂಪನ ವಿಕ್ರಮಾರ್ಜುನ ವಿಜಯ, ರನ್ನನ ಸಾಹಸಭೀಮ ವಿಜಯಗಳಲ್ಲಿ ನೋಡುತ್ತೇವೆ. ಇದು ಚಂಪೂ ಶೈಲಿ, ಸಂಸ್ಕೃತ ಭೂಯಿಷ್ಟವಾದ ಭಾಷಾಶೈಲಿಯೆಂದೇ ಕರೆಯಲ್ಪಟ್ಟಿದೆ.

೧೨ ನೇ ಶತಮಾನದ ಬಸವಾದಿ ಶರಣರು ನಡುಗನ್ನಡ ಕಾಲದ ಅವಧಿಯಲ್ಲಿ ವಚನ ರಚನೆ ಮಾಡಿದ್ದಾರೆ. ಈ ವಚನಗಳ ಭಾಷೆಯು ಇಂದಿನ ನಮ್ಮ ಆಧುನಿಕ ಕನ್ನಡದ ಹೊಸಗನ್ನಡ ಭಾಷೆಗೆ ತುಂಬಾ ಹತ್ತಿರವಾಗಿದೆ. ಬಸವಾದಿ ಶರಣರು "ತಾವು ಉಪಯೋಗಿಸುವ ಭಾಷೆಯನ್ನು ಅದರ ಪೂರ್ವವಾಸನೆ ಇಲ್ಲದಂತೆ ಶುದ್ಧಗೊಳಿಸಿ ಉಪಯೋಗಿಸಬೇಕಾಗಿತ್ತು. ಅಲ್ಲದೇ ಭಾಷೆಯ ಮೈಯ ಆಚೆಗೆ ಇರಬಹುದಾದ ಸತ್ಯವನ್ನು ಕಾಣಿಸಬೇಕಾಗಿತ್ತು"[೩] ಎಂಬುದನ್ನು ನಾವು ಮನಗಾಣುತ್ತೇವೆ.

"ವಚನಗಳ ಭಾಷೆ ಆಡುಮಾತಿನಂತೆ ಕಂಡರೂ ಅದು ಒಂದು ಸೋದ್ದಿಶ್ಯವಾದ ಅತಿಭಾಷೆ, ತನ್ನ ಉದ್ದೇಶವೇನೆಂದು ತಿಳಿದುಕೊಂಡು ಅದರಂತೆ ಕೆಲಸ ಮಾಡುವ ಅರಿವುಳ್ಳ ಭಾಷೆ. ತತ್ವಗಳ ಅಭಿವ್ಯಕ್ತಿಗಾಗಿ ಶರಣರು ಒಡಗತೆಗಳನ್ನು ಸೃಷ್ಟಿಸುವದಿಲ್ಲ. ಅವರದು ಏನಿದ್ದರೂ ನೇರವಾದ ತೊಡಕಿಲ್ಲದ ಅನುಭಾವ ಕಥನ"(೪)

ವಚನಕಾರರು ಭಾಷೆಯನ್ನು ತುಂಬಾ ನೇರವಾಗಿ, ಹೃದಯಕ್ಕೆ ತಲುಪುವಂತೆ ಬಳಸಿದರು. ಭಾಷೆಯ ಸ್ವರೂಪ ಮತ್ತು ಪರಿಣಾಮವನ್ನು ನಾವು ಬಸವಣ್ಣನವರ ಕೆಳಗಿನ ವಚನದಲ್ಲಿ ಕಾಣುತ್ತೇವೆ –

ನುಡಿದರೆ ಮುತ್ತಿನ ಹಾರದಂತಿರವೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು.
ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು.
ನುಡಿಯೊಳಗಾಗಿ ನಡೆಯದಿದ್ದಡೆ
ಕೂಡಲಸಂಗಮದೇವನೆಂತೊಲಿವನಯ್ಯಾ?[೫]

"ಈ ವಚನದ ಮೇಲಿನ ಮೂರು ಸಾಲುಗಳಲ್ಲಿ ಅತ್ಯುತ್ತಮವಾದ ನುಡಿ ಸ್ವರೂಪವನ್ನು ಕುರಿತು ಹೇಳಿದರೆ, ಕೊನೆಯ ಎರಡು ಸಾಲುಗಳಲ್ಲಿ ಅದರ ಪರಿಣಾಮವನ್ನು ಕುರಿತು ಹೇಳಿದ್ದಾರೆ. ಇಲ್ಲಿ ನಡೆ ನುಡಿ ಒಂದಾದ ಅಭಿವ್ಯಕ್ತಿಯ

---

೩. ವಚನಸಾಹಿತ್ಯ ದರ್ಶನ : ವಚನಗಳ ಭಾಷೆ ಸ್ವರೂಪ – ಕೀರ್ತಿನಾಥ ಕುರ್ತಕೋಟಿ ಪು–೩೧

೪. –ಅದೇ– ಪು–೩೪.

೫. ಬಸವಣ್ಣನವರ ವಚನಗಳು – ಸಂ. ಡಾ॥ ಆರ್.ಸಿ. ಹಿರೇಮಠ ವ–೮೦೨.

ಪರಿಣಾಮವು ಸಹೃದಯನ ಅಂತರಂಗದಲ್ಲಿ ನೆಲೆಸಿರುವ ಸಹಜಾನಂದದ ನೆಲೆಯನ್ನು ತಲುಪಿ ಮೆಚ್ಚಿಕೆಯುನ್ನು ಪಡೆದಾಗಲೇ ಅದಕ್ಕೆ ಸಾರ್ಥಕತೆ ಎಂಬುದು ಸೂಚಿತವಾದಂತಿದೆ. ಇದು ಬಸವಣ್ಣನವರ ದೃಷ್ಟಿಯಲ್ಲಿ ನಿಜವಾದ ಕಾವ್ಯವು ಮಾಡಬೇಕಾದ ಪರಿಣಾಮ ಮತ್ತು ಪ್ರಯೋಜನವನ್ನು ಕುರಿತಾಗಿದೆ."[೬]

ಕನ್ನಡದ ಹಿರಿಯ ದಾರ್ಶನಿಕ ಬರಹಗಾರರೂ, ವಿದ್ವಾಂಸರೂ ಆಗಿರುವ ಡಾ॥ ದೇ. ಜವರೇಗೌಡರು ವಚನಗಳ ಶೈಲಿಯ ಕುರಿತು ಹೀಗೆ ಹೇಳುತ್ತಾರೆ – "ಭಾಷೆ, ಭಾವ,ಲಯ, ವಿಚಾರ,ವರ್ಣನೆ,ಗುಣ, ಅಲಂಕಾರ,ಜೀವನ ದರ್ಶನ ಇವೆಲ್ಲವುಗಳ ಸುಸಂಬಂಧವಾದ, ಔಚಿತ್ಯಪೂರ್ಣವಾದ ಸಮ್ಮಿಲನವೇ ಶೈಲಿ ಎಂದು ಸ್ಥೂಲವಾಗಿ ಹೇಳಬಹುದು."[೭]

ಬಸವಾದಿ ಶರಣರು ಬಳಸಿದ ವಚನ ಭಾಷೆಯು ಕೇವಲ ಪಾಂಡಿತ್ಯದ ಭಾಷೆಯಲ್ಲ, ಅದು ಜನಸಾಮಾನ್ಯರ ಆಡುನುಡಿಯ ಭಾಷೆ. ಅಲ್ಲಿ ಪೂರ್ವದವರ ಅನುಕರಣೆಯಾಗಲೀ, ಅನುಸರಣೆಯಾಗಲೀ ಇಲ್ಲ. 'ಕೂಡಲಸಂಗಮದೇವಾ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂದು ಸ್ವತಃ ಬಸವಣ್ಣನವರೇ ಹೇಳಿಕೊಂಡಿದ್ದಾರೆ. ಡಾ॥ ಸಿದ್ಧಯ್ಯ ಪುರಾಣಿಕರು – "ನನ್ನ ಅಭಿಪ್ರಾಯದಲ್ಲಿ ವಚನಕಾರರ ವಿವಿಧ ಸ್ವತಂತ್ರ ಸುಂದರ ಶೈಲಿಗಳೇ ವಚನಸಾಹಿತ್ಯದ ಹಿರಿಮೆ, ಹೆಗ್ಗಳಿಕೆ. ಶರಣರ ಶೈಲಿಯನ್ನು ಕುರಿತು ವಿಚಾರಿಸುವಾಗ ವಚನಕಾರರು ಸ್ವತಂತ್ರ ಸಾಹಿತ್ಯಯುಗದ ಸಂಸ್ಥಾಪಕರೆಂಬಂಶವನ್ನು ಮರೆಯಲಾಗದು"[೮] ಎಂದು ಹೇಳುವ ಮಾತುಗಳಲ್ಲಿ ಸತ್ಯವಿದೆ.

ವಚನಸಾಹಿತ್ಯ ವಿದ್ವಾಂಸರಾದ ಡಾ॥ ವೀರಣ್ಣ ರಾಜೂರ ಅವರು "ವಚನಸಾಹಿತ್ಯವು ಪ್ರಯೋಗಶೀಲರಾದ ಶರಣರು ಕನ್ನಡಕ್ಕೆ ಕೊಟ್ಟ ವಿಶಿಷ್ಟ ಕಾಣಿಕೆ; ಕನ್ನಡ ಸಾಹಿತ್ಯ ವಿಶ್ವ ಸಾಹಿತ್ಯಕ್ಕೆ ಸಲ್ಲಿಸಿದ ಅಪೂರ್ವ ಕೊಡುಗೆ. ಇದು ತನಗಿಂತ ಪೂರ್ವದ ಯಾವುದೇ ಸಿದ್ಧರೂಪವನ್ನು ಮಾದರಿಯಾಗಿಟ್ಟುಕೊಂಡು ಇಲ್ಲವೆ ಯಾವುದೇ ಭಾಷೆಯ ಪ್ರಕಾರದ ಪ್ರಭಾವದಿಂದ ಪ್ರಕಟವಾದ ಅನುಕರಣರೂಪವಲ್ಲ,"[೯] ಎಂದಿದ್ದಾರೆ.

ವಚನಕಾರರ ಭಾಷೆ ಅನುಭವದ ಭಾಷೆ. "ಅನುಭವಗಟ್ಟಿ-ಮುಟ್ಟಾಗಿದ್ದರೆ ಅಭಿವ್ಯಕ್ತಿ ಸುಲಭವಾಗುತ್ತದೆ. ಅವರು ಪಂಡಿತರನ್ನು ಮೆಚ್ಚಿಸಬೇಕಾಗಿಲ್ಲ, ಶಾಬಾಸಗಿರಿ ಪಡೆದು ದತ್ತಿಗಳನ್ನು ಸಂಪಾದಿಸಬೇಕಾಗಿಲ್ಲ. ಒಂದು, ತಮ್ಮ ಅನುಭವದ ಒತ್ತಡ ಕಡಿಮೆಯಾಗಬೇಕು, ವಚನವೊಂದು ಕಂಠದಿಂದ ಹೊರಬಂದರೆ ಅಲ್ಲಿಗೆ ಅದರ ಸಾಧನೆಯಾಯಿತು. ತಾನು ಹೇಳುವುದು ತನ್ನಂತಹ ಇತರರಿಗೆ ಅರ್ಥವಾಗಬೇಕು.

---

೬. ಬಸವಣ್ಣನವರ ವಚನಗಳ ಸಾಹಿತ್ಯಿಕ ಅಧ್ಯಯನ – ಡಾ॥ ಸಿ.ವಿ. ಪ್ರಭುಸ್ವಾಮಿಮಠ. ಪು – ೧೫೯–೧೬೦

೭. ಬಸವ ಸಂಹಿತೆ ಡಾ॥ ದೇ.ಜ.ಗೌ. ಪು – ೭೫.

೮. ಶರಣ ಸರಣಿ –ಡಾ॥ ಸಿದ್ಧಯ್ಯ ಪುರಾಣಿಕ ಪು –೧೧೪.

೯. ವಚನ ಅಧ್ಯಯನ – ಡಾ॥ ವೀರಣ್ಣರಾಜೂರ ಪು – ೫೦.

ಆದ್ದರಿಂದ ಭಾಷೆ ಎಷ್ಟು ನೇರವಾಗಿದ್ದರೆ ಅಷ್ಟು ಒಳ್ಳೆಯದು"[೧೦] ಖ್ಯಾತ ಸಂಶೋಧಕರೂ ವಚನಚಿಂತಶೀಲರೂ ಆಗಿರುವ ಡಾ। ಎಂ.ಚಿದಾನಂದ ಮೂರ್ತಿ ಹಾಗೂ ಇನ್ನಿತರ ವಿದ್ವಾಂಸರ ಅಭಿಪ್ರಾಯಗಳ ಬೆಳಕಿನಲ್ಲಿ ಕುಮಾರ ಕಕ್ಕಯ್ಯನವರು ವಚನಗಳ ಭಾಷೆ ಹಾಗೂ ಶೈಲಿಯನ್ನು ಗಮನಿಸಿದಾಗ, ಇವರ ವಚನಗಳ ವಿಶೇಷತೆಯ ಅರಿವಾಗುತ್ತದೆ.

ಅನುಭಾವ ಗಣಿತದ ಲೆಕ್ಕವಲ್ಲ.
ಹೇಳಿ ಕೇಳಿ ಬರೆದು ಕಲಿಯುವದೂ ಅಲ್ಲ.
ಅನುಭಾವ ಒಳಗಿಲ್ಲ ಹೊರಗಿಲ್ಲ,
ಪರರಿಂದ ಪಡೆದುಕೊಳ್ಳವ ವಸ್ತುವೂ ಅಲ್ಲ.
ಘಟಿಸಿದ ಘಟನೆಗಳಿಂದಾದ ಕಷ್ಟ ಕಾರ್ಪಣ್ಯ
ಸೋಲು ಗೆಲುವು, ಸುಖ ದು:ಖಗಳ
ಪರಿಜ್ಞಾನವೇ ಅನುಭಾವವೆಂದ
ಕುಮಾರ ಕಕ್ಕಯ್ಯ.[೧೧]

ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರು ಬಸವಾದಿ ಶರಣರ ವಚನಸಾಹಿತ್ಯ ಪರಂಪರೆಯುನ್ನು, ಅವರ ಧ್ಯೇಯಾದರ್ಶಗಳನ್ನು ಮುಂದುವರೆಸಿಕೊಂಡು ಬಂದ ಸ್ವಾನುಭಾವಿಗಳಾಗಿರುವುದರಿಂದ.ಅವರ ವಚನದ ಭಾಷೆಯು ನೇರವಾಗಿದೆ, ಶೈಲಿಯು ಹೃದಯಸ್ಪರ್ಷಿಯಾಗಿದೆ. ಅನುಭಾವವೆಂಬುದು ಗಣಿತಶಾಸ್ತ್ರದ ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಕಾರವಲ್ಲ, ಅದು ಯಾರೋ ಹೇಳಿದ್ದನ್ನು ಕೇಳಿ, ಬರೆದು ಕಲಿಯುವದೂ ಅಲ್ಲ. ಅದನ್ನು ಎಲ್ಲಿಯೋ ಹುಡುಕುವದೂ ಅಲ್ಲ, ಯಾರಿಂದಲೋ ಕೈಗಡವಾಗಿ ಅಥವಾ ಖರೀದಿಸಿ ಪಡೆದುಕೊಳ್ಳುವ ವಸ್ತುವೂ ಅಲ್ಲ. ಅನುಭಾವವೆಂಬುದು ವಾಸ್ತವಿಕವಾಗಿ ವ್ಯಕ್ತಿಯ ಜೀವನದಲ್ಲಿ ಘಟಿಸಿದ ಘಟನೆಗಳಿಂದಾದ ಕಷ್ಟ–ಕಾರ್ಪಣ್ಯ, ಸೋಲು–ಗೆಲವು, ಸುಖ–ದುಃಖಗಳ ಪರಿಜ್ಞಾನವಾಗಿದೆ. ಇದು ಸ್ವತಃ ಆಯಾ ವ್ಯಕ್ತಿಗಳ ಅನುಭವದ ಮೂಸೆಯಿಂದ ಹೊರಬರುವುದಾಗಿದೆ.

ವಚನಕಾರರ ಭಾಷೆ ಪಾಂಡಿತ್ಯದ ಭಾಷೆಯಲ್ಲ, ಅದು ದೇಸಿ ಭಾಷೆ. ಜನಪದ ಸತ್ವ ಒಳಗೊಂಡಿರುವುದರಿಂದ ನೇರವಾಗಿ ಮನಕ್ಕೆ ನಾಟುತ್ತದೆ. ವಚನಕಾರರು "ಜೀವನದಲ್ಲಿ ಹೇಗೋ ಹಾಗೆ ಅಭಿವ್ಯಕ್ತಿಯಲ್ಲಿಯೂ ಪ್ರಾಮಾಣಿಕತೆಯನ್ನು ಸಾಧಿಸಿದರು. ಕನ್ನಡ ಭಾಷೆಗೆ ಒಂದು ಆಯಾಮವನ್ನು ತಂದುಕೊಟ್ಟರು"[೧೨]

ಸಿರಿವಂತ ಗಂಡಿದ್ದ ಹೆಂಡತಿಗೆ
ಬಡತನದ ಬವಣೆಗೊತ್ತಾಗದು.

---

೧೦. ವಚನ ಸಾಹಿತ್ಯ – ಡಾ॥ ಎಂ. ಚಿದಾನಂದ ಮೂರ್ತಿ ಪು – ೧೭೦.
೧೧. ಕುಮಾರ ಕಕ್ಕಯ್ಯನ ವಚನಗಳು ಪು –೧೦ ವ –೩೯.
೧೨. ವಚನ ಸಾಹಿತ್ಯ – ಡಾ॥ ಎಂ. ಚಿದಾನಂದ ಮೂರ್ತಿ ಪು–೧೭೧.

ತಂದೆಯ ಗಳಿಕೆ ಬಳಸುವ ಮಗನಿಗೆ
ಹಣದ ಮೌಲ್ಯ ತಿಳಿಯದು
ಪರರ ಹೆಗಲ ಮೇಲೆ ಸವಾರಿ ಮಾಡುವವರಿಗೆ
ದಣಿವೆಯ ಪ್ರಶ್ನೆಯೇ ಇಲ್ಲೆಂದ ಕುಮಾರ ಕಕ್ಕಯ್ಯ.[೧೩]

ಈ ರೀತಿಯ ವಚನಶೈಲಿ ಮನಂಬುಗುವಂತಿದೆ. ಇದು ಜನಸಾಮಾನ್ಯರ ಅನುಭವಗಳ ಮೊತ್ತವಾಗಿ ಹೊರಹೊಮ್ಮಿದ ವಚನವಾಗಿದೆ. ಕುಮಾರ ಕಕ್ಕಯ್ಯನವರದು ಉಪದೇಶಾತ್ಮಕ ಶೈಲಿಯಾಗಿದೆ. ಇದನ್ನು ಕೆಳಗಿನ ವಚನದಲ್ಲಿ ನೋಡಬಹುದು –

ಬಲಿಷ್ಠನಾಗು, ಆದರೆ ನಿಷ್ಕರುಣಿಯಾಗಬೇಡ
ಧಾರ್ಮಿಕನಾಗು, ಆದರೆ ಧೂರ್ತನಾಗಬೇಡ
ಪಂಡಿತನಾಗು, ಆದರೆ ಪಾಖಂಡಿಯಾಗಬೇಡ
ಪ್ರೇಮಿಯಾಗು, ಆದರೆ ಕಾಮುಕನಾಗಬೇಡ
ಆಸ್ತಿಕನಾಗು ನಾಸ್ತಿಕನಾಗು, ಭಕ್ತನಾಗು ಭವಿಯಾಗು
ಏನೇ ಆಗು, ಮೊದಲು ಮಾನವನಾಗೆಂದ
ಕುಮಾರ ಕಕ್ಕಯ್ಯ.[೧೪]

ಒಟ್ಟಿನಲ್ಲಿ ಕುಮಾರ ಕಕ್ಕಯ್ಯನವರ ವಚನಗಳಲ್ಲಿ, ಅವರು ಬಳಸಿರುವ ಭಾಷೆಯು ಜಾನಪದೀಯ ಅಂಶಗಳನೊಳಕೊಂಡ, ಧ್ವನಿ, ವ್ಯಂಗ್ಯ, ವಕ್ರೋಕ್ತಿ ಮುಂತಾದವುಗಳು ಕಂಡುಬರುತ್ತವೆ.

ವಚನಗಳ ರಾಚನಿಕ ವಿನ್ಯಾಸ ಗಮನಿಸಿದಾಗ – "ವಚನಗಳು ತಮ್ಮ ಮುಖ್ಯ ಸಂದೇಶವನ್ನು ಕೊನೆಯ ಸಾಲಿನಲ್ಲಿ ಸ್ಫೋಟಿಸುತ್ತವೆ. ವಚನದ ಉಳಿದ ಸಾಲುಗಳು ಈ ಕೊನೆಯ ಸಾಲಿನ ಬರುವಿಕೆಗಾಗಿ ತಕ್ಕ ರಾಚನಿಕ ವಾತಾವರಣವನ್ನು ನಿರ್ಮಿಸುತ್ತವೆ. ಆ ಮುಖ್ಯ ಸಂದೇಶ ಬರುವದನ್ನು ಹಿತಮಿತವಾಗಿ ತಡೆಹಿಡಿದು ನಮ್ಮ ಕುತೂಹಲವನ್ನು ಕೆರಳಿಸುತ್ತವೆ. ಕೊನೆಯಲ್ಲಿ ಮುಖ್ಯ ಸಂದೇಶ ನಮ್ಮ ನಿರೀಕ್ಷೆಯ ಶಮನವಾಗಿ ತಾರ್ಕಿಕ ಕೊನೆಯಾಗಿ, ಇಲ್ಲವೇ ಅನಿರೀಕ್ಷಿತ ತಿರುವಾಗಿ ಕಾಣಿಸಿಕೊಳ್ಳುತ್ತದೆ.[೧೫] ಕುಮಾರ ಕಕ್ಕಯ್ಯನವರ ಈ ಕೆಳಗಿನ ವಚನವನ್ನು ನೋಡಬಹುದಾಗಿದೆ –

ಫಲವಿಲ್ಲದ ಬಳ್ಳಿಯ ನೋಟ
ನೀರಿಲ್ಲದ ಬಾವಿಯ ತೋಟ
ಗುಣವಿಲ್ಲದ ಗೆಳೆಯನ ವಹಿವಾಟ
ಹೃದಯವಿಲ್ಲದ ಹೆಣ್ಣಿನ ಒಡನಾಟ

---

೧೩. ಕುಮಾರ ಕಕ್ಕಯ್ಯನ ವಚನಗಳು – ಪು-೩೨೪ ವ-೧೨೫೨
೧೪. -ಅದೇ- ಪು-೨೫೩ ವ-೯೭೫.
೧೫. ವಚನ ವಿನ್ಯಾಸ – ಗಿರಡ್ಡಿ ಗೋವಿಂದರಾಜ ಪು-೭೦

ಕಟ್ಟಿ ಮೇಯಿಸಿದ ಬರಡೆಮ್ಮೆಯ
ಕೆಚ್ಚಲಲಿ ಕೈ ಹಾಕಿದಂತೆಂದ ಕುಮಾರ ಕಕ್ಕಯ್ಯ.[೧೬]

ಈ ವಚನದ ಮೊದಲ ನಾಲ್ಕು ಸಾಲುಗಳು ಹಣ್ಣು ಕಾಯಿಗಳಿಲ್ಲದ ಒಂದು ಹಚ್ಚ ಹಸುರಿನ ಬಳ್ಳಿಯ ನೋಟವನ್ನು, ನೀರಿಲ್ಲದ ಬಾವಿಯ ತೋಟವನ್ನು, ಗುಣಹೀನ ಗೆಳೆಯನ ಜೊತೆಗಿನ ವಹಿವಾಟ ಅಂದರೆ ವ್ಯವಹಾರವನ್ನು ಹೃದಯಹೀನ ಹೆಣ್ಣಿನ ಒಡನಾಟವನ್ನು ಚಿತ್ರಿಸಿದರೆ, ಕೊನೆಯ ಎರಡು ಸಾಲುಗಳು ಹೋಲಿಕೆಯಾಗಿ ಸಾಗಿಬಂದ ವಿಚಾರಗಳಿಗೆ ಕೊನೆ ಹಾಡುತ್ತವೆ. ಅಲ್ಲಿ ಹಾಲು ಇಲ್ಲದ ಬರಡು ಎಮ್ಮೆಯ ಕೆಚ್ಚಲಲಿ ಕೈಹಾಕಿದರೆ ಹಾಲೂ ಸಿಗುವದಿಲ್ಲ, ಮೇಲಾಗಿ ಅದರ ಒದೆತವನ್ನೂ ತಿನ್ನಬೇಕಾಗುತ್ತದೆ. ಹೀಗೆ ಕುಮಾರ ಕಕ್ಕಯ್ಯನವರ ವಚನಗಳ ರಾಚನಿಕ ವಿನ್ಯಾಸ, ಬಳಿಸಿದ ಭಾಷೆ, ಶೈಲಿ ಮನೋಜ್ಞವಾಗಿವೆ.

"ಲೌಕಿಕದಲ್ಲಿ ಸಮಾಜ ಸುಧಾರಣೆ ಹಾಗೂ ಅಲೌಕಿಕದಲ್ಲಿ ಆತ್ಮೋನ್ನತಿ ಹೀಗೆ ಎರಡನ್ನೂ ಸಾಧನೆಯ ವಿಭಿನ್ನ ಆಯಾಮಗಳಾಗಿಸಿಕೊಂಡಿದ್ದ ಶಿವಶರಣರ ವಚನಗಳು ಸಹಜವಾಗಿಯೇ ಸಮಾಜ ವೀಕ್ಷಣೆ ಹಾಗೂ ಆತ್ಮ ನಿರೀಕ್ಷಣೆಯ ಫಲಗಳಾಗಿವೆ"[೧೭] ಎಂಬುದನ್ನು ಕುಮಾರ ಕಕ್ಕಯ್ಯನವರ ವಚನಗಳಲ್ಲಿ ಅರಿಯುತ್ತೇವೆ. ಕುಮಾರ ಕಕ್ಕಯ್ಯನ ವಚನಗಳ ಭಾಷೆ ಸರಳ, ನೇರ, ಚಿಕ್ಕ ಚಿಕ್ಕ, ಪದಗಳಿಂದ ಕೂಡಿದ್ದು ಅನುಭವಜನ್ಯವಾಗಿದೆ, ಶೈಲಿಯು ನಿರಾಡಂಬರ ಸಹಜ ಸುಂದರ ಹಾಗೂ ಮೋಹಕವಾಗಿದೆ.

**ii) ಛಂದಸ್ಸು – ಅಲಂಕಾರ :** ಕನ್ನಡ ಭಾಷೆಯನ್ನು ಪ್ರಮುಖವಾಗಿ ಗದ್ಯ ಪದ್ಯಗಳೆಂದು ಎರಡು ಭಾಗಗಳನ್ನಾಗಿ ವಿಂಗಡಿಸಿ ಸಾಹಿತ್ಯ ರಚಿಸಲಾಗಿದೆ. ಗದ್ಯ ಸಾಹಿತ್ಯ ನಿರರ್ಗಳವಾಗಿ ಓದಿಸುತ್ತ ಹೋಗುತ್ತದೆ, ಪದ್ಯಸಾಹಿತ್ಯ ಹಾಡಿನ ರೂಪದಲ್ಲಿ ಸಾಗುತ್ತದೆ. "ಭಾಷೆಗೆ ವ್ಯಾಕರಣದಂತೆ ಛಂದಸ್ಸೂ ಸಾಧಕವಾಗಿರುವುದು. ಆದರೆ ವ್ಯಾಕರಣವು ಗದ್ಯ ಪದ್ಯಗಳೆರಡಕ್ಕೂ, ಛಂದಸ್ಸು ಪದ್ಯ ಮಾತ್ರಕ್ಕೂ ಸಂಬಂಧಿಸುವುದು. ವಿಸ್ತೃತವಾದ ವಿಷಯವನ್ನು ಸಂಗ್ರಹಿಸಿ ಹೇಳಲೂ ರಸವತ್ತಾದ ಅಂಶವನ್ನು ಮನೋಹರವಾಗಿ ತಿಳಿಸಲೂ, ಸುಲಭವಾಗಿ ನೆನಪಿಟ್ಟುಕೊಳ್ಳಲೂ ಪದ್ಯವು ಬಹಳ ಅನುಕೂಲವು. ಪದ್ಯಗಳ ನಿಯಮವನ್ನು ಛಂದಶ್ಶಾಸ್ತ್ರವು ತಿಳಿಸುವುದು"[೧೮]

"ಛಂದಸ್ಸಿನ ವ್ಯುತ್ಪತ್ತಿಯನ್ನು ಛದ್ ಮತ್ತು ಛಂದ್ ಈ ಎರಡೂ ಧಾತುಗಳಿಂದ ಸಾಧಿಸುತ್ತಾರೆ. ಅವರೆಡೂ ಧಾತುಗಳ ಅರ್ಥ ಹೆಚ್ಚೂ ಕಡಿಮೆ ಒಂದೇ. ಆಚ್ಛಾದಿಸು ಅಥವಾ ಹೊದಿಸು ಎಂಬ ಅರ್ಥವನ್ನು ಅವು ಕೊಡುತ್ತವೆ......... ಆಹ್ಲಾದವನ್ನುಂಟು ಮಾಡುವದು ಯಾವುದೋ ಅದು ಛಂದ ಎಂದೂ ಅರ್ಥ ಮಾಡುವುದುಂಟು.

೧೬. ಕುಮಾರ ಕಕ್ಕಯ್ಯನ ವಚನಗಳು – ಪು– ೧೯೫ ವ–೭೫೦.
೧೭. ಸಾಹಿತ್ಯಸಿರಿ ೨೦೦೬: ವಚನಗಳ ರಚನಾ ವಿನ್ಯಾಸ – ಡಾ॥ ರಾಜೇಶ್ವರಿ ಮಹೇಶ್ವರಯ್ಯ – ಪು–೧೨೨.
೧೮. ಕನ್ನಡ ಕೈಪಿಡಿ : ಪ್ರ.ಸಂಪಾದಕ – ಡಾ॥ಕೆ.ವ್ಹಿ.ಪುಟ್ಟಪ್ಪ ಪು–೭೧.

ಛಂದಕ್ಕೆ ಈ ಅರ್ಥ ಹೆಚ್ಚು ಒಪ್ಪುತ್ತದೆ. ಸ್ವರ ಸಂಯೋಜನೆಗಳ ನಿಯತವಾದ ಆವರ್ತನೆಯಿಂದುಂಟಾಗುವ ಆಂದೋಲನದಿಂದ ಛಂದಸ್ಸು ನಿಜವಾಗಿಯೂ ಆನಂದವನ್ನುಂಟು ಮಾಡುತ್ತದೆ[೧೯] ಎಂದು ಕವಿ ಡಾ|| ಡಿ.ಎಸ್. ಕರ್ಕಿಯವರು ತಮ್ಮ ಛಂದೋವಿಕಾಸ ಕೃತಿಯಲ್ಲಿ ಹೇಳುತ್ತಾರೆ.

ಛಂದಸ್ಸನ್ನು ಶಾಸ್ತ್ರವೆಂದು ಸಾಮಾನ್ಯವಾಗಿ ಎಲ್ಲ ವಿದ್ವಾಂಸರು ಹೇಳಿದ್ದಾರೆ. ಛಂದಸ್ಸು ಕಾವ್ಯದ ಲಯಗಳನ್ನು ಪರಿಶೀಲಿಸಿ ಲಕ್ಷಣ ಹೇಳುವುದರಿಂದ ಅದನ್ನು ಛಂದಸ್ಸು ಶಾಸ್ತ್ರವೆಂದು ಪರಿಗಣಿಸಿದರೂ ಕೂಡ, ಕಲೆಯ ಸಂಪರ್ಕವೂ ಅದಕ್ಕಿದೆ. ಡಾ||ಕರ್ಕಿಯವರು ಛಂದಸ್ಸಿನ ಸಂಬಂಧದಲ್ಲಿ ಎರಡು ದೃಷ್ಟಿಗಳನ್ನು ಗುರುತಿಸುತ್ತಾರೆ. "ಒಂದು ಸೌಂದರ್ಯ ದೃಷ್ಟಿ, ಇನ್ನೊಂದು ಪ್ರಯೋಜನ ದೃಷ್ಟಿ. ಛಂದಸ್ಸು ಕಾವ್ಯದ ಸೌಂದರ್ಯಕ್ಕೆ ಕಳೆಕಟ್ಟಿ ಆನಂದವನ್ನುಂಟುಮಾಡುತ್ತದೆಂಬುದು ಸೌಂದರ್ಯ ದೃಷ್ಟಿ. ಕಾವ್ಯಕ್ಕೆ ಪ್ರವಹಿಸಲು ನೆರವಾಗುತ್ತದೆಂಬುದು ಅಥವಾ ಜ್ಞಾಪಕಕ್ಕೆ ಅನುಕೂಲವಾಗುತ್ತದೆಂಬುದು ಪ್ರಯೋಜನ ದೃಷ್ಟಿ"[೨೦] ಕ್ರಿ.ಶ ೯೯೦ರಲ್ಲಿದ್ದ ಒಂದನೆಯ ನಾಗವರ್ಮನು ಛಂದೋಂಬುಧಿ ಎಂಬ ಕನ್ನಡ ಛಂದಸ್ಸನ್ನು ತಿಳಿಸುವ ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಪ್ರಾಸ, ಯತಿ, ಗಣಗಳ ಬಗ್ಗೆ ತಿಳಿಸಿದ್ದಾನೆ. ಮಾತ್ರೆ, ಗುರು, ಲಘುಗಳ ಬಗ್ಗೆಯೂ ವಿವರಿಸಿದ್ದಾನೆ.

"ಪ್ರಾಚೀನ ಸಂಸ್ಕೃತದಲ್ಲಿ ವೈದಿಕ ಛಂದಸ್ಸು ಎಂದೂ, ಲೌಕಿಕ ಛಂದಸ್ಸು ಎಂದು ಎರಡು ಛಂದಗಳಿರುವವು. ವೈದಿಕ ಛಂದಸ್ಸನ್ನು ಯಾವ ಕನ್ನಡ ಕವಿಯೂ ಗಮನಿಸಿಲ್ಲ. ಇದರಲ್ಲಿ ತಾಳದ ಕಲ್ಪನೆಯೇ ಇಲ್ಲ. ಅವರು ಮೆಚ್ಚಿದ್ದು ಲೌಕಿಕ ಛಂದಸ್ಸು. ಅದನ್ನೇ ಹಿನ್ನೆಲೆಯಾಗಿಟ್ಟುಕೊಂಡು ಚಂಪೂ ಶೈಲಿಯನ್ನು ನಿರ್ಮಿಸಿ, ಕನ್ನಡ ಕವಿಗಳು ತಮ್ಮ ಕಾವ್ಯಗಳನ್ನು ಬರೆದಿದ್ದಾರೆ. ಸಂಸ್ಕೃತ ಛಂದಸ್ಸು, ವರ್ಣ ಛಂದಸ್ಸು, ಅಲ್ಲಿ ಅಕ್ಷರಗಣಗಳ ಎಣಿಕೆಯೊಡನೆ ವೃತ್ತಗಳ ಬಂಧ"[೨೧] ಇರುತ್ತದೆಯೆಂದು ಡಾ||ಬಿ.ಎಸ್.ಗದ್ದಗಿಮಠ ಅವರು ಹೇಳುತ್ತಾರೆ.

ಕನ್ನಡ ಛಂದಸ್ಸಿನ ವಿಕಾಸ ಮಾರ್ಗದಲ್ಲಿ ಡಾ||ಕರ್ಕಿಯವರು ನಾಲ್ಕು ಪ್ರಯೋಗ ಯುಗಗಳನ್ನು ಗುರುತಿಸುತ್ತಾರೆ[೨೨] ೧ನೆಯ ಪ್ರಯೋಗ ಯುಗವನ್ನು ಚಂಪೂ ಛಂದಃ ಪ್ರಯೋಗಯುಗವೆಂದು ಹೇಳಿ, ಇದು ೯ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಎಂದು ತಿಳಿಸುತ್ತಾರೆ. ೨ನೆಯ ಪ್ರಯೋಗಯುಗವನ್ನು ಬಸವಾದಿ ಶರಣರ ಧಾರ್ಮಿಕ ಕ್ರಾಂತಿಯ ಪರಿಣಾಮದ ಫಲವಾಗಿ ಅಂಶಗಣ ಮಟ್ಟುಗಳನ್ನು ಮಾತ್ರಾಗಣ ಬಂಧಗಳಿಗೆ ತಿರುಗಿಸಿ ವಚನ, ಕಾವ್ಯಗಳ ರಚನೆ ನಡೆಯಿತು. ಇದನ್ನು ೧೨ನೇ ಶತಮಾನದಿಂದ ೧೬ನೇ ಶತಮಾನದವರೆಗೆ ಎಂದು ಗುರುತಿಸುತ್ತಾರೆ.

---

೧೯. ಛಂದೋ ವಿಕಾಸ – ಡಾ|| ಡಿ.ಎಸ್.ಕರ್ಕಿ ಪು–೪.

೨೦. – ಅದೇ – ಪು–೫.

೨೧. ಕನ್ನಡ ಜಾನಪದ ಗೀತೆಗಳು : ಜಾನಪದ ಛಂದಸ್ಸು – ಡಾ|| ಬಿ.ಎಸ್. ಗದ್ದಗಿಮಠ ಪು–೨೧೭

೨೨. ಕನ್ನಡ ಛಂದೋವಿಕಾಸ – ಡಾ|| ಡಿ.ಎಸ್.ಕರ್ಕಿ ಪು – ೨೨೬–೨೪೧.

೩ನೇ ಪ್ರಯೋಗಯುಗವನ್ನು ೧೬ನೆಯ ಶತಮಾದಿಂದ ೧೯ನೇ ಶತಮಾನದ ವರೆಗೆ ಗುರುತಿಸುತ್ತಾರೆ. ೪ನೇ ಪ್ರಯೋಗ ಯುಗವನ್ನು ೧೯ ರಿಂದ ೨೦ ನೇ ಶತಮಾನದ ಕಾವ್ಯಗಳವರೆಗೆ ಗುರುತಿಸುತ್ತಾರೆ.

ಹನ್ನೆರಡನೆಯ ಶತಮಾನದಲ್ಲಿ ರಚಿತವಾದ ಬಸವಾದಿ ಶರಣರ ವಚನಗಳು ಕನ್ನಡ ಕಾವ್ಯ ಪ್ರಪಂಚದಲ್ಲಿ ಹೊಸ ಕ್ರಾಂತಿಯನ್ನೇ ಉಂಟು ಮಾಡಿದವು. “ವಚನಗಳು ಚಂಪೂ ಕಾವ್ಯಗಳಿಗಿಂತ ಬರಿಯ ಹೊರನೋಟದಲ್ಲಿ ಮಾತ್ರವಲ್ಲದೆ ಒಳ ಸತ್ವದಲ್ಲಿಯೂ ಭಿನ್ನವಾಗುತ್ತವೆ. ಚಂಪೂ ಕಾವ್ಯಗಳು ಗಾತ್ರದಲ್ಲಿ ದೊಡ್ಡವು. ಅವುಗಳ ಭಾಷೆ ಪ್ರೌಢ. ವಸ್ತು ಹಿಂದಿನಿಂದಲೂ ಬಂದ ಪೌರಾಣಿಕ ಕಥೆಗಳು. ಸಮಯ ದೊರೆತಾಗ ರಾಜರನ್ನೂ ಪೋಷಕರನ್ನೂ ಹೊಗಳುವುದು ಆ ಕವಿಗಳ ರೂಢಿ. ಅವುಗಳ ಶ್ರೋತೃ ವರ್ಗ ವಿದ್ವಾಂಸರು ಅಥವಾ ಆಸ್ಥಾನ ಪಂಡಿತರು. ಛಂದಸ್ಸಿನ ದೃಷ್ಟಿಯಿಂದಲೂ ಹೇಳುವುದಾದರೆ ಸಂಸ್ಕೃತದಿಂದ ಬಂದ ಅಕ್ಷರ ವೃತ್ತಗಳು, ಪ್ರಾಕೃತದಿಂದ ಬಂದ ಕಂದ ಪದ್ಯಗಳೇ ಅಲ್ಲಿ ಹೆಚ್ಚು. ಎಲ್ಲೋ ಮಧ್ಯೆ ದೇಸೀಯವಾದ ತ್ರಿಪದಿ, ಷಟ್ಪದಿ, ಪಿರಿಯಕ್ಕರಗಳು ವಿರಳವಾಗಿ ಕಾಣಿಸಿಕೊಳ್ಳಬಹುದು. ವಚನಗಳು ಈ ಚಂಪೂಕಾವ್ಯಗಳಿಗಿಂತ ಸಂಪೂರ್ಣವಾಗಿ ಬೇರೆಯಾಗಿ ನಿಲ್ಲುತ್ತವೆ. ಯಾವುದೇ ಸಿದ್ಧ ಛಂದೋರೂಪವೂ ಇಲ್ಲಿಲ್ಲ. ಗದ್ಯವೂ ಅಲ್ಲದ, ಪದ್ಯವೂ ಅಲ್ಲದ ಒಂದು ಬಗೆಯ ಮುಕ್ತ ಛಂದಸ್ಸು ಅವುಗಳದು”[೨೩]

ಶರಣರ ಕಾಲಕ್ಕೆ ಮೂಲದ ಒಂದೇ ಷಟ್ಪದಿಯು ಹಲವು ಷಟ್ಪದಿಯಾಗಿ ರೂಪದಾಳಿದವು. ಸಿದ್ದರಾಮನ ಬಸವ ಸ್ತೋತ್ರ ತ್ರಿವಿಧಿ “ಪದ್ಯವನ್ನು ಕುಸುಮ ಷಟ್‌ಪದಿಯ ನಿಜಸ್ವರೂಪದಲ್ಲಿ ಆದಿ ಪ್ರಾಸ ಸಹಿತವಾಗಿ ಹೀಗೆ ಇರಿಸಬಹುದು–

ಚೆನ್ನೆಯರ : ಬಲೆಯಲ್ಲಿ
ಎನ್ನನಿರಿ : ಸಿದೆ ಪ್ರಭುವೆ
ಇನ್ನಿದಕೆ : ಭಾವಜನು : ಬೇಂಟೆಕಾರ
ಕುನ್ನಿಗಳು : ತಾವೈದು
ಎನ್ನ ಗ್ರಹಿ : ಸದ ಮುನ್ನ
ಚಿನ್ಮಯ : ಪ್ರಭು ಸಲಹೊ: ಯೋಗಿನಾಥ.[೨೪]

ಇದೇ ರೀತಿಯಾಗಿ ಚೆನ್ನಬಸವಣ್ಣನವರ ಮಂತ್ರ ಗೋಪ್ಯದಲ್ಲಿ ಭೋಗಷಟ್ಪದಿಯನ್ನು ಸೂಚಿಸುವ ಪದ್ಯಗಳು ದೊರೆಯುತ್ತವೆಯೆಂದು ಡಾ॥ಕರ್ಕಿಯವರು ತಿಳಿಸುತ್ತಾರೆ.

ಬಸವಣ್ಣನವರ ಕಾಲಜ್ಞಾನ ವಚನಗಳಲ್ಲಿ ಸಾಂಗತ್ಯದ ಶುದ್ಧರೂಪ ಎದ್ದು ಕಾಣುತ್ತವೆ.–

---

೨೩. ವಚನ ಸಾಹಿತ್ಯ – ಡಾ॥ ಎಂ. ಚಿದಾನಂದ ಮೂರ್ತಿ ಪು– ೧೫೫
೨೪. ಕನ್ನಡ ಛಂದೋವಿಕಾಸ – ಡಾ॥ ಡಿ.ಎಸ್.ಕರ್ಕಿ ಪು–೧೮೩.

ಮಳೆಯಿಲ್ಲ ಬೆಳೆಯಿಲ್ಲ ಹೊಳೆಯಲ್ಲ ಕೆರೆಯಿಲ್ಲ
ನೆಳಲಿಲ್ಲ ಉದಕ ಮುನ್ನಿಲ್ಲ
ಮೊಳೆಯಿಲ್ಲ ಸೂರ್ಯನ ಕಳೆಯಿಲ್ಲ ಗೆಲವಿಲ್ಲ
ಉಳಿವಿಲ್ಲ ಆ ಪಾಪಿಗಳಿಗೆ (೨೫)

ಶರಣರ ವಚನ ಸಾಹಿತ್ಯದಲ್ಲಿ ಮುಕ್ತ ಛಂದಸ್ಸಿನ ಅಂದ ಚಂದಗಳೆಲ್ಲ ಪ್ರಯೋಗವಾಗಿರುವುದನ್ನು ಕಾಣುತ್ತೇವೆ–

ಚಕೋರಂಗೆ: ಚಂದ್ರಮನ : ಬೆಳಕಿನ: ಚಿಂತೆ
ಅಂಬುಜಕೆ : ಭಾನುವಿನ : ಉದಯದ : ಚಿಂತೆ
ಭ್ರಮರಂಗೆ : ಪರಿಮಳದ : ಬಂಡುಂಬ : ಚಿಂತೆ
ನಮಗೆ :ನಮ್ಮ : ಕೂಡಲ: ಸಂಗಮ:ದೇವರ: ನೆನೆವ ಚಿಂತೆ.

ಸ್ವಚ್ಚಂದದ (ಅನಿರ್ಬಂಧ ಛಂದಸ್ಸಿನ) ಸೊಗಸನ್ನು ಬೀರುವ ಅಂಶಗಣಗಳು ಇದರಲ್ಲಿ ಅಳವಟ್ಟಂತಿವೆ.[೨೬]

ಇದೇ ರೀತಿಯಲ್ಲಿ ೨೦ನೇ ಶತಮಾನದ ಆಧುನಿಕ ವಚನಕಾರ ಕುಮಾರ ಕಕ್ಕಯ್ಯನ ವಚನಗಳಲ್ಲಿ ಮುಕ್ತ ಛಂದಸ್ಸಿನ ಬಳಕೆಯು ವಿಪುಲವಾಗಿ ಆಗಿರುವುದನ್ನು ಕಾಣುತ್ತೇವೆ.

ಖಗ : ಮೃಗಗಳಿಗೆ : ಬೇಟೆಯ : ಚಿಂತೆ
ಪಶು : ಪಕ್ಷಿಗಳಿಗೆ : ಆಹಾರದ : ಚಿಂತೆ
ಬಡವ : ಬಲ್ಲಿದರಿಗೆ : ಬಾಳಿನ : ಚಿಂತೆ
ಸಾಧು : ಸನ್ಯಾಸಿಗಳಿಗೆ : ಮೋಕ್ಷದ : ಚಿಂತೆ
ಯಾವನಾದರೂ : ನಿಶ್ಚಿಂತ : ನೆಂದರೆ : ಅದೊಂದು
ಉಸಿರಾಡುವ : ಹೆಣನೆಂದ : ಕುಮಾರ ಕಕ್ಕಯ್ಯ[೨೭]

ಓದು : ಇಲ್ಲದೆ : ವಿದ್ಯೆಯಿಲ್ಲ
ಪ್ರಯತ್ನ : ವಿಲ್ಲದೆ : ಪ್ರಗತಿಯಿಲ್ಲ
ಉತ್ತಿ : ಬಿತ್ತದೆ : ಬೆಳೆಯಿಲ್ಲ
ಸಂಪಾದನೆ : ಮಾಡದೆ : ಸಂಸಾರವಿಲ್ಲ.
ದುಡಿಯದೇ : ಬೇಡುವವನಿಗೆ: ಊಟವಿಲ್ಲೆಂದ
ಕುಮಾರ : ಕಕ್ಕಯ್ಯ.[೨೮]

---

೨೫. ಕನ್ನಡ ಛಂದೋವಿಕಾಸ – ಡಾ॥ ಡಿ.ಎಸ್.ಕರ್ಕಿ ಪು–೨೨೪
೨೬. –ಅದೇ– ಪು–೨೩೧
೨೭. ಕುಮಾರ ಕಕ್ಕಯ್ಯನ ವಚನಗಳು : ಪು–೩೪ ವ–೧೨೯
೨೮. ಕುಮಾರ ಕಕ್ಕಯ್ಯ ವಚನಗಳು ಪು–೩೪ ವ–೧೩೧

ಜಾತಿ : ಜಾತಿಯಲ್ಲಿ : ಭೇದ
ಮನುಷ್ಯ : ಮನುಷ್ಯರಲ್ಲಿ : ಭೇದ
ಧರ್ಮ : ಧರ್ಮದಲ್ಲಿ : ಭೇದ
ದೇವರು : ದೇವರಲ್ಲಿ : ಭೇದ
ಸಾಕಾರ : ಮನುಷ್ಯನನ್ನೇ : ದ್ವೇಷಿಸುವವರು
ನಿರಾಕಾರ : ದೇವರನು : ಅದ್ವೇಗೆ
ಮೆಚ್ಚಿಸು : ವರೆಂದ : ಕುಮಾರ : ಕಕ್ಕಯ್ಯ[೨೯]

ಈ ರೀತಿಯಾಗಿ ಕುಮಾರ ಕಕ್ಕಯ್ಯನವರ ಅನೇಕ ವಚನಗಳಲ್ಲಿ ಸಹಜ ಸುಂದರ ಸ್ವಚ್ಛಂದದ ಮುಕ್ತ ಛಂದಸ್ಸಿನ ಪ್ರಯೋಗಗಳನ್ನು ಕಾಣುತ್ತೇವೆ. ಒಟ್ಟಿನಲ್ಲಿ "ವಚನ ರಚನೆಯಲ್ಲಿ ಕಟ್ಟು ನಿಟ್ಟಾದ ಛಂದಸ್ಸಿನ ನಿಯಮಗಳೇನೂ ಇರುವುದಿಲ್ಲ. ಆದರೆ ಅವುಗಳಲ್ಲಿ ಒಂದು ಲಯವಿರುತ್ತದೆ. ನುಡಿಗಳ ಆಯ್ಕೆ, ನುಡಿಗಳ ಪುನರಾವರ್ತನೆ, ನುಡಿಗಳ ಸಮಾನಾಂತರ ಸ್ವರೂಪ, ಪದಗಳ ಜಾಣ ಬಳಕೆಗಳು ಇಲ್ಲಿ ವಿಶಿಷ್ಟವಾಗಿವೆ.[೩೦] ಉದಾಹರಣೆಗಾಗಿ ಕುಮಾರ ಕಕ್ಕಯ್ಯನ ಕೆಳಗಿನ ವಚನವನ್ನು ನೋಡಬಹುದು–

– UU – – U

ಬಾಡದ ಹೂವಿಲ್ಲ

– UU – U – UUU–U

ಬಾಡದ ಮುನ್ನವೇ ಮುಡಿಯಬೇಕು.

UUUU – –U

ಕೊಳೆಯದ ಹಣ್ಣಿಲ್ಲ

UUUU – U – UUU–U

ಕೊಳೆಯದ ಮುನ್ನವೇ ಸವಿಯಬೇಕು.

UUUU UUU–U

ಹಳಸದ ಅಡಿಗೆಯಿಲ್ಲ.

UUUU –U– –U–U

ಹಳಸದ ಮುನ್ನವೇ ಉಣ್ಣಬೇಕು.

೨೯. –ಅದೇ– ಪು–೧೨೨ ವ–೪೬೮.
೩೦. ಅನುಭಾವಿಗಳ ಕ್ರಾಂತಿ – ಜಾನ್ ಪೀಟರ್ ಶೌಟನ್ ಪು–೧೨

–UU UUU–U

ಸಾಯದ ಮನುಜನಿಲ್ಲ

–UU –U– –UU –U

ಸಾಯುವ ಮುನ್ನವೇ ಸದ್ಗತಿ ಹೊಂದ

– – U U – U – – U

ಬೇಕೆಂದ ಕುಮಾರ ಕಕ್ಕಯ್ಯ[೩೧]

ಈ ವಚನದಲ್ಲಿ ಸಾಲು ೧, ೩, ೫, ೭, ಗಳಲ್ಲಿ ಒಂದು ರೀತಿಯ ಮಾತ್ರಾಗಣಗಳಿದ್ದರೆ, ಸಾಲು ೨, ೪, ೬, ೮ ರಲ್ಲಿ ಇನ್ನೊಂದು ರೀತಿಯಲ್ಲಿ ಮಾತ್ರಾ ಗಣಗಳಿವೆ. ಇಂತಹ ವಚನಗಳನ್ನು ಓದುವಾಗ, ಹಾಡುವಾಗ ಒಂದು ರೀತಿಯ ಲಯದ ಅನುಭವವಾಗುತ್ತದೆ.

**ಅಲಂಕಾರಗಳು :** ಕಾವ್ಯ ಸೌಂದರ್ಯವನ್ನುಂಟು ಮಾಡುವ ಶಬ್ದಾರ್ಥ ವೈಚಿತ್ರ್ಯಗಳಿಗೆ ಅಲಂಕಾರಗಳೆಂದು ಹೆಸರು. ಧ್ವನಿ,ರಸ,ವಕ್ರೋಕ್ತಿ, ರೀತಿ, ಗುಣ ಇವುಗಳೂ ಸಂದರ್ಭವಿದ್ದ ಶಬ್ದ ವೈಚಿತ್ರ್ಯವನ್ನೋ, ಅರ್ಥ ವೈಚಿತ್ರ್ಯವನ್ನೋ ಉಂಟು ಮಾಡಿ, ಕಾವ್ಯ ಸೌಂದರ್ಯವನ್ನು ತರುವವು."[೩೨]

ಅಲಂಕಾರಗಳನ್ನು ಅರ್ಥಾಲಂಕಾರ ಹಾಗೂ ಶಬ್ದಾಲಂಕಾರಗಳೆಂದು ಎರಡು ಪ್ರಕಾರಗಳಲ್ಲಿ ವಿಭಜಿಸಿ ಹೇಳುತ್ತಾರೆ. ಅಲಂಕಾರಗಳು ಹೆಚ್ಚಿದಂತೆ ಅವುಗಳ ಅರ್ಥ ಮತ್ತು ಶಬ್ದಗಳ ಭೇದಗಳನ್ನು ಗಮನಿಸಿ ಅಥವಾ ಮನಸ್ಸಿನಲ್ಲಿಟ್ಟುಕೊಂಡು ವಿಂಗಡಿಸಲಾಯಿತು. "ಅರ್ಥಾಲಂಕಾರಗಳ ಸಂಖ್ಯೆಯು ಅವುಗಳ ಸೂಕ್ಷ್ಮ ವಿಭೇದಗಳೂ ವಿಚಾರಗಳೂ ಹೆಚ್ಚಾಗುತ್ತ ಹೋಗುತ್ತವೆ. ಹೀಗೆ –

**ಸಂಸ್ಕೃತದಲ್ಲಿ :** ಭರತನು ಹೇಳಿರುವವು – ೪
ದಂಡಿ ಭಾಮಹ ಉದ್ಭಟ, ವಾಮನ – ೩೫
ರುದ್ರಟ ಮಮ್ಮಟ – ೬೦.
ಚಂದ್ರಾಲೋಕ – ೧೦೦
ಕುವಲಯಾನಂದ – ೧೨೦

**ಕನ್ನಡದಲ್ಲಿ :**
ನೃಪತುಂಗ, ಉದಯಾದಿತ್ಯ, ಮಾಧವ – ೩೫
ನಾಗವರ್ಮ – ೬೦
ತಿರುಮಲಾರ್ಯ – ೧೨೦

---

೩೧. ಕುಮಾರ ಕಕ್ಕಯ್ಯನ ವಚನಗಳು ಪು–೩೨೭ ವ–೧೨೬೭
೩೨. ಕನ್ನಡ ಕೈಪಿಡಿ : ಸಂ. ೧ ಪ್ರಸಂ. ಡಾ॥ ಕೆ.ವಿ. ಪುಟ್ಟಪ್ಪ. ಪು–೨೬೩.

ಈ ರೀತಿಯಾಗಿ ಅರ್ಥಾಲಂಕಾರಗಳ ಸಂಖ್ಯೆಯು ಹೆಚ್ಚುತ್ತಾ ಹೋಗಿರುವುದನ್ನು ಡಾ॥ ಕೆ.ವಿ. ಪುಟ್ಟಪ್ಪನವರು ಉಲ್ಲೇಖಿಸುತ್ತಾರೆ.[೩೩]

ಕವಿಗಳು ಕಾವ್ಯದಲ್ಲಿ ಕೇಳುಗರಿಗೆ ಆನಂದವಾಗುವಂತೆ, ಅವರ ಕಿವಿಗೆ ಇಂಪಾಗುವಂತೆ, ಮನಕ್ಕೆ ಮುದ ನೀಡುವಂತೆ ಬಳಸುವ ಚಮತ್ಕಾರದ ನುಡಿಗಳು ಕಾವ್ಯಕ್ಕೆ, ಗೀತಗಳಿಗೆ ಒಂದು ರೀತಿಯ ಅಲಂಕಾರ, ಸೊಬಗು ಉಂಟುಮಾಡುತ್ತವೆ. ಮಾನವನ ಶರೀರಕ್ಕೆ ವಸ್ತ್ರ–ಒಡವೆಗಳು ಹೇಗೆ ಭೂಷಣಪ್ರಾಯವೋ ಹಾಗೆಯೇ ಚಮತ್ಕಾರಿಕ ಸುಂದರ ಮಾತುಗಳು ಕಾವ್ಯಕ್ಕೆ ಭೂಷಣ ಅಂದರೆ 'ಅಲಂಕಾರ' ವಾಗುತ್ತವೆ.

"ಕಾವ್ಯಗಳಲ್ಲಿನ ಕವಿಗಳ ಅಲಂಕಾರದ ಮಾತುಗಳು ಅರ್ಥ ಚಮತ್ಕಾರದಿಂದ ಕಾವ್ಯದ ಸೊಬಗನ್ನು ಹೆಚ್ಚಿಸಿದ್ದರೆ, ಅವುಗಳಿಗೆ 'ಅರ್ಥಾಲಂಕಾರ' ಗಳೆನ್ನುವರು. ಶಬ್ದಗಳ ಚಮತ್ಕಾರದಿಂದ ಕಾವ್ಯದ ಸೊಬಗು ಹೆಚ್ಚುವಂತೆ ರಚಿಸಿದ್ದರೆ, ಅಂಥವುಗಳನ್ನು 'ಶಬ್ದಾಲಂಕಾರ'ಗಳೆಂದು ಕರೆಯುವರು"[೩೪]

ನೃಪತುಂಗನ ಆಸ್ಥಾನ ಕವಿ ಶ್ರೀವಿಜಯನ **ಕವಿರಾಜಮಾರ್ಗ,** ಎರಡನೇ ನಾಗವರ್ಮನ **ಕಾವ್ಯಾವಲೋಕನ,** ತಿರುಮಾಲಾರ್ಯನ **ಅಪ್ರತಿಮವೀರ ಚರಿತೆ,** ಜಾಯಪ್ಪ ದೇಸಾಯಿಯ ಕನ್ನಡ **ಕುವಲಯಾನಂದ** ಕೃತಿಗಳು ಲಾಕ್ಷಣಿಕ, ಅಲಂಕಾರ ಗ್ರಂಥಗಳಾಗಿವೆ.

ಹನ್ನೆರಡನೆಯ ಶತಮಾನದ ಬಸವಾದಿ ಶರಣರ ವಚನಗಳಲ್ಲಿ ಸಹಜವಾಗಿ ಅಲಂಕಾರಗಳ ಬಳಕೆಯಾಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಜೇಡರ ದಾಸಿಮಯ್ಯನ ವಚನ ನೋಡಬಹುದು–

ಬರು ಸಠಗನ ಭಕ್ತಿ ದಿಟವೆಂದು ನಚ್ಚಲು ಬೇಡ.
ಮಠದೊಳಗಣ ಬೆಕ್ಕು ಇಲಿಯ ಕಂಡು
ಪುಟನೆಗೆದಂತಾಯಿತ್ತು ಕಾಣಾ, ರಾಮನಾಥ[೩೫]

ಈ ವಚನದಲ್ಲಿ ಡಾಂಭಿಕ ಭಕ್ತನ ಭಕ್ತಿಯನ್ನು ಸತ್ಯವೆಂದು ನಂಬಬಾರದು ಎಂದು ತಿಳಿಸುತ್ತಾ–ಅದನ್ನು ಮಠದೊಳಗೆ ಇರುವ ಬೆಕ್ಕಿನ ಹೋಲಿಕೆ ಕೊಡುತ್ತಾರೆ. ಮಠದಲ್ಲಿ ಬೆಕ್ಕು ವಾಸಮಾಡಿದ್ದರೂ ಕೂಡ, ಧ್ಯಾನಕ್ಕೆ ಕುಳಿತಂತೆ ಕುಳಿತರುಅಲ್ಲಿಯ ಅಹಿಂಸಾ ಜೀವನ ವಿಧಾನ ಮರೆತು, ಇಲಿಯನ್ನು ಕಂಡ ಕೂಡಲೇ ತನ್ನ ಹಿಂಸಾ ಗುಣದಂತೆ ಕೂಡಲೇ ಇಲಿಯ ಮೇಲೆ ನೆಗೆಯುತ್ತದೆ. ಇಲ್ಲಿ ಸಾಮಾನ್ಯವಾಗಿ ಮಠದೊಳಗಿರುವ ಸ್ವಾಮಿಯನ್ನು ಬೆಕ್ಕಿಗೆ ಹೋಲಿಸುತ್ತಾರೆ. ಸ್ವಾಮಿಗಳಾದವರು ಹೆಣ್ಣು–ಹೊನ್ನು–ಮಣ್ಣು ಎಂಬ ತ್ರಿವಿಧಗಳನ್ನು ತೊರೆದು, ವಿರಕ್ತ, ತ್ಯಾಗಿ ಸನ್ಯಾಸಿ

೩೩. ಕನ್ನಡ ಕೈಪಿಡಿ, ಸಂಪುಟ–೧ –ಪ್ರ–.ಸಂ.ಡಾ॥ ಕೆ.ವಿ.ಪುಟ್ಟಪ್ಪ ಪು–೨೬೫
೩೪. ಕನ್ನಡ ವ್ಯಾಕರಣ–ಮೈಸೂರು ಸರ್ಕಾರ ಪಠ್ಯ ಪುಸ್ತಕಗಳ ಇಲಾಖೆ ಪು–೨೭೭
೩೫. ಸಂಕೀರ್ಣ ವಚನ ಸಂಪುಟ–ಸಂ ಡಾ॥ ಎಸ್. ವಿದ್ಯಾಶಂಕರ, ಜೇಡರ ದಾಸಿಮಯ್ಯನ ವಚನಗಳು ವ–೧೧೪

ಎನಿಸಿಕೊಂಡು ಕಾವಿ, ಕಪನಿ ಹಾಕಿಕೊಂಡು, ಮೈಮೇಲೆ ರುದ್ರಾಕ್ಷಿ-ಲಿಂಗ-ವಿಭೂತಿ ಧರಿಸಿ, ಕೈಯಲ್ಲಿ ಜಪಮಾಲೆ ಹಿಡಿದು ದೊಡ್ಡ ತಪಸ್ವಿ, ಸಿದ್ಧಪುರುಷರಂತೆ ವರ್ತಿಸುತ್ತಾರೆ. ಯಾವಾಗ ಮಠದಲ್ಲಿ ಒಬ್ಬಂಟಿ ಹೆಣ್ಣು ಕಾಣಿಸಿಕೊಳ್ಳುವಳೋ ಆಗ ಬೆಕ್ಕು ಸಮಯ ಸಾಧಿಸಿ ಇಲಿಯ ಮೇಲೆ ನೆಗೆಯುವಂತೆ, ಸ್ವಾಮಿಯು ಹೆಣ್ಣಿನ ಮೇಲೆ ಎರಗಿ ಕಾಮಿಯಾಗುತ್ತಾನೆ. ಇದು ಅದ್ಭುತವಾದ ಅರ್ಥ ಚಮತ್ಕಾರದಿಂದ ಕೂಡಿದ ವಾಕ್ಯಗಳಿಂದ ರಚಿತವಾದ ವಚನವಾಗಿದೆ. ಈ ವಚನವು ಅರ್ಥಾಲಂಕಾರದ ಒಂದು ಪ್ರಕಾರವಾದ ಉಪಮಾಲಂಕಾರಕ್ಕೆ ಉತ್ತಮ ನಿದರ್ಶನವಾಗಿದೆ.

ಇದೇ ರೀತಿಯಾಗಿ ಅಧುನಿಕ ವಚನಕಾರ ಕುಮಾರ ಕಕ್ಕಯ್ಯನ ವಚನಗಳಲ್ಲಿ ಅಲಂಕಾರಿಕ ಚಮತ್ಕಾರದ ಪದಗಳು, ವಾಕ್ಯಗಳು ಹೇರಳವಾಗಿ ಬಳಕೆಯಾಗಿವೆ.

**ಅ. ಅರ್ಥಾಲಂಕಾರಗಳು :** ಇದರಲ್ಲಿ ನೂರಾರು ಪ್ರಕಾರಗಳಿದ್ದು, ಅವುಗಳ ಪ್ರಮುಖ ಅಲಂಕಾರಗಳ ಬಳಕೆಯು ವಚನಗಳಲ್ಲಿ ಆಗಿರುವುದನ್ನು ಕಾಣುತ್ತೇವೆ.

**೧. ಉಪಮಾಲಂಕಾರ :**ಎರಡು ವಸ್ತುಗಳಿಗೆ ಪರಸ್ಪರವಾಗಿ ಇರುವ ಸಾದೃಶ್ಯ ಅಂದರೆ ಹೋಲಿಕೆಯು ವ್ಯಕ್ತವಾಗಿ ತೋರುವುದೇ ಉಪಮಾಲಂಕಾರವೆನಿಸುತ್ತದೆ.

ಪಾತರ ಹುಡುಗೀದು
ರೂಪೇನು ಹೇಳಲೊ
ಬಾಳ್ಯಾಗ ನವಿಲು ಕುಣದಂಗ
ಪರಿಬಿಟ್ಟ ಹಾವು ಸುಳಿದಂಗ
ಆ ಬಾಲಿ ಹೆಡಿಯೆತ್ತಿ ಸರ್ಪ
ಕಡಿದಂಗೆಂದ ಕುಮಾರ ಕಕ್ಕಯ್ಯ.[೩೬]

ಪಾತರ ಹುಡುಗಿ (ಪಾತ್ರದವಳು, ನಟುವರ, ನೃತ್ಯಗಾತಿ,) ತನ್ನ ಏರು ಯೌವನದಲ್ಲಿ, ರೂಪ ಲಾವಣ್ಯದಿಂದ ನರ್ತನ ಮಾಡತೊಡಗಿದರೆ ಬಾಳೆಯ ಬನದಲ್ಲಿ ಗರಿಬಿಚ್ಚಿ ನವಿಲು ನರ್ತನ ಮಾಡಿದಷ್ಟು ಮೋಹಕವಾಗಿರುತ್ತದೆ.. ಅವಳ ಕುಣಿತದ, ನಡಿಗೆಯ ಮೈಮಾಟ ಪರೆ ಬಿಟ್ಟ ಹಾವು ಹೊಸ ಮೈಕಾಂತಿಯಿಂದ ಸುಳಿದಂತೆ ನಯನ ಮನೋಹರ, ಅತ್ಯಾಕರ್ಷಕವಾಗಿರುತ್ತದೆ. ಅಂಥವಳ ಮೇಲೆ ವ್ಯಾಮೋಹದಿಂದ ಅಪ್ಪಲು ಹೋದರೆ, ಹೆಡೆ ಎತ್ತಿ ನಾಗರಸರ್ಪವು ಕಡಿದಂತೆ, ಅವಳ ವ್ಯಾಮೋಹದ ನಂಜು ಅಪಾದ ಮಸ್ತಕಕ್ಕೇರಿ ಮೃತ್ಯುವಿಗೆ ಈಡಾಗುತ್ತಾನೆ. ಈ ವಚನದಲ್ಲಿ ಪಾತರ ಹುಡುಗಿಯ ರೂಪು, ನೃತ್ಯ, ಹಾವ-ಭಾವವನ್ನು ನವಿಲಿನ ಕುಣಿತಕ್ಕೆ, ಪರೆಕಳಚಿದ ಹಾವಿನ ಮೈಮಾಟಕ್ಕೆ ಹೋಲಿಸುತ್ತಾರೆ. ಈ ಚಮತ್ಕಾರಿಕ ಶಬ್ದಗಳು ಉಪಮೇಯ, ಉಪಮಾನಗಳಿಂದ ಮನಮೋಹಕವಾಗಿವೆ. ಪಾತರದ ಹೆಣ್ಣಿನಲ್ಲಿ ನವಿಲು, ಹಾವಿನ ರೂಪ, ಕುಣಿತ ಮೈಮಾಟ, ಚಂಚಲತೆ ಸಾದೃಶ್ಯಗುಣಗಳಾಗಿ ಅಲಂಕೃತಗೊಂಡಿವೆ.

---

೩೬. ಕುಮಾರ ಕಕ್ಕಯ್ಯನ ವಚನಗಳು ಪು-೧೬೪ ವ-೬೩೫

ಜಾತಿಯ ಸೂತಕ ಬಿಡದ ಶಾಸ್ತ್ರಗೋಷ್ಠಿ
ಬದಲಾವಣೆಗೆ ಅಸ್ಪದವಿಲ್ಲದ ಸಮಾಜಗೋಷ್ಠಿ
ಸತ್ಯಕ್ಕೆ ಅವಕಾಶ ಕೊಡದ ತತ್ವಗೋಷ್ಠಿ
ಕಂದಾಚಾರದಿಂದ ಹೊರಬರದ ವಚನಗೋಷ್ಠಿ
ಪಾದಪೂಜೆಯ ಜಾಡ್ಯ ಬಿಡದವರ ಧರ್ಮಗೋಷ್ಠಿ
ಕಂದಕದಲ್ಲಿ ಕಪ್ಪೆಗಳು ಕಿರಿಚಿದಂತೆಂದ
ಕುಮಾರ ಕಕ್ಕಯ್ಯ.[೩೭]

ಈ ವಚನವೂ ಕೂಡ ಉಪಮಾಲಂಕಾರಕ್ಕೆ ಅದ್ಭುತ ಉದಾಹರಣೆಯಾಗಿದೆ. ಜಾತಿಯ ಸೂತಕ (ದೋಷ) ಬಿಡದ ಶಾಸ್ತ್ರಗೋಷ್ಠಿಯ ಶಾಸ್ತ್ರಿಗಳನ್ನು ಸಮಾಜದಲ್ಲಿ ಬದಲಾವಣೆಗೆ ಆಸ್ಪದವೀಯದ ಸಮಾಜಗೋಷ್ಠಿಯ ಸಮಾಜ ಮುಖಂಡರನ್ನು, ಸತ್ಯಕ್ಕೆ ಅವಕಾಶ ಕೊಡದ ತತ್ವಗೋಷ್ಠಿಯ ತಾತ್ವಿಕ ಚರ್ಚೆಯ ತಾರ್ಕಿಕರನ್ನು, ಕಂದಾಚಾರದಿಂದ ಹೊರಬರದ ವಚನಗೋಷ್ಠಿಯ ಭಾಷಣಕಾರರನ್ನು, ಪಾದಪೂಜೆಯ ಜಾಡ್ಯ ಬಿಡದ ಧರ್ಮಗೋಷ್ಠಿಯ ಕರ್ಮಠ ಮೂಢ ಭಕ್ತರನ್ನು ಕಂದಕದಲ್ಲಿಯ ಕಪ್ಪೆಗಳಿಗೆ ಹೋಲಿಕೆ ಮಾಡಿರುವುದು ತುಂಬಾ ರೋಚಕವಾಗಿದೆ. ಮೇಲಿನ ಎಲ್ಲಾ ಗೋಷ್ಠಿಗಳಲ್ಲಿ ವಾದ–ವಿವಾದ, ತರ್ಕ–ವಿತರ್ಕ, ಚರ್ಚೆ–ಗಿರ್ಚೆ ಮಾಡುವವರ ಒದರಾಟ, ಕೂಗಾಟಗಳು ಕಪ್ಪೆಯ ಕಿರಿಚಾಟದಂತೆ ಎಂದು ಅರ್ಥಪೂರ್ಣ ಹಾಗೂ ರಂಜನೀಯವಾಗಿ ವರ್ಣಿಸಿರುವುದು ಇಲ್ಲಿ ಕಂಡುಬರುತ್ತದೆ.

**೨. ರೂಪಕಾಲಂಕಾರ** : ಉಪಮಾನ ಉಪಮೇಯ ವಸ್ತುಗಳನ್ನು, ಒಂದು ಮತ್ತೊಂದೇಯೇ ಎಂದು ವರ್ಣಿಸುವುದು ರೂಪಕಾಲಂಕಾರವೆನಿಸುತ್ತದೆ. ಅಂದರೆ ಎರಡೂ ವಸ್ತುಗಳು ಒಂದೇ ಎಂದು ಭೇದವಿಲ್ಲದಂತೆ ಹೇಳುವುದು.

ಸಮಾಜವೆಂಬ ಬಜಾರದಲ್ಲಿ
ಮನೆಯೆಂಬುದೊಂದು ಅಂಗಡಿ
ಸಂಸಾರವೆಂಬ ತಕ್ಕಡಿಗೆ
ಮಾನ ಮರ್ಯಾದೆಗಳೇ ತೂಕದ ಕಲ್ಲುಗಳು.
ಗಂಡು ಅಂಗಡಿಕಾರ, ಹೆಣ್ಣು ಬಡ್ಡಿಯಿಲ್ಲದ ಬಂಡವಾಳ
ಮಕ್ಕಳು ಮರಿಗಳೇ ಅಂಗಡಿಯ ಸರಕು ಸಲಕರಣಿಗಳು
ಆತಿಥ್ಯ ವರದಕ್ಷಿಣೆ ಹಿರಿತನದ ವ್ಯವಹಾರದಲಿ
ಮಂದಿ, ಮಕ್ಕಳು, ಬಂಧು, ಬಳಗ, ಆಪ್ತಮಿತ್ರರೇ
ಗಿರಾಕಿಗಳೆಂದ ಕುಮಾರ ಕಕ್ಕಯ್ಯ.[೩೮]

---

೩೭ –ಅದೇ– ಪು–೪೩ ವ–೧೬೫
೩೮. ಕುಮಾರ ಕಕ್ಕಯ್ಯನ ವಚನಗಳು ಪು–೭೦ ವ–೨೭೧

ಈ ವಚನದಲ್ಲಿ ಸಮಾಜವೆಂಬುದೇ ಬಜಾರ, ಮನೆಯೆಂಬುದೇ ಅಂಗಡಿ, ಸಂಸಾರವೆಂಬುದೇ ತಕ್ಕಡಿ, ಮಾನಮರ್ಯಾದೆಗಳೇ ತೂಕದ ಕಲ್ಲುಗಳು, ಗಂಡೇ ಅಂಗಡಿಕಾರ, ಹೆಣ್ಣೇ ಬಂಡವಾಳ, ಮಕ್ಕಳು ಮರಿಗಳೇ ಅಂಗಡಿಯ ಸರಕು ಸಲಕರಣೆಗಳು, ಈ ವ್ಯವಹಾರದಲ್ಲಿ ಬಂಧು–ಬಳಗ ಆಪ್ತಮಿತ್ರರೇ ಗಿರಾಕಿಗಳು ಎಂದು ಅಭೇದ ರೂಪಕಗಳ ಮೂಲಕ ವರ್ಣಿಸಿದ್ದಾರೆ.

ಹೊಟ್ಟೆಯಲ್ಲಿ ಜಠರವೆಂಬ ಬಾಯಲರಿದ್ದರೆ
ಕಿಬ್ಬೊಟ್ಟೆಯಲ್ಲಿರುವುದು ಮೂತ್ರಪಿಂಡವೆಂಬ ಫಿಲ್ಟರು
ಎದೆಯಲ್ಲಿ ಹೃದಯವೆಂಬ ಪಂಪಸೆಟ್ಟಿದ್ದರೆ
ತಲೆಯಲ್ಲಿರುವುದು ಮಿದುಳೆಂಬ ಕಂಪ್ಯೂಟರು
ಸೋಸಿ ನೋಡಿದರೆ ಈ ಅನ್ನಮಯ ದೇಹವೇ
ಯಂತ್ರ ತಂತ್ರಗಳ ಸಂಕೀರ್ಣವೆಂದ
ಕುಮಾರ ಕಕ್ಕಯ್ಯ.[೩೯]

ಕುಮಾರ ಕಕ್ಕಯ್ಯನವರು ಮಾನವ ಶರೀರವು ಒಂದು ಅದ್ಭುತವಾದ ಆಧುನಿಕ ಯಂತ್ರ–ತಂತ್ರಗಳ ಸಂಕೀರ್ಣವೇ ಆಗಿದೆಯೆಂದು ಹಲವಾರು ರೂಪಕಗಳ ಮೂಲಕ ವರ್ಣಿಸುತ್ತಾರೆ. ಜಠರವೆಂಬುದೇ ಬಾಯಲರು, ಮೂತ್ರಪಿಂಡವೆಂಬುದೇ ಫಿಲ್ಟರು, ಹೃದಯವೆಂಬುದೇ ಪಂಪಸೆಟ್ಟು, ಮಿದುಳೆಂಬುದೇ ಕಂಪ್ಯೂಟರ್, ಅನ್ನಮಯ ದೇಹವೇ ಯಂತ್ರ–ತಂತ್ರ ಎಂದು ಅಭೇದರೂಪಕಗಳ ಮೂಲಕ, ವೈಜ್ಞಾನಿಕ ಅಲಂಕಾರಿಕ ಪಾರಿಭಾಷಿಕ ಶಬ್ದಗಳ ಮೂಲಕ ವರ್ಣಿಸುತ್ತಾರೆ.

**೩. ದೃಷ್ಟಾಂತಾಲಂಕಾರ :** ಎರಡು ಬೇರೆ ಬೇರೆ ವಾಕ್ಯಗಳು ಅರ್ಥಸಾದೃಶ್ಯದಿಂದ ಒಂದಕ್ಕೊಂದು ಬಿಂಬ ಪ್ರತಿಬಿಂಬ ಭಾವದಂತೆ ತೋರುತ್ತಿದ್ದರೆ ಅದು ದೃಷ್ಟಾಂತಾಲಂಕಾರವೆನಿಸುವುದು. ಅಂದರೆ ಒಂದರ ಪ್ರತಿಬಿಂಬ ಮತ್ತೊಂದು ಎನ್ನುವ ಭಾವದಂತೆ ತೋರುವುದು.

ಜೊಳ್ಳೆಂದು ಭತ್ತ, ಪರಟೆಯೆಂದು ತೆಂಗು
ಬಿಸುಡಲಿಕ್ಕಾಗದು.
ಮಾಯೆಯೆಂದು ಹೆಣ್ಣು, ಹೇಯವೆಂದು ಸಂಸಾರ
ಬಿಡಲಿಕ್ಕಾಗದು.
ತೊಗಲ ಚೀಲವೆಂದು ಈ ದೇಹ
ತೊರೆಯಲಿಕ್ಕಾಗದೆಂದ ಕುಮಾರ ಕಕ್ಕಯ್ಯ[೪೦]

ಈ ವಚನದಲ್ಲಿ ಎರಡೆರಡು ವಾಕ್ಯಗಳು ಪರಸ್ಪರ ಅರ್ಥಸಾದೃಶ್ಯದಿಂದ ಒಂದಕ್ಕೊಂದು ಬಿಂಬ ಪ್ರತಿಬಿಂಬ ಭಾವದಂತೆ ತೋರುತ್ತಿವೆ. ತೊಗಲಚೀಲವೆಂದು

---

೩೯. –ಅದೇ– ಪು–೧೨೬ ವ–೪೮೨

೪೦. ಕುಮಾರ ಕಕ್ಕಯ್ಯನ ವಚನಗಳು ಪು–೧೧೪ ವ–೪೦೦

ಚರ್ಮದ ದೇಹವನ್ನು ತೊರೆಯಲಿಕ್ಕೆ ಬರುವುದಿಲ್ಲ ಎಂದು ದೃಷ್ಟಾಂತದ ಮೂಲಕ ದ್ರಾಷ್ಟಾಂತವನ್ನು ತಿಳಿಸುತ್ತಾರೆ ಕುಮಾರ ಕಕ್ಕಯ್ಯ.

ಅಮೇರಿಕಾ ದೇಶದವನಾದ ಕಾರಣ
ಅಮೇರಿಕನ್ನನೇ ಹೊರತು 'ಅಮೇರಿಕನ್' ಇದೊಂದು ಧರ್ಮವಲ್ಲ.
ರಶಿಯಾ ದೇಶದವನಾದ ಕಾರಣ,
ರಶಿಯನ್ನನೇ ಹೊರತು, 'ರಶಿಯನ್' ಇದೊಂದು ಧರ್ಮವಲ್ಲ.
ಹಿಂದೂಸ್ಥಾನ ದೇಶದವನಾದ ಕಾರಣ,
ಹಿಂದುವೇ ಹೊರತು 'ಹಿಂದು' ಇದೊಂದು ಧರ್ಮ
ಅಲ್ಲೆಂದ ಕುಮಾರ ಕಕ್ಕಯ್ಯ.[೪೧]

ಈ ವಚನದಲ್ಲಿ ಅಮೇರಿಕಾದೇಶದವ ಅಮೇರಿಕನ್ನನು, ರಶಿಯಾ ದೇಶದವ ರಶಿಯನ್‌ನು ಹಿಂದೂಸ್ಥಾನ ದೇಶದವ ಹಿಂದೂ, ಎಂಬುದೇ ಹೊರತು ಅಮೇರಿಕನ್, ರಶಿಯನ್, ಹಿಂದೂ ಎಂಬುದು ಧರ್ಮಗಳಲ್ಲವೆಂದು ದೃಷ್ಟಾಂತಗಳ ಮೂಲಕ ಮನಂಬುಗುವಂತೆ ತಿಳಿಸಿ ಹೇಳುತ್ತಾರೆ.

**೪. ಅರ್ಥಾಂತರನ್ಯಾಸ ಅಲಂಕಾರ :** ಸಾಮಾನ್ಯಾರ್ಥ ವಿಶೇಷಾರ್ಥಗಳೆರಡೂ ವಾಕ್ಯಗಳಲ್ಲಿ ಕಂಡುಬರುತ್ತಿದ್ದು, ಪರಸ್ಪರ ಒಂದು ಇನ್ನೊಂದರಿಂದ ಸಮರ್ಥಿಸಲ್ಪಡುತ್ತಿದ್ದರೆ ಅದು ಅರ್ಥಾಂತರನ್ಯಾಸಾಲಂಕಾರವೆನಿಸುವುದು. ಅಲ್ಲಿ ವಿಶೇಷವಾಕ್ಯ ಹಾಗೂ ಸಾಮಾನ್ಯವಾಕ್ಯಗಳೆರಡೂ ಉಕ್ತವಾಗಿರಲೇಬೇಕು.

ಮಗಳಿಲ್ಲದ ತಾಯಿ
ತಾಯಿಯಿಲ್ಲದ ತವರು
ತವರಿಲ್ಲದ ಹೆಣ್ಣು
ಹೆಣ್ಣು ಇಲ್ಲದ ಮನೆ
ಚಂದ್ರನಿಲ್ಲದ ರಾತ್ರಿಯಂತೆಂದ
ಕುಮಾರ ಕಕ್ಕಯ್ಯ.[೪೨]

ಇಲ್ಲಿ ಸಾಮಾನ್ಯ ವಾಕ್ಯ ಹಾಗೂ ವಿಶೇಷವಾಕ್ಯಗಳೆರಡೂ ಪರಸ್ಪರ ಒಂದು ಇನ್ನೊಂದರಿಂದ ಸಮರ್ಥಿಸಲ್ಪಡುತ್ತಿವೆ. ಎರಡೂ ವಾಕ್ಯಗಳು ಉಕ್ತವಾಗಿ ಅರ್ಥಾಂತರನ್ಯಾಸವು ಕಂಡು ಬರುತ್ತಿದೆ. ಕೊನೆಯ ಸಾಲಿನಲ್ಲಿ ಉಪಮಾಲಂಕಾರವು ವ್ಯಕ್ತವಾಗಿದೆ. ಇಡಿ ವಚನವನ್ನು ಗಮನಿಸಿದಾಗ ಮಿಶ್ರ ಅಲಂಕಾರಿಕ ವರ್ಣನೆಯಂತೆ ಕಂಡುಬರುತ್ತದೆ.

---

೪೧. -ಅದೇ- ಪು-೧೨೫ ವ-೧೮೧
೪೨. ಕುಮಾರ ಕಕ್ಕಯ್ಯನ ವಚನಗಳು ಪು-೫೫ ವ-೨೧೩

ವೇದಾಗಮ ಶಿಷ್ಟಾಚಾರ ಬಿಡದೆ
ಪ್ರಗತಿಪರ ಸಮಾಜ ನಿರ್ಮಿಸುವುದು
ಜಾತಿ ಧರ್ಮ ಸಂಪ್ರದಾಯ ಬಿಡದೆ
ಜಾತ್ಯಾತೀತ ರಾಷ್ಟ್ರ ಕಟ್ಟುವುದು
ಕರಿನಾಯಿಯನು ಬೆಳ್ಳಗೆ ಮಾಡಿದಂತೆಂದ
ಕುಮಾರ ಕಕ್ಕಯ್ಯ.[೪೩]

ಈ ವಚನದಲ್ಲಿ ಕುಮಾರ ಕಕ್ಕಯ್ಯನವರು ಮೊದಲೆರಡು ವಾಕ್ಯಗಳಲ್ಲಿ ವ್ಯಕ್ತವಾಗುವ ವಿಚಾರವನ್ನು, ಕರಿನಾಯಿಯನ್ನು ಬೆಳ್ಳಗೆ ಮಾಡಿದಂತೆ ಎಂಬ ಲೋಕ ಪ್ರಸಿದ್ಧ ಉಕ್ತಿಯ ಮೂಲಕ ನಂತರದ ಎರಡು ವಾಕ್ಯಗಳಲ್ಲಿ ಅರ್ಥಾಂತರನ್ಯಾಸ ಅಲಂಕಾರದ ವಾಕ್ಯಗಳ ಮೂಲಕ ಮನೋಜ್ಞವಾಗಿ ವರ್ಣಿಸುತ್ತಾರೆ.

**೫. ಶ್ಲೇಷಾಲಂಕಾರ :** ಒಂದು ವಚನದಲ್ಲಿ ಒಂದೇ ಪದ ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ಅರ್ಥಗಳನ್ನು ಹೊಂದಿರುವುದೇ ಶ್ಲೇಷಾಲಂಕಾರವೆನ್ನಿಸುತ್ತದೆ. ಅಂದರೆ ಒಂದೇ ಶಬ್ದವು ವರ್ಣಿಸುವ ವಿಷಯ ಹಾಗೂ ಅವರ್ಣ್ಯವಾದ ವಿಷಯಗಳ ಬಗ್ಗೆ ಬೇರೆ ಬೇರೆ ಅರ್ಥ ಕೊಡುತ್ತಿರುವುದನ್ನು ಶ್ಲೇಷಾಲಂಕಾರವೆನ್ನುತ್ತಾರೆ. ಇಲ್ಲಿ ಶಬ್ದಗಳನ್ನು ಬಳಸಿದ ಪರಿ, ರಂಜನೀಯವೆನಿಸುವುದು.

ಲಂಚದ ಹಣ ಹೆಚ್ಚಿದಾಗ
ಮಡದಿಗೆ ಮಾಡಿಸಿ ಹಾಕುವುದು ಚಪ್ಪಲ್‌ಹಾರ
ಲಂಚದಲಿ ಸಿಕ್ಕು ಬಿದ್ದಾಗ
ಗಂಡನಿಗೆ ಹಾಕಿ ಮೆರೆಸುವುದು ಚಪ್ಪಲ್‌ಹಾರ
ಎರಡೂ ಚಪ್ಪಲ್‌ಹಾರಗಳೇಯಾದರೂ
ಅರ್ಥಮಾತ್ರ ಅಜಗಜಾಂತರವೆಂದ
ಕುಮಾರ ಕಕ್ಕಯ್ಯ.[೪೪]

ಈ ವಚನದಲ್ಲಿ 'ಚಪ್ಪಲ್‌ಹಾರ' ಎಂಬ ಒಂದೇ ಪದವು ಬೇರೆ ಬೇರೆ ಅರ್ಥದಲ್ಲಿ ಬಳಕೆಯಾಗಿದೆ. ಆದ್ದರಿಂದ ಇದು ಶ್ಲೇಷಾಲಂಕಾರವೆನಿಸುವುದು. ಲಂಚದ ಹಣ ಹೆಚ್ಚಿಗೆ ದೊರೆತರೆ ಮಂತ್ರಿ ಮಹೋದಯರಾಗಲೀ, ಅಧಿಕಾರಿಗಳಾಗಲೀ, ನೌಕರರಾಗಲಿ ತಮ್ಮ ಪತ್ನಿಯರಿಗೆ ಬಂಗಾರದ ಸರ (ಹಾರ) ಗಳನ್ನು ಮಾಡಿಸಿ ಕೊರಳಿಗೆ ಹಾಕುತ್ತಾರೆ. 'ಚಪ್ಪಲ್‌ಹಾರ' ಎನ್ನುವುದು ಒಂದು ಪ್ರಕಾರದ ಚಿನ್ನದ ಸರದ ಹೆಸರು. ಅದೇ ವ್ಯಕ್ತಿಯು ಲಂಚಪಡೆಯುವಾಗ ಸಿಕ್ಕಿಬಿದ್ದರೆ ಜನಸಾಮಾನ್ಯರು ತಾವು ಕಾಲಲ್ಲಿ ಮೆಟ್ಟಿರುವ ಚರ್ಮದ 'ಚಪ್ಪಲಿ ಹಾರ' ಮಾಡಿ ಕೊರಳಿಗೆ ಹಾಕಿ ಮೆರವಣಿಗೆ ಮಾಡುವರು. ಚಪ್ಪಲ್‌ಹಾರ ಎಂಬ ಶಬ್ದ ಒಂದೇಯಾಗಿದ್ದರೂ

---

೪೩. -ಅದೇ- ಪು-೪೪ ವ-೧೬೬

೪೪. -ಅದೇ- ಪು-೭೮ ವ-೩೦೪

ಅದು ಬೇರೆ ಬೇರೆ ಅರ್ಥಗಳನ್ನು ನೀಡುವುದರಿಂದ ಇದನ್ನು ಅಭಂಗ ಶ್ಲೇಷೆಯೆಂದು ಕರೆಯುವರು.

**ಆ. ಶಬ್ದಾಲಂಕಾರಗಳು :** ಕಾವ್ಯದ ಪದ್ಯಗಳಲ್ಲಿ ಶಬ್ದ ಜೋಡಣೆಯ ಚಮತ್ಕಾರದಿಂದ ಕಾವ್ಯದ ಸೊಬಗು ಹೆಚ್ಚಿದರೆ ಅದನ್ನು ಶಬ್ದಲಂಕಾರವೆನ್ನುತ್ತಾರೆ. ಶಬ್ದಾಲಂಕಾರಗಳು ಎರಡು ವಿಧವಾಗಿವೆ[೪೫]




೧. **ವೃತ್ತ್ಯನುಪ್ರಾಸ :** ಒಂದಾಗಲಿ, ಎರಡಾಗಲಿ ವ್ಯಂಜನಗಳು ಪುನಃ ಪುನಃ ಹೇಳಲ್ಪಟ್ಟಿದ್ದರೆ ಅದು ವೃತ್ತ್ಯಾನುಪ್ರಾಸವೆನಿಸುತ್ತದೆ.

> ಹೆಣ್ಣಿನ ಕಿಚ್ಚು, ಮಣ್ಣಿನ ಕಿಚ್ಚು
> ಬಡತನದ ಕಿಚ್ಚು, ಸಿರಿತನದ ಕಿಚ್ಚು
> ಅಪಮಾನದ ಕಿಚ್ಚು, ಸೇಡಿನ ಕಿಚ್ಚು
> ಕಿಚ್ಚಿನಲಿ ಕಿಚ್ಚು, ಹೊಟ್ಟೆಯ ಕಿಚ್ಚು
> ಬಹು ಭಯಾನಕವೆಂದ ಕುಮಾರ ಕಕ್ಕಯ್ಯ[೪೬]

ಕುಮಾರ ಕಕ್ಕಯ್ಯನವರ ಈ ವಚನದಲ್ಲಿ ಕ ಕಾರವು ಹಾಗೂ ಚ ಕಾರವು ಮೇಲಿಂದ ಮೇಲೆ ಅನೇಕ ಸಲ ಪುನರುಕ್ತಿಗೊಂಡು ವಚನದ ಸೌಂದರ್ಯ ಹೆಚ್ಚಿದೆ. ಆದ್ದರಿಂದ ಇದು ವೃತ್ತ್ಯನುಪ್ರಾಸ. ಅಲಂಕಾವೆನಿಸಿದೆ.

೨. **ಛೇಕಾನುಪ್ರಾಸ :** ಯಾವುದೇ ಒಂದು ಪದ್ಯದಲ್ಲಿ ಎರಡೆರಡು ಅಥವಾ ಮೂರು ಮೂರು ವ್ಯಂಜನಗಳಿಂದ ಕೂಡಿದ ಶಬ್ದವು ಪುನಃ ಪುನಃ ಜತೆ ಜತೆಯಾಗಿ ಬಂದಿದ್ದರೆ ಅದು ಛೇಕಾನುಪ್ರಾಸವೆನಿಸುವದು.

> ಜಾತಿ ಜಾತಿಯಲ್ಲಿ ಭೇದ
> ಮನುಷ್ಯ ಮನುಷ್ಯರಲ್ಲಿ ಭೇದ
> ಧರ್ಮ ಧರ್ಮದಲ್ಲಿ ಭೇದ
> ದೇವರು ದೇವರಲ್ಲಿ ಭೇದ
> ಸಾಕಾರ ಮನುಷ್ಯನನ್ನೇ ದ್ವೇಷಿಸುವವರು

---

೪೫. ಕನ್ನಡ ವ್ಯಾಕರಣ – ಮೈಸೂರ ಸರ್ಕಾರ ಪಠ್ಯಪುಸ್ತಕಗಳ ಇಲಾಖೆ ಪು–೨೯೨
೪೬. ಕುಮಾರ ಕಕ್ಕಯ್ಯನ ವಚನಗಳು ಪು–೩೭೮ ವ–೧೪೭೦

ನಿರಾಕಾರ ದೇವರನು ಅದು ಹೇಗೆ
ಮೆಚ್ಚಿಸುವರೆಂದ ಕುಮಾರ ಕಕ್ಕಯ್ಯ[೪೭]

ಕುಮಾರ ಕಕ್ಕಯ್ಯನವರ ಈ ವಚನದಲ್ಲಿ ಎರಡೆರಡು ಹಾಗೂ ಮೂರು ಮೂರು ವ್ಯಂಜನಗಳಿಂದ ಕೂಡಿದ ಶಬ್ದಗಳ ಆವೃತ್ತಿಯು ಆ ನುಡಿಗಳ ಸೌಂದರ್ಯವನ್ನು ಹೆಚ್ಚಿಸಿದೆ. ಇಲ್ಲಿ ಜಾತಿ ಜಾತಿ ಮನುಷ್ಯ ಮನುಷ್ಯ, ಧರ್ಮ ಧರ್ಮ, ದೇವ ದೇವ ಮುಂತಾದ ಶಬ್ದಗಳು ಎರಡೆರಡು ಸಲ ಬಂದಿವೆ. ಹೀಗಾಗಿ ಇದು ಛೇಕಾನುಪ್ರಾಸದ ಸುಂದರ ಉದಾಹರಣೆಯಾಗಿದೆ.

**೩. ಯಮಕ :** ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದ ಅಥವಾ ಪದ ಭಾಗವು ಪದ್ಯದ ಆದಿ ಮಧ್ಯ ಅಂತ್ಯ ಸ್ಥಾನಗಳಲ್ಲಿ ಎಲ್ಲಿಯಾದರೂ ನಿಯಮಿತವಾಗಿ ಮೇಲಿಂದ ಮೇಲೆ ಬಂದರೆ ಅದನ್ನು ಯಮಕಾಲಂಕಾರವೆನ್ನುವರು.

ಖಗ ಮೃಗಗಳಿಗೆ ಬೇಟೆಯ ಚಿಂತೆ
ಪಶು ಪಕ್ಷಿಗಳಿಗೆ ಆಹಾರದ ಚಿಂತೆ
ಬಡವ ಬಲ್ಲಿದರಿಗೆ ಬಾಳಿನ ಚಿಂತೆ
ಸಾಧು ಸನ್ಯಾಸಿಗಳಿಗೆ ಮೋಕ್ಷದ ಚಿಂತೆ
ಯಾವನಾದರೂ ನಿಶ್ಚಿಂತನೆಂದರೆ
ಅದೊಂದು ಉಸಿರಾಡುವ ಹೆಣನೆಂದ
ಕುಮಾರ ಕಕ್ಕಯ್ಯ[೪೮]

ಈ ವಚನದಲ್ಲಿ 'ಚಿಂತೆ' ಎಂಬ ಮೂರಕ್ಷರಗಳ ಪದವು ಮೇಲಿಂದ ಮೇಲೆ, ಪುನಃ ಪುನಃ ವಚನದ ಸಾಲುಗಳ ಅಂತ್ಯಸ್ಥಾನದಲ್ಲಿ ಮೇಲಿಂದ ಮೇಲೆ ನಿಯಮಿತವಾಗಿ ಬಂದಿರುವುದರಿಂದ ಇದು ಯಮಕಾಲಂಕಾರವೆನಿಸಿದೆ.

ಈ ಮೇಲಿನ ಅಲಂಕಾರಗಳಲ್ಲದೇ, ಲೋಕನ್ಯಾಯ ಮೂಲಕವಾದ ಅಲಂಕಾರಗಳ ಬಳಕೆಯನ್ನೂ ಕುಮಾರ ಕಕ್ಕಯ್ಯನವರ ವಚನಗಳಲ್ಲಿ ಕಾಣಬಹುದಾಗಿದೆ.

**ಸ್ವಭಾವೋಕ್ತಿ ಅಲಂಕಾರ :** ವ್ಯಕ್ತಿ ಹಾಗೂ ವಸ್ತುಗಳ ಜಾತಿ ಗುಣ ಕ್ರಿಯಾದಿಗಳನ್ನು ಇದ್ದದ್ದಿದ್ದ ಹಾಗೆ ವರ್ಣಿಸುವದಕ್ಕೆ ಸ್ವಭಾವೋಕ್ತಿ ಅಲಂಕಾರವೆನ್ನುವರು.

ಇಸ್ಪೇಟ ಆಡ್ಯಾನ
ಜೂಜಿನಲಿ ಗೆದ್ದಾನ
ಸೆರೆಸಿಂದಿ ಕುಡಿದು ಕುಣಿದಾನ
ಸೂಳೆಯನು ಮನಿಯಾಗ ಮಡಗ್ಯಾನ

---

೪೭. ಕುಮಾರ ಕಕ್ಕಯ್ಯನ ವಚನಗಳು ಪು-೧೨೨ ವ-೪೬೮
೪೮. -ಅದೇ- ಪು-೩೪. ವ-೧೨೯

ಹೆಂಡತಿಯ ಗುಳದಾಳಿ ಮಾರಿ
ಊರ ಬಿಟ್ಟಾನೆಂದ ಕುಮಾರ ಕಕ್ಕಯ್ಯ.[೪೯]

ಈ ವಚನದಲ್ಲಿ ಕುಮಾರ ಕಕ್ಕಯ್ಯನವರು ಸೆರೆಗುಡುಕನೊಬ್ಬನ ನೈಜ ಸ್ವಭಾವ ಚಿತ್ರಣವನ್ನು ನೀಡಿದ್ದಾರೆ. ಇಸ್ಪೇಟ ಆಡುವುದು, ಜೂಜಿನಲ್ಲಿ ಹಣ ಗೆಲ್ಲುವುದು, ಸೆರೆ ಸಿಂದಿ ಕುಡಿದು ಕುಣಿದು ಕುಪ್ಪಳಿಸುತ್ತಾ, ಸೂಳೆಯನು ತಂದು ಮನೆಯಲ್ಲಿ ಮಡಗಿಕೊಳ್ಳುವುದು, ಮಡದಿಯ ಗುಳದಾಳಿ (ಮಾಂಗಲ್ಯ) ಮಾರುವುದು, ಕೊನೆಗೆ ಎಲ್ಲಾ ಕಳಕೊಂಡು ಊರು ತೊರೆದು ಹೋಗುವುದು, ಇದು ಒಬ್ಬ ಸೆರೆಗುಡುಕನ ಸ್ವಭಾವದ ಜ್ವಲಂತ ಚಿತ್ರಣವಾಗಿದ್ದು, ವಚನ ಓದುವಾಗ ಆತನ ಚಿತ್ರಣವೇ ಕಣ್ಮುಂದೆ ಬರುತ್ತದೆ.

**ಸಂಕೇತಾರ್ಥಕ ಅಲಂಕಾರ :** ಮಾನವರ ಬದಲಿಗೆ ಪ್ರಾಣಿಗಳನ್ನು ಗುಣ ಸ್ವಭಾವಗಳ ಸಂಕೇತವಾಗಿ ಬಳಸಿ ಕಾವ್ಯ ರಚಿಸಿ ವರ್ಣಿಸುವುದು ಸಂಕೇತಾರ್ಥಕ ಅಲಂಕಾರವೆನಿಸುವುದು.

ತೋಳ ಆರಿಸಿ ಬರಬೇಕಾದರೆ
ಹುಲಿ ಕರಡಿಗಳು ಪ್ರಚಾರಕ್ಕಿಳಿಯಬೇಕು
ತೋಳನ ಕಾರ್ಯದರ್ಶಿಗಳಾಗಿ
ಕತ್ತೆಕಿರುಬ ಕಾಡಹಂದಿಗಳು ಶ್ರಮಿಸಬೇಕು
ಚುನಾವಣೆಯಲ್ಲಿ ವೋಟು ಹಾಕಲು
ಕತ್ತೆ ಕುರಿ ಮೊಲ ಜಿಂಕೆಗಳು ಸಾಕೆಂದ
ಕುಮಾರ ಕಕ್ಕಯ್ಯ[೫೦]

ಈ ವಚನದಲ್ಲಿ ಕುಮಾರ ಕಕ್ಕಯ್ಯನವರು ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚುನಾವಣೆಗಳು ನಡೆಯುವ ರೀತಿಯನ್ನು ಪ್ರಾಣಿಗಳನ್ನು ಸಂಕೇತವಾಗಿ ಬಳಸಿಕೊಂಡು ವಿಡಂಬನಾತ್ಮಕವಾಗಿ ಅಲಂಕಾರಿಕ ಭಾಷೆಯಲ್ಲಿ ವರ್ಣಿಸಿದ್ದಾರೆ.
**ಪ್ರತಿಮೆ :** ಪ್ರತಿಮೆಗಳನ್ನು ಬಳಿಸಿ ಕಾವ್ಯ ರಚನೆ ಮಾಡಿ, ಅದರ ಸೌಂದರ್ಯವನ್ನು ಹೆಚ್ಚಿಸುವದು. ಕುಮಾರ ಕಕ್ಕಯ್ಯನವರ ವಚನಗಳಲ್ಲಿ ಪ್ರತಿಮೆಗಳ ಬಳಕೆ ಸಾಕಷ್ಟು ಆಗಿರುವುದನ್ನು ಕಾಣುತ್ತೇವೆ.

ಅದೋ ನೋಡಲ್ಲಿ ಓಡುತಿಹುದು ಕಾಲನ ರೈಲು
ಗಡಿಯಾರ ತೋರುತಿಹುದು ನಿಮಿಷ ಗಂಟೆ
ಕ್ಯಾಲೆಂಡರ ತೋರುತಿಹುದು ದಿನ ವಾರ
ಚಂದ್ರ ತೋರುತಿಹ ಪಕ್ಷ ಮಾಸ ವರುಷ
ಶರೀರ ತೋರುತಿಹುದು ನಿನ್ನ ಆಯುಷ್ಯ

---
೪೯. ಕುಮಾರ ಕಕ್ಕಯ್ಯನ ವಚನಗಳು ಪು–೭೦ ವ–೨೭೨
೫೦. –ಅದೇ– ಪು–೮೨ ವ–೩೧೮

ಕಾಲನ ರೈಲು ಸ್ಮಶಾನ ಮುಟ್ಟುವ ಮುನ್ನ
ಸಮಯವರಿಯೆಂದ ಕುಮಾರ ಕಕ್ಕಯ್ಯ.[೫೧]

ಕಾಲ ಎಂದರೆ ಮೃತ್ಯು, ಸಾವು ಮಾನವ ಜೀವನದ ಆಯುಷ್ಯವನ್ನು 'ಸಮಯ' ವೆಂಬ ಪ್ರತೀಕ ಬಳಸಿ, ಕಾಲನ ರೈಲನ್ನು ಪ್ರತಿಮೆಯಾಗಿ ಕಲ್ಪಿಸಿ, ತುಂಬಾಮಾರ್ಮಿಕವಾಗಿ ಈ ವಚನದಲ್ಲಿ ಜೀವನದ ಗುರಿಗಮ್ಯಗಳ ವರ್ಣನೆ ಮಾಡಿದ್ದಾರೆ. ಅಡೆತಡೆಯಿಲ್ಲದೆ ನಿರಂತರವಾಗಿ ಉರುಳುತ್ತಿರುವ ಅಮೂರ್ತವಾದ ಕಾಲವನ್ನು ರೈಲಿನ ಪ್ರತಿಮೆ ಮೂಲಕ ಮೂರ್ತಗೊಳಿಸಿ ಅನುಭವಕ್ಕೆ ತಂದುಕೊಡುತ್ತಾರೆ. ಮಾನವ ಸೃಷ್ಟಿಸಿ ಕೊಂಡಿರುವ ಗಡಿಯಾರ, ಕ್ಯಾಲೆಂಡರ, ಮಾಸ, ದಿನ ಇವೆಲ್ಲ ಕಾಲನನ್ನು ಅಳೆಯುವ ಸಾಧನಗಳಾಗಿವೆ. ಆಯುಷ್ಯ ಮುಗುದು ಮೃತ್ಯು ಮುಟ್ಟುವ ಮೊದಲೇ ಅದರ ಬೆಲೆ ಅರಿಯಬೇಕು

**iii) ಆಡು ನುಡಿ** : ಆಡು ನುಡಿ ಎಂದರೆ ಜನಪದರು ಸಹಜವಾಗಿ ದಿನ ನಿತ್ಯದ ಬದುಕು, ವ್ಯವಹಾರಗಳಲ್ಲಿ ಬಳಸುವ ಗ್ರಾಮ್ಯ ಭಾಷೆಯ ಮಾತುಗಳೆನ್ನಬಹುದು. ವಿವಿಧ ಕಾಯಕಗಳ ಗ್ರಾಮೀಣ ಜನರ ಆಡುನುಡಿಗಳನ್ನೇ ವಚನಕಾರರು ಬಳಸಿಕೊಂಡು "ಎಂಥ ಗಹನ ವಿಚಾರವನ್ನಾದರೂ ಬಿಡಿ ಬಿಡಿ ಪದಗಳಲ್ಲಿ, ಪುಟ್ಟ ಪುಟ್ಟ ವಾಕ್ಯಗಳಲ್ಲಿ ಅಸ್ಪಷ್ಟತೆ ನ್ಯೂನತೆಗಳಿಗೆಡೆಯಿಲ್ಲದಂತೆ, ಪಂಡಿತರಿಗಿರಲಿ, ಸಾಮಾನ್ಯರಿಗೂ ಅರ್ಥವಾಗುವಂತೆ ಹೇಳುವ ಕೌಶಲ್ಯ ಅವರಿಗೆ ಸಿದ್ಧಿಸಿದೆ. ನಿರರ್ಗಳತೆ, ಸರಾಗತೆ, ಸ್ಫಟಿಕ ಸ್ಪಷ್ಟತೆ ಅವರ ಶೈಲಿಯ ಹೆಗ್ಗುಣ. ಸಂಸ್ಕೃತವನ್ನೂ ಸಹ ಕನ್ನಡದ ಜಾಯಮಾನಕ್ಕೊಗ್ಗಿಸಿಕೊಳ್ಳುವ ಸಾಮರ್ಥ್ಯ ಅವರಿಗಿದೆ. ಆಡುನುಡಿಯ ಬೆಡಗು ಬಿನ್ನಾಣಗಳನ್ನು ಬಳಸಿಕೊಳ್ಳುವದರಿಂದ ಅವರ ಭಾಷೆಯಲ್ಲಿ ಕಸುವಿದೆ, ಕಾವಿದೆ, ಹೊಗರಿದೆ, ಹೊಸತನವಿದೆ. ಜೀವಂತಿಕೆಯಿದೆ, ಮಾಧುರ್ಯವಿದೆ"[೫೨]

ಕುಮಾರ ಕಕ್ಕಯ್ಯನವರ ವಚನದಲ್ಲಿ ಬಸವಾದಿ ಶರಣರಂತೆಯೇ ಜನಮಾನಸದ ಆಡುನುಡಿಗಳ ಬಳಕೆಯಾಗಿರುವುದು ಕಂಡುಬರುತ್ತದೆ. ಉತ್ತರ ಕರ್ನಾಟಕದ 'ಜವಾರಿ ಮಾತುಗಳು' ಅವರ ವಚನಗಳುದ್ದಕ್ಕೂ ಹಾಸೂಹೊಕ್ಕಾಗಿ ಬಂದಿವೆ.

ಯುದ್ಧಕ್ಕೆ ಹೊಂಟಾನ
ಖ್ವಾರಿ ಮೀಸಿ ತಿರವ್ಯಾನ
ಬಿಚಗತ್ತಿ ಹಿಡಿದಾನ
ಏಳಗೇಣಿನ ಕುದರಿ ಹತ್ಯಾನ
ಸರದಾರ ಬಾಲೆಯ ಕುಡಿನೋಟಕ್ಕೆ
ಮುಗ್ಗುರಿಸಿ ಬಿದ್ದಾನೆಂದ ಕುಮಾರ ಕಕ್ಕಯ್ಯ.[೫೩]

---

೫೧. ಕುಮಾರ ಕಕ್ಕಯ್ಯನ ವಚನಗಳು ಪು-೫೫ ವ-೨೧೧

೫೨. ಬಸವಸಂಹಿತೆ – ಡಾ॥ ದೇ. ಜವರೇಗೌಡ ಪು- ೭೯-೮೦

೫೩. ಕುಮಾರ ಕಕ್ಕಯ್ಯನ ವಚನಗಳು ಪು-೨೦೩ ವ-೭೬

ಈ ವಚನದಲ್ಲಿ ಆಡುನುಡಿ ಬಳಸುವ ಮೂಲಕ ಯುದ್ಧಕ್ಕೆ ಹೊರಟಿರುವ ವೀರಯುವಕನ ಸಹಜ ನೈಜವಾದ ಚಿತ್ರಣವಿದೆ. ಆತ ಯುದ್ಧಕ್ಕೆ ಹೋಗುವಾಗ ಕ್ವಾರಿಮೀಸಿ ತಿರುವಿ ಚೂಪಾಗಿಸಿಕೊಂಡು, ಒರೆಯಿಂದ ಹೊರತೆಗೆದ ಖಡ್ಗವನ್ನು ಕೈಯಲ್ಲಿ ಹಿಡಿದು ಝಳಪಿಸುತ್ತಾ, ಏಳಗೇಣಿನ ಪೊಗದಸ್ತಾದ ಕುದುರೆ ಏರಿ ಕುಳಿತು ಇನ್ನೇನು ಹೊರಡಬೇಕು ಅನ್ನುವಷ್ಟರಲ್ಲಿ ಒಬ್ಬ ಏರು ಯೌವನ ಸುಂದರ ಯುವತಿಯನ್ನು ನೋಡಿದ, ಅವಳ ಕುಡಿನೋಟಕ್ಕೆ ಅಲ್ಲಿಯೇ ಮುಗ್ಗುರಿಸಿ (ರಣರಂಗದಲ್ಲಿ ಕುದುರೆ ಮುಗ್ಗುರಿಸಿ ಬೀಳುವಂತೆ) ಬೀಳುತ್ತಾನೆ ಎಂಬುದನ್ನು ಆಡುನುಡಿಯಲ್ಲಿ ರಮಣೀಯವಾಗಿ ಹೇಳುತ್ತಾರೆ. ಈ ವಚನದಲ್ಲಿ ಹೊಂಟಾನ, ತಿರವ್ಯಾನ, ಹಿಡದಾನ, ಹತ್ಯಾನ, ಬಾಲೆ, ಕುಡಿನೋಟ, ಬಿದ್ದಾನ ಮುಂತಾದ ಆಡುನುಡಿಗಳ ಬಳಕೆಯನ್ನು ಕಾಣುತ್ತೇವೆ.

ಹಗಲು ಸತ್ತರೆ ಧೂಪಕ್ಕಿಲ್ಲ
ರಾತ್ರಿ ಸತ್ತರ ದೀಪಕ್ಕಿಲ್ಲ
ಹಿಡಿ ಅಕ್ಕಿ ಹಿಟ್ಟು
ಒಂದು ಬದನೆಕಾಯಿ ಸುಟ್ಟು
ಹೇಳಾವನ ಬಂಡವಾಳ ಮೂರುಕಾಸು
ಬಡಾಯಿ ಆರುಕಾಸೆಂದ ಕುಮಾರಕಕ್ಕಯ್ಯ.[೫೪]

ಈ ವಚನದಲ್ಲಿಯೂ ಕೂಡ ಪ್ರತಿಯೊಂದು ಪದಗಳೂ ಸಹ ಆಡುನುಡಿಯಲ್ಲಿ ಬಳಕೆಯಾಗಿರುವುದನ್ನು ನೋಡಬಹುದು.

ಹೆಂಡದ ಹಣ ಕೊಟ್ವಾನ
ಸುಂದರ ಗುಡಿ ಕಟ್ವಾನ
ಚಿನ್ನದ ಮೂರ್ತಿ ತಂದಾನ
ಊರಿಗೆ ಊಟ ಹಾಕ್ಯಾನ
ದಾರೂಗಾರ ಸೂಳಿ ಮನಿಯಾಗ
ವ್ರತ ಮಾಡ್ಯಾನೆಂದ ಕುಮಾರ ಕಕ್ಕಯ್ಯ[೫೫])

ಈ ವಚನದಲ್ಲಿ ಆಡುನುಡಿ ರೂಪದ ಕ್ರಿಯಾಪದಗಳ ಬಳಕೆಯು ಓದುಗರ ಕಿವಿಗೆ ಒಂದು ರೀತಿಯ ಲಯದ ಆಲಾಪದಂತೆ ಕೇಳಿಸಿ ಮನಕ್ಕೆ ಮುದನೀಡುತ್ತದೆ.

ಇಡ್ಲಿ ಸಾಂಬಾರ ನಾತ
ಮಸಾಲಿ ದೋಸೆಯ ತೂತ
ಮೇಲೆ ಕೊಟ್ಯಾರ ಚೌಚೌ

೫೪. ಕುಮಾರ ಕಕ್ಕಯ್ಯನ ವಚನಗಳು ಪು-೧೯೩ ವ-೭೪೬
೫೫. ಕುಮಾರ ಕಕ್ಕಯ್ಯನ ವಚನಗಳು ಪು-೧೩೭ ವ-೫೨೭

ಪೂರಿ ಭಾಜಿ ಕೇಸರಿ ಭಾತ
ಹೋಟೆಲ ಬಿಲ್ ನೋಡಿ
ಬಡವನ ನಾಡಿ ನಿಂತೇ ಹೋಯ್ತೆಂದ
ಕುಮಾರ ಕಕ್ಕಯ್ಯ[೫೬]

ಈ ವಚನದಲ್ಲಿ ನಾತ (ವಾಸನೆ), ತೂತ (ರಂಧ್ರಗಳು) ಚೌಚೌ (ಮಿಶ್ರಣ) ಭಾತ (ಶಿರಾ) ಮುಂತಾದ ಆಡುನುಡಿಗಳ ಸಹಜ ಬಳಕೆಯನ್ನು ಕಾಣುತ್ತೇವೆ.

ಇದೇ ರೀತಿಯಲ್ಲಿ ಕುಮಾರ ಕಕ್ಕಯ್ಯನ ಸಾವಿರಾರು ವಚನದಲ್ಲಿ ಆಡುನುಡಿಗಳು ಅದ್ಭುವಾಗಿ ಬಳಕೆಯಾಗಿರುತ್ತವೆ. ಕೆಲವೊಂದನ್ನು ಇಲ್ಲಿ ಗಮನಿಸಬಹುದು.

- ಕದೀಮರು ಮಾಡುವದೆಲ್ಲವೂ ಅಜ್ಞಾನಿಗಳ ಶೋಷಣೆಗೆಂದ (ವ-೧೯)
- ಮನೆಯಲಿ ಅತ್ತಿ ಹಿರಿತನ ಬೇಡವೇ ಬೇಡ (ವ-೨೩)
- ಅಡಿಗೆ ಮಾಡಲಿಕ್ಕಾಗದ ಖೋಡಿ (ವ-೪೮೪)
- ಒಡಕ್ಕೇ ಕೆಡಕು (ವ-೧೧)
- ಕೊರಳಾಗ ಜನಿವಾರ ಮನದಾಗ ಮುಡದಾರ (ವ-೩೬೪)
- ಒಳಗ ತುಂಬಿಹುದು ಹುಡಿ (ವ-೩೬೪)
- ಗೊಡ್ಡ ಆಕಳ ಧರ್ಮಕ ಕೊಟ್ಟಾರ ದಡ್ಡಮಗನ ಮಠಕ್ಕ ಬಿಟ್ಯಾರ (ವ-೯೫೪)
- ನಾಯಿ ಬಾಲ ನೆಟ್ಟಗೆ ಮಾಡಿದಂತೆ (ವ-೨೨೭)
- ಮಂಗನ ಕಟಕೊಂಡು ತೋಟಕ್ಕೆ (೨೩೪)

**iv ದ್ವಿರುಕ್ತಿ :** ದ್ವಿರುಕ್ತಿ ಎಂದರೆ ಒಂದು ಪದವನ್ನು ಎರಡು ಸಲ ಉಚ್ಚರಿಸುವುದು ಎಂದು ಅರ್ಥವಾಗುತ್ತದೆ. ದ್ವಿ ಎಂದರೆ ಎರಡು, ಉಕ್ತಿ ಎಂದರೆ ಮಾತು, ಶಬ್ದ, ನುಡಿ. "ಒಂದು ವಿಶೇಷಾರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಪದವನ್ನೋ, ಒಂದು ವಾಕ್ಯವನ್ನೋ ಎರಡೆರಡು ಸಲ ಪ್ರಯೋಗ ಮಾಡುವುದು"[೫೭]

ದ್ವಿರುಕ್ತಿಯ ಬಳಕೆಯನ್ನು ಸಾಮಾನ್ಯವಾಗಿ ಉತ್ಸಾಹದಲ್ಲಿ, ಹೆಚ್ಚು ಎಂಬ ಅರ್ಥದಲ್ಲಿ, ಪ್ರತಿಯೊಂದು ಎಂಬರ್ಥದಲ್ಲಿ, ಕೋಪದಲ್ಲಿ, ಸಂಭ್ರಮದಲ್ಲಿ, ಆಶ್ಚರ್ಯದಲ್ಲಿ, ಆಕ್ಷೇಪಾರ್ಥದಲ್ಲಿ, ಹರ್ಷದಲ್ಲಿ, ಒಪ್ಪಿಗೆಯ ಅರ್ಥದಲ್ಲಿ, ಅವಸರದಲ್ಲಿ, ಅನುಕ್ರಮದ ಅರ್ಥದಲ್ಲಿ, ಆದರದ ಅರ್ಥದಲ್ಲಿ, ಅನೇಕ ವಸ್ತುಗಳಲ್ಲಿ ಒಂದನ್ನು ಗುರುತಿಸುವಿಕೆಯಲ್ಲಿ ನಾವು ಕಾಣಬಹುದು.

ಕುಮಾರ ಕಕ್ಕಯ್ಯನ ವಚನಗಳಲ್ಲಿ ದ್ವಿರುಕ್ತಿಗಳ ಬಳಕೆಯಾಗಿರುವುದನ್ನು ಕೆಳಗಿನ ಕೆಲವು ವಚನಗಳಲ್ಲಿ ನೋಡಬಹುದಾಗಿದೆ.

---

೫೬. ಕುಮಾರ ಕಕ್ಕಯ್ಯನ ವಚನಗಳು ಪು-೩೭೮ ವ-೧೪೬೯
೫೭. ಕನ್ನಡ ವ್ಯಾಕರಣ-ಮೈಸೂರ ಸರ್ಕಾರ ಪಠ್ಯಪುಸ್ತಕಗಳ ಇಲಾಖೆ ಪು-೧೯

ಸೂಳೆ ಸಾವಿರ ಸಾವಿರ ಗಳಿಸಿದರೇನು?
ಅಧಿಕಾರಿ ಲಕ್ಷ ಲಕ್ಷ ತಿಂದರೇನು?[೫೮]

ಕವಿ ಕಲಾಕಾರರ ಬಾಳು ಹೊರಗೆ ಝಗ ಝಗ
ಒಳಗೆ ಭಗ ಭಗವೆಂದ ಕುಮಾರ ಕಕ್ಕಯ್ಯ[೫೯]

ಕೂತ ಕೂತಲ್ಲಿ ಕಾಮ
ನಿಂತ ನಿಂತಲ್ಲಿ ಕಾಮ
ಮಾತು ಮಾತಲ್ಲಿ ಕಾಮ[೬೦]

ಧರ್ಮದಿಂದ ಬಹು ಬಹು
ದೂರೆಂದ ಕುಮಾರ ಕಕ್ಕಯ್ಯ[೬೧]

ಬೆಕ್ಕು ಧ್ಯಾನಕ್ಕೆ ಕುಳಿತರೆ ಇಲಿಗಳೇ ಇಲಿಗಳು
ನಾಯಿ ಧ್ಯಾನಕ್ಕೆ ಕುಳಿತರೆ ಮೂಳೆಗಳೇ ಮೂಳೆಗಳು
ಕುಡುಕ ಧ್ಯಾನಕ್ಕೆ ಕುಳಿತರೆ ಬಾಟ್ಲಿಗಳೇ ಬಾಟ್ಲಿಗಳು
ಕಾಮುಕ ಧ್ಯಾನಕ್ಕೆ ಕುಳಿತರೆ ಹೆಂಗಸರೇ ಹೆಂಗಸರು
ಭವಿ ಧ್ಯಾನಕ್ಕೆ ಕುಳಿತರೆ ನೋಟುಗಳೇ ನೋಟುಗಳು
ಭಕ್ತ ಧ್ಯಾನಕ್ಕೆ ಕುಳಿತರೆ ದೇವತೆಗಳೇ ದೇವತೆಗಳು
ಅವರವರ ಬಿಂಬಗಳೇ ಅವರವರ ಪ್ರತಿಬಿಂಬಗಳೆಂದ
ಕುಮಾರ ಕಕ್ಕಯ್ಯ[೬೨]

ಕೋಟಿ ಕೋಟಿ ಜನರಿಗೆ ಗುಡಿಸಲುಗಳೂ ಇಲ್ಲದಾಗ
ದಶಕ ದಶಕಗಳವರೆಗೆ ಸಹಸ್ರ ಸಹಸ್ರ ಗುಲಾಮರು[೬೩]

ನೌಕರರು ಹಿಂಡಿ ಹಿಂಡಿ ಹೀರುವರು
ಅಧಿಕಾರಿಗಳು ಹೆಕ್ಕಿ ಹೆಕ್ಕಿ ನೆಕ್ಕುವರು
ಶಾಸಕರು ಲಕ್ಷ ಲಕ್ಷ ದೋಚುವರು
ಸಚಿವರು ಕೋಟಿ ಕೋಟಿ ನುಂಗುವರು[೬೪]

ಅತ್ತೆ ಅತ್ತೆ ಕೂಡಿದಾಗ ಮಾತಾಡಲು
ಮನೆಯ ಸೊಸೆಯೇ ಮುಖ್ಯ ವಿಷಯ

---

೫೮. ಕುಮಾರ ಕಕ್ಕಯ್ಯನ ವಚನಗಳು ಪು–೪೬ ವ–೧೭೬
೫೯. –ಅದೇ– ಪು–೪೬ ವ–೧೭೭
೬೦. –ಅದೇ– ಪು–೫೨ ವ–೨೦೦
೬೧ –ಅದೇ– ಪು–೧೮೩ ವ–೭೦೬
೬೨. –ಅದೇ– ಪು–೨೦೯ ವ–೮೦೫
೬೩. –ಅದೇ– ಪು–೨೩೨ ವ–೮೯೩
೬೪. ಕುಮಾರ ಕಕ್ಕಯ್ಯನ ವಚನಗಳು ಪು–೨೩೪ ವ–೯೦೧

**ಸೂಳೆ ಸೂಳೆ** ಕೂಡಿದಾಗ ಮಾತಾಡಲು
ಠಾಣೆಯ ಪೋಲಿಸನೆ ಮುಖ್ಯ ವಿಷಯ
**ಮುಂಡೆ ಮುಂಡೆ** ಕೂಡಿದಾಗ ಮಾತಾಡಲು
ಊರ ಹಜಾಮನೇ ಮುಖ್ಯ ವಿಷಯವೆಂದ
ಕುಮಾರ ಕಕ್ಕಯ್ಯ[೬೫]

ಈ ರೀತಿಯಾಗಿ ಕುಮಾರ ಕಕ್ಕಯ್ಯನವರ ವಚನಗಳಲ್ಲಿ ದ್ವಿರುಕ್ತಿಗಳ ಬಳಕೆಯು ತುಂಬಾ ಪರಿಣಾಮಕಾರಿಯಾಗಿ, ವಿವಿಧ ಪ್ರಕಾರಗಳಲ್ಲಿ ಆಗಿರುವುದನ್ನು ನೋಡುತ್ತೇವೆ.

**ಜೋಡು ನುಡಿ** : ಜೊತೆ ಜೊತೆಯಾಗಿ ಬಳಸುವ ಶಬ್ದಗಳಿಗೆ ಜೋಡುನುಡಿ ಎನ್ನುವರು. ಕನ್ನಡ ಭಾಷೆಯಲ್ಲಿ ಜೋಡುನುಡಿಗಳು ತುಂಬಾ ವಿಶೇಷಾರ್ಥದಲ್ಲಿ ಬಳಕೆಯಾಗುತ್ತವೆ. ವಚನ ಸಾಹಿತ್ಯದಲ್ಲಿ ಇವುಗಳ ಬಳಕೆಯನ್ನು ಕಾಣುತ್ತೇವೆ. ಕುಮಾರ ಕಕ್ಕಯ್ಯನವರ ಹಲವಾರು ವಚನಗಳಲ್ಲಿ ಜೋಡುನುಡಿಗಳ ಬಳಕೆಯಾಗಿರುವುದು ಕಂಡು ಬರುತ್ತದೆ.

**ಐಷ ಆರಾಮಕ್ಕೆ** ಮನಸೋತು
**ಊಟ ಉಪಚಾರವೇ** ಜೀವನವೆಂದವನು
**ಹೆಂಡ ಖಂಡಗಳಿಗೆ** ಮೂರು ಹೋಗಿ
ಹೆಂಗಳೆಯರ ಸಹವಾಸವೇ ಸರ್ವಸ್ವವೆಂದವನು
ಕೊನೆಗೆ **ರೋಗ ರುಜಿನಗಳೇ** ಗತಿಯೆಂದು
ನರಳಲೇ ಬೇಕೆಂದ ಕುಮಾರ ಕಕ್ಕಯ್ಯ.[೬೬]

ಈ ವಚನದಲ್ಲಿ ಐಷ ಆರಾಮ, ಊಟ ಉಪಚಾರ, ಹೆಂಡ ಖಂಡ, ರೋಗ ರುಜಿನ ಪದಗಳು ಜೋಡು ನುಡಿಗಳಾಗಿವೆ.

ಇದೇ ರೀತಿಯಾಗಿ ಸ್ವಲ್ಪ ಭಿನ್ನವಾಗಿರುವ ಜೋಡು-ನುಡಿಗಳು ಕೆಳಗಿನಂತೆ ಬಳಕೆಯಾಗಿರುವುದನ್ನು ಕಾಣಬಹುದು-

**ನೀರ ನಿಡಿ ಕಸ ಮುಸುರೆಗಾಗಿ**
**ಊಟ ಉಡಿಗೆ** ಅಡಿಗೆಗಾಗಿ (ವ-೪)
**ತಪ್ಪು ಒಪ್ಪು, ಲಾಭ ಹಾನಿ**
**ಸೋಲು** ಗೆಲವು **ಮಾನ ಅಪಮಾನ**
ಯಾವನ ಕೈಯಲ್ಲಿಲ್ಲ. (ವ-೪೩)
ಇಂದಿನ **ಜಳಕ ಜಾಪತ್ರಿ** ನಾಳೆನ್ನಲಿಕ್ಕಾಗದು
ಇಂದಿನ **ಊಟ ಉಪಚಾರ** ನಾಳೆನ್ನಲಿಕ್ಕಾಗದು
ಇಂದಿನ **ಕೆಲಸ ಬೊಗಸೆ** ನಾಳೆನ್ನಲಿಕ್ಕಾಗದು. (ವ-೧೦೫)

---

೬೫. -ಅದೇ- ಪು-೨೫೭ ವ-೯೯೪.
೬೬ -ಅದೇ- ಪು-೪೫ ವ-೧೭೨.

ತಂದೆ ತಾಯಿಯನು ಬಿಟ್ಟು
ಅತ್ತೆಮಾವನ ಮನೆಯಲಿ ಬೀಳುವುದು
ಮಡದಿ ಮಕ್ಕಳ ಬಿಟ್ಟು
ಸೂಳೆ ಮೂಳೆಯ ಮನೆಯಲಿ ಮಲಗುವುದು
ಗಿಳಿಕೋಗಿಲೆ ಬಿಟ್ಟು
ಕಾಗೆ ಗೂಗೆ ಸಾಕಿದಂತೆಂದ (ವ–೧೯೩)
ಓದು ವಾದದಲ್ಲಿ ಕಾಮ (ವ–೨೦೦)
ಉಟ್ಟು ತೊಟ್ಟು ತಿದ್ದಿ ತೀಡಿ ಬಣ್ಣ ಬಳೆದು
ಪೇಟೆಗೆ ಹೋಗುವ ಹೆಂಗಸು ಬಾಡಿಗೆಗಲ್ಲದೆ ಮತ್ತೆದಕ್ಕೆ ? (ವ–೨೧೯)
ನೆರೆ ಹೊರೆ ಬಂಧು ಬಳಗ ಸತಿಸುತರಿಗೆ
ಬೆನ್ನಟ್ಟಿದ ಬೇತಾಳವೆಂದ ಕುಮಾರ ಕಕ್ಕಯ್ಯ. (ವ–೮೨೬)
ಪ್ರತಿ ಪ್ರಾಣಿಗೆ ಪರರ ದುಃಖದುಮ್ಮಾನಗಳಿಗಿಂತ
ತನ್ನ ದುಃಖ ದುಮ್ಮಾನಗಳೇ ಹೆಚ್ಚೆಂದ ಕುಮಾರ ಕಕ್ಕಯ್ಯ. (ವ–೪೨೨)
ಕಾವಿ ಕಪನಿ ಹಾಕಿದವರೆಲ್ಲ ಸ್ವಾಮಿಗಳಲ್ಲ
ಜಟಾ ಮಟಾ ಬಿಟ್ಟವರೆಲ್ಲ ಋಷಿಗಳಲ್ಲ (ವ–೧೧೧೨)
ಯಾರೊಬ್ಬರ ಅರ್ಹತೆ ಅವರವರ
ಧನ ಕನಕ ಸಿರಿಸಂಪತ್ತುಗಳಿಂದ ನಿರ್ಧರಿಸಲ್ಲಿಕ್ಕಾಗದು (ವ–೧೦೨೭)

**vi)** **ನುಡಿಗಟ್ಟುಗಳು** : 'ಮಾತಿನಲ್ಲಿಯ ಪದ ಇಲ್ಲವೆ ಪದ ಸಮುಚ್ಚಯಕ್ಕೆ ಶಬ್ದಾರ್ಥವು ಒಂದಿದ್ದು, ಬಳಕೆಯಲ್ಲಿ ಅದು ಬೇರೊಂದು ಅರ್ಥ (ಲಕ್ಷಣಾರ್ಥ)ವನ್ನು ಕೊಡುತ್ತಿದ್ದರೆ ಅಂತಹ ಶಬ್ದಗಳನ್ನು ನುಡಿಗಟ್ಟು ಎನ್ನುವರು'[೬೭] ಉದಾಹರಣೆಗೆ – ಟೊಪ್ಪಿಗೆ ಹಾಕು ಅಂದರೆ ಮೋಸಮಾಡು. ಕಿವಿಕಚ್ಚು ಅಂದರೆ ಚಾಡಿ ಹೇಳು ಮುಂತಾದವನ್ನು ನೋಡಬಹುದು.

ಕುಮಾರ ಕಕ್ಕಯ್ಯನ ವಚನಗಳಲ್ಲಿ ವಿಪುಲವಾಗಿ ನುಡಿಗಟ್ಟುಗಳು ಬಳಕೆಯಾಗಿರುವುದನ್ನು ಕಾಣುತ್ತೇವೆ.

ಹುಟ್ಟಿದಾಗ ಗಂಡಾದರೆ ಹಾಲ್ಟೊರೆಯುವರು
ಅದುವೇ ಹೆಣ್ಣಾದರೆ ಮೂಗು ಮುರಿಯುವರು (ವ–೧೪೧೨)
ಆ ಬಳಿಕ ಎಡತಾಕಿ ಯಾಚಿಸಬೇಕಾದದ್ದು ಸಾಲಿಗ (ವ–೧೪೧೩)
ಎಣ್ಣೆ ಹಚ್ಚಿ ನುಣ್ಣಗೆ ಮಾಡಿ ...... (ವ–೨೧೯)
ತಿದ್ದಿ ತೀಡಿ ಬಣ್ಣ ಬಳಿದು....... (೨೧೯)
ಮುಸುಕಿನಲಿ ಮಸೆದಾಡುವ (ವ–೨೨೧)
ಬಾಳ ವೃಕ್ಷಕ್ಕೆ ಕೊಡಲಿ ಪೆಟ್ಟು ಬಿದ್ದಂತೆಂದ (ವ–೨೪೯)

---
೬೭. ಕನ್ನಡ ವ್ಯಾಕರಣ ಪರಿಭಾಷೆ – ಡಾ॥ ಎಸ್. ಎಸ್. ಅಂಗಡಿ ಪು–೫೪.

ಸಣ್ಣವರಿಗೆ ಕೈ ಮುಗಿದು **ಹಲ್ಲು ಗಿಂಜಬೇಕೆಂದ** (ವ–೩೧೯)
ಹಾಳು ಜೀವನ ಬಾಳುವವರೇ **ಬೇವಾರ್ಸಿಗಳು** (ವ–೩೯೧)
ಬೀಳು ಬುದುಕು ಮಾಡುವವರೇ **ಬಿಕನಾಸಿಗಳು** (ವ–೩೯೧)
ಬಾಯಿಕಟ್ಟಿ **ಹೊಟ್ಟೆ ಸುಟ್ಟು** (ವ–೪೨೭)
**ದುಡ್ಡೇ ದೊಡ್ಡಪ್ಪ** ..... ಕಾಂಚಾಣಂ ಕಾರ್ಯಸಿದ್ಧಿ.....
**ಲಂಚವಿಟ್ಟು** ಮಂಚವನ್ನೇರುವ (ವ–೬೮೨)
ಅಯ್ಯಾ ಅವರು **ಮಾತಿನಮಲ್ಲರಲ್ಲ** (ವ–೭೮೭)
**ಬೂದಿ ಮುಚ್ಚಿದ** ಕೆಂಡದಂತೆಂದ (ವ–೮೩೧)
**ತಲೆ ಹಿಡುಕನ** ಸ್ನೇಹ ಮಾಡಲಿಕ್ಕಾಗದೆಂದ (ವ–೧೩೬೩)

ಈ ರೀತಿಯಾಗಿ ಈ ನುಡಿಗಟ್ಟುಗಳು ತೋರಿಕೆಯ ಅರ್ಥ ಬಿಟ್ಟು ಬೇರೊಂದು ಲಕ್ಷ್ಯಾರ್ಥವನ್ನು ಕೊಡುವುದನ್ನು ಅರಿಯಬಹುದು.

ಕುಮಾರ ಕಕ್ಕಯ್ಯನ ವಚನಗಳಲ್ಲಿ ಭಾಷೆ–ಶೈಲಿ, ಛಂದಸ್ಸು–ಅಲಂಕಾರ ಆಡು ನುಡಿ, ದ್ವಿರುಕ್ತಿ, ಜೋಡುನುಡಿ, ನುಡಿಗಟ್ಟುಗಳ ಬಳಕೆಯು ತುಂಬಾ ವಿಶಿಷ್ಟವಾಗಿ ವೈವಿಧ್ಯಮಯವಾಗಿ ಬಳಕೆಯಾಗಿದ್ದು ವಚನಗಳ ಸೌಂದರ್ಯವನ್ನು ಹೆಚ್ಚಿಸಿವೆ. ಅಂತೆಯೇ ಅವರ ವಚನಗಳು ಬಸವಣ್ಣನವರ ವಚನಗಳಂತೆ ತುಂಬಾ ಜನಪ್ರಿಯವಾಗಿದ್ದು, ಸರ್ವರ ಮೆಚ್ಚುಗೆಗೆ ಪಾತ್ರವಾಗಿವೆ

# ಅಧ್ಯಾಯ – ೬

## ವಚನಕಾರರ ಪ್ರಭಾವ–ಪ್ರೇರಣೆ.

i) ಕುಮಾರ ಕಕ್ಕಯ್ಯನ ವಚನಗಳ ಮೇಲೆ ಬಸವಾದಿ ಶರಣರ ಪ್ರಭಾವ

ii) ಕುಮಾರ ಕಕ್ಕಯ್ಯನ ದೃಷ್ಟಿಯಲ್ಲಿ ಬಸವಾದಿ ಶರಣರು

iii) ಆಧುನಿಕ ವಚನಕಾರರಲ್ಲಿ ಕುಮಾರ ಕಕ್ಕಯ್ಯನ ಸ್ಥಾನ–ಮಾನ.

iv) ಕುಮಾರ ಕಕ್ಕಯ್ಯನವರ ಸಾಹಿತ್ಯ ಕುರಿತು ವಿದ್ವಾಂಸರ ಅಭಿಪ್ರಾಯಗಳು

# ಅಧ್ಯಾಯ : ೬

# ವಚನಕಾರರ ಪ್ರಭಾವ-ಪ್ರೇರಣೆ.

## i) ಕುಮಾರ ಕಕ್ಕಯ್ಯನ ವಚನಗಳ ಮೇಲೆ ಬಸವಾದಿ ಶರಣರ ಪ್ರಭಾವ :

೨೦ ನೇ ಶತಮಾನದ ಆಧುನಿಕ ಶರಣ, ವಚನಕಾರ ಕುಮಾರ ಕಕ್ಕಯ್ಯನವರ ಮೇಲೆ ೧೨ನೆಯ ಶತಮಾನದ ಬಸವಾದಿ ಶರಣರ ವಚನಗಳ ಪ್ರಭಾವವು ಸಹಜವಾಗಿಯೇ ಆಗಿದೆ.ಬಸವಾದಿ ಶರಣರು ಆಂದಿನ ಕಾಲದಲ್ಲಿ ದೀನ - ದಲಿತರ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸಿದರು. ಬಸವಣ್ಣನವರು ಸನಾತನ ವರ್ಣಾಶ್ರಮಧರ್ಮದ ಜಾತಿಭೇದ,ಅಸ್ಪೃಶ್ಯತೆಗಳನ್ನು ಖಂಡಿಸಿದರು. ಪ್ರಾಚೀನ ಕಾಲದ ಖುಷಿ - ಮುನಿಗಳೆಲ್ಲ ಹುಟ್ಟಿನಿಂದ ಕೀಳುಕುಲದವರೇ ಆಗಿದ್ದು, ಅವರ ಕಾಲದಲ್ಲಿ ಜಾತಿಭೇದವಿರಲಿಲ್ಲ. ಅವರ ಹೆಸರು ಹೇಳಿ ಉಪಜೀವಿಸುವ ಮೇಲ್ಜಾತಿಯವರ ಮೇಲರಿಮೆ ಖಂಡಿಸುತ್ತಾರೆ. ಸಮತೆ-ಸ್ವಾತಂತ್ರ್ಯ-ಬಂಧುತ್ವದ ಧರ್ಮ-ಸಮಾಜ ರೂಪಿಸುತ್ತಾರೆ. ಇಂತಹ ಬಸವಣ್ಣನವರ ವಚನ ನೋಡಿ-

ವ್ಯಾಸ ಬೋವಿತಿಯ ಮಗ
ಮಾರ್ಕಂಡೇಯ ಮಾತಂಗಿಯ ಮಗ
ಮಂಡೋದರಿ ಕಪ್ಪೆಯ ಮಗಳು
ಕುಲವನರಸದಿರಿಂ ಭೋ!
ಕುಲದಿಂದ ಮುನ್ನೇನಾದಿರಿಂ ಭೋ!
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮಚ್ಚಿಗ,
ಕಶ್ಯಪ ಕಮ್ಮಾರ, ಕೌಂಡಿನ್ಯನೆಂಬ ಖುಷಿಯು
ಮೂರು ಭುವನವರಿಯೆ ನಾವಿದ ಕಾಣಿ ಭೋ!
ನಮ್ಮ ಕೂಡಲಸಂಗನ ವಚನವಿಂತೆಂದುದು
ಶ್ವಪಚೋಪಿಯಾದಡೇನು, ಶಿವಭಕ್ತನೇ ಕುಲಜಂಬೋ![೧]

ಕುಮಾರ ಕಕ್ಕಯ್ಯನವರ ವಚನ ಹೀಗಿದೆ-

ಸಾಂಖ್ಯ ಶ್ವಪಚ; ವಾಲ್ಮೀಕಿ ಬೇಡ
ವಶಿಷ್ಟ ಊರ್ವಶಿಯೆಂಬ ಗಣಿಕೆಯ ಮಗ
ಅಗಸ್ತ್ಯ ಕಬ್ಬಿಲ, ದೂರ್ವಾಸ ಮಚ್ಚಿಗ
ವ್ಯಾಸ ಸತ್ಯವತಿಯೆಂಬ ಬೋಯಿತಿಯ ಮಗ
ರಾಮಾಯಣ ಮಹಾಭಾರತ ಗೀತೆಯ ಮೊದಲು

೧. ಬಸವಣ್ಣನವರ ವಚನಸಂಪುಟ ಸಂ. ಡಾ॥ ಎಂ.ಎಂ. ಕಲಬುರ್ಗಿ ವ-೫೮೯.

ವಂಶ ಭೇದ, ಜಾತಿ ಪ್ರಭೇದ ಇರಲಿಲ್ಲವೆಂದ
ಕುಮಾರ ಕಕ್ಕಯ್ಯ.[೨]

ಇಲ್ಲಿ ಬಸವಣ್ಣನವರ ವಚನದ ಪ್ರಭಾವವು ಕಕ್ಕಯ್ಯನವರ ಮೇಲೆ ನೇರವಾಗಿ ಆಗಿರುವುದು ಕಂಡು ಬರುತ್ತದೆ.

ಬಸವಣ್ಣನವರ ವಚನ –

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವ ತಾ ಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ
ನಿಮ್ಮನೆತ್ತ ಬಲ್ಲರು, ಕೂಡಲಸಂಗಮದೇವಾ.[೩]

ಕುಮಾರ ಕಕ್ಕಯ್ಯ ವಚನ –

ತನ್ನ ಕಣ್ಣು ತಾನೇ ತೆರೆಯಬೇಕು
ತನ್ನ ಅನುಭವ ತಾನೇ ಪಡೆಯಬೇಕು
ತನ್ನ ದಾರಿ ತಾನೇ ನಡೆಯಬೇಕು
ತನ್ನ ಗುರಿ ತಾನೇ ಮುಟ್ಟಬೇಕು
ಪರರಿಂದ ತನ್ನ ಉದ್ಧಾರ ಎಂದಿಗೂ ಆಗದೆಂದ
ಕುಮಾರ ಕಕ್ಕಯ್ಯ.[೪]

ಬಸವಣ್ಣನವರ ವಚನ –

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ
ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರಯ್ಯಾ ಕೂಡಲಸಂಗಮದೇವಾ.[೫]

ಕುಮಾರ ಕಕ್ಕಯ್ಯನವಚನ –

ಮೂಕನಿಗೆ ಮಾತನಾಡಿಸಬಹುದು
ಕಿವುಡನಿಗೆ ಕೇಳಿಸಲೂಬಹುದು

---

೨. ಕುಮಾರ ಕಕ್ಕಯ್ಯನವರ ವಚನಗಳು ಪು–೮೯ ವ–೩೪೩.
೩. ಬಸವಣ್ಣನವರ ವಚನ ಸಂಪುಟ – ಸಂ. ಡಾ॥ ಎಂ.ಎಂ. ಕಲಬುರ್ಗಿ ವ– ೧೮೩
೪. ಕುಮಾರ ಕಕ್ಕಯ್ಯನ ವಚನಗಳು – ಪು–೯೯ ವ–೩೬೭
೫. ಬಸವಣ್ಣನವರ ವಚನ ಸಂಪುಟ – ಸಂ. ಡಾ॥ ಎಂ.ಎಂ. ಕಲಬುರ್ಗಿ ವ–೧೩೨

ಕುರುಡನಿಗೆ ತೋರಿಸಲೂ ಬಹುದು
ಕುಂಟನಿಗೆ ಓಡಿಸಲೂ ಬಹುದು
ಸ್ವಯಂ ಬುದ್ಧಿಯಿಲ್ಲದವನಿಗೆ
ತಿದ್ದಲಾಗದೆಂದ ಕುಮಾರ ಕಕ್ಕಯ್ಯ[೬]

ಬಸವಣ್ಣನವರ ವಚನ –

ನೂರನೋದಿ ನೂರ ಕೇಳಿದರೇನು?
ಆಸೆ ಬಿಡದು, ರೋಷ ಹರಿಯದು
ಮಜ್ಜನಕ್ಕೆರೆದು ಫಲವೇನು?
ಮಾತಿನಂತೆ ಮನವಿಲ್ಲದ
ಜಾತಿಡೊಂಬರ ನೋಡಿ ನಗುವ
ನಮ್ಮ ಕೂಡಲಸಂಗಮದೇವ[೭]

ಕುಮಾರ ಕಕ್ಕಯ್ಯನ ವಚನ –

ದೊಡ್ಡ ದೊಡ್ಡ ಪದವಿ ಪಡೆದರೇನು?
ಹನ್ನೆರಡು ಬಂಡಿ ಗ್ರಂಥಗಳ ಓದಿದರೇನು?
ಅಧ್ಯಾತ್ಮ ಪರತತ್ವ ಪಂಡಿತರಾದರೇನು?
ಇಡೀ ಆಯುಷ್ಯ ತಪಸ್ಸು ಮಾಡಿದರೇನು?
ಕುಲಗೋತ್ರ ಜಾತಿ ಜಾಡ್ಯ ಬಿಡದವನ
ಭೆಟ್ಟಿಯೇ ಬೇಡೆಂದ ಕುಮಾರ ಕಕ್ಕಯ್ಯ[೮]

ಬಸವಣ್ಣನವರ ವಚನ :

ಅರಗು ತಿಂದು ಕರಗುವ ದೈವವನೆಂತು ಸರಿಯೆಂಬೆನಯ್ಯಾ?
ಉರಿಯ ಕಂಡಡೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ?
ಅವಸರ ಬಂದಡೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ?
ಅಂಜಿಕೆಯಾದಡೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ?
ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ.[೯]

ಕುಮಾರ ಕಕ್ಕಯ್ಯ ವಚನ :

ನೀರಿಗೆ ಕರಗುವ ಮಣ್ಣಿನ ದೇವರು
ಜಂಗು ತಿನ್ನುವ ತಗಡಿನ ದೇವರು

---

೬ ಕುಮಾರ ಕಕ್ಕಯ್ಯನ ವಚನ – ಪು–೧೦೧ ವ–೩೮೭
೭. ಬಸವಣ್ಣನವರ ವಚನ ಸಂಪುಟ – ಸಂ. ಡಾ॥ ಎಂ.ಎಂ. ಕಲಬುರ್ಗಿ ವ– ೬೫೨
೮. ಕುಮಾರ ಕಕ್ಕಯ್ಯನ ವಚನಗಳು – ಪು–೮೨ ವ–೩೩೬
೯. ಬಸವಣ್ಣನವರ ವಚನ ಸಂಪುಟ – ಸಂ. ಡಾ॥ ಎಂ.ಎಂ. ಕಲಬುರ್ಗಿ ವ–೫೫೭

ಬೆಂಕಿಗೆ ಬೂದಿಯಾಗುವ ಕಟ್ಟಿಗೆ ದೇವರು
ಎಡೆ ಬೋನಕ್ಕೆ ಶೃಂಗಾರವಾಗುವ ಸಗಣಿಯ ದೇವರು
ಕಳ್ಳಗಂಜಿ ಬೀಗ ಹಾಕಿಸಿಕೊಳ್ಳುವ ಚಿನ್ನದ ದೇವರು
ಅಜ್ಞಾನಿಗಳ ದುರ್ದೈವಗಳೆಂದ ಕುಮಾರ ಕಕ್ಕಯ್ಯ[೧೦]

ಬಸವಣ್ಣನವರ ವಚನ –

ಅಂದಣವನೇರಿದ ಸೊಣಗನಂತೆ
ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು
ಸುಡು ಸುಡು ಮನವಿದು ವಿಷಯಕ್ಕೆ ಹರಿವುದು.
ಮೃಡ ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ ಕೂಡಲಸಂಗಮದೇವ
ನಿಮ್ಮ ಚರಣವ ನೆನೆವಂತೆ ಕರುಣಿಸು
ಸೆರೆಗೊಡ್ಡಿ ಬೇಡುವೆ, ನಿಮ್ಮ ಧರ್ಮ.[೧೧]

ಕುಮಾರ ಕಕ್ಕಯ್ಯನ ವಚನ –

ಕತ್ತೆಯನ್ನು ಕಾಶಿ ಕೇದಾರಕ್ಕೆ ಒಯ್ದರೂ
ತಿಪ್ಪೆಗೆ ಹೋಗದೇ ಇರದು.
ನಾಯಿ ಮಠ ಮಂದಿರಕ್ಕೆ ಬಂದರೂ
ಮೂಳೆಯ ಹುಡುಕಾಟ ಬಿಡದು
ಪಾಪಿ ತೀರ್ಥ ಕ್ಷೇತ್ರಕ್ಕೆ ಹೋದರೂ,
ದುರ್ಬುದ್ಧಿ ಹೋಗದೆಂದ ಕುಮಾರ ಕಕ್ಕಯ್ಯ[೧೨]

ಅಕ್ಕ ಮಹಾದೇವಿ ವಚನ :

ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ?
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ?
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ?
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ?
ಅಗಲಿದ್ದು ಫಲವೇನು ಬಾನವಿಲ್ಲದನ್ನಕ್ಕ?
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ?[೧೩]

---

೧೦. ಕುಮಾರ ಕಕ್ಕಯ್ಯನ ವಚನ – ಪು–೧೧೨ ವ–೪೨೯
೧೧. ಬಸವಣ್ಣನವರ ವಚನ ಸಂಪುಟ – ಸಂ. ಡಾ॥ ಎಂ.ಎಂ. ಕಲಬುರ್ಗಿ ವ–೩೪
೧೨. ಕುಮಾರ ಕಕ್ಕಯ್ಯನ ವಚನಗಳು – ಪು–೧೩೮ ವ–೬೪೭.
೧೩. ಶಿವಶರಣೆಯರ ವಚನ ಸಂಪುಟ – ಸಂ.ಡಾ॥ ವೀರಣ್ಣ ರಾಜೂರ ವ–೩೩೦

ಕುಮಾರ ಕಕ್ಕಯ್ಯನ ವಚನ :

> ಹಣವಿದ್ದು ಗುಣ ಇಲ್ಲದಿದ್ದೊಡೆ
> ರೂಪವಿದ್ದು ಶೀಲ ಇಲ್ಲದಿದ್ದೊಡೆ
> ಶಕ್ತಿಯಿದ್ದು ಧೈರ್ಯ ಇಲ್ಲದಿದ್ದೊಡೆ
> ವಿಚಾರವಿದ್ದು ಆಚಾರ ಇಲ್ಲದಿದ್ದೊಡೆ
> ಪುಸ್ತಕ ಜ್ಞಾನವಿದ್ದು ಲೌಕಿಕಜ್ಞಾನ ಇಲ್ಲದಿದ್ದೊಡೆ
> ಪರಿಮಳವಿಲ್ಲದ ಪುಷ್ಪ ಮೂಸಿದಂತೆಂದ
> ಕುಮಾರ ಕಕ್ಕಯ್ಯ.[೧೪]

ಅಕ್ಕಮಹಾದೇವಿ ವಚನ :

> ಬಂಜೆ ಬೇನೆಯನರಿವಳೇ?
> ಬಲದಾಯಿ ಮುದ್ದ ಬಲ್ಲಳೆ?
> ನೊಂದವರ ನೋವ ನೋಯದವರೆತ್ತ ಬಲ್ಲರೊ
> ಚೆನ್ನಮಲ್ಲಿಕಾರ್ಜುನಯ್ಯನಿರಿದಲಗು
> ಒಡಲಲ್ಲಿ ಮುರಿದು ಹೊರಳುವೆನ್ನಳಲನು
> ನೀವೆತ್ತ ಬಲ್ಲಿರೆ, ಎಲೆ ತಾಯಿಗಳಿರಾ?[೧೫]

ಕುಮಾರ ಕಕ್ಕಯ್ಯ ವಚನ :

> ಹೆರಿಗೆ ನೋವು
> ಹೆರುವವಳಿಗಲ್ಲದೆ ಸೂಲಗಿತ್ತಿಗೆ ಬಾರದು
> ಗಾಯದ ನೋವು
> ಗಾಯಾಳುವಿಗಲ್ಲದೆ ವೈದ್ಯನಿಗೆ ಆಗದು
> ಅಂತ್ಯಜರ ನೋವು
> ತಿಳಿಯದೆಂದ ಕುಮಾರ ಕಕ್ಕಯ್ಯ[೧೬]

ಅಲ್ಲಮ ಪ್ರಭುದೇವರ ವಚನ :

> ಕಳ್ಳಗಂಜಿ ಕಾಡ ಹೊಕ್ಕಡೆ ಹುಲಿ ತಿಂಬುದ ಮಾಬುದೆ?
> ಹುಲಿಗಂಜಿ ಹುತ್ತವ ಹೊಕ್ಕಡೆ ಸರ್ಪ ತಿಂಬುದ ಮಾಬುದೆ?
> ಕಾಲಗಂಜಿ ಭಕ್ತನಾದಡೆ ಕರ್ಮ ತಿಂಬುದ ಮಾಬುದೆ
> ಇಂತೀ ಮೃತ್ಯುವಿನ ಬಾಯ ತುತ್ತಾದ
> ವೇಷ ಡಂಬಕರ ನಾನೇನೆಂಬೆ ಗುಹೇಶ್ವರಾ.[೧೭]

---

೧೪ ಕುಮಾರ ಕಕ್ಕಯ್ಯನ ವಚನಗಳು ಪು-೧೬೧ ವ-೬೨೦
೧೫. ಶಿವಶರಣೆಯರ ಸಂಪುಟ – ಸಂ ಡಾ॥ ವೀರಣ್ಣ ರಾಜೂರ ವ-೨೯೦
೧೬. ಕುಮಾರ ಕಕ್ಕಯ್ಯನ ವಚನಗಳು ಪು-೩ ವ-೧೦
೧೭. ಅಲ್ಲಮಪ್ರಭುದೇವರ ವಚನಸಂಪುಟ – ಸಂ. ಡಾ॥ ಬಿ. ವ್ಹಿ. ಮಲ್ಲಾಪೂರ ವ-೭೩

ಕುಮಾರ ಕಕ್ಕಯ್ಯ ವಚನ :

ಬಡತನಕ್ಕೆ ಅಂಜಿ ಬಾವಿ ಬಿದ್ದರೆ
ಬಾವಿಯಲ್ಲಿ ಬಡತನ ಹಿಂಗುವದೇ?
ಮರ್ಯಾದೆ ಗಂಜಿ ವಿಷ ಕುಡಿದರೆ
ಮಹಜರ ಬರೆಯುವಾಗ ಮರ್ಯಾದೆ ಬರುವುದೇ?
ಆತ್ಮಹತ್ಯೆ ಹೇಡಿ ಜನಗಳ ಹೀನ ಕೃತ್ಯವೆಂದ
ಕುಮಾರ ಕಕ್ಕಯ್ಯ[೧೮]

ಅಂಬಿಗರ ಚೌಡಯ್ಯಗಳ ವಚನ :

ಬಡತನಕ್ಕೆ ಉಂಬುವ ಚಿಂತೆ
ಉಣಲಾದರೆ ಉಡುವ ಚಿಂತೆ
ಉಡಲಾದರೆ ಇಡುವ ಚಿಂತೆ
ಇಡಲಾದರೆ ಹೆಂಡಿರ ಚಿಂತೆ
ಹೆಂಡಿರಾದರೆ ಮಕ್ಕಳ ಚಿಂತೆ
ಮಕ್ಕಳಾದರೆ ಬದುಕಿನ ಚಿಂತೆ
ಬದುಕಾದರೆ ಕೇಡಿನ ಚಿಂತೆ
ಕೆಡದಿರೆ ಮರಣದ ಚಿಂತೆ
ಇಂತೀ ಹಲವು ಚಿಂತೆಯಲ್ಲಿ ಇಪ್ಪವರ ಕಂಡೆನು
ಶಿವಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ
ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.[೧೯]

ಕುಮಾರ ಕಕ್ಕಯ್ಯ ವಚನ :

ಖಗ ಮೃಗಗಳಿಗೆ ಬೇಟೆಯ ಚಿಂತೆ
ಪಶು ಪಕ್ಷಿಗಳಿಗೆ ಆಹಾರದ ಚಿಂತೆ
ಬಡವ ಬಲ್ಲಿದರಿಗೆ ಬಾಳಿನ ಚಿಂತೆ
ಸಾಧು ಸನ್ಯಾಸಿಗಳಿಗೆ ಮೋಕ್ಷದ ಚಿಂತೆ
ಯಾವನಾದರೂ ನಿಶ್ಚಿಂತನೆಂದರೆ
ಅದೊಂದು ಉಸಿರಾಡುವ ಹೆಣನೆಂದ
ಕುಮಾರ ಕಕ್ಕಯ್ಯ[೨೦]

---

೧೮. ಕುಮಾರ ಕಕ್ಕಯ್ಯನ ವಚನಗಳು ಪು-೨೧ ವ-೮೧
೧೯. ಸಂಕೀರ್ಣ ವಚನ ಸಂಪುಟ – ಸಮ. ಎಂ. ಎಂ. ಕಲಬುರ್ಗಿ ವ-೧೯೬
೨೦. ಕುಮಾರ ಕಕ್ಕಯ್ಯನ ವಚನಗಳು ಪು-೩೪ ವ-೧೨೯

ಅಕ್ಕಮ್ಮಳ ವಚನ :

ಬತ್ತಲೆ ಇದ್ದವರೆಲ್ಲ ಕತ್ತೆಯ ಮಕ್ಕಳು
ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು.
ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ
ಆವ ಪ್ರಕಾರವಾದಡೇನು? ಅರಿವೇ ಮುಖ್ಯವಯ್ಯ.
ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ.[೨೧]

ಕುಮಾರ ಕಕ್ಕಯ್ಯನ ವಚನ :

ಮಾಡದೆ ಪಡೆಯುವವರೆಲ್ಲರೂ ಭಿಕ್ಷುಕರು
ದುಡಿಯದೇ ಉಣ್ಣುವವರೆಲ್ಲರೂ ಕದೀಮರು
ಹಣದಿಂದ ಆರಿಸಿ ಬರುವವರೆಲ್ಲರೂ ಲಫಂಗರು
ಲಂಚದಿಂದ ಕುಬೇರರಾದವರೆಲ್ಲರೂ ಕಳ್ಳರು
ನರರನ್ನು ಶೋಷಣೆ ಮಾಡುವವರೆಲ್ಲರೂ
ನರಭಕ್ಷಕರೆಂದ ಕುಮಾರ ಕಕ್ಕಯ್ಯ[೨೨]

ಈ ರೀತಿಯಾಗಿ ಬಸವಾದಿ ಶರಣರ ವಚನಗಳಿಂದ ಪ್ರೇರಣೆಗೊಂಡು, ಅವರ ಪ್ರಭಾವಕ್ಕೊಳಗಾಗಿ ಅದೇ ಹೋಲಿಕೆಯ ಕೆಲವು ವಚನಗಳನ್ನು ರಚಿಸಿರುವುದನ್ನು ನೋಡಬಹುದು.

**ii ಕುಮಾರ ಕಕ್ಕಯ್ಯನವರ ದೃಷ್ಟಿಯಲ್ಲಿ ಬಸವಾದಿ ಶರಣರು:**

ಕರ್ಮಠ ಪುರೋಹಿತಶಾಹಿ ಹುಟ್ಟು ಹಾಕಿದ ವರ್ಣಾಶ್ರಮ ಧರ್ಮದ ಅಂತ್ಯಜ ಕುಲದಲ್ಲಿ (ಡೋಹರ ಜನಾಂಗ) ಹುಟ್ಟಿ, ಅಸ್ಪೃಶ್ಯತೆಯ ನೋವು ಅನುಭವಿಸಿ. ಕಷ್ಟ-ತೊಂದರೆಗಳ ಮಧ್ಯದಲ್ಲಿಯೇ ತುಂಬಾ ಪ್ರಯತ್ನ-ಪರಿಶ್ರಮದಿಂದ ವಿದ್ಯೆಕಲಿತು, ಕ್ರಾಂತಿಕಾರಿ ವಿಚಾರವಾದಿ ಸಾಹಿತಿಯಾಗಿ ಹೊರಹೊಮ್ಮಿದವರು ಕುಮಾರ ಕಕ್ಕಯ್ಯ. ಪ್ರಪಂಚದ ಎಲ್ಲ ಧರ್ಮಗಳ ಅಧ್ಯಯನಗೈದು, ಪ್ರವಾದಿಗಳ ವಿಚಾರಧಾರೆಯನ್ನು ಅರಿತು, ಸ್ವತಂತ್ರ ಚಿಂತನದ ಮೂಲಕ, ಸ್ವಂತ ನಿರ್ಧಾರದಿಂದ ಬಸವಧರ್ಮ ದೀನ-ದಲಿತ-ಅಸ್ಪೃಶ್ಯರ ಸೊತ್ತು ಎಂದು ಮನಗುಂಡು, ಅದನ್ನು ಅಪ್ಪಿಕೊಂಡವರು. ಅಂತೆಯೇ ಅವರಲ್ಲಿ ಬಸವಭಕ್ತಿ ಹೊನಲಾಗಿ ಹರಿದಿದೆ. ಶರಣರ ಬಗ್ಗೆ ಅಪಾರ ಅಭಿಮಾನ ಅವರ ವಚನಗಳಲ್ಲಿ ವ್ಯಕ್ತವಾಗಿದೆ.

ಪುರೋಹಿತ ಪಂಡಿತರಲ್ಲಿ ಹೋಗಲಿಲ್ಲ
ಮಠಮಾನ್ಯ ಜಗದ್ಗುರುಗಳಲ್ಲಿ ಸುಳಿಯಲಿಲ್ಲ
ದೀನ ದಲಿತ ಜನಸಾಮಾನ್ಯರ ಬರಸೆಳೆದು

೨೧. ಶಿವಶರಣೆಯರ ವಚನ ಸಂಪುಟ- ಸಂ. ಡಾ॥ ವೀರಣ್ಣ ರಾಜೂರ ವ-೫೨೬
೨೨. ಕುಮಾರ ಕಕ್ಕಯ್ಯನ ವಚನಗಳು ಪು-೧೪೦ ವ-೫೪೧

ಮಾದಾರ ಚೆನ್ನಯ್ಯನ ಮನೆಯ ಮಗ ನಾನು
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರೆಲ್ಲ ಒಂದೇ ಎಂದ ಬಸವಂಗೆ
ಧರ್ಮ ತಳದಿಂದಲೇ ಕಟ್ಟಬೇಕಿತ್ತೆಂದ
ಕುಮಾರ ಕಕ್ಕಯ್ಯ[೨೩]

ಸನಾತನ ವೈದಿಕ ಧರ್ಮವು ತನ್ನ ಸಮಾಜೋ–ಧಾರ್ಮಿಕ ವ್ಯವಸ್ಥೆಯಲ್ಲಿ ಯಾರನ್ನು ದಲಿತ ಪಂಚಮ ವರ್ಣೀಯರೆಂದು ಹೊರಗಿಟ್ಟಿತ್ತೋ, ಅಂತಹ ಹೊಲೆಯ, ಮಾದಿಗ, ಡೋಹರ, ಸಮಗಾರ, ಚಾಂಡಾಲರನ್ನು ಬಸವಣ್ಣನವರು ಅಪ್ಪ–ಬೊಪ್ಪ ಎಂದು ಅಪ್ಪಿಕೊಂಡು, ಅವರಿಗೆ ಸಂಸ್ಕಾರವಿತ್ತು ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಎಲ್ಲರನ್ನೂ ಸಮಾನವಾಗಿ ಕಂಡು ಧರ್ಮವನ್ನು ಅಂತ್ಯಜರ ಉದ್ಧಾರಕ್ಕಾಗಿ (ತಳದಿಂದಲೇ)ಕಟ್ಟಬೇಕಾಯಿತೆಂದು ಅರಿತು, ದೀನದಲಿತರಿಗೆ ತಿಳಿಸುತ್ತಾರೆ.

ದಯವೇ ಧರ್ಮದ ಮೂಲವೆಂದ ಬಸವಂಗೆ
ಅಹಿಂಸೆ ಕರುಣೆ ಪ್ರೇಮ ಪ್ರತಿಪಾದಿಸಬೇಕಿತ್ತು.
ಕಾಯಕವೇ ಕೈಲಾಸವೆಂದು ಸಾರಿದ ಬಸವಂಗೆ
ಶೋಷಣೆರಹಿತ ಸ್ವಾವಲಂಬಿ ಸಮಾಜ ಕಟ್ಟಬೇಕಿತ್ತು.
ಕ್ಷೌರಿಕನನ್ನು ಕಾರ್ಯದರ್ಶಿಯನ್ನಾಗಿ ಮಾಡಿದ ಬಸವಂಗೆ
ಬಂಡೆಗಲ್ಲಾದ ಕಂದಾಚಾರ ಹೊಡೆದು ಓಡಿಸಬೇಕಿತ್ತು.
ಸ್ಪೃಶ್ಯ–ಅಸ್ಪೃಶ್ಯರಿಗೆ ಮದುವೆ ಮಾಡಿದ ಬಸವಂಗೆ
ಮಾನವ ಧರ್ಮ ಸ್ಥಾಪಿಸಬೇಕಿತ್ತೆಂದ
ಕುಮಾರ ಕಕ್ಕಯ್ಯ.[೨೪]

ಅಸ್ಪೃಶ್ಯತೆಯೆಂಬುದು ಮಾನವಕುಲಕ್ಕಂಟಿದ ಮಹಾ ಕಲಂಕ, ಇದೊಂದು ಅರ್ಬುದರೋಗವಿದ್ದಂತೆ ಎಂದು ಅರಿತ ಬಸವಣ್ಣನವರು, ಅಹಿಂಸೆ, ಕರುಣೆ, ಪ್ರೇಮದ ತಳಹದಿಯಲ್ಲಿ ಸ್ಪೃಶ್ಯ–ಅಸ್ಪೃಶ್ಯರಿಗೆ ಮದುವೆ ಮಾಡಿ, ಸಮಾನತೆಯ ಇಷ್ಟಲಿಂಗ ಪರಂಪರೆಯ ಲಿಂಗಾಯತವೆಂಬ ಮಾನವಧರ್ಮ ಸ್ಥಾಪಿಸಿದರು ಎಂದು ಕುಮಾರ ಕಕ್ಕಯ್ಯ ಗೌರವದಿಂದ ತಿಳಿಸುತ್ತಾರೆ. ಇಂತಹ ಬಸವಧರ್ಮದಲ್ಲಿ–

ಹೊಲೆಯರ ಶಿವನಾಗಮಯ್ಯ ಯೋಗಿಯೆನಿಸಿದರೆ
ಸತ್ಯಶರಣನೆನಿಸಿದ ಸಮಗಾರ ಹರಳಯ್ಯ.
ಮಾದಾರ ಚೆನ್ನಯ್ಯ ಕುಲಕ್ಕೆ ತಿಲಕನೆನಿಸಿದರೆ
ಗೋತ್ರ ಪುರುಷನೆಸಿದ ಡೋಹಾರ ಕಕ್ಕಯ್ಯ.
ಮಾನವಕುಲವೆಲ್ಲ ಒಂದೇ ಎಂದ ಬಸವಧರ್ಮ

---

೨೩. –ಅದೇ– ಪು–೧೯೯ ವ–೭೬೮
೨೪. ಕುಮಾರ ಕಕ್ಕಯ್ಯನ ವಚನಗಳು ಪು–೨೦೧ ವ–೭೭೬

ವಿಶ್ವಧರ್ಮವೇ ಹೊರತು, ಜಾತಿ ಅಲ್ಲೆಂದ
ಕುಮಾರ ಕಕ್ಕಯ್ಯ.[೨೫]

ಬಸವಧರ್ಮವನ್ನು ಅಪ್ಪಿಕೊಂಡು ಅಂದಿನ ದಲಿತರೆಲ್ಲ-ಜ್ಯೋತಿಮುಟ್ಟಿದ ಬತ್ತಿಗಳೆಲ್ಲ ಜ್ಯೋತಿಗಳೇ ಆಗುವಂತೆ, ಎಲ್ಲರೂ ಸ್ವಯಂಜ್ಯೋತಿಗಳಾಗಿ ಬೆಳಗಿದರು. ಅಂತೆಂಯೇ ಭಾರತದ ಧರ್ಮೇತಿಹಾಸದಲ್ಲಿ ಬಸವಣ್ಣನವರು ಶ್ರೇಷ್ಠರೆಂದು ಅರುಹುತ್ತಾರೆ-

ಶಿವ ಮಾಡಿದ ಉನ್ಮತ್ತರ ಉಚ್ಚಾಟ,
ಇಂದ್ರ ಮಾಡಿದ ದ್ರಾವಿಡರ ನಿರ್ನಾಮ,
ವಿಷ್ಣು ಮಾಡಿದ ವೈರಿಗಳ ಸಂಹಾರ,
ಕೃಷ್ಣಮಾಡಿದ ದುಷ್ಟರ ಮರ್ದನ,
ಆದರೆ, ದುಷ್ಟರನು ಶಿಷ್ಟರನ್ನಾಗಿ ಮಾಡಿದ
ಪತಿತರನ್ನು ಪಾವನರನ್ನಾಗಿ ಮಾಡಿದ ಬಸವಣ್ಣ
ಇವರೆಲ್ಲರಿಗಿಂತ ಬಹು ಶ್ರೇಷ್ಠನೆಂದ ಕುಮಾರ ಕಕ್ಕಯ್ಯ.[೨೬]

ಭಾರತದ ಪ್ರಾಚೀನ ಇತಿಹಾಸದಲ್ಲಿ ಶಿವ, ಇಂದ್ರ, ವಿಷ್ಣು, ಕೃಷ್ಣ ಇವರೆಲ್ಲ ಉನ್ಮತ್ತರ, ದ್ರಾವಿಡರ, ವೈರಿಗಳ, ದುಷ್ಟರ ನಾಶಮಾಡಿದರೆ, ಬಸವಣ್ಣನವರು ದುಷ್ಟರ ಹೃದಯ ಪರಿವರ್ತನೆ ಮಾಡಿ, ಪತಿತರನ್ನು ಪಾವನರನ್ನಾಗಿ ಮಾಡಿದರೆಂದು ತಿಳಿಸುತ್ತಾ, ಅವರೆಲ್ಲರಿಗಿಂತ ಬಸವಣ್ಣನವರು ಮಹಾನ್ ವ್ಯಕ್ತಿಗಳೆಂದು ಕುಮಾರ ಕಕ್ಕಯ್ಯ ತಿಳಿಸುತ್ತಾರೆ-

ಬಸವಾದಿ ಶರಣರು ಭಾವನಾ ಜೀವಿಗಳಲ್ಲ,
ವಿಚಾರವಾದಿಗಳು.
ವಿರಕ್ತ ಸನ್ಯಾಸಿ ಕಾವಿಧಾರಿಗಳಲ್ಲ,
ಸಂಸಾರಿಗಳು.
ತರ್ಕ ಅಂತೆ ಕಂತೆಗಳ ಪ್ರತಿಪಾದಕರಲ್ಲ,
ತತ್ವಸಿದ್ಧಾಂತಿಗಳು.
ವರ್ಣಾಶ್ರಮ ಕುಲ ಗೋತ್ರ ಜಾತಿವಾದಿಗಳಲ್ಲ
ಜಾತ್ಯಾತೀತರು.
ಶಿಷ್ಟಾಚಾರಿ ಪಾರಂಪರಿಕ ಸಂಪ್ರದಾಯಿಗಳಲ್ಲ
ಕ್ರಾಂತಿಕಾರಿಗಳು
ಅಯ್ಯಾ, ಅವರು ಮಾತಿನ ಮಲ್ಲರಲ್ಲ
ಕೃತಿಯ ಭಂಟರೆಂದ ಕುಮಾರ ಕಕ್ಕಯ್ಯ.[೨೭]

---

೨೫. -ಅದೇ- ಪು-೨೦೦ ವ-೭೭೦
೨೬. -ಅದೇ- ಪು-೧೯೯ ವ-೭೬೬
೨೭. ಕುಮಾರ ಕಕ್ಕಯ್ಯನ ವಚನಗಳು ಪು-೨೦೫ ವ-೭೮೭

ಬಸವಾದಿ ಶರಣರು ವಿಚಾರವಾದಿಗಳು, ಸಂಸಾರಿಗಳು, ತತ್ವಸಿದ್ಧಾಂತಿಗಳು, ಜಾತ್ಯಾತೀತರು, ಕ್ರಾಂತಿಕಾರಿಗಳು, ಕೃತಿಯ ಭಂಟರು ಎಂದು ಮನೋಜ್ಞವಾಗಿ ತಿಳಿಸುತ್ತಾರೆ.

ಜಾಗತಿಕ ಪ್ರವಾದಿಗಳನ್ನು ತುಲನಾತ್ಮಕವಾಗಿ ಅಧ್ಯಯನಮಾಡಿ ಬಸವಣ್ಣನವರ ಹಿರಿಮೆಯನ್ನು ಅರುಹುತ್ತಾರೆ–

ಒಬ್ಬ ಧರ್ಮಪ್ರವಾದಿ ತಾನೇ ದೇವಾದಿದೇವನೆಂದೊಡೆ
ಇನ್ನೊಬ್ಬ ಧರ್ಮಪ್ರವಾದಿ ತಾನೊಬ್ಬ ದೇವಪುತ್ರನೆಂದ
ಮತ್ತೊಬ್ಬ ಧರ್ಮಪ್ರವಾದಿ ತಾನೊಬ್ಬ ದೇವದೂತನೆಂದೊಡೆ
ಮಗುದೊಬ್ಬ ಧರ್ಮಪ್ರವಾದಿ ತಾನೊಬ್ಬ ಅವತಾರಿಯೆಂದ
ಇಂತೀ ಧರ್ಮಪ್ರವಾದಿಗಳೆಲ್ಲರೂ ತಾವು ವಿಶಿಷ್ಟರೆಂದು
ಹೇಳಿಕೊಳ್ಳುವಾಗ, ಎನಗಿಂತ ಕಿರಿಯರಿಲ್ಲೆಂದ ಬಸವಣ್ಣ
ಇವರೆಲ್ಲರಿಗಿಂತ ಬಹಳೇ ಹಿರಿಯನೆಂದ ಕುಮಾರ ಕಕ್ಕಯ್ಯ.[೨೮]

ಈ ಪ್ರಪಂಚದ ಅಜ್ಞಾನಿಗಳ, ಮೂಢರ ಉದ್ಧಾರಮಾಡಲೋಸುಗ ಒಬ್ಬ ಪ್ರವಾದಿಯು ನಾನೇ ಭಗವಂತ ಎಂದು, ಇನ್ನೊಬ್ಬ ಪ್ರವಾದಿಯು ನಾನು ದೇವರ ಮಗ ಎಂದು, ಮತ್ತೊಬ್ಬ ಪ್ರವಾದಿಯು ತನನ್ನು ದೇವರು ಕಳಿಸಿದ ದೇವದೂತ ಎಂದು, ಮಗುದೊಬ್ಬ ಪ್ರವಾದಿ ತಾನೊಬ್ಬ ದೇವರ ಅವತಾರಿ ಎಂದು, ಹೇಳಿಕೊಂಡರು. ಆದರೆ ಬಸವಣ್ಣ ಇವರೆಲ್ಲರಿಗಿಂತ ಭಿನ್ನವಾಗಿ ಮರ್ತ್ಯಲೋಕದ ಮಾನವರ ಉದ್ಧಾರಕ್ಕಾಗಿ ತಾನೊಬ್ಬ ಕಿಂಕರ, ಕಿರಿಯ, ನಿಮ್ಮ ತೊತ್ತು ಎಂದು ಹೇಳಿ, ಅವರ ಸೇವೆ ಮಾಡಿ ಉದ್ಧರಿಸಿದವನಾದ್ದರಿಂದ, ಬಸವಣ್ಣನವರು ಎಲ್ಲರಿಗಿಂತ 'ಹಿರಿಯ'ರೆಂದು ಕುಮಾರ ಕಕ್ಕಯ್ಯ ಸ್ಪಷ್ಟಪಡಿಸುತ್ತಾರೆ.

ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದಲ್ಲಿ ೭೭೦ ಅಮರಗಣಂಗಳೆನಿಸಿದ ಶರಣರು ಅನುಭಾವಿಗಳಾಗಿ, ಆದರ್ಶವಾದರು. ಅಂತೆಯೇ ಕುಮಾರ ಕಕ್ಕಯ್ಯನವರರು ಬಸವಾದಿ ಶರಣರಂತೆ ನಾವೆಲ್ಲರೂ ಸಾಧನೆಗೈಯಬೇಕೆಂದು ತಿಳಿಸುತ್ತಾರೆ–

ಭಕ್ತನಾದೊಡೆ ಹರಳಯ್ಯನಂತಾಗಬೇಕು.
ಮಾಹೇಶನಾದೊಡೆ ಚೆನ್ನಯ್ಯನಂತಾಗಬೇಕು.
ಪ್ರಸಾದಿಯಾದೊಡೆ ಕಕ್ಕಯ್ಯನಂತಾಗಬೇಕು.
ಪ್ರಾಣಲಿಂಗಿಯಾದೊಡೆ ಚಂದಯ್ಯನಂತಾಗಬೇಕು.
ಶರಣನಾದೊಡೆ ಸಿದ್ಧರಾಮನಂತಾಗಬೇಕು.
ಐಕ್ಯನಾದೊಡೆ ಅಕ್ಕಮಹಾದೇವಿಯಂತಾಗಬೇಕು.
ಗಣಾಚಾರಿಯಾದೊಡೆ ಮಾಚಿದೇವನಂತಾಗಬೇಕು.

---

೨೮. –ಅದೇ– ಪು– ೨೦೩ ವ–೭೮೧

ಅನುಭಾವಿಯಾದೊಡೆ ಚೆನ್ನಬಸವಣ್ಣನಂತಾಗಬೇಕು.
ಜಂಗಮನಾದೊಡೆ ಅಲ್ಲಮ ಪ್ರಭುವಿನಂತಾಗಬೇಕೆಂದ
ಕುಮಾರ ಕಕ್ಕಯ್ಯ.[೨೯]

ಬಸವ ಭಕ್ತರಿಗೆ ಬಸವಣ್ಣನವರೆಂದರೆ ಪ್ರಾಣ, ಉಸಿರು, ಜೀವ, ಆತ್ಮ, ಪರಮಾತ್ಮ ಎಲ್ಲವೂ ಆಗಿದ್ದರು. ಅಂತೆಯೇ ಭಕ್ತಿ-ಶ್ರದ್ಧೆಯಿಂದ ಸ್ತುತಿಸುತ್ತಾರೆ ಇದಕ್ಕಿಂತ ಮಿಗಿಲಾಗಿ ಬಸವಭಕ್ತರು ಬಸವಾಚಾರ ಆಚರಿಸಬೇಕೆಂದು ಹೇಳುತ್ತಾರೆ ಕುಮಾರ ಕಕ್ಕಯ್ಯ-

ಬಸವಾ ಬಸವಾ ಎಂಬುದೇ ಮಂತ್ರ
ಬಸವಾ ಬಸವಾ ಎಂಬುದೇ ತಂತ್ರ
ಬಸವಾ ಬಸವಾ ಎಂಬುದೇ ದೈವ
ಬಸವಾ ಬಸವಾ ಎಂಬುದೇ ಧರ್ಮ
ಹೀಗೆ ಬಹಳ ಹೊಗಳಿ ಭಜಿಸುವದಕ್ಕಿಂತ
ಸ್ವಲ್ಪ ಬಸವಾಚಾರ ಬಹುಲೇಸೆಂದ
ಕುಮಾರ ಕಕ್ಕಯ್ಯ.[೩೦]

ಕುಮಾರ ಕಕ್ಕಯ್ಯನವರ ಬಸವಭಕ್ತಿ ಮೂಢಭಕ್ತಿಯಲ್ಲ.ಅದು ವೈಚಾರಿಕ ಪ್ರಜ್ಞೆಯ ಭಕ್ತಿ. ಮಾತಿಗಿಂತ ಕೃತಿಲೇಸು ಎಂದು ಬಸವಾಚಾರ ಆಚರಿಸಿದವರು.

**iii) ಆಧುನಿಕ ವಚನಕಾರರಲ್ಲಿ ಕುಮಾರ ಕಕ್ಕಯ್ಯನ ಸ್ಥಾನ-ಮಾನ :**

ಕನ್ನಡ ಸಾಹಿತ್ಯದ ಹೃದಯವೆಂಬಂತೆ ಮೂಡಿಬಂದಿರುವ ವಚನ ಸಾಹಿತ್ಯವು ಶತಶತಮಾನಗಳು ಗತಿಸಿದರೂ ಅದು ನಿತ್ಯನೂತನ, ಚಿರನೂತನವಾಗಿದೆ. "ವಚನ ಸಾಹಿತ್ಯವು ಕನ್ನಡದ ವಿಶಿಷ್ಟ ಸಾಧನೆಗಳಲ್ಲೊಂದು. ಅದು ಬಸವಣ್ಣ, ಅಲ್ಲಮ, ಅಕ್ಕಮಹಾದೇವಿಯವರಂಥ ಕೆಲವರ ವೈಯಕ್ತಿಕ ಸಿದ್ಧಿಯಾಗಿದ್ದಂತೆ ಆ ಶತಮಾನದ ಸಿದ್ಧಿಯೂ ಆಗಿದೆ, ಭಾಷೆ, ಉಕ್ತಿ ವಿಧಾನ, ಅಂಕಿತದ ಬಳಕೆ, ಅನುಭವಗಳ ಸಾಮ್ಯ ಹಾಗೂ ಸಮಾನತೆ, ಇವೆಲ್ಲಕ್ಕಿಂತ ಮುಖ್ಯವಾಗಿ ಈ ಎಲ್ಲವುಗಳನ್ನು ಮೈಗೂಡಿಸಿಕೊಂಡು ಅವು ಸಾಧಿಸಿರುವ ಅಂಶಗಳು-ಇವುಗಳಲ್ಲಿ ವಚನಸಾಹಿತ್ಯ ಒಂದು ಸಮಷ್ಟಿ ಸಾಧನೆ ಯಾಗಿ ತೋರುತ್ತದೆ...... ವಚನ ಸಾಹಿತ್ಯದ ಮತ್ತೊಂದು ವೈಶಿಷ್ಟ್ಯ ಬದುಕು ಭಾಷೆಗಳೊಂದಿಗಿರುವ ಅದರ ಸಾವಯವ ಸಂಬಂಧ. ಜಾನಪದ ಸಾಹಿತ್ಯವನ್ನು ಬಿಟ್ಟರೆ ಬಹುಶ: ಮತ್ತಾವ ಸಾಹಿತ್ಯವೂ ಬದುಕು ಮತ್ತು ಭಾಷೆಗಳೊಂದಿಗೆ ಇಷ್ಟೊಂದು ನಿಕಟ ಸಂಬಂಧವನ್ನು ಇರಿಸಿಕೊಂಡಿದ್ದಂತೆ ತೋರುವದಿಲ್ಲ. ಅಂದರೆ ಜನಪದ ಸಾಹಿತ್ಯಕ್ಕಿಂತಲೂ ಹೆಚ್ಚು ಸತ್ವಶಾಲಿಯಾದ ಸಂಬಂಧ ವಚನಗಳಲ್ಲಿದೆ. ಭಾಷಾ ವಿಷಯದಲ್ಲಿ ಅದರಿಂದಾಗಿಯೇ ವಚನಸಾಹಿತ್ಯ

---

೨೯. ಕುಮಾರ ಕಕ್ಕಯ್ಯನ ವಚನಗಳು ಪು-೨೦೪ ವ-೭೮೬
೩೦ -ಅದೇ- ಪು-೨೦೫ ವ-೭೮೮

ಕನ್ನಡ ಭಾಷೆಯ ಸಾಹಿತ್ಯಕ್ಕೂ ಸತ್ವಕ್ಕೂ ಜೀವದಾನ ಮಾಡಿದೆ"[೩೧] ಎಂಬ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರ ಮಾತುಗಳಲ್ಲಿ ಉತ್ಪ್ರೇಕ್ಷೆಯಿಲ್ಲ.

ವಚನಸಾಹಿತ್ಯವನ್ನು ಕಾಲಪ್ರವಾಹದ ದೃಷ್ಟಿಯಿಂದ ಮೂರು ಹಂತಗಳಲ್ಲಿ ಗುರುತಿಸಲಾಗುತ್ತದೆ.

೧. ಹನ್ನೆರಡನೆಯ ಶತಮಾನದ ವಚನ ಚಳವಳಿಯ ಕಾಲ.
೨. ಹದಿನೈದು–ಹದಿನಾರನೇ ಶತಮಾನದ ವಚನಸಾಹಿತ್ಯ ಪುನರುಜ್ಜೀವನ ಕಾಲ.
೩. ಇಪ್ಪತ್ತನೇ ಶತಮಾನದ ಆಧುನಿಕ ವಚನಸಾಹಿತ್ಯದ ಹೊಸ ಪ್ರಯೋಗಕಾಲ.

"ಈ ಮೂರೂ ಕಾಲದಲ್ಲೂ ವಚನ ಸಾಹಿತ್ಯದ ಸೃಷ್ಟಿ ಒಂದೇ ರೀತಿಯಾಗಿಲ್ಲ. ಮೂಲ ದ್ರವ್ಯ ಒಂದೇ ಆಗಿದ್ದರೂ ಕಾಲ, ಸನ್ನಿವೇಶ ಹಾಗೂ ವ್ಯಕ್ತಿಯ ಅಭಿವ್ಯಕ್ತಿಗನುಣವಾಗಿ ವೈವಿಧ್ಯಮಯವಾಗಿ ಕಾಣುತ್ತದೆ."[೩೨]

೧೨ನೇ ಶತಮಾನದಲ್ಲಿ ಕಲ್ಯಾಣದ ಅನುಭವ ಮಂಟಪದ ಬಸವಾದಿ ಶರಣರ ಜೀವನಾನುಭವ, ಅಂದಿನ ಸಾಮಾಜಿಕ, ಧಾರ್ಮಿಕ ಕರ್ಮಠ ಸಂಪ್ರದಾಯ, ಜಾತಿವ್ಯವಸ್ಥೆಯ ವಿರುದ್ಧ ಹೋರಾಟದ, ಸಂಘರ್ಷದ ಹಿನ್ನೆಲೆಯಲ್ಲಿ ಮೂಡಿ ಬಂದ ಕ್ರಾಂತಿಕಾರಿ ವಚನಗಳು–೨೦ನೇ ಶತಮಾನದವರೆಗೂ ಪ್ರಭಾವ–ಪ್ರೇರಣೆಯಾಗುತ್ತಲೇ ಬಂದಿವೆ, ೨೧ನೆಯ ಶತಮಾನಕ್ಕೆ ಮುಂದುವರೆದಿವೆ. "ಹೊಸಗನ್ನಡ ನವೋದಯ ಸಂದರ್ಭದಿಂದ ಮೊದಲ್ಗೊಂಡು ತೀರ ಇತ್ತೀಚಿನವರೆಗೆ ರಚನೆಯಾದ, ರಚನೆಯಾಗುತ್ತಿರುವ ವಚನಗಳನ್ನು ನಾವು ಆಧುನಿಕ ವಚನಗಳೆಂದು ಕರೆಯಬಹುದು"[೩೩] ಎಂದು ಡಾ॥ ಪ್ರೀತಿ ಶುಭಚಂದ್ರ ಹೇಳುತ್ತಾರೆ.

ಭಾರತಕ್ಕೆ ಬ್ರಿಟೀಶರು ಬಂದು, ಇಲ್ಲಿ ತಮ್ಮ ಆಡಳಿತ ಪ್ರಾರಂಭಿಸ ತೊಡಗಿದಂತೆಯೇ ಕ್ರಿಶ್ಚಿಯನ್ ಮಿಷನರಿಗಳು, ಪಾದ್ರಿಗಳು, ಬ್ರಿಟೀಶರ ಅಧಿಕಾರಿಗಳು ಹಾಗೂ ಇಲ್ಲಿಯ ವಿದ್ವಾಂಸರು ಕೂಡಿ ಕನ್ನಡ ಭಾಷೆ, ಸಾಹಿತ್ಯ, ವ್ಯಾಕರಣ, ನಿಘಂಟುಗಳ ಕ್ಷೇತ್ರಗಳಲ್ಲಿ ಕಾರ್ಯಮಾಡತೊಡಗಿದರು. ಆಂಗ್ಲ ಭಾಷೆಯು ಶಿಕ್ಷಣರಂಗ ಪ್ರವೇಶಿಸಿದ ನಂತರ, ಪಾಶ್ಚಿಮಾತ್ಯರ ಪ್ರಭಾವದಿಂದಾಗಿ, ಹೊಸ ಗಾಳಿ ಬೀಸತೊಡಗಿತು. ಇದರ ಪರಿಣಾಮವಾಗಿ 'ನವೋದಯ ಯುಗ' ಪ್ರಾರಂಭವಾಯಿತು. "ಆರ್ಷೇಯ ಸಂಸ್ಕೃತಿಯ ಪರಂಪರೆಯೊಂದಿಗೆ ರಾಷ್ಟ್ರೀಯತೆ, ಪ್ರಾದೇಶಿಕತೆಗಳೆಂಬ ಪರಿಕಲ್ಪನೆಗಳು ಸಂವೇದನೆಯ ಒಂದು ಅಂಶವಾದರೆ, ಇಂಗ್ಲೀಷ ಭಾಷೆಯ ಸಂಪರ್ಕದಿಂದ ಮೂಡಿದ ಹೊಸ ಅನುಭವ ವೈಚಾರಿಕತೆ, ಇತಿಹಾಸ ಪ್ರಜ್ಞೆ ಮಾನವ ಕೇಂದ್ರಿತ ವ್ಯಕ್ತೀಕರಣ ಇವು ಸಂವೇದನೆಯ ಮತ್ತೊಂದು ಅಂಶವಾಗುತ್ತವೆ."[೩೪]

---

೩೧. ವಚನಸಾಹಿತ್ಯ : ಒಂದು ಇಣುಕು ನೋಟ – ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಪು–೯
೩೨. ಸಮಾಯೋಗ – ಷಣ್ಮುಖಯ್ಯಾ ಅಕ್ಕೂರಮಠ ಪು–೩೪
೩೩. ಇಪ್ಪತ್ತನೇ ಶತಮಾನದ ವಚನಸಾಹಿತ್ಯ – ಒಂದು ಅಧ್ಯಯನ – ಡಾ॥ ಪ್ರೀತಿ ಶುಭಚಂದ್ರ, ಪು–೧೧
೩೪. ಇಪ್ಪತ್ತನೇ ಶತಮಾನದ ವಚನ ಸಾಹಿತ್ಯ–ಒಂದು ಆಧ್ಯಯನ : ಡಾ॥ ಪ್ರೀತಿ ಶುಭಚಂದ್ರ ಪು–೨೬

೧೨ ನೇ ಶತಮಾನದ ಶರಣರ ಸಮಾಜೋ-ಧಾರ್ಮಿಕ ಕ್ರಾಂತಿಯ ಹೋರಾಟ, ಕಲ್ಯಾಣಕ್ರಾಂತಿ ಘಟಿಸಿದ ನಂತರ ಸುಮಾರು ೩೦೦ ವರುಷಗಳ ಕಾಲ ಗುಪ್ತವಾಗಿ, ಲುಪ್ತವಾಗಿ ಹೋಯಿತು. ಇದನ್ನು ಪುನರುಜ್ಜೀವನ ಗೊಳಿಸಬೇಕೆಂಬ ಉದ್ದೇಶದಿಂದ ೧೫ ನೇ ಶತಮಾನದಲ್ಲಿ ವಿಜಯನಗರದ ಅಂದರೆ ಹಂಪೆಯ ಲಕ್ಕಣದಂಡೇಶನ ಕಾಲಕ್ಕೆ ನೂರೊಂದು ವಿರಕ್ತರು ಸಾಂಘಿಕವಾಗಿ ಚರಜಂಗಮವಾಗಿ ನಾಡನ್ನು ಸುತ್ತಿ ಅಲ್ಲಲ್ಲಿ ವಿರಕ್ತಮಠಗಳನ್ನು ಸ್ಥಾಪಿಸಿ, ಭಕ್ತ ಜಾಗೃತಿಗೆ ಕೈಹಾಕಿದರು. ತೋಂಟದ ಸಿದ್ಧಲಿಂಗಶ್ವರರು, ಸ್ವತಂತ್ರ ಸಿದ್ಧಲಿಂಗೇಶ್ವರರು ವಚನಕಾರರಾಗಿ ಸ್ವಾನುಭಾವದ ವಚನ ರಚನೆ ಪ್ರಾರಂಬಿಸಿದರು. ೧೭ನೇ ಶತಮಾನದಲ್ಲಿ ಷಣ್ಮುಖ ಶಿವಯೋಗಿಗಳು ವಚನರಚನೆಗೆ ತೊಡಗಿದರು. ಈ ಮಧ್ಯದಲ್ಲಿ ಶೂನ್ಯಸಂಪಾದನೆಗಳು, ಏಕೋತ್ತರ ಶತಸ್ಥಲ, ಲಿಂಗಲೀಲಾ ವಿಲಾಸ ಚಾರಿತ್ರ್ಯ ಮುಂತಾದ ವಚನ ಸಂಕಲನ, ಸಂಪಾದನೆಯ ಗ್ರಂಥಗಳು ರಚನೆಗೊಂಡವು. ಅನಂತರ ೧೯ನೇ ಶತಮಾನದ ಕೊನೆಯಲ್ಲಿ ಹಾಗೂ ೨೦ನೇ ಶತಮಾನದ ಪ್ರಾರಂಭದಲ್ಲಿ ಆಧುನಿಕರು ವಚನಗಳ ರಚನೆಗೆ ಪ್ರಾರಂಭಿಸಿದರು. ಇವರಿಗೆ "ಹನ್ನೆರಡನೆಯ ಶತಮಾನದ ವಚಸಾಹಿತ್ಯ ಸ್ಫೂರ್ತಿಯ ಕೇಂದ್ರವಾಗಿದೆ. ತಮ್ಮ ಹೊಸ ಆಲೋಚನೆ ಪ್ರಯೋಗಗಳಿಗೆ ಮೌಲಿಕ ಸೂಚನೆಗಳು ಅಲ್ಲಿಂದ ದೊರಕುತ್ತವೆಯೆಂದು ಹೊಸ ಕವಿಗಳು ಭಾವಿಸುತ್ತಾರೆ. ಅಲ್ಲಿಂದ ಲಾಭವನ್ನೂ ಪಡೆದಿದ್ದಾರೆ, ಪಡೆಯುತ್ತಿದ್ದಾರೆ. ಬಸವಣ್ಣ ಮುಂತಾದವರು ಆಧುನಿಕರಾದ ನಮಗೆ ಇಂದಿಗೂ, ಇಂದಿನ ಹೊಸ ಅಭಿರುಚಿಗೂ ಪ್ರಿಯರಾಗಿರುವಂತೆ ಅವರ ವಚನಗಳು ಎಂದೆಂದಿಗೂ ಹೊಸದಾಗಿಯೇ ಉಳಿಯುತ್ತವೆ."[೩೫]

ಕನ್ನಡದಲ್ಲಿ ನವೋದಯ ಯುಗದ ಪ್ರಾರಂಭದೊಂದಿಗೆಯೇ ಆಧುನಿಕ ಕವಿ, ಸಾಹಿತಿಗಳು ನೂತನ ವಚನಗಳ ರಚನೆಗೆ ತೊಡಗಿದರು. ಆಧುನಿಕ ವಚನಕಾರರಲ್ಲಿ ಲಿಂಗಾಯತ ಧರ್ಮಿಯ ವಚನಕಾರರು ಹಾಗೂ ಲಿಂಗಾಯತೇತರ ವಚನಕಾರರೂ ಇದ್ದಾರೆ.

ಲಿಂಗಾಯತ ಧರ್ಮದ ಪರಂಪರೆಯ ವಚನಕಾರರು ಇಷ್ಟಲಿಂಗನಿಷ್ಠೆ, ಅರಿವು-ಆಚಾರ-ಅನುಭಾವದ ತಳಹದಿಯ ಮೇಲೆ ಸಮಾಜೋ-ಧಾರ್ಮಿಕ, ವೈಚಾರಿಕ-ವೈಜ್ಞಾನಿಕ ಅಂಶಗಳೊಂದಿಗೆ ಸಾಹಿತ್ಯ ರಚನೆಗೆ ತೊಡಗಿಸಿಕೊಂಡರೆ, ಲಿಂಗಾಯತೇತರ ವಚನಕಾರರು ಬಸವಾದಿ ಶರಣರ ವಚನಶೈಲಿಯನ್ನು ಅಂಗವಿಸಿಕೊಂಡು, ಕೇವಲ ಲೌಕಿಕ ಜೀವನದ ಸಾಧನೆ, ಲೋಕಾನುಭವಗಳ ಅಭಿವ್ಯಕ್ತಿಗಾಗಿ ವಚನರಚನೆಗೆ ತೊಡಗಿಸಿಕೊಂಡರು.

೧೮೮೬ ರಲ್ಲಿ ಜನಿಸಿದ್ದ ಹರ್ಡೇಕರ ಮಂಜಪ್ಪನವರು ೧೯೧೩ರಲ್ಲಿ ನಾಡಿನಲ್ಲಿ ಪ್ರಥಮತಃ ಬಸವ ಜಯಂತಿ ಪ್ರಾರಂಭಿಸಿ, ಶಿವಾನುಭವ ಸಂಘ-ಸಂಸ್ಥೆಗಳನ್ನು, ಬಸವ ಸೇವಾದಳಗಳನ್ನು ಪ್ರಾರಂಭಿಸಿ ಶರಣಸಾಹಿತ್ಯ ರಚನೆಗೆ,

---

೩೫. ವಚನಸಾಹಿತ್ಯ – ಡಾ॥ ಎಂ. ಚಿದಾನಂದ ಮೂರ್ತಿ ಪು-೨೫೫.

ವಚನ ಪ್ರವಚನಕ್ಕೆ ತೊಡಗಿಸಿಕೊಂಡರು. ಅವರು ಬರೆದ 'ಜನಸೇವಕನ ವಚನಗಳು' ೨೦ ನೇ ಶತಮಾನದ ಮೊದಲ ಆಧುನಿಕ ವಚನಗಳು ಹಾಗೂ ಹರ್ಡೇಕರ ಮಂಜಪ್ಪನವರೇ ಮೊದಲ ಆಧುನಿಕ ವಚನಕಾರರು ಎಂದು ಡಾ॥ ಸಿದ್ಧಯ್ಯ ಪುರಾಣಿಕರು, ಪ್ರೊ. ಮಾಣಿಕರಾವ ಧನಶ್ರೀ ಹಾಗೂ ಎಚ್.ಕಾಶೀನಾಥರೆಡ್ಡಿ ಅಭಿಪ್ರಾಯ ಪಡುತ್ತಾರೆ.[೩೬]

ಅಧ್ಯಯನದ ದೃಷ್ಟಿಯಿಂದ ಲಿಂಗಾಯತ ಹಾಗೂ ಲಿಂಗಾಯತೇತರ ಆಧುನಿಕ ವಚನಕಾರರೆಂದು ವಿಭಜಿಸಲಾಗಿದೆಯೇ ಹೊರತು, ಸಾಹಿತ್ಯದ ದೃಷ್ಟೀಯಿಂದ ಅಲ್ಲವೆಂಬುದನ್ನು ಅರಿಯಬೇಕು.

ಕರ್ನಾಟಕದ ಗಾಂಧಿ ಎಂದೇ ಖ್ಯಾತರಾದ ಹರ್ಡೇಕರ ಮಂಜಪ್ಪನವರು, ಜೀರಗೆ ಕಟ್ಟಿ ಬಸವಪ್ಪ, ಡಾ॥ ಜ.ಚ.ನಿ, ಡಾ॥ ಸಿದ್ಧಯ್ಯ ಪುರಾಣಿಕ, ಡಾ॥ ಮಹಾದೇವ ಬಣಕಾರ ಶ್ರೀ ಕುಮಾರ ಕಕ್ಕಯ್ಯ ಶ್ರೀ ಬ.ಗಿ. ಯಲ್ಲಟ್ಟಿ, ಶ್ರೀ ಜೋಳದರಾಶೀ ದೊಡ್ಡನಗೌಡ, ಶಿವಕವಿ ಸಂಗಮೇಶ ಹೊಸಮನಿ, ಅಂಬಿಗರ ಕುಮಾರ ಚೌಡಯ್ಯ, ಶ್ರೀ ಸಿಂಪಿಲಿಂಗಣ್ಣ, ಶ್ರೀ ಮೂಜಗಂ, ಶ್ರೀ ಶಿವಾನಂದ ಸ್ವಾಮಿಗಳು ಹುಲಸೂರ, ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಸಾಣೆಹಳ್ಳಿ, ಶ್ರೀ ಮುರುಘಾ ಶೀವಮೂರ್ತಿ ಶರಣರು ಚಿತ್ರದುರ್ಗ, ಪ್ರೊ. ಸಿದ್ದಣ್ಣ ಲಂಗೋಟಿ ರಾಮದುರ್ಗ, ಶ್ರೀ ಚೆನ್ನಬಸವ ಸ್ವಾಮಿಗಳು ಅಥಣಿ, ಶ್ರೀ ಮನೋಹರ ಮೈದರಗಿ ಹುಬ್ಬಳ್ಳಿ, ಶ್ರೀಮತಿ ಗಂಗಮ್ಮ ಹೊಸಮನಿ, ಶ್ರೀಮತಿ ಶಿವಲಿಂಗಮ್ಮ ಕಟ್ಟಿ, ಶ್ರೀ ನಾಚೆ ಶ್ರೀ ಶೇಖರಪ್ಪ ಹೂಲಗೇರಿ, ಶ್ರೀ ಮಾತೆ ಮಹಾದೇವಿ, ಶ್ರೀ ಸಂಗಮೇಶ ಹಂಡಿಗಿ, ಶ್ರೀ ಅನ್ನದಾನಯ್ಯ ಪುರಾಣಿಕ ಮುಂತಾದ ಇನ್ನೂರಕ್ಕೂ ಹೆಚ್ಚು ಆಧುನಿಕ ವಚನಕಾರರು ಲಿಂಗಾಯತ ಧರ್ಮೀಯ ಸಂಸ್ಕಾರದ ಹಿನ್ನೆಲೆಯುಳ್ಳವರು ಇದ್ದಾರೆ.

ಲಿಂಗಾಯತೇತರರಾದ ಡಾ॥ ದ.ರಾ. ಬೇಂದ್ರೆ, ಶ್ರೀ ಎಸ್.ವಿ ರಂಗಣ್ಣ, ಶ್ರೀ ಎಸ್.ವಿ. ಪರಮೇಶ್ವರ ಭಟ್ಟ, ಶ್ರೀ ಕೆ.ವಿ. ಪುಟ್ಟಪ್ಪ, ಶ್ರೀಮತಿ ಕಮಲಾ ಹಂಪನಾ. ಶ್ರೀ ರಂ.ರಾ. ದಿವಾಕರ, ಶ್ರೀ ಪ್ರಹ್ಲಾದರಾವ, ಶ್ರೀ ಬೆಟಗೇರಿ ಕೃಷ್ಣಶರ್ಮ, ಶ್ರೀ ಕೆ.ಭೈರವಮೂರ್ತಿ, ಶ್ರೀ ಸಿ.ಪಿ.ಕೆ, ಶ್ರೀ ಸುಜನಾ, ಶ್ರೀ ವೈ.ವಿ ಪಾರ್ಶ್ವನಾಥ ಮುಂತಾದ ಹತ್ತಾರು ಜನ ಹಿರಿಯರು ವಚನರಚನೆ ಮಾಡಿದ್ದಾರೆ.

ಆಧುನಿಕ ವಚನಕಾರರಾದ ಕುಮಾರ ಕಕ್ಕಯ್ಯ ಪೋಳ ಅವರ ಹಿರಿಯ ಸಮಕಾಲೀನರಾದ ಹಾಗೂ ಸಮಕಾಲೀನರಾದ, ಶ್ರೀ ಹರ್ಡೇಕರ ಮಂಜಪ್ಪ, ಶ್ರೀ ಜಚನಿ, ಶ್ರೀ ಸಿದ್ಧಯ್ಯ ಪುರಾಣಿಕ, ಶ್ರೀ ಮಹಾದೇವ ಬಣಕಾರ, ಶ್ರೀ ಬಗಿ ಯಲ್ಲಟ್ಟಿ, ಶ್ರೀ ಅಂಬಿಗರಕುಮಾರ ಚೌಡಯ್ಯ, ಶ್ರಿ ಸಿದ್ಧಣ್ಣ ಲಂಗೋಟಿ, ಮುಂತಾದ ಆಧುನಿಕ ವಚನಕಾರರಲ್ಲಿ ಕುಮಾರ ಕಕ್ಕಯ್ಯನವರ ಸ್ಥಾನ–ಮಾನ ಕುರಿತು ಸಂಕ್ಷಿಪ್ತದಲ್ಲಿ ಚಿಂತನ ಮಾಡಲಾಗುತ್ತಿದೆ.

**ಶ್ರೀ ಹರ್ಡೇಕರ ಮಂಜಪ್ಪನವರು** ಹಿಂದುಳಿದ ಜನಾಂಗದಲ್ಲಿ ಜನಿಸಿ, ಬಸವತತ್ವ ಅರಿತು, ಶರಣರ ಧರ್ಮ – ಸಂಸ್ಕೃತಿ ಅಪ್ಪಿಕೊಂಡು ಸಮಾಜೋ– ಧಾರ್ಮಿಕ–

೩೬. ಜನಸೇವಕನ ವಚನಗಳು – ಹರ್ಡೇಕರ ಮಂಜಪ್ಪ. ಮುನ್ನುಡಿ ಪು–೬.

ಶೈಕ್ಷಣಿಕ ಸೇವೆ ಮಾಡಿದವರು. 'ಪ್ರಭುದೇವ ' ವಚನಾಂಕಿತ'ದಲ್ಲಿ ೩೯ ವಚನಗಳನ್ನು ರಚಿಸಿದ್ದಾರೆ.

> ಧರ್ಮವು ವೇದ ಶಾಸ್ತ್ರಾದಿ
> ಗ್ರಂಥಗಳಲುಂಟೆ ಅಯ್ಯಾ ?
> ಧರ್ಮವು ದೇಶ ಕಾಲ ಕುಲ
> ಜಾತಿಗಳುಂಟೆ ಅಯ್ಯಾ?
> ಧರ್ಮವು ಜಪ,ತಪ, ಹೋಮ,ಹವನ
> ಪಾಂಡಿತ್ಯಾದಿಗಳಲುಂಟೇ ಅಯ್ಯಾ?
> ಅಲ್ಲೆಲ್ಲಿಯೂ ಇಲ್ಲವಯ್ಯಾ.
> ಬಂಜೆ ಆವಿಂಗೆ ಕ್ಷೀರವುಂಟೆ?
> ಕರುವುಳ್ಳ ಗೋವಿನ ಕೆಚ್ಚಲಲ್ಲಿ
> ಕ್ಷೀರ ಇಪ್ಪಂತೆ,
> ದಯೆಯುಳ್ಳ ಮಹಾತ್ಮನ ನಡೆಯಲ್ಲಿ
> ಧರ್ಮ ಬೆಳಗುತಿರ್ಪುದು ನೋಡಾ
> ಪ್ರಭುದೇವ, ಇದು ಕಾರಣ
> ಜನಸೇವಕಂಗೆ ದಯಾಘನನ
> ಸೇವೆಯಲ್ಲಿರಿಸಿ ರಕ್ಷಿಸಯ್ಯಾ.[೩೭]

ಈ ವಚನದಲ್ಲಿ ಹರ್ಡೇಕರ ಮಂಜಪ್ಪನವರು-ಧರ್ಮದ ವಾಸಸ್ಥಾನವು ವೇದ ಶಾಸ್ತ್ರಗಳಲ್ಲಿ ಇಲ್ಲಾ, ಕುಲ ಜಾತಿಗಳಲ್ಲಿಲ್ಲಾ, ಜಪತಪ ಹೋಮ ಹವನಗಳಲ್ಲಿಲ್ಲ ಎಂದು ಸ್ಪಷ್ಟವಾಗಿ ತಿಳಿಸಿ, ಅದು ದಯೆಯುಳ್ಳ ಮಹಾತ್ಮನ ನಡೆಯಲ್ಲಿ ಬೆಳಗುತ್ತಿರ್ಪುದು ಎಂದು ಹೇಳುತ್ತಾರೆ.

**ಡಾ॥ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು** ನಿಡುಮಾಮಿಡಿ ಅವರು ಅಭಯವಾಣಿ, ದುಡಿವಚನ, ಮಣಿ ವಚನ, ಮಿಡಿ ವಚನ, ಯುಗವಚನ, ವಚನಾಂಜಲಿ, ವಚನ ಮಂಜರಿ, ವಚನವಲ್ಲರಿ, ಸೊಗವಚನ ಮುಂತಾದ ವಚನ ಸಂಕಲನಗಳಲ್ಲಿ ಮೂರುಸಾವಿರದ ಐದುನೂರು ಮೇಲ್ಪಟ್ಟು ವಚನಗಳನ್ನು ರಚಿಸಿದ್ದಾರೆ.

> ಅಂಜನದ ನೆರವಿನಿಂದ ಮಣ್ಣೊಳಗಿನ ಹೊನ್ನು ತೋರುವಂತೆ
> ಎಕ್ಸರೇ ನೆರವಿನಿಂದ ಗರ್ಭದ ತಿರುಳು ಹುರುಳುಗಳ ಕಾಣುವಂತೆ
> ದೇವ, ನಿಮ್ಮ ಅನುಭಾವ ಬಲದಿಂದ
> ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ
> ನಿಜನಿಲವು ನೋಟಕ್ಕೆ ನಿಂದಿತು, ಭಾವಕ್ಕೆ ಬಂದಿತು.[೩೮]

---

೩೭. ಜನಸೇವಕನ ವಚನಗಳು - ಹರ್ಡೇಕರ ಮಂಜಪ್ಪ. ವ-೧೭

೩೮. ವಚನ ಮಂಜರಿ - ಡಾ॥ ಜ.ಚ.ನಿ ವ-೧೫.

ಡಾ॥ ಜ.ಚ.ನಿ ಅವರ ವಚನಗಳು ಸಾಧಕ ಜೀವನ, ಅಧ್ಯಾತ್ಮಸಾಧನೆ, ವೀರಶೈವಧರ್ಮ, ಸಿದ್ಧಾಂತ, ದರ್ಶನ, ಮಠಗಳ ವ್ಯವಸ್ಥೆ, ಸ್ವವಿಮರ್ಶೆ, ಸಮಾಜವಿಮರ್ಶೆ, ಸಾಹಿತ್ಯ, ಭಾಷೆ ಇತ್ಯಾದಿ ವಿಷಯ ವೈವಿಧ್ಯದಿಂದ ಕೂಡಿವೆ.

**ಡಾ॥ ಸಿದ್ಧಯ್ಯ ಪುರಾಣಿಕರು** ಅನುಭಾವಿ ಕವಿ, ದಾರ್ಶನಿಕ ವಚನಕಾರರು. ವಚನೋದ್ಯಾನ, ವಚನನಂದನ, ವಚನಾರಾಮ ಎಂಬ ಮೂರು ಬೃಹತ್ ವಚನಸಂಕಲನಗಳನ್ನು ಪ್ರಕಟಿಸಿದ್ದು ೧೫೦೧ ವಚನಗಳನ್ನು ರಚಿಸಿದ್ದಾರೆ. ಶ್ರೀಯುತರ ವಚನಗಳಲ್ಲಿ ಲೋಕಾನುಭವ–ಶಿವಾನುಭವಗಳ ಕೂಡಲಸಂಗಮವಿದೆ. ಸ್ವತಂತ್ರಧೀರ ಸಿದ್ಧೇಶ್ವರ ವಚನಾಂಕಿತದಲ್ಲಿ ವಚನಗಳು ರಚನೆಗೊಂಡಿವೆ–

ವಿದ್ಯೆ ಬಂತು, ವಿನಯ ಹೋಯ್ತು.
ಬುದ್ಧಿ ಬಂತು, ಶ್ರದ್ಧೆ ಹೋಯ್ತು,
ಶ್ರದ್ಧೆ ಬಂತು, ವಿವೇಚನೆ ಹೋಯ್ತು,
ಸಮೃದ್ಧಿ ಬಂತು, ಸಂಸ್ಕೃತಿ ಹೋಯ್ತು
ವಿಜ್ಞಾನ ಬಂತು, ಸಮಾಧಾನ ಹೋಯ್ತು
ಶರೀರ ಸ್ವಾಸ್ಥ್ಯ ಬಂತು, ಚಿತ್ತ ಸ್ವಾಸ್ಥ್ಯ ಹೋಯ್ತು,
ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು.
ಬೋಧನೆ ಬಂತು, ಸಾಧನೆ ಹೋಯ್ತು.
ಮಾತು ಬಂತು, ಕೃತಿ ಹೋಯ್ತು.
ಜಾತಿ ಬಂತು, ಪ್ರೀತಿ ಹೋಯ್ತು.
ಸ್ವಾತಂತ್ರ್ಯ ಬಂತು, ಸೌಜನ್ಯ ಹೋಯ್ತು.
ಸಿದ್ಧಯ್ಯ ಪುರಾಣಿಕ ಬಂದ,
ಸ್ವತಂತ್ರ ಧೀರ ಸಿದ್ಧೇಶ್ವರ ಹೋದ![೩೯]

ಆಧುನಿಕ ಯುಗದ ನೈಜ ಚಿತ್ರಣವನ್ನು ಡಾ॥ ಸಿದ್ದಯ್ಯ ಪುರಾಣಿಕರು ಈ ವಚನದಲ್ಲಿ ಚಿತ್ರಿಸಿದ್ದಾರೆ, ಇದು ತುಂಬಾ ಮನೋಜ್ಞವಾಗಿದೆ, ವಿಚಾರಕ್ಕೆ ತೊಡಗಿಸುತ್ತದೆ.

ಒಡೆಯರಿಗೆ ಒದಗುವ ಅಮೃತಾನ್ನಕ್ಕಿಂತ
ಬಡವರಿಗೆ ದೊರೆಯುವ ಹಿಟ್ಟು ಶ್ರೇಷ್ಠವಯ್ಯಾ !
ಪಂಚತಾರಾ ಹೋಟೆಲುಗಳ ಪಕ್ವಾನ್ನಗಳಿಗಿಂತ
ಗುಡಿಸಲುಗಳ ಗಂಜಿ ಉತ್ಕೃಷ್ಟವಯ್ಯಾ !
ಹಸಿದ ಹೊಟ್ಟೆಯೇ ಹೋಮ ಕುಂಡ !
ಅದಕ್ಕೆ ಎರೆದ ಮಜ್ಜಿಗೆಯೇ ಆಜ್ಯ !
ಹೋಮ ಹವನಗಳಿಗೆ ಸುರಿವ ತುಪ್ಪಕ್ಕಿಂತ
ಹಸಿದ ಹೊಟ್ಟೆಗಿತ್ತ ಹಳಸಿದನ್ನ ಪೂಜ್ಯ !

೩೯. ವಚನೋದ್ಯಾನ – ಸಿದ್ಧಯ್ಯ ಪುರಾಣಿಕ ವ–೧೦೧

ಸ್ವತಂತ್ರಧೀರ ಸಿದ್ಧೇಶ್ವರನಾಣೆ ನಿಮಗೆ :
ಬೆಂಕಿಗೆ ಹೊಯ್ಯುವ ತುಪ್ಪವ
ಕಲ್ಲಿಗೆರೆಯುವ ಹಾಲ,
ಕಾಗೆಗಿಕ್ಕುವ ಅನ್ನವ
ಹಸಿದವರಿಗೆ ನೀಡಿ ಧನ್ಯರಾಗಿರಯ್ಯಾ ![೪೦]

ಈ ವಚನದಲ್ಲಿ ಡಾ॥ ಸಿದ್ಧಯ್ಯ ಪುರಾಣಿಕರ ಮಾನವೀಯ ಕಳಕಳಿ ಕಾಣುತ್ತೇವೆ. ಮೂಢ ಸಂಪ್ರದಾಯಕ್ಕೆ ತೆಕ್ಕೆ ಬಿದ್ದಿರುವ ಕರ್ಮಠ ಪುರೋಹಿತರು ಮಾಡುವ ಯಜ್ಞ–ಯಾಗ, ಹೋಮ ಹವನಗಳಲ್ಲಿ ಟನ್‌ಗಟ್ಟಲೇ ತುಪ್ಪವನ್ನು ಬೆಂಕಿಗೆ ಸುರುವಿ ಹಾಳು ಮಾಡುವದನ್ನು, ಕಲ್ಲ ನಾಗರ ಮೇಲೆ ಲಕ್ಷಾಂತರ ಲೀಟರ್ ಹಾಲು ಸುರಿದು ಮಣ್ಣುಪಾಲು ಮಾಡುವದನ್ನು, ಪಿತೃಗಳ ಶ್ರಾದ್ಧವೆಂದು ತಿಥಿ ಮಾಡಿ ಕಾಗೆಗೆ ಅನ್ನವಿಕ್ಕುವದನ್ನು ವಿಡಂಬನೆಗೈದಿದ್ದಾರೆ.

ರಾಮ ಜನ್ಮಭೂಮಿಯಲ್ಲಿ ರಕ್ತ ಹರಿದುದ ಕಂಡು
ರಾಮ ಬೊಂಬಡೆ ಹೊಡೆಯುತ್ತಿದ್ದಾನೆ.
ಬಾಬರಿ ಮಸೀದೆಗಾಗಿ ದೇಶ ಗಾಸಿಯಾದುದ ಕಂಡು
ಮಹಮ್ಮದ ಎದೆ ಎದೆ ಬಡಿದುಕೊಳ್ಳುತ್ತಿದ್ದಾನೆ.
ಇಬ್ಬರ ಭಕ್ತರಿಗೂ ತಾವು ಮಹಾಕಾರ್ಯ ಮಾಡಿದೆವೆಂಬ
ಪರಿತೋಷ, ಸ್ವರ್ಗಕ್ಕೆ ಪರ್ಮಿಟ್ಟು ಗಿಟ್ಟಿಸಿದೆವೆಂಬ ಹರ್ಷ !
ಎಂಥ ವಿಪರ್ಯಾಸ, ಧರ್ಮದ ದುರ್ವಿಲಾಸ –
ಸ್ವತಂತ್ರಧೀರ ಸಿದ್ಧೇಶ್ವರಾ![೪೧]

ಡಿಸೆಂಬರ ೬, ೧೯೯೬ ರಂದು ಅಯೋಧ್ಯೆಯಲ್ಲಿ ಬಾಬರಿ ಮಸೀದೆಯನ್ನು ಹಿಂದೂ ಸಂಪ್ರದಾಯವಾದಿಗಳು (ಮೂಲಭೂತವಾದಿಗಳು) ಭಗ್ನಗೊಳಿಸಿದರು. ಅದರ ಪರಿಣಾಮವಾಗಿ ದೇಶಾದ್ಯಂತ ಮುಸ್ಲಿಂ ಮೂಲಭೂತವಾದಿಗಳು ಸಾವಿರಾರು ದೇವಾಲಯಗಳನ್ನು ಹಾಳುಗೆಡವಿದರು. ಹಿಂದು ಮುಸ್ಲಿಂ ಇಬ್ಬರಿಗೂ ಏನೋ ಘನ ಕಾರ್ಯ ಸಾಧೀಸಿದೆವೆಂಬ ವಿಕಟ ಸಂತೋಷ! ಇದು ಧರ್ಮದ ದುರ್ವಿಲಾಸ, ಇದರಿಂದ ರಾಮ–ರಹೀಮರಿಬ್ಬರೂ ಸಂಕಟ ಪಡುವಂತಾಗಿದೆ ಎಂದು ಎಚ್ಚರಿಸುತ್ತಾರೆ.

**ಶ್ರೀ ಮಹಾದೇವ ಬಣಕಾರರು** ಗಡಿ ಹಿತರಕ್ಷಣೆಯ ಹೋರಾಟಗಾರ, ಕವಿ, ಪತ್ರಕರ್ತ, ಸಾಹಿತಿ, ಆಧುನಿಕ ವಚನಕಾರ, ಉತ್ತಮ ವಾಗ್ಮಿ, ಸಮಾಜ ಸೇವಕ, ರಾಜಕೀಯ ನೇತಾರರಾಗಿದ್ದರು. ೧೧೦೮ ವಚನಗಳನ್ನು ರಚಿಸಿದ ಇವರು ನೇರ ನಡೆ–ನುಡಿಯ, ನ್ಯಾಯ–ನಿಷ್ಠುರ ವ್ಯಕ್ತಿಯಾಗಿದ್ದರು.

---

೪೦. ವಚನ ನಂದನ – ಸಿದ್ಧಯ್ಯ ಪುರಾಣಿಕ ವ–೨೩೬.
೪೧. ವಚನಾರಾಮ – ಸಿದ್ಧಯ್ಯ ಪುರಾಣಿಕ ವ–೩೯೭.

ಧಾರ್ಮಿಕ ಸಾಮಾಜಿಕ ಮೂಢ ನಂಬಿಕೆಗಳ ವಿರುದ್ಧ ಮಹಾದೇವ ಬಣಕಾರರು ಕಠೋರವಾಗಿ ವಚನ ಬರೆದು ಹೋರಾಟಮಾಡಿದವರು.

ಪಂಚಾಂಗವ ಪಿಡಿದು ಪಂಚಾಮೃತವ ಸೇವಿಸುವ
ಪಂಚಪಾತಕಿ ಜೋಯಿಸನಿಗೇನೆಂಬೆನಯ್ಯಾ ?
ಶುಭ ಲಗ್ನದಲಿ ಮಾಂಗಲ್ಯಧಾರಣ ಮಾಡಿಸಿದ!
ವಾರವೊಂದರಲಿ ವಿಧವೆಯಾದಳು
ವಾರವೆರಡರಲಿ ಒಬ್ಬ ವಿಧುರನಾದನು.
ಜೋಯಿಸನಿತ್ತ ಶುಭಯೋಗ, ಶುಭಲಗ್ನ
ಉಳಿಸಬಂದವೇ ಸಾವವರ ?
ಹೊಟ್ಟೆ ಹೊರೆವವರ ನಂಬಿ,
ಕೆಟ್ಟ ಕೇಡಿಂಗೆ ಕಡೆಯಿಲ್ಲ ನೋಡಾ!
ಎನ್ನ ವರಗುರು ಶಿವಕುಮಾರ ಪ್ರಭುವೇ.[೪೨]

ಪಂಚಾಂಗ –ಫಲಜ್ಯೋತಿಷ್ಯ, ಶುಭಲಗ್ನ, ಶುಭಯೋಗ ಮುಂತಾದ ಮೂಢ ನಂಬಿಕೆ, ಅಂಧ ಶ್ರದ್ಧೆಗಳನ್ನು ಖಂಡಿಸುತ್ತಾರೆ.

ಶ್ರೀ ಸಂಗಮೇಶ ಹೊಸಮನಿ ಅವರು 'ಶಿವಕವಿ' ಎಂದೇ ಖ್ಯಾತಿವೆತ್ತವರು. 'ಶ್ರೀ ಹೊಸಮನಿ ಅವರು ಭಾವಗೀತೆಯ ಕವಿಯಾಗಿ ಬಿಚ್ಚಿಕೊಂಡು ಉತ್ತಮ ವಚನ ಕವಿಗಳಾಗಿ ಬೆಳೆದಿದ್ದಾರೆ. ಇದಕ್ಕೆ ಮುಖ್ಯ ಕಾರಣ ವಚನ ವ್ಯಾಸಂಗ.'[೪೩] ಶ್ರೀಯುತರಿಂದ ೧೧೧ ವಚನ, ೧೦೧೧ ವಚನಗಳ ವಚನತೀರ್ಥ, ಹಾಗೂ ೧೦೫೧ ವಚನಗಳ ವಚನಪ್ರಸಾದ ಕೃತಿಗಳು ಪ್ರಕಟವಾಗಿವೆ.

ಯಾವ ಜನುಮದ ಪಾಪಕ್ಕಾಗಿ ಈ ಹೆಸರು ?
ಹರಿಜನ ಗಿರಿಜನರೆಂದು!
ಯಾವ ಜನುಮದ ಶಾಪಕ್ಕಾಗಿ ಈ ಹಿಂಸೆ?
ಮುಟ್ಟದಿರಿ ತಟ್ಟದಿರಿ ಎಂದು!
ಮಾನವ ಕುಲವೊಂದು ಜಗದ ನೆಲವೊಂದು
ಹೊಸ ಬಾಳಿಗುಸಿರೊಂದು ಬಸಿರೊಂದು
ಈ ಒಂದೆಂಬ ಗಂಟೆಗೆ ನಾಲಗೆ ಇಹುದೇನಯ್ಯಾ ?
ಕುಂದಿಟ್ಟು ಒಂದೆಂದರೆ, ಹಿಂದಿಟ್ಟು ಮುಂದಾದರೆ
ಬೆಂದೊಡಲ ಬೇಗೆ ಭುಗಿಲ್ಲೆಂದು ಮಂದಿರವ ಮುತ್ತಿದರೆ
ಆರಿಸುವದೆಂತು? ಶ್ರೀ ಸಂಗಮಾನಾಥ.[೪೪]

---

೪೨. ಮಹಾದೇವ ಬಣಕಾರ ವಚನಗಳು – ವಚನ – ೧೧೧
೪೩. ವಚನ ಪ್ರಸಾದ – ಶ್ರೀ ಸಂಗಮೇಶ ಹೊಸಮನಿ ಮುನ್ನುಡಿ ಡಾ॥ ಎಂ.ಎಂ. ಕಲಬುರ್ಗಿ ಪು–i
೪೪. –ಅದೇ– ಪು–೪೧೯ ವ–೬೪೮.

ಶಿವ ಕವಿ ಸಂಗಮೇಶ ಹೊಸಮನಿ ಅವರು ವಸ್ತುತಃ ಭಾವ ಜೀವಿ ಕವಿ, ಕೂಡಲಸಂಗಮನಾಥನ ಕರುಣೆಯ ಕೂಸು, ಅವರ ಕವಿತಾ ಸ್ವರೂಪದ ವಚನಗಳಲ್ಲಿ ಭಕ್ತಿಯು ಹೊನಲಾಗಿ ಹರಿದಿದೆ. ಭಾರತಕ್ಕೆ ಸ್ವಾತಂತ್ರ್ಯ ಸಿಗುವ ಪೂರ್ವದಲ್ಲಿ ಅಂತ್ಯಜರನ್ನು ಉದ್ಧಾರಮಾಡಲೆಂದು ಮಹಾತ್ಮಾ ಗಾಂಧೀಜಿಯವರು ಅವರನ್ನು 'ಹರಿಜನ'ರೆಂದು ಕರೆದರು. ಹರಿಜನ ಎಂದರೆ ದೇವರ ಜನ ಎಂದು ಅರ್ಥ. ಆದರೆ ಈ ಹೆಸರು ಕೇವಲ ಅಂತ್ಯಜರಿಗೆ ಗಟ್ಟಿಯಾಗಿ ಉಳಿಯಿತು. ಮೇಲ್ಜಾತಿಯವರ ಮನೋಭೂಮಿಕೆ ಬದಲಾಗಲಿಲ್ಲ. ಅದಕ್ಕಾಗಿ ವಚನಕಾರರ ಹೃದಯ ಮಮ್ಮಲ ಮರಗುತ್ತಿದೆ.

**ಶ್ರೀ ಬ.ಗಿ ಯಲ್ಲಟ್ಟಿ** ಅವರೂ ಸಹ ಭಾವ ಜೀವಿ ಕವಿಯೆಂದೇ ಖ್ಯಾತಿವೆತ್ತವರು. 'ದೇವನ ಮನೆಯಿದು ಈ ಜಗವೆಲ್ಲ, ಬಾಡಿಗೆದಾರರು ಜೀವಿಗಳೆಲ್ಲ' ಎಂಬ ಕವಿತೆಯ ಮೂಲಕ ನಾಡಿನಾದ್ಯಂತ ಚಿರಪರಿಚಿತರಾದವರು. "ಬಿಂಬ ಎಂಬುದು ಅವರ ಪಕ್ವಮನಸ್ಸಿನ ಸರಳಶೈಲಿಯ ಸಮರ್ಥ ವಚನಗಳ ಸಂಗ್ರಹ, ಸ್ವಾನುಭವ-ಲೋಕಾನುಭವ ಹಾಗೂ ಆತ್ಮಾನುಭವ ಎಂಬ ಮೂರು ಭಾಗಗಳಲ್ಲಿ ಅವರ ಅನುಭವ ಅನುಭಾವವಾಗಿ ಹರಿದಾಡಿದೆ"[೪೫] ಎಂಬುದು ಸತ್ಯವಾಗಿದೆ.

> ಧರ್ಮ ಹೆಸರಿನಲ್ಲಿ ನಡೆದಷ್ಟು ಅನ್ಯಾಯ
> ಮತ್ತಾವುದರಿಂದ ನಡೆದಿಲ್ಲವೆಂಬುದು
> ಸೋಜಿಗವಾದರೂ ಸತ್ಯವಯ್ಯಾ!
> ತತ್ವದ ಹೆಸರಿನಲ್ಲಿ ನಡೆದಷ್ಟು ಸತ್ಯದ ಅಪಚಾರ
> ಇನ್ನಾವುದರಿಂದ ನಡೆದಿಲ್ಲವೆಂಬುದು
> ಅಚ್ಚರಿಯೆನಿಸಿದರೂ ಸಟೆಯಲ್ಲವಯ್ಯಾ!
> ಜನಸೇವೆಯ ಹೆಸರಿನಲ್ಲಿ ನಡೆದಷ್ಟು ಸುಲಿಗೆ
> ಬೇರಾವುದರಿಂದ ನಡೆದಿಲ್ಲವೆಂಬುದು
> ಆಶ್ಚರ್ಯವೆನಿಸಿದರೂ ಸುಳ್ಳಲ್ಲವಯ್ಯಾ!
> ಒಳಗಿನವರಿಂದ ನಡೆದಷ್ಟು ತೇಜೋವಧೆ
> ಹೊರಗಿನವರಿಂದ ನಡೆದಿಲ್ಲವೆಂಬುದು
> ವಿಸ್ಮಯವೆನಿಸಿದರೂ ಹುಸಿಯಲ್ಲವಯ್ಯಾ!
> ಎಷ್ಟು ಕಾಲ ಸತ್ಯ ಹರಿಶ್ಚಂದ್ರನಾಗಿ
> ಗೌರವ ಪಡೆಯಬಹುದಯ್ಯಾ?
> ನಾಟಕ ಮುಗಿದ ಮೇಲೆ ನಿಜಮುಖ ತೋರದೇನಯ್ಯಾ?
> ಬಸವಗುರು ಶರಣಬಸವ ತಂದೆ ನೀನೆ ಹೇಳಯ್ಯಾ![೪೬]

---

೪೫. ಬಿಂಬ- ಬ.ಗಿ. ಯಲ್ಲಟ್ಟಿ ಬೆನ್ನುಡಿ- ಬಿ.ಆರ್. ಪೋಲಿಸ್ ಪಾಟೀಲ ಕ.ಪು.-೪
೪೬ ಬಿಂಬ-ಬ.ಗಿ. ಯಲ್ಲಟ್ಟಿ ವ-೨೨

ಈ ರೀತಿಯ ಸಾಮಾಜಿಕ ಕಳಕಳಿಯ ವಚನಗಳು, ಶಿವಾನುಭವದ ತೊರೆಯಾಗಿ ಹೊರಹೊಮ್ಮಿವೆ.

**'ಅಂಬಿಗರ ಕುಮಾರ ಚೌಡಯ್ಯ'** ಎಂಬ ನಾಮಾಂಕಿತದಿಂದ ಕ್ರಾಂತಿಕಾರಿ ವಚನಗಳನ್ನು ಬರೆದ ಶ್ರೀ ಮಲ್ಲಿಕಾರ್ಜುನ ಬಸಪ್ಪ ಹಾದಿಮನಿ ಅವರು ಅಪ್ಪಟ ಬಸವಭಕ್ತರಾಗಿ, ಗಣಾಚಾರಿಗಳಾಗಿ ವಚನಗಳನ್ನು ಬರೆದವರು. 'ಅಂಬಿಗರ ಕುಮಾರ ಚೌಡಯ್ಯನ ವಚನ ವೈಢೂರ್ಯ ಎಂಬ ೧೫೦ ವಚನಗಳ ವಚನ ಸಂಕಲನ ಪ್ರಕಟವಾಗಿದೆ. ಅಲ್ಲದೇ ನೂರಾರು ಅಪ್ರಕಟಿತ ವಚನಗಳಿವೆ. ಇವರೂ ಸಹ ಮೂಲತಃ ಕವಿಗಳಾಗಿ ಪ್ರಸಿದ್ಧಿ ಪಡೆದವರೇ. "ಇವರ ವಚನಗಳಲ್ಲಿ ಬಸವಾದಿ ಶರಣರ ನ್ಯಾಯ ನಿಷ್ಠುರತೆ ಇದೆ. ಯಾರ ಹಂಗಿಗೂ ಒಳಗಾದವರಲ್ಲ, 'ಲೋಕವಿರೋಧಿ ಶರಣ, ಯಾರಿಗೂ ಅಂಜುವನಲ್ಲ' ಎನ್ನುವಂತೆ ಸ್ವತಂತ್ರಧೀರರಾಗಿ"[೪೭] ವಚನಗಳನ್ನು ಬರೆದಿದ್ದಾರೆ.

ನೀತಿಗೆಟ್ಟವರೆಲ್ಲ ನೇತಾರರಲ್ಲ
ಕೋತಿಕುಲದಲ್ಲಿ ಜಾತಿಯನರಸುವ
ಜಾತಿವಾದಿಗಳೆಲ್ಲ ಜಗದ್ಗುರುಗಳಲ್ಲ
ಜಾತಿವಾದದ ಬೇರ ಕಿತ್ತಸೆದ ಪ್ರವಾದಿ
ಬಸವಣ್ಣನೇ ಜಗಕೆ ಜಗದ್ಗುರುವೆಂದ
ನಂಬಿಗರ ಕುಮಾರ ಚೌಡಯ್ಯ.[೪೮]

**ಶ್ರೀ ಸಿದ್ದಣ್ಣ ಲಂಗೋಟಿಯವರು** ಕುಮಾರ ಕಕ್ಕಯ್ಯನವರ ಒಡನಾಡಿಗಳು, ಅವರ ಹುಟ್ಟೂರಿನವರಾಗಿದ್ದು, ಬಾಲ್ಯದಿಂದಲೇ ಅವರ ವಚನಗಳ ಪ್ರಭಾವಕ್ಕೊಳಗಾಗಿ, ವಚನರಚನೆಗೆ ತೊಡಗಿಸಿಕೊಂಡವರು. 'ಸಿಲಂ ವಚನಗಳು' ಎಂಬ ವಚನ ಸಂಕಲನ ಪ್ರಕಟಿಸಿದವರು. ಸಾವಿರಾರು ವಚನಗಳನ್ನು ರಚಿಸಿದ್ದಾರೆ. ಹಿರಿಯ ವಚನಕಾರ ಡಾ॥ ಸಿದ್ದಯ್ಯ ಪುರಾಣಿಕರು–"ಸಿದ್ದಣ್ಣನವರ ವಚನಗಳಲ್ಲಿ ಸಾಮಾಜಿಕ ಕಳಕಳಿ, ಧಾರ್ಮಿಕ ಕಳಕಳಿ, ಪ್ರಗತಿಪರ ವಿಚಾರಧಾರೆ ಇದೆ. ಗಣಾಚಾರದ ಮೊನಚು ಇದೆ. ಬುದ್ಧ ಬಸವ ಗಾಂಧಿ, ಅಂಬೇಡ್ಕರರ ಸಮತೆ ಅರಿತಿದ್ದಾರೆ"[೪೯] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಆಕಳ ಕಿಮ್ಮತ್ತು ಹಿಂಡುವ ಹಾಲಿನಿಂದಲ್ಲದೇ
ಮೈ–ಮಾಟ, ಬಣ್ಣ–ಕೋಡುಗಳಿಂದಲ್ಲ.
ಗರತಿಯ ಕಿಮ್ಮತ್ತು ಗುಣ–ಶೀಲಗಳಿಂದಲ್ಲದೇ

---

೪೭. ಅಂಬಿಗರ ಕುಮಾರ ಚೌಡಯ್ಯನ ವಚನ ವೈಢೂರ್ಯ ಮುನ್ನುಡಿ–ಸಿದ್ದಣ್ಣ ಲಂಗೋಟಿ ಪು–iv

೪೮. –ಅದೇ– ಪು–೬ ವ–೨೧

೪೯. ಸಿದ್ದಣ್ಣ ಲಂಗೋಟಿ ವಚನಗಳು: ಮುನ್ನುಡಿ ಡಾ॥ ಸಿದ್ದಯ್ಯ ಪುರಾಣಿಕ ಪು–೫

ಬೆಳ್ಳಿ-ಬಂಗಾರ, ವಜ್ರ-ಆಭರಣಗಳಿಂದಲ್ಲ.
ಗುರುವಿನ ಕಿಮ್ಮತ್ತು ಅರಿವು-ಆಚಾರಗಳಿಂದಲ್ಲದೇ
ಕುಲ-ಗೋತ್ರ-ಸೂತ್ರ-ಬಗೆಗಳಿಂದಲ್ಲ.
ಜಂಗಮದ ಕಿಮ್ಮತ್ತು ಜ್ಞಾನ-ಅನುಭಾವಗಳಿಂದಲ್ಲದೇ
ಜನ್ಮ-ಜಾತಿ, ಕಾವಿ-ಕಫನಿಗಳಿಂದಲ್ಲ ನೋಡಾ
ಜಗಜ್ಯೋತಿ ಬಸವೇಶ್ವರಾ[೫೦]

ಕುಮಾರ ಕಕ್ಕಯ್ಯನವರ ಕಿರಿಯ ಸಮಕಾಲೀನ ಮಠಾಧೀಶರಾದ ಶ್ರೀ **ಶಿವಾನಂದ ಸ್ವಾಮಿಗಳು** ಹುಲಸೂರ ಅವರು 'ಶಿವಾನಂದ ಸ್ವಾಮಿಗಳ ವಚನಗಳು' ಎಂಬ ವಚನ ಸಂಕಲನ ಹೊರತಂದಿದ್ದು, ಅವರ ವಚನಗಳು ಸಮಾಜದ ಬದುಕಿಗೆ ಹಿಡಿದ ಕನ್ನಡಿಯಂತಿವೆ.

ಗುರುವಿನ ದರುಶನಕ್ಕೆ ಹೋದರೆ
ಮಠದೊಳಗೊಂದು ವಿಚಿತ್ರವ ಕಂಡೆ!
ಹ್ಯಾಂಗರಿಗೊಂದು ರೇಶ್ಮೇ ಸೀರೆ,
ಮಂಚಕೊಂದು ಬ್ಲೌಜ ಪೀಸು!
ಜಂಗಮನ ದರುಶನಕ್ಕೆ ಹೋದರೆ
ಕಾಲಿಗೊಂದು ಹೆಣ್ಣು, ಕೈಗೊಂದು ಹೆಣ್ಣು,
ತೊಟ್ಟಿಲೊಳಗೊಂದು ಶಿಶು,
ಮಠದೊಳಗೊಂದು ಸ್ಥಾವರ ಪೂಜೆ!
ಭಕ್ತನ ಮನೆಗೆ ಹೋದರೆ
ಹೊಸ್ತಿಲಲೊಂದು ಭವಿ, ಒಳಗೊಂದು ಭವಿ
ಹೊರಗೊಂದು ಭವಿ!
ಧರ್ಮವಂತನ ಮನೆಗೆ ಹೋದರೆ
ಒಳಗೊಂದು ಕರ್ಮದ ನಾಯಿ,
ಹೊರಗೊಂದು ಕರ್ಮದ ನಾಯಿ!
ದೇಶ ಸೇವಕರ ಮನೆಗೆ ಹೋದರೆ
ಕೈಗೊಂದು ಬಾಟ್ಲಿ, ಕಾಲಿಗೊಂದು ಬಾಟ್ಲಿ
ತುತ್ತಿಗೊಂದೊಂದು ಜೀವಬಲಿ!
ಈ ವಿಚಿತ್ರವ ಕಂಡು ನಾನು ಬೆರಗಾದೆನಯ್ಯಾ
ಶಿವಾನಂದಪ್ರಿಯ ಗುರುಬಸವ ಪ್ರಭುವೇ.[೫೧]

---

೫೦. ಸಿದ್ದಣ್ಣ ಲಂಗೋಟಿ ಅವರ ವಚನಗಳು ಪು-೩೨ ವ-೫೧
೫೧. ಶಿವಾನಂದ ಸ್ವಾಮಿಗಳ ವಚನಗಳು ಪು-೯೯ ವ-೯೯

**ಶ್ರೀ ಚನ್ನಬಸವ ಸ್ವಾಮಿಗಳು** ಮೋಟಗಿ ಮಠ ಅಥಣಿ ಇವರು ಇನ್ನೋರ್ವ ಕ್ರಾಂತಕಾರಿ ವಚನಕಾರರು. 'ವಚನತರಂಗವೆಂಬ ವಚನ ಸಂಕಲನ ಹೊರತಂದಿದ್ದಾರೆ. ಧರ್ಮ ಸಮಾಜದ ಉದ್ಧಾರದ ಕಳಕಳಿ ಇವರ ವಚನಗಳಲ್ಲಿದೆ.–

ಕಾವಿ ತೊಡುವುದು ಮಠದಲ್ಲಿ ಕುಳಿತು
ಪೂಜೆ ಮಾಡುವುದಕ್ಕಲ್ಲ
ತ್ಯಾಗದಿಂದ ಸಮಾಜ ಸೇವೆ ಮಾಡಲು.
ಖಾಕಿ ತೊಡುವದು ಲಾಠಿ ಹಿಡಿದು
ಸುತ್ತುವುದಕ್ಕಲ್ಲ,
ನ್ಯಾಯದಿಂದ ಶ್ರಮಿಸಲು.
ಖಾದಿ ತೊಡುವದು
ವಿಲಾಸ ಜೀವನಕ್ಕಲ್ಲ
ಪ್ರಜೆಗಳಿಗೆ ನಿಷ್ಠೆಯಿಂದ ನಡೆಯಲು
ಲಾಂಛನ ತೊಡುವುದು ಮನಬಂದಂತೆ
ವರ್ತಿಸಲು ಅಲ್ಲಾ,
ತನು ಮನ ಧನದಿಂದ
ದುಡಿಯುವುದಕ್ಕೆಂದ ಅಥಣೀಶ[೫೨]

**ಶ್ರೀ ಎಸ್.ವ್ಹಿ ರಂಗಣ್ಣನವರು** ಹಿರಿಯ ಕವಿ, ಸಾಹಿತಿ ವಚನಕಾರರು. ಬಸವಾದಿ ಶರಣರ ವಚನ ಸೈಲಿಯನ್ನು ಅಂಗವಿಸಿಕೊಂಡು ಪ್ರಬುದ್ಧ ವಚನಗಳನ್ನು ರಚಿಸಿದವರು. 'ರಂಗ ಬಿನ್ನಪ' ಎಂಬುದು ಅವರ ವಚನ ಸಂಕಲನವಾಗಿದೆ.

ಸ್ವರ್ಗವೆಲ್ಲಿಹುದಯ್ಯಾ? ಸ್ವರ್ಗವೆಲ್ಲಿಲ್ಲಯ್ಯಾ?
ಹಚ್ಚ ಹಸುರನೆ ನೋಡಿ, ಹರಿವ ಹೊಳೆಯನೆ ಕಂಡು,
ಮನವೊಂದಾಗೆ ಅದೇ ಸ್ವರ್ಗ.
ಮುದ್ದು ಕೂಸಿನ ಮುಖದೊಳಾಡುವ ತಿಳಿನಗೆಯ
ಬಗೆಯೆ ಅದೆ ಸ್ವರ್ಗ.
ಮಚ್ಚರಿಲ್ಲದ ಮಾಂದ್ಯವಿಲ್ಲದ ಶುದ್ಧ ಸಂತೋಷವೇ
ಸ್ವರ್ಗ ಆ ಸಂತೋಷದಲ್ಲಿ ನೀನಿರುವೆ
ಅದೇ ನೀನು ರಂಗಯ್ಯಾ ಆನಂದಮಯ![೫೩]

ಈ ವಚನದಲ್ಲಿ ಭೂಮಿಯೇ ಸ್ವರ್ಗ ಪ್ರಕೃತಿಯೇ ಸ್ವರ್ಗ ಶುದ್ಧ ಸಂತೋಷವೇ ಸ್ವರ್ಗ ಅದರಲ್ಲಿಯೇ ದೇವನಿದ್ದಾನೆ ಎಂದು ಶ್ರೀ ಎಸ್.ವ್ಹಿ ರಂಗಣ್ಣನವರು ತಿಳಿಸುತ್ತಾರೆ

---

೫೨. ವಚನ ತರಂಗ–ಚನ್ನಬಸವ ದೇವರು ಪು–೨೭ ವ–೨೭
೫೩. ರಂಗ ಬಿನ್ನಪ ಎಸ್.ವ್ಹಿ ರಂಗಣ್ಣ ಪು–೨ ವ–೪

**ಶ್ರೀ ಎಸ್.ವ್ಹಿ ಪರಮೇಶ್ವರ ಭಟ್ಟ** ಅವರು ಉಪ್ಪು ಕಡಲು, ಪಾಮರ, ಉಬರ ಎಂಬ ವಚನ ಸಂಕಲಗಳನ್ನು ಪ್ರಕಟಿಸಿದ್ದಾರೆ.

ಚುನಾವಣೆಯ ಕಣವೆ ಯಜ್ಞಕುಂಡ!
ರಾಜಕೀಯ ಭಾಷಣವೆ ಆಜ್ಯಭಾಂಡ!
ಪರದೂಷಣೆಯೆ ಸಮಿಧೆ!
ಹುರಿಯಾಳೆ ಹೋತಾರ! ಸತ್ಯವೇ ಬಲಿಪಶು!
ಅನಂತ ಅಶಾಂತಿಯೇ ಅನಂತರದ ಯಜ್ಞಫಲ!
ಸದಾಶಿವ ಗುರು[೫೪]

ಈ ವಚನದಲ್ಲಿ ಪ್ರಜಾಪ್ರಭುತ್ವ ರಾಜಕೀಯ ಚುನಾವಣೆಯ ಚಿತ್ರಣ ಕೊಟ್ಟು ಅದನ್ನು ಕಟುವಾಗಿ ವಿಡಂಬನೆ ಮಾಡಿದ್ದಾರೆ.

ಈ ರೀತಿಯ ಹಿರಿ-ಕಿರಿಯ ಸಮಕಾಲೀನ ವಚನಕಾರರಲ್ಲಿ **ಕುಮಾರ ಕಕ್ಕಯ್ಯನವರು** ತಮ್ಮ ಸ್ವಾನುಭಾವದ, ಕ್ರಾಂತಿಕಾರಿ ವಚನಗಳಿಂದ ಪ್ರಕಾಶ ಮಾನರಾಗಿ ಕಂಗೊಳಿಸುವುದನ್ನು ಅವರ ವಚನಗಳಲ್ಲಿಯೇ ಕಾಣುತ್ತೇವೆ. ದಲಿತಜನಾಂಗದಲ್ಲಿ ಜನಿಸಿ, ಮೇಲ್ಜಾತಿಯವರ ಅವಹೇಳನ, ಅನ್ಯಾಯ, ದೌರ್ಜನ್ಯದ ನೋವು ಉಂಡು, ಕೊನೆಗೆ ಸಿಡಿದೆದ್ದು ಕ್ರಾಂತಿಕಾರಿ ವಚನಗಳನ್ನು ಬರೆದವರು.

ತೋಳ ಏರಿ ಬಂದಾಗ ಕಿರುಬನಾಗು
ಕಿರುಬ ಎದುರು ಬಿದ್ದಾಗ ಕರಡಿಯಾಗು
ಕರಡಿ ತಿರುಗಿ ನಿಂತಾಗ ಹುಲಿಯಾಗು
ಹುಲಿ ಗುಡುಗಿ ಎರಗಿದಾಗ ಸಿಂಹನಾಗು
ಅಯ್ಯ ನೀನು ಕುರಿಯಾದರೆ ಎಲ್ಲರು
ನಿನ್ನನ್ನು ಹರಿದು ತಿನ್ನವರೆಂದ
ಕುಮಾರ ಕಕ್ಕಯ್ಯ.[೫೫]

ಎಂದು ವಚನ ಬರೆಯುವ ಮೂಲಕ ಶೋಷಿತ ಜನಾಂಗವನ್ನು. ಮೇಲೆತ್ತಿ ಅವರಲ್ಲಿ ಜಾಗೃತಿ ಮೂಡಿಸಿದವರು ಕುಮಾರ ಕಕ್ಕಯ್ಯ. "ಕುಮಾರ ಕಕ್ಕಯ್ಯ ಪೋಳ ಅವರ ವಚನಗಳಲ್ಲಿ ಬಸವಾದಿ ಶರಣರ ಅನುಭಾವದ ಸೆಳೆತ, ಸಮಾಜ ಸುಧಾರಣೆಯ ಕಾಳಜಿ, ಜೀವನಾನುಭವದ ಕಟು ಸತ್ಯವಲ್ಲದೇ ದಲಿತ ಪ್ರಜ್ಞೆ, ಸ್ವಾಭಿಮಾನ, ವೈಚಾರಿಕ ನೆಲೆ ವಿಶೇಷವಾಗಿ ಕಂಡು ಬರುತ್ತದೆ.[೫೬]

ಸಮಕಾಲೀನ ಅನುಭಾವಿ ವಚನಕಾರ ಡಾ॥ ಸಿದ್ದಯ್ಯ ಪುರಾಣಿಕರಂತೂ ಕುಮಾರ ಕಕ್ಕಯ್ಯನವರ ವಚನಗಳನ್ನೋದಿ ಪ್ರಭಾವಿತರಾಗಿ ತುಂಬಾ ಆನಂದದಿಂದ

---

೫೪ ಉಂಬರ - ಎಸ್.ವ್ಹಿ ಪರಮೇಶ್ವರ ಭಟ್ಟ ಪು-೬೭ ವ-೮೪

೫೫ ಕುಮಾರ ಕಕ್ಕಯ್ಯನ ವಚನಗಳು ಪು-೬೦ ವ-೨೩೧

೫೬ ದಲಿತ ಸಾಹಿತಿ ಕುಮಾರ ಕಕ್ಕಯ್ಯ ಪೋಳ-ಡಾ॥ ಎಚ್.ಟಿ.ಪೋತೆ ಪು-೧೫-೧೬

ಬರೆದಿದ್ದಾರೆ– “ನನಗೆ ಹಿಡಿಸಲಾರದಷ್ಟು ಹಿಗ್ಗು. ಬಸವಣ್ಣ ತನ್ನ ಹೆಸರನ್ನು ಸುಲಿಗೆಗಾಗಿ ಬಳಸಿಕೊಳ್ಳುತ್ತಿರುವ ಸನ್ಯಾಸಿ, ಸಾಹಿತಿ ಮತ್ತು ರಾಜಕಾರಣಿಗಳಿಂದ ಹೊರಬಂದು ಈಗ ನಿಮ್ಮಂಥ ನಿಜನಿಷ್ಠುರ ಕೈ ಸೇರುತ್ತಲಿದ್ದಾನೆ. ಅವನನ್ನು ಈ ಅಷಾಢ ಭೂತಿಗಳಿಂದ ಬಿಡಿಸಿಕೊಂಡು, ಶ್ರೀ ಸಾಮಾನ್ಯರಿಗೆ ಮುಟ್ಟಿಸುತ್ತಿರುವ ನಿಮ್ಮ ಮಣಿಹಕ್ಕೆ ಮನಃ ಪೂರ್ವಕವಾಗಿ ಅಭಿನಂದಿಸುತ್ತೇನೆ”[೫೭]

ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರ “ಒಂದೊಂದು ವಚನಗಳೂ ಮನಮುಟ್ಟುವಂತೆ, ಹೃದಯ ತಟ್ಟುವಂತಿವೆ. ಕಿರಿದರಲ್ಲಿ ಹಿರಿದಾದುದನ್ನು ಹೇಳುವ ಕುಶಲತೆ ಕುಮಾರ ಕಕ್ಕಯ್ಯನವರಲ್ಲಿದೆ. ನಿರಾಡಂಬರವಾದ ಸರಳ ಸುಂದರ ಶೈಲಿ, ಎಲ್ಲವೂ ನೇರ, ಸುಲಭ, ಅರ್ಥಗರ್ಭಿತ! ಓದುಗರ ಮನದ ಕತ್ತಲೆ ಕಳೆದು,ಹೊಸ ಬೆಳಕು ಚೆಲ್ಲುವ ಅಮೂಲ್ಯ ಮತ್ತು–ರತ್ನಗಳು ಇಲ್ಲಿ ತುಂಬಿಕೊಂಡಿವೆ. ಆಧುನಿಕ ವಚನ ಸಾಹಿತ್ಯದಲ್ಲಿ ಕುಮಾರ ಕಕ್ಕಯ್ಯನವರ ವಚನಗಳು ಅಮರವಾಗಿ ಉಳಿಯುವ ಅಮರ ಕೃತಿ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.”[೫೮]

ಈ ರೀತಿಯಾಗಿ ಕುಮಾರ ಕಕ್ಕಯ್ಯನವರು ೨೦ ನೇ ಶತಮಾನದ ಆಧುನಿಕ ವಚನಕಾರರಲ್ಲಿ ಎದ್ದು ಕಾಣವ ವ್ಯಕ್ತಿತ್ವ, ಸಾಧನೆ–ಸಿದ್ಧಿ ಮಾಡಿದವರು. ತಮ್ಮ ಸಮಕಾಲೀನ ವಚನಕಾರರ ಗೌರವ–ಆದರಕ್ಕೆ ಪಾತ್ರರಾದವರು ಎಂದು ಹೇಳಬಹುದಾಗಿದೆ.

### iv. ಕುಮಾರ ಕಕ್ಕಯ್ಯನವರ ಸಾಹಿತ್ಯ ಕೃತಿಗಳ ಕುರಿತು ವಿದ್ವಾಂಸರ ಅಭಿಪ್ರಾಯಗಳು.

ಆಧುನಿಕ ವಚನಕಾರ, ನೂತನ ಶರಣ, ಕ್ರಾಂತಿಕಾರಿ ದಲಿತ ಸಾಹಿತಿ ಪ್ರಗತಿಪರ ವಿಚಾರವಾದಿ, ನೇರ ನಡೆ, ನೇರ ನುಡಿಯ ದಿಟ್ಟ ಧೀರ ಗಣಾಚಾರಿ, ಸಮಾಜೋ–ಧಾರ್ಮಿಕ ಕ್ರಾಂತಿಯ ಕಿಡಿ, ಕರ್ನಾಟಕದ ಅಂಬೇಡ್ಕರ ಮುಂತಾಗಿ ನಾಡಿನ ಚಿಂತನಶೀಲ ಅಭಿಮಾನಿಗಳಿಂದ, ಬಸವಭಕ್ತರಿಂದ ಗೌರವಿಸಲ್ಪಟ್ಟ ಕುಮಾರ ಕಕ್ಕಯ್ಯ ಪೋಳ ಅವರದು ಕ್ರಾಂತಿಕಾರಕ ಸಾಹಿತ್ಯವಾಗಿದೆ. ಗದ್ಯ ಪದ್ಯ, ನಾಟಕ, ಪ್ರಬಂಧ, ಕಥೆ ಕಾದಂಬರಿ, ಸಂಶೋಧನೆ, ವಚನ ಮುಂತಾದ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಗಟ್ಟಿಯಾಗಿ ನಿಲ್ಲಬಲ್ಲ, ಸಮಾಜದಲ್ಲಿ ಹೊಸ ಆಯಾಮ ತರಬಲ್ಲ ಸತ್ವಯುತವಾದ ಸಾಹಿತ್ಯವನ್ನು ರಚಿಸಿದವರು. ಅವರ ಒಂದೊಂದು ಕೃತಿಗಳೂ, ಅವರ ಪ್ರತಿಯೊಂದು ವಚನಗಳೂ ಜೀವನಾನುಭವದ ರಸಗಟ್ಟಿಗಳು.

ಕುಮಾರ ಕಕ್ಕಯ್ಯನವರ ಎಲ್ಲ ಸಾಹಿತ್ಯ ಕೃತಿಗಳು ಸಮಕಾಲೀನ ವಿಚಾರವಾದಿಗಳ, ಕವಿ–ಸಾಹಿತಿಗಳ, ಆಧುನಿಕ ವಚನಕಾರರ, ವಿದ್ವಾಂಸ ವಿಮರ್ಶಕರ, ಪ್ರಗತಿಶೀಲ ಮಠಾಧೀಶರ, ಬಂಡಾಯ–ದಲಿತ ಕ್ರಾಂತಿಕಾರಿಗಳ, ಸಹೃದಯಿ ಜನ ಸಾಮಾನ್ಯರ ಗಮನ ಸೆಳೆದವು. ಇದರ ಪರಿಣಾಮವಾಗಿ ನಾಡಿನೆಲ್ಲೆಡೆಯಿಂದ

---

೫೭ ಕುಮಾರ ಕಕ್ಕಯ್ಯ ಪೋಳ–ಸಿದ್ದಣ್ಣ ಲಂಗೋಟಿ ಪು–೯೯

೫೮ ಆಧುನಿಕ ವಚನ ಸಾಹಿತ್ಯ – ಡಾ॥ ನೀಲಮ್ಮ ಕತ್ನಳ್ಳಿ ಪು–೫೮–೫೯

ವಿದ್ವಾಂಸರ, ಪೂಜ್ಯರ ಅಭಿಪ್ರಾಯಗಳ ಪ್ರವಾಹ ಹರಿದು ಬಂದಿತು. ಅವುಗಳಲ್ಲಿ ಅಮೂಲ್ಯವಾದವುಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

೧

"ಹೆರಿಗೆಯ ನೋವು ಹೆತ್ತವಳಿಗೆ ಗೊತ್ತು. ಕುಮಾರ ಕಕ್ಕಯ್ಯ ಅನುಭವಿಕ ಲೇಖಕರು, ತಮ್ಮ ಚಿಕ್ಕವಯಸ್ಸಿನ ದೀರ್ಘ ಸಮಯವನ್ನು ಭಕ್ತಿ ಪಥದಲ್ಲಿ ಶ್ರೀಗಂಧದಂತೆ ತೇಯ್ದಿದ್ದಾರೆ. ಸ್ವಂತ ಅನುಭವದಿಂದ ನೈಜವಾದ ಸತ್ಯವನ್ನು ಧೈರ್ಯದಿಂದ ಮಂಡಿಸಿದ್ದಾರೆ. ಭಕ್ತಿಗೂ ದೇವರಿಗೂ ಯಾವುದೇ ಸಂಬಂಧವಿಲ್ಲಾ ಎಂಬುದನ್ನು ಖಡಾಖಂಡಿತವಾಗಿ ಸಮರ್ಪಕವಾಗಿ ಉಲ್ಲೇಖಿಸಿದ್ದಾರೆ. ಭಕ್ತಿ ಭಕ್ತಿ ಎಂದು ಹೊಗಳಿ ಹೊಗಳಿ, ವರ್ಣನೆ ಮಾಡಿ, ತಾಯಿಯು ಮಗುವನ್ನು "ನನ್ನ ಜಾಣ ಮರಿ" ಎಂದು ಲಲ್ಲೆಯಿಂದ ಸಮಾಧಾನ ಮಾಡುವಂತೆ, ಆ ದೇವಾದಿದೇವನನ್ನು ಭಕ್ತಿಯಿಂದ ಒಲಿಸಿಕೊಳ್ಳಲು ಅದೆಂದಿಗೂ ಸಾಧ್ಯವಿಲ್ಲ, ಸುಖಜೀವನಕ್ಕೆ ಭಕ್ತಿ ಪ್ರಧಾನವಲ್ಲ ತಾನು ಮಾಡಿದ ಕರ್ಮವೇ ಅದಕ್ಕೆ ಪ್ರಧಾನ. ದೇವನು ಸತ್ಕರ್ಮಿಗಳ ದಾಸಾನುದಾಸ. ನಿರ್ಮಲ ಮನಸ್ಸಿನಿಂದ ಆತ್ಮಸಾಕ್ಷಿಯಾಗಿ ದುಡಿ ಎಂಬುದೇ ಲೇಖಕರ ಸಿದ್ಧಾಂತ".

–**ಶಂಕರ ಭಗವಂತಪ್ಪ ಪತ್ತಾರ ಜಮಖಂಡಿ** (ಧರ್ಮಕ್ರಾಂತಿ ಗ್ರಂಥದ ಮುನ್ನುಡಿ)

೨

"ಶ್ರೀ ಪೋಳ ಅವರು ಏರಿಕೆಯ ಉತ್ಸಾಹದಲ್ಲಿ ಬರೆದ 'ನಿಯತಿ ಶಾಸನ'ವು ತಾಂತ್ರಿಕ ಚಮತ್ಕಾರದಿಂದ ಹಾಗೂ ವಿಷಯ ಪುರಸ್ಕಾರದಿಂದ ವಾಚಕರ ಮರ್ಮವನ್ನು ಕೆಣಕುವ ಕಿಡಿಯಾಗಿದೆ. ಇದೊಂದುತಪ್ಪೊಪ್ಪಿಗೆ ಆತ್ಮ ನಿವೇದನ, ಮಹರ್ಷಿ ಟಾಲಸ್ಟಾಯ್‌ರ ಕನಫೇಶನ್, ಮಹಾತ್ಮಾಗಾಂಧಿ ಅವರ ಸತ್ಯ ಸಂಶೋಧನ ಇವುಗಳ ಮಾದರಿಯಲ್ಲಿ ರೂಪುಗೊಂಡ ಸಮರ್ಥ ಕೃತಿಯಾಗಿದೆ.

ಶ್ರೀ ಪೋಳ ಅವರು ಪರಿಸರವನ್ನು ನಿಟ್ಟಿಸಿ, ಪರಿಸ್ಥಿತಿಯನ್ನು ದಿಟ್ಟಿಸಿ, ವಿಷಯವನ್ನು ಇದ್ದಕ್ಕಿದ್ದಂತೆ ಗಿಟ್ಟಿಸಿಕೊಳ್ಳಬಲ್ಲರು. ಅವರು ಹೊರ ರೂಪವನ್ನು ಮೂಡಿಸಿ ತೋರಿಸುವ ಕ್ಯಾಮರಾ ಆಗಿರುವಂತೆ, ಒಳಬಿಂಬವನ್ನು ಜೋಡಿಸಿ ತೋರಿಸುವ ಎಕ್ಸರೇ ಸಹ ಆಗಿದ್ದಾರೆ. ಸುತ್ತಲಿನ ಬಾಳ ಭಾಂಡಾರದಿಂದ ಹೆಕ್ಕಿ ತಂದ ಅದೆಷ್ಟೋ ಉಪಮೆಗಳನ್ನು ಬಳಸಿಕೊಂಡು ಮಾತಿನ ಮಾರ್ಮಿಕತೆಯನ್ನು ಮತ್ತಿಷ್ಟು ಹರಿತಗೊಳಿಸಿಕೊಂಡಿದ್ದಾರೆ. ಶ್ರೀ ಪೋಳ ಅವರು ಸಾಹಿತ್ಯ ಸಾಧನೆಯನ್ನು ಮುಂದುವರೆಸಿ, ಭವ್ಯ ಭವಿಷ್ಯತ್ತನ್ನು ಸಿದ್ಧಿಸಿಕೊಳ್ಳಲೆಂದು ಆಶಿಸುತ್ತೇನೆ. ನಿಷ್ಠಸೇವಕರಿಗಾಗಿ ಸಾಹಿತ್ಯದೇವಿಯ ಕೃಪೆಯು ಕೈಚಾಚಿ ನಿಂತಿದೆ. ಅದನ್ನು ಶ್ರೀ ಪೋಳರು ನಿರೀಕ್ಷಿಸುವರೆಂದು ನಂಬಿದ್ದೇನೆ.

–**ಶ್ರೀ ಸಿಂಪಿಲಿಂಗಣ್ಣ ಜಾನಪದ ಸಾಹಿತಿ, ಚಡಚಣ** (ನಿಯತಿ ಶಾಸನ ಗ್ರಂಥದ ಮುನ್ನುಡಿ)

೩

"ಶ್ರೀ ಬಿ.ಎಸ್.ಪೋಳ ಅವರು ಸಮ್ಯಕ್ ಬುದ್ಧಿ ಜೀವಿಗಳು, ಪ್ರಗಲ್ಭ ವಿಚಾರವಾದಿಗಳು, ಗಂಭೀರ ಚಿಂತನಶೀಲರು. ತಮ್ಮ ಜೀವಮಾನದಲ್ಲಿ ಅನುಭವಿಸಿದ ಅನುಭವಗಳನ್ನು ಅಂತರಂಗದ ಅನಿಸಿಕೆಯ ಒರೆಗಲ್ಲಿಗೆ ಹಚ್ಚಿ, ಜೀವನದ ಸತ್ಯ ಸಾಕ್ಷಾತ್ಕಾರಕ್ಕಾಗಿ ಆಲೋಚಿಸಿದವರು. ಒಬ್ಬ ಲೇಖಕನ ಪ್ರಾಮಾಣಿಕತೆ ಆತನ ಆತ್ಮ ಸಂವೇದನೆಯ ಪರಿಪಾಕವಾಗಿರುತ್ತದೆ. ಇಂಥ ಪ್ರಾಮಾಣಿಕತೆಯ ಅಭಿವ್ಯಕ್ತಿ, ಪ್ರಸಾದಿಕ ಶಕ್ತಿ ಪಡೆದುಕೊಂಡು ಸೃಜನಾತ್ಮಕ ಸಾಹಿತ್ಯ ಕೃತಿಗೆ ಜನ್ಮಕೊಡುತ್ತಾನೆ. ಪ್ರಜ್ಞಾಶೀಲ ಲೇಖಕ ತನ್ನ ಹಾಗೂ ತನ್ನ ಪರಿಸರದ ಜನಜೀವನವನ್ನು ಆಳವಾಗಿ ಅವಲೋಕಿಸಿ ಆತ್ಮಾನುಭೂತಿಯನ್ನು ಅಸ್ಖಲಿತವಾಗಿ ಅಭಿವ್ಯಕ್ತಗೊಳಿಸುತ್ತಾನೆ. ಇಂಥ ಅಗ್ನಿದಿವ್ಯ ಪ್ರಸಂಗದಿಂದ ಉದ್ಭೂತಗೊಳ್ಳುವ ಸತ್ಯ, ಲೋಕಜೀವನಕ್ಕೆ ಬೆಂಬೆಳಕು ನೀಡುತ್ತದೆ.

ಶ್ರೀ ಪೋಳ ಅವರು ಲೇಖನಕಲೆಯಲ್ಲಿ ಪಳಗಿದವರು ಭಾಷಾ ಪ್ರಯೋಗದಲ್ಲಿ ಪರಿಣಿತರು. ಲೇಖಕರ ಶೈಲಿ ಶ್ಲಾಘನೀಯವಾಗಿದೆ. ಶ್ರೀ ಪೋಳ ಅವರು ಕೇವಲ ಬರಹಸಾಹಿತಿಗಳಲ್ಲ. ಜೀವನ ಸಾಹಿತಿಗಳು. ಆಚಾರ ಹಾಗೂ ವಿಚಾರಗಳ ಸಮನ್ವಯವೇ ಅವರ ಜೀವನದ ಸಿದ್ಧಾಂತ. ಆಸ್ಕರ ವೈಲ್ಡನು ಹೇಳುವಂತೆ 'Literature always anticipates life. It does not copy it, but moulds it to its purpose' ಎಂಬಂತೆ ಪ್ರಯೋಜನಾತ್ಮಕ ಸಾಹಿತ್ಯ ಸರ್ಜಕರು.

– **'ಮೇಘಮಿತ್ರ' ಪ್ರೊ. ಸಿ.ವ್ಹಿ.ವಜ್ರಮಟ್ಟಿ. ವಿಜಾಪೂರ** (ಗೀಜಗನ ಗೂಡು – ಮುನ್ನುಡಿ ಪುಟ –i–iii)

೪

"ಹೆಣ್ಣು –ಗಂಡು, ಶೃಂಗಾರ –ಪ್ರೇಮಗಳು ಶ್ರೀ ಬಿ.ಎಸ್.ಪೋಳ ಅವರ ಸಾಹಿತ್ಯದ ವಿಷಯವಾಗಿರದೆ ಮೂಢನಂಬಿಕೆಗಳ ತಾಯಿಯಾದ ಅಜ್ಞಾನವನ್ನು ತೊಲಗಿಸಿ ಮನುಷ್ಯನು ಜ್ಞಾನಿಯಾಗಬೇಕು. ಜ್ಞಾನದ ಒರೆಗಲ್ಲಿಗೆ ಹಚ್ಚಿ ಸತ್ಯವನ್ನು ಅರಿಯಬೇಕು. ಸತ್ಯವೇ ದೇವರೆಂದು ಬಗೆದು, ನೊಂದವರನ್ನು ಸಾಂತ್ವನಗೊಳಿಸಬಲ್ಲ ಹಾಗೂ ತುಳಿಯಲ್ಪಟ್ಟವರನ್ನು ಮೇಲೆತ್ತಬಲ್ಲ ಧರ್ಮವನ್ನು ಅನುಸರಿಸಿ, ನಾನು ಎಲ್ಲರಿಗಾಗಿ ಎಲ್ಲರೂ ನನಗಾಗಿ ಎಂದು ಸಕಲರನ್ನು ಪ್ರೇಮಿಸಿ ಪ್ರೇಮ ಪಡೆಯುವುದು ದೇವನಿಗೆ ಅಪ್ಯಾಯಮಾನ. ಅದೇ ಮಾನವಜನ್ಮದ ಸಾರ್ಥಕ್ಯದ ದಾರಿ, ಇದೇ ಶ್ರೀ ಪೋಳ ಅವರ ಸಾಹಿತ್ಯದ ಜೀವ ಸತ್ವ".

– **ಶ್ರೀ ಜಿ.ಕೆ. ಜೋಶಿ ಎಂ.ಎ. ವಿಜಾಪೂರ.** (ನಿಯತಿಶಾಸನ –ಲೇಖಕರ ಪರಿಚಯ ಪುಟ–xii)

೫

'ಸಾಹಿತ್ಯದ ಕೇಂದ್ರವಾದ ಧಾರವಾಡದಿಂದ ದೂರದಲ್ಲಿರುವ ವಿಜಾಪೂರದಲ್ಲಿ ಶ್ರೀ ಪೋಳರಂಥ ಯೋಗ್ಯತಾವಂತ ಸಾಹಿತಿಗಳಿದ್ದರೂ ಸಹ, ಅವರ ಬರಹಗಳು

ಅಚ್ಚಾಗಲು ಅಲ್ಲಿ ಸರಿಯಾದ ಪತ್ರಿಕೆಗಳಿಲ್ಲದೆ, ಪ್ರೋತ್ಸಾಹಕರಿಲ್ಲದೆ, ವಿಮರ್ಶಕರಿಲ್ಲದೇ ಇರುವದರಿಂದ, ಅವರು ಅಖಿಲ ಕರ್ನಾಟಕದಲ್ಲಿ ಪರಿಚಿತರಾಗುವದು ಕಠಿಣವಾಗಿದೆ.

ಗದ್ಯ ಪದ್ಯಗಳೆರಡೂ ಹಿತಮಿತವಾಗಿ ಬೆರೆತ, ಸ್ವಲ್ಪದರಲ್ಲಿ ಸ್ವಾರಸ್ಯಕರವಾಗಿ ಒಡಮೂಡುವ 'ವಚನ' ಪ್ರಕಾರ ಕನ್ನಡಕ್ಕೆ ವಿಶಿಷ್ಟವಾದುದೆನ್ನಬಹುದು. ಎಂಟುನೂರು ವರುಷಗಳ ಹಿಂದೆ ಜನಸಾಮಾನ್ಯರಿಗಾಗಿ 'ವಚನ ರಚನೆ' ಮಾಡುವ ಮೂಲಕ ಶರಣರು ಈ ಪ್ರಕಾರಕ್ಕೆ ವಿಶೇಷ ಮಹತ್ವ ತಂದುಕೊಟ್ಟರು. ಅವರ ತರುವಾಯ ಈ ಹಂದರವನ್ನು ಜನಕಾವ್ಯಕ್ಕಾಗಿ ಬಳಸಿಕೊಂಡವನು ಸರ್ವಜ್ಞ. ಪ್ರಭುದೇವರಂಥ ಕೆಲವು ಶರಣರ ವಚನಗಳಲ್ಲಿನ ಕ್ಲಿಷ್ಟತೆ, ಸರ್ವಜ್ಞನಲ್ಲಿಲ್ಲದ್ದರಿಂದ ಆತ ಬಹುಬೇಗ ಜನಪ್ರಿಯನಾದ. ಆತನ ವಚನಗಳು ಹಳ್ಳಿ ಹಳ್ಳಿಗಳಲ್ಲಿ ಹರಡಿಕೊಂಡವು.

ಶಿವಶರಣ ಕಕ್ಕಯ್ಯನವರನ್ನು ವಿಶೇಷವಾಗಿ ಮೆಚ್ಚಿ ಗೌರವಿಸುವ ಶ್ರೀ ಪೋಳ ಅವರು, 'ಕುಮಾರ ಕಕ್ಕಯ್ಯನ ವಚನಗಳು' ಎಂಬ ಹೆಸರಿನಲ್ಲಿ ತಮ್ಮ ವಚನ ಸಂಕಲನ ಪ್ರಕಟಿಸಿದ್ದಾರೆ. ಹೆಣ್ಣು, ಗಂಡು, ಲಗ್ನ, ಪ್ರೇಮದಿಂದ ಹಿಡಿದು ಜಾತಿ, ಪಂಥ, ಸಮಾಜ, ಭಕ್ತಿ, ಆತ್ಮ, ದೇವರು ಮೋಕ್ಷ ಮೊದಲಾದ ಜೀವನದ ಎಲ್ಲ ಹಂತಗಳ ಕುರಿತು, ಹರಿತವಾದ ಭಾಷೆಯಲ್ಲಿ ಸವಿಸ್ತಾರವಾಗಿ ಬರೆದಿದ್ದಾರೆ. ಅವರು ಬರೆದ ಚುರುಕಾದ ವಚನಗಳು ವಾಚಕರ ಮನಸ್ಸಿನಲ್ಲಿ ಬಹು ವರ್ಷಗಳವರೆಗೆ ಉಳಿಯುವಂಥವುಗಳಾಗಿವೆ. ಇವುಗಳಲ್ಲಿಯ ಹಲವು ನುಡಿಗಳು, ಗಾದೆಯ ಮಾತುಗಳಾಗಿ ಜನಜೀವನದಲ್ಲಿ ಶಾಶ್ವತ ಸ್ಥಾನ ಪಡೆಯುವಂಥವುಗಳಾಗಿವೆ.

ಶ್ರೀ ಪೋಳ ಅವರು ಕನ್ನಡ ಸಾಹಿತ್ಯದಲ್ಲಿ ನುರಿತವರು, ಆಳವಾಗಿ ಅಭ್ಯಸಿಸಿದವರು, ಗದ್ಯ ಪದ್ಯಗಳೆರಡರಲ್ಲಿಯೂ ಕೈಯಾಡಿಸಿದವರು, ಭಾಷೆಯ ಮೇಲೆ ಪ್ರಭುತ್ವವುಳ್ಳವರೂ ಆಗಿರುವರು. ಶ್ರೀ ಪೋಳ ಅವರ ಪ್ರತಿಭೆಯ ಫಲಗಳಾಗಿ ಕುಮಾರ ಕಕ್ಕಯ್ಯನ ವಚನಗಳು ಪ್ರಕಟಗೊಂಡಿವೆ.

**– ಬಸವರಾಜ ಕಟ್ಟೀಮನಿ ಖ್ಯಾತ ಕಾದಂಬರಿಕಾರಿ ಧಾರವಾಡ** (ಕುಮಾರ ಕಕ್ಕಯ್ಯನ ವಚನಗಳು – ಮುನ್ನುಡಿ ಪುಟ ೧–೨)

೬

"ಶ್ರೀ ಬಿ.ಎಸ್.ಪೋಳ ಅವರು ವಿಜಾಪೂರ ಜಿಲ್ಲೆಯಲ್ಲಿ ಈಗಾಗಲೇ ಲೇಖಕರಾಗಿ ಹೆಸರುಗಳಿಸಿದ್ದಾರೆ. ಅವರು 'ಕುಮಾರ ಕಕ್ಕಯ್ಯನ ವಚನಗಳು' ಈ ವಚನ ಸಂಗ್ರಹದಲ್ಲಿ ವರ್ತಮಾನದ ಬದುಕನ್ನು ಬಿಡುಗಣ್ಣಾಗಿ ನೋಡಿ ತಮ್ಮ ಪ್ರತಿಕ್ರಿಯೆಯನ್ನು ದಾಖಲು ಮಾಡಿದ್ದಾರೆ. 'ಕುಮಾರ ಕಕ್ಕಯ್ಯ'ಎಂಬ ಕಾವ್ಯನಾಮದಿಂದ ಕರೆದುಕೊಂಡಿದ್ದಾರೆ.

ಪಂಪನನ್ನು ಮೆಚ್ಚಿಕೊಂಡ ನಾಗಚಂದ್ರ ಕವಿ ತನ್ನನ್ನು 'ಅಭಿನವ ಪಂಪ' ಎಂದು ಕರೆದುಕೊಂಡಿದ್ದಾನೆ. ವ್ಯಾಸನನ್ನು ಆದರ್ಶವಾಗಿ ಇರಿಸಿಕೊಂಡ ಅರ್ವಾಚೀನ ಕವಿ ತನ್ನನ್ನು 'ಕುಮಾರವ್ಯಾಸನೆಂದೂ' ಹಾಗೆಯೇ ಇನ್ನೂ ಕೆಲವು ಕವಿಗಳು ತಮ್ಮನ್ನು ಹಿರಿಯ ಕವಿಯ ಹೆಸರಿನ ಜೊತೆಗೆ ಇರಿಸಿಕೊಂಡು ಹೊಸ ಹೆಸರನ್ನು

ಕಲ್ಪಿಸಿಕೊಂಡಿರುವುದು ಕಂಡು ಬರುತ್ತದೆ. ಬಸಪ್ಪ ಶಾಸ್ತ್ರಿಗಳಿಗೆ 'ಆಭಿನವ ಕಾಳಿದಾಸ'ಎಂಬ ಪ್ರಶಸ್ತಿ ಇದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಇದೇ ರೀತಿ ಶ್ರೀ ಬಿ.ಎಸ್.ಪೋಳ ಅವರು 'ಕುಮಾರ ಕಕ್ಕಯ್ಯ' ಎಂಬ ಕಾವ್ಯನಾಮದಿಂದ ವಚನಗಳನ್ನು ರಚಿಸಿದ್ದಾರೆ. ತಮ್ಮ ಸುತ್ತಲ ಬದುಕನ್ನು ಅವರು ಹೇಗೆ ಗ್ರಹಿಸಿದ್ದಾರೆಂಬುದನ್ನು ಇಲ್ಲಿನ ಅನೇಕ ವಚನಗಳು ತಿಳಿಸುತ್ತವೆ. ಬಹುಪಾಲು ವಚನಗಳು ನೀತಿಬೋಧನೆ, ಧಾರ್ಮಿಕ ದೃಷ್ಟಿ, ವೈರಾಗ್ಯಭಾವ ಮುಂತಾದ ಆದರ್ಶಗಳನ್ನು ಎತ್ತಿ ಹಿಡಿದಿವೆ. ಸಹಜವಾಗಿಯೇ ಇಂಥ ವಚನಗಳಲ್ಲಿ ಕಾವ್ಯಾಂಶ ಕಡಿಮೆಯಾಗಿ ಚಿಂತನಾಂಶಗಳು ಅಧಿಕವಾಗಿರುತ್ತವೆ"

**– ಹಂ.ಪ.ನಾಗರಾಜಯ್ಯ** ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. (ಕುಮಾರ ಕಕ್ಕಯ್ಯನ ವಚನಗಳು ಅಭಿಪ್ರಾಯ–ಪು.೧–೨)

೭

'ಕುಮಾರ ಕಕ್ಕಯ್ಯ ಶ್ರೀ ಪೋಳರ ಕಾವ್ಯನಾಮ
ಅವರು ಬರೆದ ವಚನ ಹವಳ ಮುತ್ತಿನಹಾರ
ಅಳತಿಗೆ ದೂರಾಗಿ ನಾಣ್ಣುಡಿಗೆ ಗಣಿಯಾಗಿ
ಹೇಳುತಿವೆ ಹಿತವಚನ ಜಾಣ್ಣುಡಿಗೆ ತವರಾಗಿ
ಹೆಣ್ಣು ಗಂಡಿನ ವಿಷಯ ನೈಪುಣ್ಯ ಪಡೆದಂತೆ
ಜಾತಿ ಲಂಚದ ಮಾತು ಚಾವಟಿಯಿಂ ಹೊಡೆದಂತೆ
ಕರ್ಮಧರ್ಮದ ನುಡಿಯು ಕಿಡಿಗುಂಡ ಸಿಡಿದಂತೆ
ಸಿರಿಹೊಂದಿ ಇಹುದಿಲ್ಲಿ ಭಂಡಾರ ಒಡೆದಂತೆ॥
ಜಗದ ಡೊಂಕಿಗೆ ಹಿಡಿದ ರನ್ನಗನ್ನಡಿಯಾಗಿ
ಮುಂಬರುವ ಲೋಕಕ್ಕೆ ಶುದ್ಧ ಹೊನ್ನುಡಿಯಾಗಿ
ಪೋಳ ಹೇಳಿದ ನುಡಿಯು ಶರಣರಾ ನುಡಿಯಂತೆ
ಕೊನರಿಹುದು ಗೋಸ್ತನದ ಮಾಬಳ್ಳಿ ಕುಡಿಯಂತೆ ॥

**– ಡಾ॥ ಆರ್.**ಸಿ. **ಮುದ್ದೇಬಿಹಾಳ** ಖ್ಯಾತ ಕವಿಗಳು, ವಿಜಾಪೂರ. ಕುಮಾರ ಕಕ್ಕಯ್ಯನ ವಚನಗಳ ಕುರಿತು ಅನಿಸಿಕೆ ಪುಸ್ತಕದ ಕವ್ಹರ ಪುಟ iv)

೮

"ಶ್ರೀ ಬಿ ಎಸ್ ಪೋಳರು ರಚಿಸಿದ 'ಕುಮಾರ ಕಕ್ಕಯ್ಯನ ವಚನಗಳು' ವಚನ ಸಾಹಿತ್ಯದಲ್ಲಿ ಒಂದು ಮಹತ್ವದ ಮೈಲುಗಲ್ಲಾಗಿ ನಿಲ್ಲಬಹುದಾಗಿದೆ..... 'ಅಸ್ಪೃಶ್ಯತೆಯ ನೋವು ಅಸ್ಪೃಶ್ಯರಿಗಲ್ಲದೆ ಜಾತ್ಯಾಂಧರಿಗೆ ತಿಳಿಯದು' ಎಂಬ ಇವರ ವಚನವು ಅಸ್ಪೃಶರಾಗಿ ಕಂಡುಂಡ ನೋವಿನ ಅವಿರ್ಭಾವವಾಗಿದೆ. ಶ್ರೀಯುತರು ಎಲೆಯಮರೆಯ ಕಾಯಾಗಿ ತಮ್ಮ ರಚನಾತ್ಮಕ ಸಾಹಿತ್ಯ ಸೇವೆಯನ್ನು ಸಲ್ಲಿಸುತ್ತಲೇ ಇದ್ದಾರೆ. ಆದಾಗ್ಯೂ ದಲಿತರನ್ನು ಯಾರು ಕೇಳಬೇಕು? ದಲಿತಸಾಹಿತ್ಯಕ್ಕೆ ಬೆಲೆ

ಎಲ್ಲಿ? ಕುಲಜರ ಕುತಂತ್ರಕ್ಕೆ ರೋಸಿಹೋದ ಶ್ರೀ ಪೋಳರು ಹೋರಾಟ ಕಣಕ್ಕಿಳಿದು ಈ 'ಕುಮಾರ ಕಕ್ಕಯ್ಯನ ವಚನಗಳ'ನ್ನು ರಚಿಸಿಯೇ ಬಿಟ್ಟಿದ್ದಾರೆ.

ಈಗಿನ ಜನಜೀವನವನ್ನು ತಿದ್ದಲೆತ್ನಿಸುವ ಪ್ರಯತ್ನ ಈ ವಚನಗಳಲ್ಲಿ ಕಾಣಬಹುದಾಗಿದೆ. ನಿರ್ಮಲ ಹೃದಯದಿಂದ ಯೋಚಿಸಿದ ವಚನಗಳು ಕಿಡಿನುಡಿಗಳಾಗಿ ಹೊರಹೊಮ್ಮಿವೆ. ಪ್ರಾಮಾಣಿಕ ಅನಿಸಿಕೆಗಳೆ ವಚನಗಳಾಗಿ ಮಾರ್ಪಟ್ಟಿವೆ..... 'ಅನ್ಯರೊರೆದುದನೆ ನಾ ಬರೆ, ಬರೆದು ಭಿನ್ನವಾಗಿದೆ ಮನವು' ಎಂಬ ಕವಿಯೋರ್ವರ ಧಾಟಿಯಲ್ಲಿಯೇ ಶ್ರೀ ಪೋಳರು ಸಾಗಿದ್ದಾರೆ. ಪರಂಪರೆಯ ಅರ್ಥಶೂನ್ಯತೆಗೆ ಜೋತುಬೀಳದೆ, ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಂಡ ಶ್ರೀಬಿ.ಎಸ್.ಪೋಳರಿಗೆ ಉಜ್ವಲ ಭವಿಷ್ಯವಿದೆ.

**-ವೀರಶ್ರೀ ಬ.ವೀ.ಹಂಪನಗೌಡ್ರು ವಿಜಾಪುರ** (ಕುಮಾರಕಕ್ಕಯ್ಯನ ವಚನಗಳು-ಒಮ್ಮನದ ನುಡಿ.ಪು.೧-೨)

೬

"ಕುಮಾರ ಕಕ್ಕಯ್ಯ ಪೋಳರವರು ವಚನಸಾಹಿತ್ಯಕ್ಕೆ ಅದ್ಭುತವಾದ ಕೊಡುಗೆಯನ್ನು ನೀಡಿದ್ದಾರೆ. ವೀರಶೈವಧರ್ಮವು ದಲಿತರಿಂದ ದಲಿತರಿಗಾಗಿಯೇ ಹುಟ್ಟಿದ ಧರ್ಮವೆಂದು ಪ್ರತಿಪಾದಿಸಿದ ಪೋಳರವರು ಆ ಧರ್ಮದಲ್ಲಿ ನುಸುಳಿರುವ ಪರೋಹಿತಶಾಹಿ ಕ್ರಿಮಿಗಳ ವಿರುದ್ಧ ಸಮರವನ್ನೇ ಸಾರಿದರು. ಬಸವಣ್ಣನ ಕಾಲದಲ್ಲಿದ್ದ ವಚನಗಕಾರರ ನಂತರ ಅವರಷ್ಟೇ ಪ್ರಭಾವಶಾಲಿಯಾಗಿ ಜನಪರ ವಿಚಾರಗಳನ್ನು ವಚನಗಳಾಗಿ ಬರೆದವರು ಪೋಳರು ಮಾತ್ರ ಎಂದು ಕಾಣುತ್ತದೆ. ಕುಮಾರ ಕಕ್ಕಯ್ಯನ ವಚನಗಳು ಎಂಬ ೧೨೩೫ ವಚನಗಳ ಸಂಕಲನವು ಈ ನಮ್ಮ ತೀರ್ಮಾನಕ್ಕೆ ಸಾಕ್ಷಿಯಾಗಿದೆ. ವೀರಶೈವರಲ್ಲೂ ಕಾಣಸಿಗದಂತಹ ಅಪರೂಪದ ಅತ್ಯುತ್ತಮ ವಚನಕಾರರು ಇವರಾಗಿದ್ದರು ಎಂಬುದು ಇಡೀ ದಲಿತ ಸಮಾಜವು ಹೆಮ್ಮೆ ಪಡಬೇಕಾದ ವಿಷಯುವಾಗಿದೆ. ವೀರಶೈವ ಸಾಹಿತ್ಯದಲ್ಲಿ ಮಹಾಪಂಡಿತರೆನಿಸಿಕೊಂಡವರೂ ಸಹ ಅವರಿಗೆ ಸವಾಲು ಹಾಕಲು ಅಂಜುತ್ತಿದ್ದರೆಂದ ಮೇಲೆ ಅವರ ಅಧ್ಯಯನದ ಆಳವನ್ನು ನಾವು ಅರ್ಥಮಾಡಿಕೊಳ್ಳಬೇಕು. ೧೫ ಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿರುವ ಪೋಳರ ಒಂದೊಂದು ಪುಸ್ತಕವೂ ಒಂದೊಂದು ಡೈನಾಮೈಟ್ ಆಗಿವೆ,........ ಪೋಳರು ಬರೆದಿರುವ ಪ್ರತಿಯೊಂದು ಪುಸ್ತಕದಲ್ಲೂ ಹೊಸವಿಚಾರಗಳು, ಮಲೆತು ಮಡುಗಟ್ಟಿ ನಿಂತಿರುವ ಸಮಾಜಕ್ಕೆ ಶಾಕ್ ಕೊಡುವ ವಿಚಾರಗಳು ತುಂಬಿವೆ."

"ತಮ್ಮ ಸಮಾಜಕ್ಕೆ ಆವರಿಸಿರುವ ದುಃಖದ ಮೂಲವನ್ನು ಅರಸಿಹೋದ ಭೀಮರಾಯರಿಗೆ (ಪೋಳರಿಗೆ) ಬುದ್ಧ, ಬಸವ ಮತ್ತು ಬಾಬಾಸಾಹೇಬ ಅಂಬೇಡ್ಕರರ ವಿಚಾರಗಳು ಮಾರ್ಗದರ್ಶಿಗಳಾದವು. ಇಂತಹ ಪ್ರಕ್ರಿಯೆಯಲ್ಲಿ ಅವರಿಂದ ಸಾಹಿತ್ಯವು ಸೃಷ್ಟಿಯಾಗತೊಡಗಿತು. ವಚನಕಾರರಲ್ಲಿ ಪ್ರಖ್ಯಾತ

ವಚನಕಾರರಾಗಿದ್ದ ಡೋಹರ ಕಕ್ಕಯ್ಯನವರ ನೆನಪಿನಲ್ಲಿ ಭೀಮರಾಯರು 'ಕುಮಾರ ಕಕ್ಕಯ್ಯ'ರಾದರು. ಈ ಕಾವ್ಯನಾಮದಿಂದಲೇ ಚಿರಪರಿಚಿತರಾಗತೊಡಗಿದರು".

**–ಪ್ರಕಾಶಕರು, ಕರ್ನಾಟಕ ದಲಿತ ಕ್ರಿಯಾ ವೇದಿಕೆ,** ಮೂಲನಿವಾಸಿಗಳ ಮಹಾ ಒಕ್ಕೂಟ ಇಂಡಿಯಾ (ಚಾತುರ್ವರ್ಣ ಧರ್ಮದರ್ಶನ ನಮ್ಮ ಮಾತು ಪುಟ iv-v)

೧೦

"ನಿವೃತ್ತ ತಹಶೀಲದಾರರಾದ ಶ್ರೀಬಿ.ಎಸ್.ಪೋಳ ಇವರು ಕಲ್ಯಾಣನಾಡಿನ ಶರಣ ಪರಿಷತ್ತಿನ ಅಧ್ಯಕ್ಷರಾಗಿದ್ದಾರೆ. ಇವರು 'ಕುಮಾರ ಕಕ್ಕಯ್ಯ" ಎಂಬ ಕಾವ್ಯನಾಮದಿಂದ ಸಾಕಷ್ಟು ಕಥೆ,ಕಾದಂಬರಿ,ನಾಟಕ,ಕಾವ್ಯ,ವಚನಗಳನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ಹೆಸರುಗಳಿಸಿದವರಾಗಿದ್ದಾರೆ. ಪ್ರತಿಭಾವಂತರಾದ ಕುಮಾರ ಕಕ್ಕಯ್ಯ ಇವರು ಬಸವಾದಿ ಪ್ರಮಥರು ಸಾರಿಹೋದ ವಿಶ್ವಧರ್ಮದ ತಿರುಳನ್ನು ಆಳವಾಗಿ ಅಭ್ಯಾಸ ಮಾಡಿದವರಾಗಿದ್ದಾರೆ. ಬಂಡೆಗಲ್ಲಾದ ಜಿಡ್ಡು ಸಂಪ್ರದಾಯ,ಮೂಢನಂಬಿಕೆ, ಅಂಧಾನುಕರಣೆಯ ಕಂದಾಚಾರ ಇತ್ಯಾದಿಗಳಲ್ಲಿ ತೇಲಿ ಮುಳುಗುತ್ತಿರುವ ಸಮಾಜವನ್ನು ನಿರೀಕ್ಷಿಸಿ, ಮನನೊಂದು 'ಲೋಕವಿರೋಧಿ ಶರಣ ಆರಿಗೂ ಅಂಜುವನಲ್ಲ' ಎಂಬ ಬಸವಣ್ಣನವರ ದಿಟ್ಟ ನಿಲುಮೆಯನ್ನು ಅರ್ಥೈಸಿಕೊಂಡು ಸ್ವರಚಿತ 'ಶರಣರ ಸಮಗ್ರ ಕ್ರಾಂತಿ' ಎಂಬ ವಚನ ಸಂಕಲನವನ್ನು ಹೊರತಂದಿದ್ದಾರೆ.

ಓದುವ ಸಹೃದಯರ ಮನಸ್ಸಿನ ಮೇಲೆ ಅಚ್ಚೊತ್ತುವಂತೆ ಬರೆಯುವ ಕಲೆಯನ್ನು ಕರಗತ ಮಾಡಿಕೊಂಡಿರುವ ಶರಣ ಕುಮಾರ ಕಕ್ಕಯ್ಯ ಇವರ ಶರಣಸಾಹಿತ್ಯದ ಚಿಂತನಶೀಲ ವ್ಯಕ್ತಿತ್ವ ಅವರ ಪ್ರತಿವಚನದಲ್ಲಿ ಮೈದಳೆದು ನಿಂತಿದೆ. ಶೈಲಿಯ ಸೊಗಸು,ತತ್ವದ ಗಾಂಭೀರ್ಯ, ಭಾಷೆಯ ಸರಳತೆ, ಭಾವದ ತೀವ್ರತೆ ಇವರ ಶರಣರ ಸಮಗ್ರ ಕ್ರಾಂತಿಯಲ್ಲಿ ಕಾಣಬಹುದು. ಕಿರಿದರಲ್ಲಿ ಹಿರಿದರ್ಥ ತುಂಬುವ ಜಾಣ್ಮೆ ಇವರ ವಚನಗಳಲ್ಲಿ ಎದ್ದು ಕಾಣುತ್ತದೆ.

ಬಸವಾದಿ ಪ್ರಮಥರ ಧಾರ್ಮಿಕ ಕ್ರಾಂತಿಯ ಮುಖವಾಣಿಯಾಗಿ ಮೂಡಿಬಂದ ವಚನಸಾಹಿತ್ಯದ ರೂಪ ಆಧುನಿಕ ಕಾಲದವರೆಗೂ ಉಳಿದು ಹಲವಾರು ಜನ ಪ್ರತಿಭಾವಂತರಿಂದ ಹುಲುಸಾಗಿ ಬೆಳೆದು ಬಂದಿರುವದು ನಮ್ಮ ನಾಡಿನ ಭಾಗ್ಯವಿಶೇಷ. ಇಂಥ ವಚನರಚನೆಯ ಪರಂಪರೆಯಲ್ಲಿ ಕುಮಾರ ಕಕ್ಕಯ್ಯನವರ ಈ ವಚನಗಳಿಗೆ ಮಹತ್ವದ ಸ್ಥಾನವಿದೆ. ಶರಣಸಾಹಿತ್ಯದ ವಚನಲೋಕದಲ್ಲಿ ಸ್ಥಿರವಾಗಿ ಉಳಿಯುವಂಥವುಗಳಾಗಿವೆ.

**–ಶ್ರೀಮನಿಪ್ರ ಮಹಾಂತಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲ** ('ಶರಣರ ಸಮಗ್ರ ಕ್ರಾಂತಿ' ವಚನಗಳಿಗೆ ಆಶೀರ್ವಚನ–ಪುಟ ೩–೪)

೧೧

"ಸಮಾಜದ ಎಲ್ಲ ಸ್ಥರದ ಜನಗಳಿಗೆ ಸಂಬಂಧಿಸಿದ ಶೋಷಣಾ ಚಿತ್ರವನ್ನು ಬುದ್ಧ ಬಸವ ಅಂಬೇಡ್ಕರರ ವಿಚಾರದಾರೆಯಲ್ಲಿ, ನಿಮ್ಮ ಪ್ರಗತಿಪರ ವೈಚಾರಿಕ

ಮೂಸೆಯಲ್ಲಿ ಕರಗಿಸಿ, ಅಪ್ಪಟ ಸುಂದರ ಸುಲಲಿತ ಶಬ್ದಮಣಿಗಳನ್ನು ಒಂದೇ ಸೂತ್ರದಲ್ಲಿ ಪೋಣಿಸಿದ ನಿಮ್ಮ ವೈವಿಧ್ಯಮಯ ಚಿಂತನೆಯ ಅನುಭಾವ ಸಾಹಿತ್ಯ, ನಿಜಕ್ಕೂ ಅನುಪಮವಾದುದು ಹಾಗೂ ಸರಳ ಸುಂದರವಾದುದು.

**–ಪೂಜ್ಯ ಜಗದ್ಗುರು ಶ್ರೀ ಬಸವರಾಜ ಪಟ್ಟದಾರ್ಯ ಮಹಾಸ್ವಾಮಿಗಳು** ಗುರುಸಿದ್ದೇಶ್ವರ ಬೃಹನ್ಮಠ ಗುಳೇದಗುಡ್ಡ (ಕುಮಾರ ಕಕ್ಕಯ್ಯನ ವಚನಗಳು (೧೯೯೩) ಪು – ೩೧೪)

೧೨

"ಪತ್ರಿಕೆಗಳಲ್ಲಿ ನಿಮ್ಮ ಉದ್ಬೋಧಕ ವಚನಗಳನ್ನು, ವೈಚಾರಿಕ ಲೇಖನಗಳನ್ನು ಓದಿ ಪ್ರಭಾವಿತನಾಗಿದ್ದ ನಾನು ನಿಮ್ಮ ಈ ವಚನ ಸಂಗ್ರಹವನ್ನು ಓದಿ ಪುಲಕಿತನಾದೆ. ಎಷ್ಟೊಂದು ವಿಷಯಗಳ ಬಗ್ಗೆ ಎಷ್ಟೊಂದು ಆಳವಾಗಿ ಆಲೋಚಿಸಿರುವಿರಿ. ಅವುಗಳಿಗೆ ಎಷ್ಟೊಂದು ಪ್ರಾಮಾಣಿಕ ಅಭಿವ್ಯಕ್ತಿಯನ್ನು ನೀಡಿರುವಿರಿ. ನಿಮ್ಮ ೭ ವಚನಗಳಲ್ಲಿ ಮನೋಜ್ಞವಾಗಿ ಮುಡಿನಿಂತಿರುವ ನಿಮ್ಮ ಮಾನವೀಯ ದೃಷ್ಟಿ ೧೨ ವಚನಗಳಲ್ಲಿ ನೀವು ಕಂಡಿರಿಸಿರುವ ಬಸವಣ್ಣನವರ ಮಹೋನ್ನತ ಮೂರ್ತಿಸ್ವರೂಪ, ೧೧ ವಚನಗಳಲ್ಲಿ ನೀವು ವಿಶದೀಕರಿಸಿರುವ ಬಸವಧರ್ಮ ಅನನ್ಯತೆ, ಇನ್ನುಳಿದ ಅನೇಕ ವಚನಗಳಲ್ಲಿ ಸುಸ್ಪಷ್ಟವಾಗಿರುವ ನಿಮ್ಮ ಸಾಮಾಜಿಕ ಕ್ರಾಂತಿಯ ಕಳಕಳಿಗಳು, ಓದುಗರ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತುವಂಥವುಗಳಾಗಿವೆ. ಶಿವಾನುಭವ ಲೋಕಾನುಭವಗಳ ಹೃದಯಂಗಮ ಸಂಗಮದಂತಿರುವ ಈ ವಚನಗಳಿಗೆ, ಸರ್ವತ್ರ ಸ್ವಾಗತದೊರೆಯಲೆಂದು ಶುಭ ಹಾರೈಸುತ್ತೇನೆ.

ನನಗೆ ಹಿಡಿಸಲಾರದಷ್ಟು ಹಿಗ್ಗು. ತನ್ನ ಹೆಸರನ್ನು ಸುಲಿಗೆಗಾಗಿ ಬಳಸಿಕೊಳ್ಳುತ್ತಿರುವ ಸನ್ಯಾಸಿ ಸಾಹಿತಿ ಮತ್ತು ರಾಜಕಾರಣಿಗಳಿಂದ, ಬಸವಣ್ಣ ಈಗ ನಿಮ್ಮಂಥ ನಿಜನಿಷ್ಠರ ಕೈಸೇರುತ್ತಲಿದ್ದಾರೆ. ಅವರನ್ನು ಈ ಆಷಾಢಭೂತಿಗಳಿಂದ ಬಿಡಿಸಿಕೊಂಡು ಶ್ರೀ ಸಾಮಾನ್ಯರಿಗೆ ಮುಟ್ಟಿಸುತ್ತಿರುವ ನಿಮ್ಮ ಈ ಮಣಿಹಕ್ಕೆ ಎಲ್ಲ ಯಶಸ್ಸನ್ನು ಕೋರುತ್ತ, ನಿಮ್ಮ ನಿರ್ಭೀತ, ನ್ಯಾಯನಿಷ್ಠುರ ಮತ್ತು ಪುರೋಗಾಮಿ ವಿಚಾರಧಾರೆಗಾಗಿ ನಿಮ್ಮನ್ನು ಮನಃಪೂರ್ವಕ ಅಭಿನಂದಿಸುತ್ತೇನೆ.

**–ಡಾ॥ ಸಿದ್ದಯ್ಯ ಪುರಾಣಿಕ (ಕಾವ್ಯಾನಂದ)** ಆಧುನಿಕ ವಚನಕಾರರು,ಬೆಂಗಳೂರು. (ಕುಮಾರ ಕಕ್ಕಯ್ಯನ ವಚನಗಳು (೧೯೯೩) ಅನಿಸಿಕೆಗಳು ಪು– ೩೧೩)

೧೩

"ಬಾಲಕರಿಂದ ವಯೋವೃದ್ಧರವರೆಗೆ, ಸಂಸಾರಿಗಳಿಂದ ಸನ್ಯಾಸಿಗಳವರೆಗೆ, ದೀನ ದಲಿತರಿಂದ ಕುಲಜ ಅಗ್ರಜರವರೆಗೆ ಮತ್ತು ಪ್ರಜೆಗಳಿಂದ ಪ್ರಭುಗಳ ವರೆಗೆ ಎಲ್ಲರೂ ಓದಿ ಸವಿಯಬಹುದಾದ ೧೨೩೫ ವಚನಗಳುಳ್ಳ 'ಕುಮಾರ ಕಕ್ಕಯ್ಯನ ವಚನಗಳು' ಈ ಪುಸ್ತಕವನ್ನು ಸರ್ವರೂ ಓದಿ, ತಮ್ಮ ಜಿವನವನ್ನು ಸಾರ್ಥಕ ಗೊಳಿಸಿಕೊಳ್ಳಲೆಂದೇ ನನ್ನ ಆಸೆ".

**–ಸನ್ಮಾನ್ಯ ಶ್ರೀ ಡಾ॥ ಬಿ.ಡಿ.ಜತ್ತಿ ಮಾಜಿ ಉಪರಾಷ್ಟ್ರಪತಿಗಳು** ಮತ್ತು ಅಧ್ಯಕ್ಷರು ಬಸವ ಸಮಿತಿ ಬೆಂಗಳೂರು. (ಕುಮಾರ ಕಕ್ಕಯ್ಯನ ವಚನಗಳು (೧೯೯೩) ಅನಿಸಿಕೆಗಳು ಪುಟ– ೩೧೪)

೧೪

"ಅನುಭವ ಪ್ರಮಾಣಿಕತೆಯಿಂದ ಮತ್ತು ವೈಚಾರಿಕ ನಿರ್ಭೀತಿಯಿಂದ ಮೂಡಿ ಬಂದಿರುವ ನಿಮ್ಮ ವಚನಗಳು ಮನ ಸೆಳೆಯುತ್ತವೆ"
**–ಡಾ॥ಎಚ್.ತಿಪ್ಪೇರುದ್ರಸ್ವಾಮಿಗಳು, ಖ್ಯಾತ ಶರಣಸಾಹಿತಿಗಳು** ಹಾಗೂ ಅಧ್ಯಕ್ಷರು ಶರಣಸಾಹಿತ್ಯ ಪರಿಷತ್ತು ಮೈಸೂರು ಕುಮಾರ ಕಕ್ಕಯ್ಯನ ವಚನಗಳು (೧೯೯೩) ಪುಟ ೩೧೪)

೧೫

"ವಚನ ಮಾಧ್ಯಮದ ಮೂಲಕ, ಪ್ರಗತಿಪರ ವಿಚಾರಗಳನ್ನು ಕುಮಾರ ಕಕ್ಕಯ್ಯ ಪೋಳರು ಪ್ರಚುರ ಪಡಿಸುತ್ತ ಬಂದಿರುವುದು ಸ್ತುತ್ಯ ಸಂಗತಿ. ಬಹುಸಂಖ್ಯಾತ ಜನರ ವಿಚಾರಸ್ವಾತಂತ್ರ್ಯವನ್ನು ಅಪಹರಿಸಿ, ಶತ ಶತಮಾನಗಳಿಂದ ಅವರನ್ನು ಧರ್ಮ, ದೇವರು, ಆತ್ಮ, ಮುಕ್ತಿ ಹಾಗೂ ಜೀವನ ಸಿದ್ಧಾಂತಗಳು ಬಗ್ಗೆ ಪರಾವಲಂಬಿಗಳನ್ನಾಗಿ ಮಾಡಿದ ಪುರೋಹಿತಶಾಹಿಯ ವಿರುದ್ಧ ಸಿಡಿದೆದ್ದ, ಬುದ್ಧ ಬಸವ ಮತ್ತು ಭೀಮರು ತೋರಿದ ಬೆಳಕಿನಲಿ, ನಿಮ್ಮ ಬರವಣಿಗೆ ಸಾಗಿರುವುದು ನನಗೆ ಬಹಳೇ ಸಂತೋಷವನ್ನುಂಟು ಮಾಡಿದೆ.
**– ಶ್ರೀ ಅನ್ನದಾನಯ್ಯ ಪುರಾಣಿಕ ವಕೀಲರು ಹಾಗೂ** ಆಧುನಿಕ ವಚನಾಕಾರರು, ಬೆಂಗಳೂರು (ಕುಮಾರ ಕಕ್ಕಯ್ಯನ ವಚನಗಳು ಅನಿಸಿಕೆ–ಪುಟ ೩೧೪)

೧೬

"ಯಾವನು ಹೊಸ ವಿಚಾರಗಳನ್ನು ಹೇಳುವನೋ ಅವನೇ ಬರಹಗಾರ' ಎಂಬ ನಿಮ್ಮ ವಚನದ ಸಾಲು, ನಿಮ್ಮ ಎಲ್ಲ ಬರಹಗಳಿಗೂ ಅನ್ವಯಿಸುವಂತಿದೆ. ಸ್ವತಂತ್ರ ವಿಚಾರ ಹಾಗೂ ಜೀನನಾನುಭವಗಳಿಂದ, ಸರಳಶೈಲಿಯಲ್ಲಿ ಮೂಡಿಬಂದಿರುವ ನಿಮ್ಮ 'ಕುಮಾರ ಕಕ್ಕಯ್ಯನ ವಚನಗಳು, ನಿಮ್ಮ ಅನುಭವದ ಅಮೌಲ್ಯ ಭಂಡಾರ ಓದುಗರಲ್ಲಿ ಪ್ರಗತಿಪರ' ವಿಚಾರಗಳನ್ನು ಬಿಂಬಿಸುವಲ್ಲಿ, ಇವುಗಳ ಪಾತ್ರ ಬಹಳ ದೊಡ್ಡದೆಂದು ನಾನು ಭಾವಿಸಿದ್ದೇನೆ. ವಚನಗಳ ರಚನೆಯಲ್ಲಿ ನಿಮ್ಮದೇ ಆದ ರೀತಿಯೊಂದನ್ನು ಪಡೆದುಕೊಂಡಿರುವುದು ಸ್ಪಷ್ಟವಾಗಿದೆ. ಈ ವಿಶಿಷ್ಟ ಸಾಧನೆಗಾಗಿ ನಿಮ್ಮನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ."
**–ಡಾ॥ ಚೆನ್ನವೀರ ಕಣವಿ ಪ್ರಸಿದ್ಧ ಕವಿಗಳು,ಧಾರವಾಡ** (ಕುಮಾರ ಕಕ್ಕಯ್ಯನ ವಚನಗಳು–ಅನಿಸಿಕೆ ಪುಟ (೩೧೫)

೧೭

"೨೦ನೇ ಶತಮಾನದ ಬದುಕಿನ ವೈವಿಧ್ಯಮಯ ಅನುಭವವನ್ನು ನಿವೇದಿಸುವ ಅನಿವಾರ್ಯತೆಯನ್ನು 'ಕುಮಾರ ಕಕ್ಕಯ್ಯನ ವಚನಗಳು' ತಿಳಿಸುತ್ತವೆ. ಸರಳತೆ,

ಸ್ವತಂತ್ರಧೀರ ಸಿದ್ಧೇಶ್ವರನಾಣೆ ನಿಮಗೆ :
ಬೆಂಕಿಗೆ ಹೊಯ್ಯುವ ತುಪ್ಪವ
ಕಲ್ಲಿಗೆರೆಯುವ ಹಾಲ,
ಕಾಗೆಗಿಕ್ಕುವ ಅನ್ನವ
ಹಸಿದವರಿಗೆ ನೀಡಿ ಧನ್ಯರಾಗಿರಯ್ಯಾ ![೪೦]

ಈ ವಚನದಲ್ಲಿ ಡಾ॥ ಸಿದ್ಧಯ್ಯ ಪುರಾಣಿಕರ ಮಾನವೀಯ ಕಳಕಳಿ ಕಾಣುತ್ತೇವೆ. ಮೂಢ ಸಂಪ್ರದಾಯಕ್ಕೆ ತೆಕ್ಕೆ ಬಿದ್ದಿರುವ ಕರ್ಮಠ ಪುರೋಹಿತರು ಮಾಡುವ ಯಜ್ಞ-ಯಾಗ, ಹೋಮ ಹವನಗಳಲ್ಲಿ ಟನ್‌ಗಟ್ಟಲೇ ತುಪ್ಪವನ್ನು ಬೆಂಕಿಗೆ ಸುರುವಿ ಹಾಳು ಮಾಡುವದನ್ನು, ಕಲ್ಲ ನಾಗರ ಮೇಲೆ ಲಕ್ಷಾಂತರ ಲೀಟರ್ ಹಾಲು ಸುರಿದು ಮಣ್ಣುಪಾಲು ಮಾಡುವದನ್ನು, ಪಿತೃಗಳ ಶ್ರಾದ್ಧವೆಂದು ತಿಥಿ ಮಾಡಿ ಕಾಗೆಗೆ ಅನ್ನವಿಕ್ಕುವದನ್ನು ವಿಡಂಬನೆಗೈದಿದ್ದಾರೆ.

ರಾಮ ಜನ್ಮಭೂಮಿಯಲ್ಲಿ ರಕ್ತ ಹರಿದುದ ಕಂಡು
ರಾಮ ಬೊಂಬಡೆ ಹೊಡೆಯುತ್ತಿದ್ದಾನೆ.
ಬಾಬರಿ ಮಸೀದೆಗಾಗಿ ದೇಶ ಗಾಸಿಯಾದುದ ಕಂಡು
ಮಹಮ್ಮದ ಎದೆ ಎದೆ ಬಡಿದುಕೊಳ್ಳುತ್ತಿದ್ದಾನೆ.
ಇಬ್ಬರ ಭಕ್ತರಿಗೂ ತಾವು ಮಹಾಕಾರ್ಯ ಮಾಡಿದೆವೆಂಬ
ಪರಿತೋಷ, ಸ್ವರ್ಗಕ್ಕೆ ಪರ್ಮಿಟ್ಟು ಗಿಟ್ಟಿಸಿದೆವೆಂಬ ಹರ್ಷ !
ಎಂಥ ವಿಪರ್ಯಾಸ, ಧರ್ಮದ ದುರ್ವಿಲಾಸ –
ಸ್ವತಂತ್ರಧೀರ ಸಿದ್ಧೇಶ್ವರಾ![೪೧]

ಡಿಸೆಂಬರ ೬, ೧೯೯೨ ರಂದು ಅಯೋಧ್ಯೆಯಲ್ಲಿ ಬಾಬರಿ ಮಸೀದೆಯನ್ನು ಹಿಂದೂ ಸಂಪ್ರದಾಯವಾದಿಗಳು (ಮೂಲಭೂತವಾದಿಗಳು) ಭಗ್ನಗೊಳಿಸಿದರು. ಅದರ ಪರಿಣಾಮವಾಗಿ ದೇಶಾದ್ಯಂತ ಮುಸ್ಲಿಂ ಮೂಲಭೂತವಾದಿಗಳು ಸಾವಿರಾರು ದೇವಾಲಯಗಳನ್ನು ಹಾಳುಗೆಡವಿದರು. ಹಿಂದು ಮುಸ್ಲಿಂ ಇಬ್ಬರಿಗೂ ಏನೋ ಘನ ಕಾರ್ಯ ಸಾಧೀಸಿದೆವೆಂಬ ವಿಕಟ ಸಂತೋಷ! ಇದು ಧರ್ಮದ ದುರ್ವಿಲಾಸ, ಇದರಿಂದ ರಾಮ-ರಹೀಮರಿಬ್ಬರೂ ಸಂಕಟ ಪಡುವಂತಾಗಿದೆ ಎಂದು ಎಚ್ಚರಿಸುತ್ತಾರೆ.

**ಶ್ರೀ ಮಹಾದೇವ ಬಣಕಾರರು** ಗಡಿ ಹಿತರಕ್ಷಣೆಯ ಹೋರಾಟಗಾರ, ಕವಿ, ಪತ್ರಕರ್ತ, ಸಾಹಿತಿ, ಆಧುನಿಕ ವಚನಕಾರ, ಉತ್ತಮ ವಾಗ್ಮಿ, ಸಮಾಜ ಸೇವಕ, ರಾಜಕೀಯ ನೇತಾರರಾಗಿದ್ದರು. ೧೧೧೦ಲ ವಚನಗಳನ್ನು ರಚಿಸಿದ ಇವರು ನೇರ ನಡೆ-ನುಡಿಯ, ನ್ಯಾಯ-ನಿಷ್ಠುರ ವ್ಯಕ್ತಿಯಾಗಿದ್ದರು.

---

೪೦. ವಚನ ನಂದನ – ಸಿದ್ಧಯ್ಯ ಪುರಾಣಿಕ ವ-೨೩೬.
೪೧. ವಚನಾರಾಮ – ಸಿದ್ಧಯ್ಯ ಪುರಾಣಿಕ ವ-೫೯೭.

ಧಾರ್ಮಿಕ ಸಾಮಾಜಿಕ ಮೂಢ ನಂಬಿಕೆಗಳ ವಿರುದ್ಧ ಮಹಾದೇವ ಬಣಕಾರರು ಕಠೋರವಾಗಿ ವಚನ ಬರೆದು ಹೋರಾಟಮಾಡಿದವರು.

ಪಂಚಾಂಗವ ಪಿಡಿದು ಪಂಚಾಮೃತವ ಸೇವಿಸುವ
ಪಂಚಪಾತಕಿ ಜೋಯಿಸನಿಗೇನೆಂಬೆನಯ್ಯಾ ?
ಶುಭ ಲಗ್ನದಲಿ ಮಾಂಗಲ್ಯಧಾರಣ ಮಾಡಿಸಿದ!
ವಾರವೊಂದರಲಿ ವಿಧವೆಯಾದಳು
ವಾರವೆರಡರಲಿ ಒಬ್ಬ ವಿಧುರನಾದನು.
ಜೋಯಿಸನಿತ್ತ ಶುಭಯೋಗ, ಶುಭಲಗ್ನ
ಉಳಿಸಬಂದವೇ ಸಾವವರ ?
ಹೊಟ್ಟೆ ಹೊರೆವವರ ನಂಬಿ,
ಕೆಟ್ಟ ಕೇಡಿಂಗೆ ಕಡೆಯಿಲ್ಲ ನೋಡಾ!
ಎನ್ನ ವರಗುರು ಶಿವಕುಮಾರ ಪ್ರಭುವೇ.[೪೨]

ಪಂಚಾಂಗ –ಫಲಜ್ಯೋತಿಷ್ಯ, ಶುಭಲಗ್ನ, ಶುಭಯೋಗ ಮುಂತಾದ ಮೂಢ ನಂಬಿಕೆ, ಅಂಧ ಶ್ರದ್ಧೆಗಳನ್ನು ಖಂಡಿಸುತ್ತಾರೆ.

ಶ್ರೀ ಸಂಗಮೇಶ **ಹೊಸಮನಿ** ಅವರು 'ಶಿವಕವಿ' ಎಂದೇ ಖ್ಯಾತಿವೆತ್ತವರು. 'ಶ್ರೀ ಹೊಸಮನಿ ಅವರು ಭಾವಗೀತೆಯ ಕವಿಯಾಗಿ ಬಿಚ್ಚಿಕೊಂಡು ಉತ್ತಮ ವಚನ ಕವಿಗಳಾಗಿ ಬೆಳೆದಿದ್ದಾರೆ. ಇದಕ್ಕೆ ಮುಖ್ಯ ಕಾರಣ ವಚನ ವ್ಯಾಸಂಗ.'[೪೩] ಶ್ರೀಯುತರಿಂದ ೧೦೧ ವಚನ, ೧೦೧೧ ವಚನಗಳ ವಚನತೀರ್ಥ, ಹಾಗೂ ೧೦೫೧ ವಚನಗಳ ವಚನಪ್ರಸಾದ ಕೃತಿಗಳು ಪ್ರಕಟವಾಗಿವೆ.

ಯಾವ ಜನುಮದ ಪಾಪಕ್ಕಾಗಿ ಈ ಹೆಸರು ?
ಹರಿಜನ ಗಿರಿಜನರೆಂದು!
ಯಾವ ಜನುಮದ ಶಾಪಕ್ಕಾಗಿ ಈ ಹಿಂಸೆ?
ಮುಟ್ಟದಿರಿ ತಟ್ಟದಿರಿ ಎಂದು!
ಮಾನವ ಕುಲವೊಂದು ಜಗದ ನೆಲವೊಂದು
ಹೊಸ ಬಾಳಿಗುಸಿರೊಂದು ಬಸಿರೊಂದು
ಈ ಒಂದೆಂಬ ಗಂಟೆಗೆ ನಾಲಗೆ ಇಹುದೇನಯ್ಯಾ ?
ಕುಂದಿಟ್ಟು ಒಂದೆಂದರೆ, ಹಿಂದಿಟ್ಟು ಮುಂದಾದರೆ
ಬೆಂದೊಡಲ ಬೇಗೆ ಭುಗಿಲ್ಲೆಂದು ಮಂದಿರವ ಮುತ್ತಿದರೆ
ಆರಿಸುವದೆಂತು? ಶ್ರೀ ಸಂಗಮಾನಾಥ.[೪೪]

---

೪೨. ಮಹಾದೇವ ಬಣಕಾರ ವಚನಗಳು – ವಚನ – ೧೧೧

೪೩. ವಚನ ಪ್ರಸಾದ – ಶ್ರೀ ಸಂಗಮೇಶ ಹೊಸಮನಿ ಮುನ್ನುಡಿ ಡಾ॥ ಎಂ.ಎಂ. ಕಲಬುರ್ಗಿ ಪು–i

೪೪. –ಅದೇ– ಪು–೪೧೯ ವ–೬೪೮.

ಶಿವ ಕವಿ ಸಂಗಮೇಶ ಹೊಸಮನಿ ಅವರು ವಸ್ತುತಃ ಭಾವ ಜೀವಿ ಕವಿ, ಕೂಡಲಸಂಗಮನಾಥನ ಕರುಣೆಯ ಕೂಸು, ಅವರ ಕವಿತಾ ಸ್ವರೂಪದ ವಚನಗಳಲ್ಲಿ ಭಕ್ತಿಯು ಹೊನಲಾಗಿ ಹರಿದಿದೆ. ಭಾರತಕ್ಕೆ ಸ್ವಾತಂತ್ರ್ಯ ಸಿಗುವ ಪೂರ್ವದಲ್ಲಿ ಅಂತ್ಯಜರನ್ನು ಉದ್ಧಾರಮಾಡಲೆಂದು ಮಹಾತ್ಮಾ ಗಾಂಧೀಜಿಯವರು ಅವರನ್ನು 'ಹರಿಜನ'ರೆಂದು ಕರೆದರು. ಹರಿಜನ ಎಂದರೆ ದೇವರ ಜನ ಎಂದು ಅರ್ಥ. ಆದರೆ ಈ ಹೆಸರು ಕೇವಲ ಅಂತ್ಯಜರಿಗೆ ಗಟ್ಟಿಯಾಗಿ ಉಳಿಯಿತು. ಮೇಲ್ಜಾತಿಯವರ ಮನೋಭೂಮಿಕೆ ಬದಲಾಗಲಿಲ್ಲ. ಅದಕ್ಕಾಗಿ ವಚನಕಾರರ ಹೃದಯ ಮಮ್ಮಲ ಮರಗುತ್ತಿದೆ.

**ಶ್ರೀ ಬ.ಗಿ ಯಲ್ಲಟ್ಟಿ** ಅವರೂ ಸಹ ಭಾವ ಜೀವಿ ಕವಿಯೆಂದೇ ಖ್ಯಾತಿವೆತ್ತವರು. 'ದೇವನ ಮನೆಯಿದು ಈ ಜಗವೆಲ್ಲ, ಬಾಡಿಗೆದಾರರು ಜೀವಿಗಳೆಲ್ಲ' ಎಂಬ ಕವಿತೆಯ ಮೂಲಕ ನಾಡಿನಾದ್ಯಂತ ಚಿರಪರಿಚಿತರಾದವರು. "ಬಿಂಬ ಎಂಬುದು ಅವರ ಪಕ್ವಮನಸ್ಸಿನ ಸರಳಶೈಲಿಯ ಸಮರ್ಥ ವಚನಗಳ ಸಂಗ್ರಹ, ಸ್ವಾನುಭವ-ಲೋಕಾನುಭವ ಹಾಗೂ ಆತ್ಮಾನುಭವ ಎಂಬ ಮೂರು ಭಾಗಗಳಲ್ಲಿ ಅವರ ಅನುಭವ ಅನುಭಾವವಾಗಿ ಹರಿದಾಡಿದೆ"[೪೫] ಎಂಬುದು ಸತ್ಯವಾಗಿದೆ.

ಧರ್ಮ ಹೆಸರಿನಲ್ಲಿ ನಡೆದಷ್ಟು ಅನ್ಯಾಯ
ಮತ್ತಾವುದರಿಂದ ನಡೆದಿಲ್ಲವೆಂಬುದು
ಸೋಜಿಗವಾದರೂ ಸತ್ಯವಯ್ಯಾ!
ತತ್ವದ ಹೆಸರಿನಲ್ಲಿ ನಡೆದಷ್ಟು ಸತ್ಯದ ಅಪಚಾರ
ಇನ್ನಾವುದರಿಂದ ನಡೆದಿಲ್ಲವೆಂಬುದು
ಅಚ್ಚರಿಯೆನಿಸಿದರೂ ಸಟೆಯಲ್ಲವಯ್ಯಾ!
ಜನಸೇವೆಯ ಹೆಸರಿನಲ್ಲಿ ನಡೆದಷ್ಟು ಸುಲಿಗೆ
ಬೇರಾವುದರಿಂದ ನಡೆದಿಲ್ಲವೆಂಬುದು
ಆಶ್ಚರ್ಯವೆನಿಸಿದರೂ ಸುಳ್ಳಲ್ಲವಯ್ಯಾ!
ಒಳಗಿನವರಿಂದ ನಡೆದಷ್ಟು ತೇಜೋವಧೆ
ಹೊರಗಿನವರಿಂದ ನಡೆದಿಲ್ಲವೆಂಬುದು
ವಿಸ್ಮಯವೆನಿಸಿದರೂ ಹುಸಿಯಲ್ಲವಯ್ಯಾ!
ಎಷ್ಟು ಕಾಲ ಸತ್ಯ ಹರಿಶ್ಚಂದ್ರನಾಗಿ
ಗೌರವ ಪಡೆಯಬಹುದಯ್ಯಾ?
ನಾಟಕ ಮುಗಿದ ಮೇಲೆ ನಿಜಮುಖ ತೋರದೇನಯ್ಯಾ?
ಬಸವಗುರು ಶರಣಬಸವ ತಂದೆ ನೀನೆ ಹೇಳಯ್ಯಾ![೪೬]

---

೪೫. ಬಿಂಬ- ಬ.ಗಿ. ಯಲ್ಲಟ್ಟಿ ಬೆನ್ನುಡಿ- ಬಿ.ಆರ್. ಪೋಲಿಸ್ ಪಾಟೀಲ ಕ.ಪು.-೪
೪೬. ಬಿಂಬ-ಬ.ಗಿ. ಯಲ್ಲಟ್ಟಿ ವ-೨೨

ಈ ರೀತಿಯ ಸಾಮಾಜಿಕ ಕಳಕಳಿಯ ವಚನಗಳು, ಶಿವಾನುಭವದ ತೊರೆಯಾಗಿ ಹೊರಹೊಮ್ಮಿವೆ.

**'ಅಂಬಿಗರ ಕುಮಾರ ಚೌಡಯ್ಯ'** ಎಂಬ ನಾಮಾಂಕಿತದಿಂದ ಕ್ರಾಂತಿಕಾರಿ ವಚನಗಳನ್ನು ಬರೆದ ಶ್ರೀ ಮಲ್ಲಿಕಾರ್ಜುನ ಬಸಪ್ಪ ಹಾದಿಮನಿ ಅವರು ಅಪ್ಪಟ ಬಸವಭಕ್ತರಾಗಿ, ಗಣಾಚಾರಿಗಳಾಗಿ ವಚನಗಳನ್ನು ಬರೆದವರು. 'ಅಂಬಿಗರ ಕುಮಾರ ಚೌಡಯ್ಯನ ವಚನ ವೈಢೂರ್ಯ ಎಂಬ ೧೫೦ ವಚನಗಳ ವಚನ ಸಂಕಲನ ಪ್ರಕಟವಾಗಿದೆ. ಅಲ್ಲದೇ ನೂರಾರು ಅಪ್ರಕಟಿತ ವಚನಗಳಿವೆ. ಇವರೂ ಸಹ ಮೂಲತಃ ಕವಿಗಳಾಗಿ ಪ್ರಸಿದ್ಧಿ ಪಡೆದವರೇ. "ಇವರ ವಚನಗಳಲ್ಲಿ ಬಸವಾದಿ ಶರಣರ ನ್ಯಾಯ ನಿಷ್ಠುರತೆ ಇದೆ. ಯಾರ ಹಂಗಿಗೂ ಒಳಗಾದವರಲ್ಲ, 'ಲೋಕವಿರೋಧಿ ಶರಣ, ಯಾರಿಗೂ ಅಂಜುವನಲ್ಲ' ಎನ್ನುವಂತೆ ಸ್ವತಂತ್ರಧೀರರಾಗಿ"[೪೭] ವಚನಗಳನ್ನು ಬರೆದಿದ್ದಾರೆ.

ನೀತಿಗೆಟ್ಟವರೆಲ್ಲ ನೇತಾರರಲ್ಲ
ಕೋತಿಕುಲದಲ್ಲಿ ಜಾತಿಯನರಸುವ
ಜಾತಿವಾದಿಗಳೆಲ್ಲ ಜಗದ್ಗುರುಗಳಲ್ಲ
ಜಾತಿವಾದದ ಬೇರ ಕಿತ್ತಸೆದ ಪ್ರವಾದಿ
ಬಸವಣ್ಣನೇ ಜಗಕೆ ಜಗದ್ಗುರುವೆಂದ
ನಂಬಿಗರ ಕುಮಾರ ಚೌಡಯ್ಯ.[೪೮]

**ಶ್ರೀ ಸಿದ್ದಣ್ಣ ಲಂಗೋಟಿಯವರು** ಕುಮಾರ ಕಕ್ಕಯ್ಯನವರ ಒಡನಾಡಿಗಳು, ಅವರ ಹುಟ್ಟೂರಿನವರಾಗಿದ್ದು, ಬಾಲ್ಯದಿಂದಲೇ ಅವರ ವಚನಗಳ ಪ್ರಭಾವಕ್ಕೊಳಗಾಗಿ, ವಚನರಚನೆಗೆ ತೊಡಗಿಸಿಕೊಂಡವರು. 'ಸಿಲಂ ವಚನಗಳು' ಎಂಬ ವಚನ ಸಂಕಲನ ಪ್ರಕಟಿಸಿದವರು. ಸಾವಿರಾರು ವಚನಗಳನ್ನು ರಚಿಸಿದ್ದಾರೆ. ಹಿರಿಯ ವಚನಕಾರ ಡಾ॥ ಸಿದ್ದಯ್ಯ ಪುರಾಣಿಕರು–"ಸಿದ್ದಣ್ಣನವರ ವಚನಗಳಲ್ಲಿ ಸಾಮಾಜಿಕ ಕಳಕಳಿ, ಧಾರ್ಮಿಕ ಕಳಕಳಿ, ಪ್ರಗತಿಪರ ವಿಚಾರಧಾರೆ ಇದೆ. ಗಣಾಚಾರದ ಮೊನಚು ಇದೆ. ಬುದ್ಧ ಬಸವ ಗಾಂಧಿ, ಅಂಬೇಡ್ಕರರ ಸಮತೆ ಅರಿತಿದ್ದಾರೆ"[೪೯] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಆಕಳ ಕಿಮ್ಮತ್ತು ಹಿಂಡುವ ಹಾಲಿನಿಂದಲ್ಲದೇ
ಮೈ–ಮಾಟ, ಬಣ್ಣ–ಕೋಡುಗಳಿಂದಲ್ಲ.
ಗರತಿಯ ಕಿಮ್ಮತ್ತು ಗುಣ–ಶೀಲಗಳಿಂದಲ್ಲದೇ

---

೪೭. ಅಂಬಿಗರ ಕುಮಾರ ಚೌಡಯ್ಯನ ವಚನ ವೈಢೂರ್ಯ ಮುನ್ನುಡಿ–ಸಿದ್ದಣ್ಣ ಲಂಗೋಟಿ ಪು–iv

೪೮. –ಅದೇ– ಪು–೬ ವ–೨೧

೪೯. ಸಿದ್ದಣ್ಣ ಲಂಗೋಟ ವಚನಗಳು: ಮುನ್ನುಡಿ ಡಾ॥ ಸಿದ್ದಯ್ಯ ಪುರಾಣಿಕ ಪು–೫

ಬೆಳ್ಳಿ-ಬಂಗಾರ, ವಜ್ರ-ಆಭರಣಗಳಿಂದಲ್ಲ.
ಗುರುವಿನ ಕಿಮ್ಮತ್ತು ಅರಿವು-ಆಚಾರಗಳಿಂದಲ್ಲದೇ
ಕುಲ-ಗೋತ್ರ-ಸೂತ್ರ-ಬಗೆಗಳಿಂದಲ್ಲ.
ಜಂಗಮದ ಕಿಮ್ಮತ್ತು ಜ್ಞಾನ-ಅನುಭಾವಗಳಿಂದಲ್ಲದೇ
ಜನ್ಮ-ಜಾತಿ, ಕಾವಿ-ಕಪನಿಗಳಿಂದಲ್ಲ ನೋಡಾ
ಜಗಜ್ಯೋತಿ ಬಸವೇಶ್ವರಾ[೫೦]

ಕುಮಾರ ಕಕ್ಕಯ್ಯನವರ ಕಿರಿಯ ಸಮಕಾಲೀನ ಮಠಾಧೀಶರಾದ ಶ್ರೀ **ಶಿವಾನಂದ ಸ್ವಾಮಿಗಳು** ಹುಲಸೂರ ಅವರು 'ಶಿವಾನಂದ ಸ್ವಾಮಿಗಳ ವಚನಗಳು' ಎಂಬ ವಚನ ಸಂಕಲನ ಹೊರತಂದಿದ್ದು, ಅವರ ವಚನಗಳು ಸಮಾಜದ ಬದುಕಿಗೆ ಹಿಡಿದ ಕನ್ನಡಿಯಂತಿವೆ.

ಗುರುವಿನ ದರುಶನಕ್ಕೆ ಹೋದರೆ
ಮಠದೊಳಗೊಂದು ವಿಚಿತ್ರವ ಕಂಡೆ!
ಹ್ಯಾಂಗರಿಗೊಂದು ರೇಶ್ಮೇ ಸೀರೆ,
ಮಂಚಕೊಂದು ಬ್ಲೌಜ ಪೀಸು!
ಜಂಗಮನ ದರುಶನಕ್ಕೆ ಹೋದರೆ
ಕಾಲಿಗೊಂದು ಹೆಣ್ಣು, ಕೈಗೊಂದು ಹೆಣ್ಣು,
ತೊಟ್ಟಿಲೊಳಗೊಂದು ಶಿಶು,
ಮಠದೊಳಗೊಂದು ಸ್ಥಾವರ ಪೂಜೆ!
ಭಕ್ತನ ಮನೆಗೆ ಹೋದರೆ
ಹೊಸ್ತಿಲಲೊಂದು ಭವಿ, ಒಳಗೊಂದು ಭವಿ
ಹೊರಗೊಂದು ಭವಿ!
ಧರ್ಮವಂತನ ಮನೆಗೆ ಹೋದರೆ
ಒಳಗೊಂದು ಕರ್ಮದ ನಾಯಿ,
ಹೊರಗೊಂದು ಕರ್ಮದ ನಾಯಿ!
ದೇಶ ಸೇವಕರ ಮನೆಗೆ ಹೋದರೆ
ಕೈಗೊಂದು ಬಾಟ್ಲಿ, ಕಾಲಿಗೊಂದು ಬಾಟ್ಲಿ
ತುತ್ತಿಗೊಂದೊಂದು ಜೀವಬಲಿ!
ಈ ವಿಚಿತ್ರವ ಕಂಡು ನಾನು ಬೆರಗಾದೆನಯ್ಯಾ
ಶಿವಾನಂದಪ್ರಿಯ ಗುರುಬಸವ ಪ್ರಭುವೇ.[೫೧]

---

೫೦. ಸಿದ್ದಣ್ಣ ಲಂಗೋಟಿ ಅವರ ವಚನಗಳು ಪು-೩೨ ವ-೫೧
೫೧. ಶಿವಾನಂದ ಸ್ವಾಮಿಗಳ ವಚನಗಳು ಪು-೯೯ ವ-೯೯

**ಶ್ರೀ ಚನ್ನಬಸವ ಸ್ವಾಮಿಗಳು** ಮೋಟಗಿ ಮಠ ಅಥಣಿ ಇವರು ಇನ್ನೋರ್ವ ಕ್ರಾಂತಕಾರಿ ವಚನಕಾರರು. 'ವಚನತರಂಗವೆಂಬ ವಚನ ಸಂಕಲನ ಹೊರತಂದಿದ್ದಾರೆ. ಧರ್ಮ ಸಮಾಜದ ಉದ್ಧಾರದ ಕಳಕಳಿ ಇವರ ವಚನಗಳಲ್ಲಿದೆ.–

ಕಾವಿ ತೊಡುವುದು ಮಠದಲ್ಲಿ ಕುಳಿತು
ಪೂಜೆ ಮಾಡುವುದಕ್ಕಲ್ಲ
ತ್ಯಾಗದಿಂದ ಸಮಾಜ ಸೇವೆ ಮಾಡಲು.
ಖಾಕಿ ತೊಡುವದು ಲಾಠಿ ಹಿಡಿದು
ಸುತ್ತುವುದಕ್ಕಲ್ಲ,
ನ್ಯಾಯದಿಂದ ಶ್ರಮಿಸಲು.
ಖಾದಿ ತೊಡುವದು
ವಿಲಾಸ ಜೀವನಕ್ಕಲ್ಲ
ಪ್ರಜೆಗಳಿಗೆ ನಿಷ್ಠೆಯಿಂದ ನಡೆಯಲು
ಲಾಂಛನ ತೊಡುವುದು ಮನಬಂದಂತೆ
ವರ್ತಿಸಲು ಅಲ್ಲಾ,
ತನು ಮನ ಧನದಿಂದ
ದುಡಿಯುವುದಕ್ಕೆಂದ ಅಥಣೀಶ[೫೨]

**ಶ್ರೀ ಎಸ್.ವ್ಹಿ ರಂಗಣ್ಣನವರು** ಹಿರಿಯ ಕವಿ, ಸಾಹಿತಿ ವಚನಕಾರರು. ಬಸವಾದಿ ಶರಣರ ವಚನ ಸೈಲಿಯನ್ನು ಅಂಗವಿಸಿಕೊಂಡು ಪ್ರಬುದ್ಧ ವಚನಗಳನ್ನು ರಚಿಸಿದವರು. 'ರಂಗ ಬಿನ್ನಪ' ಎಂಬುದು ಅವರ ವಚನ ಸಂಕಲನವಾಗಿದೆ.

ಸ್ವರ್ಗವೆಲ್ಲಿಹುದಯ್ಯಾ? ಸ್ವರ್ಗವೆಲ್ಲಿಲ್ಲಯ್ಯಾ?
ಹಚ್ಚ ಹಸುರನೆ ನೋಡಿ, ಹರಿವ ಹೊಳೆಯನೆ ಕಂಡು,
ಮನವೊಂದಾಗೆ ಅದೇ ಸ್ವರ್ಗ.
ಮುದ್ದು ಕೂಸಿನ ಮುಖದೊಳಾಡುವ ತಿಳಿನಗೆಯ
ಬಗೆಯೆ ಅದೆ ಸ್ವರ್ಗ.
ಮಚ್ಚರಿಲ್ಲದ ಮಾಂದ್ಯವಿಲ್ಲದ ಶುದ್ಧ ಸಂತೋಷವೇ
ಸ್ವರ್ಗ ಆ ಸಂತೋಷದಲ್ಲಿ ನೀನಿರುವೆ
ಅದೇ ನೀನು ರಂಗಯ್ಯಾ ಆನಂದಮಯ![೫೩]

ಈ ವಚನದಲ್ಲಿ ಭೂಮಿಯೇ ಸ್ವರ್ಗ ಪ್ರಕೃತಿಯೇ ಸ್ವರ್ಗ ಶುದ್ಧ ಸಂತೋಷವೇ ಸ್ವರ್ಗ ಅದರಲ್ಲಿಯೇ ದೇವನಿದ್ದಾನೆ ಎಂದು ಶ್ರೀ ಎಸ್.ವ್ಹಿ ರಂಗಣ್ಣನವರು ತಿಳಿಸುತ್ತಾರೆ

---

೫೨. ವಚನ ತರಂಗ–ಚನ್ನಬಸವ ದೇವರು ಪು–೨೭ ವ–೨೭
೫೩. ರಂಗ ಬಿನ್ನಪ ಎಸ್.ವ್ಹಿ ರಂಗಣ್ಣ ಪು–೨ ವ–೪

**ಶ್ರೀ ಎಸ್.ವ್ಹಿ ಪರಮೇಶ್ವರ ಭಟ್ಟ** ಅವರು ಉಪ್ಪು ಕಡಲು, ಪಾಮರ, ಉಬರ ಎಂಬ ವಚನ ಸಂಕಲಗಳನ್ನು ಪ್ರಕಟಿಸಿದ್ದಾರೆ.

ಚುನಾವಣೆಯ ಕಣವೆ ಯಜ್ಞಕುಂಡ!
ರಾಜಕೀಯ ಭಾಷಣವೆ ಆಜ್ಯಭಾಂಡ!
ಪರದೂಷಣೆಯೆ ಸಮಿಧೆ!
ಹುರಿಯಾಳೆ ಹೋತಾರ! ಸತ್ಯವೇ ಬಲಿಪಶು!
ಅನಂತ ಅಶಾಂತಿಯೇ ಅನಂತರದ ಯಜ್ಞಫಲ!
ಸದಾಶಿವ ಗುರು[೫೪]

ಈ ವಚನದಲ್ಲಿ ಪ್ರಜಾಪ್ರಭುತ್ವ ರಾಜಕೀಯ ಚುನಾವಣೆಯ ಚಿತ್ರಣ ಕೊಟ್ಟು ಅದನ್ನು ಕಟುವಾಗಿ ವಿಡಂಬನೆ ಮಾಡಿದ್ದಾರೆ.

ಈ ರೀತಿಯ ಹಿರಿ-ಕಿರಿಯ ಸಮಕಾಲೀನ ವಚನಕಾರರಲ್ಲಿ **ಕುಮಾರ ಕಕ್ಕಯ್ಯನವರು** ತಮ್ಮ ಸ್ವಾನುಭಾವದ, ಕ್ರಾಂತಿಕಾರಿ ವಚನಗಳಿಂದ ಪ್ರಕಾಶ ಮಾನರಾಗಿ ಕಂಗೊಳಿಸುವುದನ್ನು ಅವರ ವಚನಗಳಲ್ಲಿಯೇ ಕಾಣುತ್ತೇವೆ. ದಲಿತಜನಾಂಗದಲ್ಲಿ ಜನಿಸಿ, ಮೇಲ್ಜಾತಿಯವರ ಅವಹೇಳನ, ಅನ್ಯಾಯ, ದೌರ್ಜನ್ಯದ ನೋವು ಉಂಡು, ಕೊನೆಗೆ ಸಿಡಿದೆದ್ದು ಕ್ರಾಂತಿಕಾರಿ ವಚನಗಳನ್ನು ಬರೆದವರು.

ತೋಳ ಏರಿ ಬಂದಾಗ ಕಿರುಬನಾಗು
ಕಿರುಬ ಎದುರು ಬಿದ್ದಾಗ ಕರಡಿಯಾಗು
ಕರಡಿ ತಿರುಗಿ ನಿಂತಾಗ ಹುಲಿಯಾಗು
ಹುಲಿ ಗುಡುಗಿ ಎರಗಿದಾಗ ಸಿಂಹನಾಗು
ಅಯ್ಯ ನೀನು ಕುರಿಯಾದರೆ ಎಲ್ಲರು
ನಿನ್ನನ್ನು ಹರಿದು ತಿನ್ನವರೆಂದ
ಕುಮಾರ ಕಕ್ಕಯ್ಯ.[೫೫]

ಎಂದು ವಚನ ಬರೆಯುವ ಮೂಲಕ ಶೋಷಿತ ಜನಾಂಗವನ್ನು. ಮೇಲೆತ್ತಿ ಅವರಲ್ಲಿ ಜಾಗೃತಿ ಮೂಡಿಸಿದವರು ಕುಮಾರ ಕಕ್ಕಯ್ಯ. "ಕುಮಾರ ಕಕ್ಕಯ್ಯ ಪೋಳ ಅವರ ವಚನಗಳಲ್ಲಿ ಬಸವಾದಿ ಶರಣರ ಅನುಭಾವದ ಸೆಳೆತ, ಸಮಾಜ ಸುಧಾರಣೆಯ ಕಾಳಜಿ, ಜೀವನಾನುಭವದ ಕಟು ಸತ್ಯವಲ್ಲದೇ ದಲಿತ ಪ್ರಜ್ಞೆ, ಸ್ವಾಭಿಮಾನ, ವೈಚಾರಿಕ ನೆಲೆ ವಿಶೇಷವಾಗಿ ಕಂಡು ಬರುತ್ತದೆ.[೫೬]

ಸಮಕಾಲೀನ ಅನುಭಾವಿ ವಚನಕಾರ ಡಾ॥ ಸಿದ್ದಯ್ಯ ಪುರಾಣಿಕರಂತೂ ಕುಮಾರ ಕಕ್ಕಯ್ಯನವರ ವಚನಗಳನ್ನೋದಿ ಪ್ರಭಾವಿತರಾಗಿ ತುಂಬಾ ಆನಂದದಿಂದ

---

೫೪ ಉಂಬರ – ಎಸ್.ವ್ಹಿ ಪರಮೇಶ್ವರ ಭಟ್ಟ ಪು-೬೭ ವ-೮೪
೫೫ ಕುಮಾರ ಕಕ್ಕಯ್ಯನ ವಚನಗಳು ಪು-೬೦ ವ-೨೩೧
೫೬ ದಲಿತ ಸಾಹಿತಿ ಕುಮಾರ ಕಕ್ಕಯ್ಯ ಪೋಳ-ಡಾ॥ ಎಚ್.ಟಿ.ಪೋತೆ ಪು-೧೫-೧೬

ಬರೆದಿದ್ದಾರೆ– "ನನಗೆ ಹಿಡಿಸಲಾರದಷ್ಟು ಹಿಗ್ಗು. ಬಸವಣ್ಣ ತನ್ನ ಹೆಸರನ್ನು ಸುಲಿಗೆಗಾಗಿ ಬಳಸಿಕೊಳ್ಳುತ್ತಿರುವ ಸನ್ಯಾಸಿ, ಸಾಹಿತಿ ಮತ್ತು ರಾಜಕಾರಣಿಗಳಿಂದ ಹೊರಬಂದು ಈಗ ನಿಮ್ಮಂಥ ನಿಜನಿಷ್ಠುರ ಕೈ ಸೇರುತ್ತಲಿದ್ದಾನೆ. ಅವನನ್ನು ಈ ಅಷಾಢ ಭೂತಿಗಳಿಂದ ಬಿಡಿಸಿಕೊಂಡು, ಶ್ರೀ ಸಾಮಾನ್ಯರಿಗೆ ಮುಟ್ಟಿಸುತ್ತಿರುವ ನಿಮ್ಮ ಮಣಿಹಕ್ಕೆ ಮನಃ ಪೂರ್ವಕವಾಗಿ ಅಭಿನಂದಿಸುತ್ತೇನೆ"[೫೭]

ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರ "ಒಂದೊಂದು ವಚನಗಳೂ ಮನಮುಟ್ಟುವಂತೆ, ಹೃದಯ ತಟ್ಟುವಂತಿವೆ. ಕಿರಿದರಲ್ಲಿ ಹಿರಿದಾದುದನ್ನು ಹೇಳುವ ಕುಶಲತೆ ಕುಮಾರ ಕಕ್ಕಯ್ಯನವರಲ್ಲಿದೆ. ನಿರಾಡಂಬರವಾದ ಸರಳ ಸುಂದರ ಶೈಲಿ, ಎಲ್ಲವೂ ನೇರ, ಸುಲಭ, ಅರ್ಥಗರ್ಭಿತ! ಓದುಗರ ಮನದ ಕತ್ತಲೆ ಕಳೆದು,ಹೊಸ ಬೆಳಕು ಚೆಲ್ಲುವ ಅಮೂಲ್ಯ ಮತ್ತು–ರತ್ನಗಳು ಇಲ್ಲಿ ತುಂಬಿಕೊಂಡಿವೆ. ಆಧುನಿಕ ವಚನ ಸಾಹಿತ್ಯದಲ್ಲಿ ಕುಮಾರ ಕಕ್ಕಯ್ಯನವರ ವಚನಗಳು ಅಮರವಾಗಿ ಉಳಿಯುವ ಅಮರ ಕೃತಿ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು."[೫೮]

ಈ ರೀತಿಯಾಗಿ ಕುಮಾರ ಕಕ್ಕಯ್ಯನವರು ೨೦ ನೇ ಶತಮಾನದ ಆಧುನಿಕ ವಚನಕಾರರಲ್ಲಿ ಎದ್ದು ಕಾಣವ ವ್ಯಕ್ತಿತ್ವ, ಸಾಧನೆ–ಸಿದ್ಧಿ ಮಾಡಿದವರು. ತಮ್ಮ ಸಮಕಾಲೀನ ವಚನಕಾರರ ಗೌರವ–ಆದರಕ್ಕೆ ಪಾತ್ರರಾದವರು ಎಂದು ಹೇಳಬಹುದಾಗಿದೆ.

**iv. ಕುಮಾರ ಕಕ್ಕಯ್ಯನವರ ಸಾಹಿತ್ಯ ಕೃತಿಗಳ ಕುರಿತು ವಿದ್ವಾಂಸರ ಅಭಿಪ್ರಾಯಗಳು.**

ಆಧುನಿಕ ವಚನಕಾರ, ನೂತನ ಶರಣ, ಕ್ರಾಂತಿಕಾರಿ ದಲಿತ ಸಾಹಿತಿ ಪ್ರಗತಿಪರ ವಿಚಾರವಾದಿ, ನೇರ ನಡೆ, ನೇರ ನುಡಿಯ ದಿಟ್ಟ ಧೀರ ಗಣಾಚಾರಿ, ಸಮಾಜೋ–ಧಾರ್ಮಿಕ ಕ್ರಾಂತಿಯ ಕಿಡಿ, ಕರ್ನಾಟಕದ ಅಂಬೇಡ್ಕರ ಮುಂತಾಗಿ ನಾಡಿನ ಚಿಂತನಶೀಲ ಅಭಿಮಾನಿಗಳಿಂದ, ಬಸವಭಕ್ತರಿಂದ ಗೌರವಿಸಲ್ಪಟ್ಟ ಕುಮಾರ ಕಕ್ಕಯ್ಯ ಪೋಳ ಅವರದು ಕ್ರಾಂತಿಕಾರಕ ಸಾಹಿತ್ಯವಾಗಿದೆ. ಗದ್ಯ ಪದ್ಯ, ನಾಟಕ, ಪ್ರಬಂಧ, ಕಥೆ ಕಾದಂಬರಿ, ಸಂಶೋಧನೆ, ವಚನ ಮುಂತಾದ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಗಟ್ಟಿಯಾಗಿ ನಿಲ್ಲಬಲ್ಲ, ಸಮಾಜದಲ್ಲಿ ಹೊಸ ಆಯಾಮ ತರಬಲ್ಲ ಸತ್ವಯುತವಾದ ಸಾಹಿತ್ಯವನ್ನು ರಚಿಸಿದವರು. ಅವರ ಒಂದೊಂದು ಕೃತಿಗಳೂ, ಅವರ ಪ್ರತಿಯೊಂದು ವಚನಗಳೂ ಜೀವನಾನುಭವದ ರಸಗಟ್ಟಿಗಳು.

ಕುಮಾರ ಕಕ್ಕಯ್ಯನವರ ಎಲ್ಲ ಸಾಹಿತ್ಯ ಕೃತಿಗಳು ಸಮಕಾಲೀನ ವಿಚಾರವಾದಿಗಳ, ಕವಿ–ಸಾಹಿತಿಗಳ, ಆಧುನಿಕ ವಚನಕಾರರ, ವಿದ್ವಾಂಸ ವಿಮರ್ಶಕರ, ಪ್ರಗತಿಶೀಲ ಮಠಾಧೀಶರ, ಬಂಡಾಯ–ದಲಿತ ಕ್ರಾಂತಿಕಾರಿಗಳ, ಸಹೃದಯಿ ಜನ ಸಾಮಾನ್ಯರ ಗಮನ ಸೆಳೆದವು. ಇದರ ಪರಿಣಾಮವಾಗಿ ನಾಡಿನೆಲ್ಲೆಡೆಯಿಂದ

---

೫೭ ಕುಮಾರ ಕಕ್ಕಯ್ಯ ಪೋಳ–ಸಿದ್ದಣ್ಣ ಲಂಗೋಟಿ ಪು–೯೯

೫೮ ಆಧುನಿಕ ವಚನ ಸಾಹಿತ್ಯ – ಡಾ॥ ನೀಲಮ್ಮ ಕತ್ನಳ್ಳಿ ಪು–೫೮–೫೯

ವಿದ್ವಾಂಸರ, ಪೂಜ್ಯರ ಅಭಿಪ್ರಾಯಗಳ ಪ್ರವಾಹ ಹರಿದು ಬಂದಿತು. ಅವುಗಳಲ್ಲಿ ಅಮೂಲ್ಯವಾದವುಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

೧

"ಹೆರಿಗೆಯ ನೋವು ಹೆತ್ತವಳಿಗೆ ಗೊತ್ತು. ಕುಮಾರ ಕಕ್ಕಯ್ಯ ಅನುಭವಿಕ ಲೇಖಕರು, ತಮ್ಮ ಚಿಕ್ಕವಯಸ್ಸಿನ ದೀರ್ಘ ಸಮಯವನ್ನು ಭಕ್ತಿ ಪಥದಲ್ಲಿ ಶ್ರೀಗಂಧದಂತೆ ತೇಯ್ದಿದ್ದಾರೆ. ಸ್ವಂತ ಅನುಭವದಿಂದ ನೈಜವಾದ ಸತ್ಯವನ್ನು ಧೈರ್ಯದಿಂದ ಮಂಡಿಸಿದ್ದಾರೆ. ಭಕ್ತಿಗೂ ದೇವರಿಗೂ ಯಾವುದೇ ಸಂಬಂಧವಿಲ್ಲಾ ಎಂಬುದನ್ನು ಖಡಾಖಂಡಿತವಾಗಿ ಸಮರ್ಪಕವಾಗಿ ಉಲ್ಲೇಖಿಸಿದ್ದಾರೆ. ಭಕ್ತಿ ಭಕ್ತಿ ಎಂದು ಹೊಗಳಿ ಹೊಗಳಿ, ವರ್ಣನೆ ಮಾಡಿ, ತಾಯಿಯು ಮಗುವನ್ನು "ನನ್ನ ಜಾಣ ಮರಿ" ಎಂದು ಲಲ್ಲೆಯಿಂದ ಸಮಾಧಾನ ಮಾಡುವಂತೆ, ಆ ದೇವಾದಿದೇವನನ್ನು ಭಕ್ತಿಯಿಂದ ಒಲಿಸಿಕೊಳ್ಳಲು ಅದೆಂದಿಗೂ ಸಾಧ್ಯವಿಲ್ಲ, ಸುಖಜೀವನಕ್ಕೆ ಭಕ್ತಿ ಪ್ರಧಾನವಲ್ಲ ತಾನು ಮಾಡಿದ ಕರ್ಮವೇ ಅದಕ್ಕೆ ಪ್ರಧಾನ. ದೇವನು ಸತ್ಕರ್ಮಿಗಳ ದಾಸಾನುದಾಸ. ನಿರ್ಮಲ ಮನಸ್ಸಿನಿಂದ ಆತ್ಮಸಾಕ್ಷಿಯಾಗಿ ದುಡಿ ಎಂಬುದೇ ಲೇಖಕರ ಸಿದ್ಧಾಂತ".

**-ಶಂಕರ ಭಗವಂತಪ್ಪ ಪತ್ತಾರ ಜಮಖಂಡಿ** (ಧರ್ಮಕ್ರಾಂತಿ ಗ್ರಂಥದ ಮುನ್ನುಡಿ)

೨

"ಶ್ರೀ ಪೋಳ ಅವರು ಏರಿಕೆಯ ಉತ್ಸಾಹದಲ್ಲಿ ಬರೆದ 'ನಿಯತಿ ಶಾಸನ'ವು ತಾಂತ್ರಿಕ ಚಮತ್ಕಾರದಿಂದ ಹಾಗೂ ವಿಷಯ ಪುರಸ್ಕಾರದಿಂದ ವಾಚಕರ ಮರ್ಮವನ್ನು ಕೆಣಕುವ ಕಿಡಿಯಾಗಿದೆ. ಇದೊಂದುತಪ್ಪೊಪ್ಪಿಗೆ ಆತ್ಮ ನಿವೇದನ, ಮಹರ್ಷಿ ಟಾಲಸ್ಟಾಯ್‌ರ ಕನಫೇಶನ್, ಮಹಾತ್ಮಾಗಾಂಧಿ ಅವರ ಸತ್ಯ ಸಂಶೋಧನ ಇವುಗಳ ಮಾದರಿಯಲ್ಲಿ ರೂಪುಗೊಂಡ ಸಮರ್ಥ ಕೃತಿಯಾಗಿದೆ.

ಶ್ರೀ ಪೋಳ ಅವರು ಪರಿಸರವನ್ನು ನಿಟ್ಟಿಸಿ, ಪರಿಸ್ಥಿತಿಯನ್ನು ದಿಟ್ಟಿಸಿ, ವಿಷಯವನ್ನು ಇದ್ದಕ್ಕಿದ್ದಂತೆ ಗಿಟ್ಟಿಸಿಕೊಳ್ಳಬಲ್ಲರು. ಅವರು ಹೊರ ರೂಪವನ್ನು ಮೂಡಿಸಿ ತೋರಿಸುವ ಕ್ಯಾಮರಾ ಆಗಿರುವಂತೆ, ಒಳಬಿಂಬವನ್ನು ಜೋಡಿಸಿ ತೋರಿಸುವ ಎಕ್ಸರೇ ಸಹ ಆಗಿದ್ದಾರೆ. ಸುತ್ತಲಿನ ಬಾಳ ಭಾಂಡಾರದಿಂದ ಹೆಕ್ಕಿ ತಂದ ಅದೆಷ್ಟೋ ಉಪಮೆಗಳನ್ನು ಬಳಸಿಕೊಂಡು ಮಾತಿನ ಮಾರ್ಮಿಕತೆಯನ್ನು ಮತ್ತಿಷ್ಟು ಹರಿತಗೊಳಿಸಿಕೊಂಡಿದ್ದಾರೆ. ಶ್ರೀ ಪೋಳ ಅವರು ಸಾಹಿತ್ಯ ಸಾಧನೆಯನ್ನು ಮುಂದುವರೆಸಿ, ಭವ್ಯ ಭವಿಷ್ಯತ್ತನ್ನು ಸಿದ್ಧಿಸಿಕೊಳ್ಳಲೆಂದು ಆಶಿಸುತ್ತೇನೆ. ನಿಷ್ಠಸೇವಕರಿಗಾಗಿ ಸಾಹಿತ್ಯದೇವಿಯ ಕೃಪೆಯು ಕೈಚಾಚಿ ನಿಂತಿದೆ. ಅದನ್ನು ಶ್ರೀ ಪೋಳರು ನಿರೀಕ್ಷಿಸುವರೆಂದು ನಂಬಿದ್ದೇನೆ.

**-ಶ್ರೀ ಸಿಂಪಿಲಿಂಗಣ್ಣ ಜಾನಪದ ಸಾಹಿತಿ, ಚಡಚಣ** (ನಿಯತಿ ಶಾಸನ ಗ್ರಂಥದ ಮುನ್ನುಡಿ)

೩

"ಶ್ರೀ ಬಿ.ಎಸ್.ಪೋಳ ಅವರು ಸಮ್ಯಕ್ ಬುದ್ಧಿ ಜೀವಿಗಳು, ಪ್ರಗಲ್ಭ ವಿಚಾರವಾದಿಗಳು, ಗಂಭೀರ ಚಿಂತನಶೀಲರು. ತಮ್ಮ ಜೀವಮಾನದಲ್ಲಿ ಅನುಭವಿಸಿದ ಅನುಭವಗಳನ್ನು ಅಂತರಂಗದ ಅನಿಸಿಕೆಯ ಒರೆಗಲ್ಲಿಗೆ ಹಚ್ಚಿ, ಜೀವನದ ಸತ್ಯ ಸಾಕ್ಷಾತ್ಕಾರಕ್ಕಾಗಿ ಆಲೋಚಿಸಿದವರು. ಒಬ್ಬ ಲೇಖಕನ ಪ್ರಾಮಾಣಿಕತೆ ಆತನ ಆತ್ಮ ಸಂವೇದನೆಯ ಪರಿಪಾಕವಾಗಿರುತ್ತದೆ. ಇಂಥ ಪ್ರಾಮಾಣಿಕತೆಯ ಅಭಿವ್ಯಕ್ತಿ, ಪ್ರಸಾದಿಕ ಶಕ್ತಿ ಪಡೆದುಕೊಂಡು ಸೃಜನಾತ್ಮಕ ಸಾಹಿತ್ಯ ಕೃತಿಗೆ ಜನ್ಮಕೊಡುತ್ತಾನೆ. ಪ್ರಜ್ಞಾಶೀಲ ಲೇಖಕ ತನ್ನ ಹಾಗೂ ತನ್ನ ಪರಿಸರದ ಜನಜೀವನವನ್ನು ಆಳವಾಗಿ ಅವಲೋಕಿಸಿ ಆತ್ಮಾನುಭೂತಿಯನ್ನು ಅಸ್ಖಲಿತವಾಗಿ ಅಭಿವ್ಯಕ್ತಗೊಳಿಸುತ್ತಾನೆ. ಇಂಥ ಅಗ್ನಿದಿವ್ಯ ಪ್ರಸಂಗದಿಂದ ಉದ್ಭೂತಗೊಳ್ಳುವ ಸತ್ಯ, ಲೋಕಜೀವನಕ್ಕೆ ಬೆಂಬೆಳಕು ನೀಡುತ್ತದೆ.

ಶ್ರೀ ಪೋಳ ಅವರು ಲೇಖನಕಲೆಯಲ್ಲಿ ಪಳಗಿದವರು ಭಾಷಾ ಪ್ರಯೋಗದಲ್ಲಿ ಪರಿಣಿತರು. ಲೇಖಕರ ಶೈಲಿ ಶ್ಲಾಘನೀಯವಾಗಿದೆ. ಶ್ರೀ ಪೋಳ ಅವರು ಕೇವಲ ಬರಹಸಾಹಿತಿಗಳಲ್ಲ. ಜೀವನ ಸಾಹಿತಿಗಳು. ಆಚಾರ ಹಾಗೂ ವಿಚಾರಗಳ ಸಮನ್ವಯವೇ ಅವರ ಜೀವನದ ಸಿದ್ಧಾಂತ. ಆಸ್ಕರ ವೈಲ್ಡನು ಹೇಳುವಂತೆ 'Literature always anticipates life. It does not copy it, but moulds it to its purpose' ಎಂಬಂತೆ ಪ್ರಯೋಜನಾತ್ಮಕ ಸಾಹಿತ್ಯ ಸರ್ಜಕರು.

– **'ಮೇಘಮಿತ್ರ' ಪ್ರೊ. ಸಿ.ವ್ಹಿ.ವಜ್ರಮಟ್ಟಿ. ವಿಜಾಪೂರ** (ಗೀಜಗನ ಗೂಡು – ಮುನ್ನುಡಿ ಪುಟ –i–iii)

೪

"ಹೆಣ್ಣು –ಗಂಡು, ಶೃಂಗಾರ –ಪ್ರೇಮಗಳು ಶ್ರೀ ಬಿ.ಎಸ್.ಪೋಳ ಅವರ ಸಾಹಿತ್ಯದ ವಿಷಯವಾಗಿರದೆ ಮೂಢನಂಬಿಕೆಗಳ ತಾಯಿಯಾದ ಅಜ್ಞಾನವನ್ನು ತೊಲಗಿಸಿ ಮನುಷ್ಯನು ಜ್ಞಾನಿಯಾಗಬೇಕು. ಜ್ಞಾನದ ಒರೆಗಲ್ಲಿಗೆ ಹಚ್ಚಿ ಸತ್ಯವನ್ನು ಅರಿಯಬೇಕು. ಸತ್ಯವೇ ದೇವರೆಂದು ಬಗೆದು, ನೊಂದವರನ್ನು ಸಾಂತ್ವನಗೊಳಿಸಬಲ್ಲ ಹಾಗೂ ತುಳಿಯಲ್ಪಟ್ಟವರನ್ನು ಮೇಲೆತ್ತಬಲ್ಲ ಧರ್ಮವನ್ನು ಅನುಸರಿಸಿ, ನಾನು ಎಲ್ಲರಿಗಾಗಿ ಎಲ್ಲರೂ ನನಗಾಗಿ ಎಂದು ಸಕಲರನ್ನು ಪ್ರೇಮಿಸಿ ಪ್ರೇಮ ಪಡೆಯುವುದು ದೇವನಿಗೆ ಅಪ್ಯಾಯಮಾನ. ಅದೇ ಮಾನವಜನ್ಮದ ಸಾರ್ಥಕ್ಯದ ದಾರಿ, ಇದೇ ಶ್ರೀ ಪೋಳ ಅವರ ಸಾಹಿತ್ಯದ ಜೀವ ಸತ್ವ".

– **ಶ್ರೀ ಜಿ.ಕೆ. ಜೋಶಿ ಎಂ.ಎ. ವಿಜಾಪೂರ.** (ನಿಯತಿಶಾಸನ –ಲೇಖಕರ ಪರಿಚಯ ಪುಟ–xii)

೫

'ಸಾಹಿತ್ಯದ ಕೇಂದ್ರವಾದ ಧಾರವಾಡದಿಂದ ದೂರದಲ್ಲಿರುವ ವಿಜಾಪೂರದಲ್ಲಿ ಶ್ರೀ ಪೋಳರಂಥ ಯೋಗ್ಯತಾವಂತ ಸಾಹಿತಿಗಳಿದ್ದರೂ ಸಹ, ಅವರ ಬರಹಗಳು

ಅಚ್ಚಾಗಲು ಅಲ್ಲಿ ಸರಿಯಾದ ಪತ್ರಿಕೆಗಳಿಲ್ಲದೆ, ಪ್ರೋತ್ಸಾಹಕರಿಲ್ಲದೆ, ವಿಮರ್ಶಕರಿಲ್ಲದೇ ಇರುವದರಿಂದ, ಅವರು ಅಖಿಲ ಕರ್ನಾಟಕದಲ್ಲಿ ಪರಿಚಿತರಾಗುವದು ಕಠಿಣವಾಗಿದೆ.

ಗದ್ಯ ಪದ್ಯಗಳೆರಡೂ ಹಿತಮಿತವಾಗಿ ಬೆರೆತ, ಸ್ವಲ್ಪದರಲ್ಲಿ ಸ್ವಾರಸ್ಯಕರವಾಗಿ ಒಡಮೂಡುವ 'ವಚನ' ಪ್ರಕಾರ ಕನ್ನಡಕ್ಕೆ ವಿಶಿಷ್ಟವಾದುದೆನ್ನಬಹುದು. ಎಂಟುನೂರು ವರುಷಗಳ ಹಿಂದೆ ಜನಸಾಮಾನ್ಯರಿಗಾಗಿ 'ವಚನ ರಚನೆ' ಮಾಡುವ ಮೂಲಕ ಶರಣರು ಈ ಪ್ರಕಾರಕ್ಕೆ ವಿಶೇಷ ಮಹತ್ವ ತಂದುಕೊಟ್ಟರು. ಅವರ ತರುವಾಯ ಈ ಹಂದರವನ್ನು ಜನಕಾವ್ಯಕ್ಕಾಗಿ ಬಳಸಿಕೊಂಡವನು ಸರ್ವಜ್ಞ. ಪ್ರಭುದೇವರಂಥ ಕೆಲವು ಶರಣರ ವಚನಗಳಲ್ಲಿನ ಕ್ಲಿಷ್ಟತೆ, ಸರ್ವಜ್ಞನಲ್ಲಿಲ್ಲದ್ದರಿಂದ ಆತ ಬಹುಬೇಗ ಜನಪ್ರಿಯನಾದ. ಆತನ ವಚನಗಳು ಹಳ್ಳಿ ಹಳ್ಳಿಗಳಲ್ಲಿ ಹರಡಿಕೊಂಡವು.

ಶಿವಶರಣ ಕಕ್ಕಯ್ಯನವರನ್ನು ವಿಶೇಷವಾಗಿ ಮೆಚ್ಚಿ ಗೌರವಿಸುವ ಶ್ರೀ ಪೋಳ ಅವರು, 'ಕುಮಾರ ಕಕ್ಕಯ್ಯನ ವಚನಗಳು' ಎಂಬ ಹೆಸರಿನಲ್ಲಿ ತಮ್ಮ ವಚನ ಸಂಕಲನ ಪ್ರಕಟಿಸಿದ್ದಾರೆ. ಹೆಣ್ಣು, ಗಂಡು, ಲಗ್ನ, ಪ್ರೇಮದಿಂದ ಹಿಡಿದು ಜಾತಿ, ಪಂಥ, ಸಮಾಜ, ಭಕ್ತಿ, ಆತ್ಮ, ದೇವರು ಮೋಕ್ಷ ಮೊದಲಾದ ಜೀವನದ ಎಲ್ಲ ಹಂತಗಳ ಕುರಿತು, ಹರಿತವಾದ ಭಾಷೆಯಲ್ಲಿ ಸವಿಸ್ತಾರವಾಗಿ ಬರೆದಿದ್ದಾರೆ. ಅವರು ಬರೆದ ಚುರುಕಾದ ವಚನಗಳು ವಾಚಕರ ಮನಸ್ಸಿನಲ್ಲಿ ಬಹು ವರ್ಷಗಳವರೆಗೆ ಉಳಿಯುವಂಥವುಗಳಾಗಿವೆ. ಇವುಗಳಲ್ಲಿಯ ಹಲವು ನುಡಿಗಳು, ಗಾದೆಯ ಮಾತುಗಳಾಗಿ ಜನಜೀವನದಲ್ಲಿ ಶಾಶ್ವತ ಸ್ಥಾನ ಪಡೆಯುವಂಥವುಗಳಾಗಿವೆ.

ಶ್ರೀ ಪೋಳ ಅವರು ಕನ್ನಡ ಸಾಹಿತ್ಯದಲ್ಲಿ ನುರಿತವರು, ಆಳವಾಗಿ ಅಭ್ಯಶಿಸಿದವರು, ಗದ್ಯ ಪದ್ಯಗಳೆರಡರಲ್ಲಿಯೂ ಕೈಯಾಡಿಸಿದವರು, ಭಾಷೆಯ ಮೇಲೆ ಪ್ರಭುತ್ವವುಳ್ಳವರೂ ಆಗಿರುವರು. ಶ್ರೀ ಪೋಳ ಅವರ ಪ್ರತಿಭೆಯ ಫಲಗಳಾಗಿ ಕುಮಾರ ಕಕ್ಕಯ್ಯನ ವಚನಗಳು ಪ್ರಕಟಗೊಂಡಿವೆ.

**– ಬಸವರಾಜ ಕಟ್ಟಿಮನಿ ಖ್ಯಾತ ಕಾದಂಬರಿಕಾರಿ ಧಾರವಾಡ** (ಕುಮಾರ ಕಕ್ಕಯ್ಯನ ವಚನಗಳು – ಮುನ್ನುಡಿ ಪುಟ ೧–೨)

೬

"ಶ್ರೀ ಬಿ.ಎಸ್.ಪೋಳ ಅವರು ವಿಜಾಪೂರ ಜಿಲ್ಲೆಯಲ್ಲಿ ಈಗಾಗಲೇ ಲೇಖಕರಾಗಿ ಹೆಸರುಗಳಿಸಿದ್ದಾರೆ. ಅವರು 'ಕುಮಾರ ಕಕ್ಕಯ್ಯನ ವಚನಗಳು' ಈ ವಚನ ಸಂಗ್ರಹದಲ್ಲಿ ವರ್ತಮಾನದ ಬದುಕನ್ನು ಬಿಡುಗಣ್ಣಾಗಿ ನೋಡಿ ತಮ್ಮ ಪ್ರತಿಕ್ರಿಯೆಯನ್ನು ದಾಖಲು ಮಾಡಿದ್ದಾರೆ. 'ಕುಮಾರ ಕಕ್ಕಯ್ಯ'ಎಂಬ ಕಾವ್ಯನಾಮದಿಂದ ಕರೆದುಕೊಂಡಿದ್ದಾರೆ.

ಪಂಪನನ್ನು ಮೆಚ್ಚಿಕೊಂಡ ನಾಗಚಂದ್ರ ಕವಿ ತನ್ನನ್ನು 'ಅಭಿನವ ಪಂಪ' ಎಂದು ಕರೆದುಕೊಂಡಿದ್ದಾನೆ. ವ್ಯಾಸನನ್ನು ಆದರ್ಶವಾಗಿ ಇರಿಸಿಕೊಂಡ ಅರ್ವಾಚೀನ ಕವಿ ತನ್ನನ್ನು 'ಕುಮಾರವ್ಯಾಸನೆಂದೂ' ಹಾಗೆಯೇ ಇನ್ನೂ ಕೆಲವು ಕವಿಗಳು ತಮ್ಮನ್ನು ಹಿರಿಯ ಕವಿಯ ಹೆಸರಿನ ಜೊತೆಗೆ ಇರಿಸಿಕೊಂಡು ಹೊಸ ಹೆಸರನ್ನು

ಕಲ್ಪಿಸಿಕೊಂಡಿರುವುದು ಕಂಡು ಬರುತ್ತದೆ. ಬಸಪ್ಪ ಶಾಸ್ತ್ರಿಗಳಿಗೆ 'ಅಭಿನವ ಕಾಳಿದಾಸ'ಎಂಬ ಪ್ರಶಸ್ತಿ ಇದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಇದೇ ರೀತಿ ಶ್ರೀ ಬಿ.ಎಸ್.ಪೋಳ ಅವರು 'ಕುಮಾರ ಕಕ್ಕಯ್ಯ' ಎಂಬ ಕಾವ್ಯನಾಮದಿಂದ ವಚನಗಳನ್ನು ರಚಿಸಿದ್ದಾರೆ. ತಮ್ಮ ಸುತ್ತಲ ಬದುಕನ್ನು ಅವರು ಹೇಗೆ ಗ್ರಹಿಸಿದ್ದಾರೆಂಬುದನ್ನು ಇಲ್ಲಿನ ಅನೇಕ ವಚನಗಳು ತಿಳಿಸುತ್ತವೆ. ಬಹುಪಾಲು ವಚನಗಳು ನೀತಿಬೋಧನೆ, ಧಾರ್ಮಿಕ ದೃಷ್ಟಿ, ವೈರಾಗ್ಯಭಾವ ಮುಂತಾದ ಆದರ್ಶಗಳನ್ನು ಎತ್ತಿ ಹಿಡಿದಿವೆ. ಸಹಜವಾಗಿಯೇ ಇಂಥ ವಚನಗಳಲ್ಲಿ ಕಾವ್ಯಾಂಶ ಕಡಿಮೆಯಾಗಿ ಚಿಂತನಾಂಶಗಳು ಅಧಿಕವಾಗಿರುತ್ತವೆ"

– **ಹಂ.ಪ.ನಾಗರಾಜಯ್ಯ** ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. (ಕುಮಾರ ಕಕ್ಕಯ್ಯನ ವಚನಗಳು ಅಭಿಪ್ರಾಯ–ಪು.೧–೨)

೭

'ಕುಮಾರ ಕಕ್ಕಯ್ಯ ಶ್ರೀ ಪೋಳರ ಕಾವ್ಯನಾಮ
ಅವರು ಬರೆದ ವಚನ ಹವಳ ಮುತ್ತಿನಹಾರ
ಅಳತಿಗೆ ದೂರಾಗಿ ನಾಣ್ಣುಡಿಗೆ ಗಣಿಯಾಗಿ
ಹೇಳುತಿವೆ ಹಿತವಚನ ಜಾಣ್ಣುಡಿಗೆ ತವರಾಗಿ
ಹೆಣ್ಣು ಗಂಡಿನ ವಿಷಯ ನೈಪುಣ್ಯ ಪಡೆದಂತೆ
ಜಾತಿ ಲಂಚದ ಮಾತು ಚಾವಟಿಯಿಂ ಹೊಡೆದಂತೆ
ಕರ್ಮಧರ್ಮದ ನುಡಿಯು ಕಿಡಿಗುಂಡ ಸಿಡಿದಂತೆ
ಸಿರಿಹೊಂದಿ ಇಹುದಿಲ್ಲಿ ಭಂಡಾರ ಒಡೆದಂತೆ॥
ಜಗದ ಡೊಂಕಿಗೆ ಹಿಡಿದ ರನ್ನಗನ್ನಡಿಯಾಗಿ
ಮುಂಬರುವ ಲೋಕಕ್ಕೆ ಶುದ್ಧ ಹೊನ್ನುಡಿಯಾಗಿ
ಪೋಳ ಹೇಳಿದ ನುಡಿಯು ಶರಣರಾ ನುಡಿಯಂತೆ
ಕೊನರಿಹುದು ಗೋಸ್ತನದ ಮಾಬಳ್ಳಿ ಕುಡಿಯಂತೆ ॥

– **ಡಾ॥ ಆರ್.ಸಿ. ಮುದ್ದೇಬಿಹಾಳ** ಖ್ಯಾತ ಕವಿಗಳು, ವಿಜಾಪೂರ. ಕುಮಾರ ಕಕ್ಕಯ್ಯನ ವಚನಗಳ ಕುರಿತು ಅನಿಸಿಕೆ ಪುಸ್ತಕದ ಕವ್ಹರ ಪುಟ iv)

೮

"ಶ್ರೀ ಬಿ ಎಸ್ ಪೋಳರು ರಚಿಸಿದ 'ಕುಮಾರ ಕಕ್ಕಯ್ಯನ ವಚನಗಳು' ವಚನ ಸಾಹಿತ್ಯದಲ್ಲಿ ಒಂದು ಮಹತ್ವದ ಮೈಲುಗಲ್ಲಾಗಿ ನಿಲ್ಲಬಹುದಾಗಿದೆ..... 'ಅಸ್ಪೃಶ್ಯತೆಯ ನೋವು ಅಸ್ಪೃಶ್ಯರಿಗಲ್ಲದೆ ಜಾತ್ಯಾಂಧರಿಗೆ ತಿಳಿಯದು' ಎಂಬ ಇವರ ವಚನವು ಅಸ್ಪೃಶರಾಗಿ ಕಂಡುಂಡ ನೋವಿನ ಅವಿರ್ಭಾವವಾಗಿದೆ. ಶ್ರೀಯುತರು ಎಲೆಯಮರೆಯ ಕಾಯಾಗಿ ತಮ್ಮ ರಚನಾತ್ಮಕ ಸಾಹಿತ್ಯ ಸೇವೆಯನ್ನು ಸಲ್ಲಿಸುತ್ತಲೇ ಇದ್ದಾರೆ. ಆದಾಗ್ಯೂ ದಲಿತರನ್ನು ಯಾರು ಕೇಳಬೇಕು? ದಲಿತಸಾಹಿತ್ಯಕ್ಕೆ ಬೆಲೆ

ಎಲ್ಲಿ? ಕುಲಜರ ಕುತಂತ್ರಕ್ಕೆ ರೋಸಿಹೋದ ಶ್ರೀ ಪೋಳರು ಹೋರಾಟ ಕಣಕ್ಕಿಳಿದು ಈ 'ಕುಮಾರ ಕಕ್ಕಯ್ಯನ ವಚನಗಳ'ನ್ನು ರಚಿಸಿಯೇ ಬಿಟ್ಟದ್ದಾರೆ.

ಈಗಿನ ಜನಜೀವನವನ್ನು ತಿದ್ದಲೆತ್ನಿಸುವ ಪ್ರಯತ್ನ ಈ ವಚನಗಳಲ್ಲಿ ಕಾಣಬಹುದಾಗಿದೆ. ನಿರ್ಮಲ ಹೃದಯದಿಂದ ಯೋಚಿಸಿದ ವಚನಗಳು ಕಿಡಿನುಡಿಗಳಾಗಿ ಹೊರಹೊಮ್ಮಿವೆ. ಪ್ರಾಮಾಣಿಕ ಅನಿಸಿಕೆಗಳೆ ವಚನಗಳಾಗಿ ಮಾರ್ಪಟ್ಟಿವೆ..... 'ಅನ್ಯರೊರೆದುದನೆ ನಾ ಬರೆ, ಬರೆದು ಭಿನ್ನವಾಗಿದೆ ಮನವು' ಎಂಬ ಕವಿಯೋರ್ವರ ಧಾಟಿಯಲ್ಲಿಯೇ ಶ್ರೀ ಪೋಳರು ಸಾಗಿದ್ದಾರೆ. ಪರಂಪರೆಯ ಅರ್ಥಶೂನ್ಯತೆಗೆ ಜೋತುಬೀಳದೆ, ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಂಡ ಶ್ರೀಬಿ.ಎಸ್.ಪೋಳರಿಗೆ ಉಜ್ವಲ ಭವಿಷ್ಯವಿದೆ.

**-ವೀರಶ್ರೀ ಬ.ವೀ.ಹಂಪನಗೌಡ್ರು ವಿಜಾಪುರ** (ಕುಮಾರಕಕ್ಕಯ್ಯನ ವಚನಗಳು-ಒಮ್ಮನದ ನುಡಿ.ಪು.೧-೨)

೬

"ಕುಮಾರ ಕಕ್ಕಯ್ಯ ಪೋಳರವರು ವಚನಸಾಹಿತ್ಯಕ್ಕೆ ಅದ್ಭುತವಾದ ಕೊಡುಗೆಯನ್ನು ನೀಡಿದ್ದಾರೆ. ವೀರಶೈವಧರ್ಮವು ದಲಿತರಿಂದ ದಲಿತರಿಗಾಗಿಯೇ ಹುಟ್ಟಿದ ಧರ್ಮವೆಂದು ಪ್ರತಿಪಾದಿಸಿದ ಪೋಳರವರು ಆ ಧರ್ಮದಲ್ಲಿ ನುಸುಳಿರುವ ಪರೋಹಿತಶಾಹಿ ಕ್ರಿಮಿಗಳ ವಿರುದ್ಧ ಸಮರವನ್ನೇ ಸಾರಿದರು. ಬಸವಣ್ಣನ ಕಾಲದಲ್ಲಿದ್ದ ವಚನಗಕಾರರ ನಂತರ ಅವರಷ್ಟೇ ಪ್ರಭಾವಶಾಲಿಯಾಗಿ ಜನಪರ ವಿಚಾರಗಳನ್ನು ವಚನಗಳಾಗಿ ಬರೆದವರು ಪೋಳರು ಮಾತ್ರ ಎಂದು ಕಾಣುತ್ತದೆ. ಕುಮಾರ ಕಕ್ಕಯ್ಯನ ವಚನಗಳು ಎಂಬ ೧೨೩೫ ವಚನಗಳ ಸಂಕಲನವು ಈ ನಮ್ಮ ತೀರ್ಮಾನಕ್ಕೆ ಸಾಕ್ಷಿಯಾಗಿದೆ. ವೀರಶೈವರಲ್ಲೂ ಕಾಣಸಿಗದಂತಹ ಅಪರೂಪದ ಅತ್ಯುತ್ತಮ ವಚನಕಾರರು ಇವರಾಗಿದ್ದರು ಎಂಬುದು ಇಡೀ ದಲಿತ ಸಮಾಜವು ಹೆಮ್ಮೆ ಪಡಬೇಕಾದ ವಿಷಯುವಾಗಿದೆ. ವೀರಶೈವ ಸಾಹಿತ್ಯದಲ್ಲಿ ಮಹಾಪಂಡಿತರೆನಿಸಿಕೊಂಡವರೂ ಸಹ ಅವರಿಗೆ ಸವಾಲು ಹಾಕಲು ಅಂಜುತ್ತಿದ್ದರೆಂದ ಮೇಲೆ ಅವರ ಅಧ್ಯಯುನದ ಆಳವನ್ನು ನಾವು ಅರ್ಥಮಾಡಿಕೊಳ್ಳಬೇಕು. ೧೫ ಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿರುವ ಪೋಳರ ಒಂದೊಂದು ಪುಸ್ತಕವೂ ಒಂದೊಂದು ಡೈನಾಮೈಟ್ ಆಗಿವೆ,........ ಪೋಳರು ಬರೆದಿರುವ ಪ್ರತಿಯೊಂದು ಪುಸ್ತಕದಲ್ಲೂ ಹೊಸವಿಚಾರಗಳು, ಮಲೆತು ಮಡುಗಟ್ಟಿ ನಿಂತಿರುವ ಸಮಾಜಕ್ಕೆ ಶಾಕ್ ಕೊಡುವ ವಿಚಾರಗಳು ತುಂಬಿವೆ."

"ತಮ್ಮ ಸಮಾಜಕ್ಕೆ ಆವರಿಸಿರುವ ದುಃಖದ ಮೂಲವನ್ನು ಅರಸಿಹೋದ ಭೀಮರಾಯರಿಗೆ (ಪೋಳರಿಗೆ) ಬುದ್ಧ, ಬಸವ ಮತ್ತು ಬಾಬಾಸಾಹೇಬ ಅಂಬೇಡ್ಕರರ ವಿಚಾರಗಳು ಮಾರ್ಗದರ್ಶಿಗಳಾದವು. ಇಂತಹ ಪ್ರಕ್ರಿಯೆಯಲ್ಲಿ ಅವರಿಂದ ಸಾಹಿತ್ಯವು ಸೃಷ್ಟಿಯಾಗತೊಡಗಿತು. ವಚನಕಾರರಲ್ಲಿ ಪ್ರಖ್ಯಾತ

ವಚನಕಾರರಾಗಿದ್ದ ಡೋಹರ ಕಕ್ಕಯ್ಯನವರ ನೆನಪಿನಲ್ಲಿ ಭೀಮರಾಯರು 'ಕುಮಾರ ಕಕ್ಕಯ್ಯ'ರಾದರು. ಈ ಕಾವ್ಯನಾಮದಿಂದಲೇ ಚಿರಪರಿಚಿತರಾಗತೊಡಗಿದರು".

**–ಪ್ರಕಾಶಕರು, ಕರ್ನಾಟಕ ದಲಿತ ಕ್ರಿಯಾ ವೇದಿಕೆ,** ಮೂಲನಿವಾಸಿಗಳ ಮಹಾ ಒಕ್ಕೂಟ ಇಂಡಿಯಾ (ಚಾತುರ್ವರ್ಣ ಧರ್ಮದರ್ಶನ ನಮ್ಮ ಮಾತು ಪುಟ iv-v)

೧೦

"ನಿವೃತ್ತ ತಹಶೀಲದಾರರಾದ ಶ್ರೀಬಿ.ಎಸ್.ಪೋಳ ಇವರು ಕಲ್ಯಾಣನಾಡಿನ ಶರಣ ಪರಿಷತ್ತಿನ ಅಧ್ಯಕ್ಷರಾಗಿದ್ದಾರೆ. ಇವರು 'ಕುಮಾರ ಕಕ್ಕಯ್ಯ" ಎಂಬ ಕಾವ್ಯನಾಮದಿಂದ ಸಾಕಷ್ಟು ಕಥೆ,ಕಾದಂಬರಿ,ನಾಟಕ,ಕಾವ್ಯ,ವಚನಗಳನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ಹೆಸರುಗಳಿಸಿದವರಾಗಿದ್ದಾರೆ. ಪ್ರತಿಭಾವಂತರಾದ ಕುಮಾರ ಕಕ್ಕಯ್ಯ ಇವರು ಬಸವಾದಿ ಪ್ರಮಥರು ಸಾರಿಹೋದ ವಿಶ್ವಧರ್ಮದ ತಿರುಳನ್ನು ಆಳವಾಗಿ ಅಭ್ಯಾಸ ಮಾಡಿದವರಾಗಿದ್ದಾರೆ. ಬಂಡೆಗಲ್ಲಾದ ಜಿಡ್ಡು ಸಂಪ್ರದಾಯ,ಮೂಢನಂಬಿಕೆ, ಅಂಧಾನುಕರಣೆಯ ಕಂದಾಚಾರ ಇತ್ಯಾದಿಗಳಲ್ಲಿ ತೇಲಿ ಮುಳುಗುತ್ತಿರುವ ಸಮಾಜವನ್ನು ನಿರೀಕ್ಷಿಸಿ, ಮನನೊಂದು 'ಲೋಕವಿರೋಧಿ ಶರಣ ಆರಿಗೂ ಅಂಜುವನಲ್ಲ' ಎಂಬ ಬಸವಣ್ಣನವರ ದಿಟ್ಟ ನಿಲುಮೆಯನ್ನು ಅರ್ಥೈಸಿಕೊಂಡು ಸ್ವರಚಿತ 'ಶರಣರ ಸಮಗ್ರ ಕ್ರಾಂತಿ' ಎಂಬ ವಚನ ಸಂಕಲನವನ್ನು ಹೊರತಂದಿದ್ದಾರೆ.

ಓದುವ ಸಹೃದಯರ ಮನಸ್ಸಿನ ಮೇಲೆ ಅಚ್ಚೊತ್ತುವಂತೆ ಬರೆಯುವ ಕಲೆಯನ್ನು ಕರಗತ ಮಾಡಿಕೊಂಡಿರುವ ಶರಣ ಕುಮಾರ ಕಕ್ಕಯ್ಯ ಇವರ ಶರಣಸಾಹಿತ್ಯದ ಚಿಂತನಶೀಲ ವ್ಯಕ್ತಿತ್ವ ಅವರ ಪ್ರತಿವಚನದಲ್ಲಿ ಮೈದಳೆದು ನಿಂತಿದೆ. ಶೈಲಿಯ ಸೊಗಸು,ತತ್ವದ ಗಾಂಭೀರ್ಯ, ಭಾಷೆಯ ಸರಳತೆ, ಭಾವದ ತೀವ್ರತೆ ಇವರ ಶರಣರ ಸಮಗ್ರ ಕ್ರಾಂತಿಯಲ್ಲಿ ಕಾಣಬಹುದು. ಕಿರಿದರಲ್ಲಿ ಹಿರಿದರ್ಥ ತುಂಬುವ ಜಾಣ್ಮೆ ಇವರ ವಚನಗಳಲ್ಲಿ ಎದ್ದು ಕಾಣುತ್ತದೆ.

ಬಸವಾದಿ ಪ್ರಮಥರ ಧಾರ್ಮಿಕ ಕ್ರಾಂತಿಯ ಮುಖವಾಣಿಯಾಗಿ ಮೂಡಿಬಂದ ವಚನಸಾಹಿತ್ಯದ ರೂಪ ಆಧುನಿಕ ಕಾಲದವರೆಗೂ ಉಳಿದು ಹಲವಾರು ಜನ ಪ್ರತಿಭಾವಂತರಿಂದ ಹುಲುಸಾಗಿ ಬೆಳೆದು ಬಂದಿರುವದು ನಮ್ಮ ನಾಡಿನ ಭಾಗ್ಯವಿಶೇಷ. ಇಂಥ ವಚನರಚನೆಯ ಪರಂಪರೆಯಲ್ಲಿ ಕುಮಾರ ಕಕ್ಕಯ್ಯನವರ ಈ ವಚನಗಳಿಗೆ ಮಹತ್ವದ ಸ್ಥಾನವಿದೆ. ಶರಣಸಾಹಿತ್ಯದ ವಚನಲೋಕದಲ್ಲಿ ಸ್ಥಿರವಾಗಿ ಉಳಿಯುವಂಥವುಗಳಾಗಿವೆ.

**–ಶ್ರೀಮನಿಪ್ರ ಮಹಾಂತಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲ** ('ಶರಣರ ಸಮಗ್ರ ಕ್ರಾಂತಿ' ವಚನಗಳಿಗೆ ಆಶೀರ್ವಚನ–ಪುಟ ೩–೪)

೧೧

"ಸಮಾಜದ ಎಲ್ಲ ಸ್ಥರದ ಜನಗಳಿಗೆ ಸಂಬಂಧಿಸಿದ **ಶೋಷಣಾ ಚಿತ್ರವನ್ನು** ಬುದ್ಧ ಬಸವ ಅಂಬೇಡ್ಕಕರ ವಿಚಾರದಾರೆಯಲ್ಲಿ, ನಿಮ್ಮ ಪ್ರಗತಿಪರ ವೈಚಾರಿಕ

ಮೂಸೆಯಲ್ಲಿ ಕರಗಿಸಿ, ಅಪ್ಪಟ ಸುಂದರ ಸುಲಲಿತ ಶಬ್ದಮಣಿಗಳನ್ನು ಒಂದೇ ಸೂತ್ರದಲ್ಲಿ ಪೋಣಿಸಿದ ನಿಮ್ಮ ವೈವಿಧ್ಯಮಯ ಚಿಂತನೆಯ ಅನುಭಾವ ಸಾಹಿತ್ಯ, ನಿಜಕ್ಕೂ ಅನುಪಮವಾದುದು ಹಾಗೂ ಸರಳ ಸುಂದರವಾದುದು.

**-ಪೂಜ್ಯ ಜಗದ್ಗುರು ಶ್ರೀ ಬಸವರಾಜ ಪಟ್ಟದಾರ್ಯ ಮಹಾಸ್ವಾಮಿಗಳು** ಗುರುಸಿದ್ದೇಶ್ವರ ಬೃಹನ್ಮಠ ಗುಳೇದಗುಡ್ಡ (ಕುಮಾರ ಕಕ್ಕಯ್ಯನ ವಚನಗಳು (೧೯೯೩) ಪು - ೩೧೪)

೧೨

"ಪತ್ರಿಕೆಗಳಲ್ಲಿ ನಿಮ್ಮ ಉದ್ಬೋಧಕ ವಚನಗಳನ್ನು, ವೈಚಾರಿಕ ಲೇಖನಗಳನ್ನು ಓದಿ ಪ್ರಭಾವಿತನಾಗಿದ್ದ ನಾನು ನಿಮ್ಮ ಈ ವಚನ ಸಂಗ್ರಹವನ್ನು ಓದಿ ಪುಲಕಿತನಾದೆ. ಎಷ್ಟೊಂದು ವಿಷಯಗಳ ಬಗ್ಗೆ ಎಷ್ಟೊಂದು ಆಳವಾಗಿ ಆಲೋಚಿಸಿರುವಿರಿ. ಅವುಗಳಿಗೆ ಎಷ್ಟೊಂದು ಪ್ರಾಮಾಣಿಕ ಅಭಿವ್ಯಕ್ತಿಯನ್ನು ನೀಡಿರುವಿರಿ. ನಿಮ್ಮ ೭ ವಚನಗಳಲ್ಲಿ ಮನೋಜ್ಞವಾಗಿ ಮುಡಿನಿಂತಿರುವ ನಿಮ್ಮ ಮಾನವೀಯ ದೃಷ್ಟಿ ೧೨ ವಚನಗಳಲ್ಲಿ ನೀವು ಕಂಡರಿಸಿರುವ ಬಸವಣ್ಣನವರ ಮಹೋನ್ನತ ಮೂರ್ತಿಸ್ವರೂಪ, ೧೧ ವಚನಗಳಲ್ಲಿ ನೀವು ವಿಶದೀಕರಿಸಿರುವ ಬಸವಧರ್ಮ ಅನನ್ಯತೆ, ಇನ್ನುಳಿದ ಅನೇಕ ವಚನಗಳಲ್ಲಿ ಸುಸ್ಪಷ್ಟವಾಗಿರುವ ನಿಮ್ಮ ಸಾಮಾಜಿಕ ಕ್ರಾಂತಿಯ ಕಳಕಳಿಗಳು, ಓದುಗರ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತುವಂಥವುಗಳಾಗಿವೆ. ಶಿವಾನುಭವ ಲೋಕಾನುಭವಗಳ ಹೃದಯಂಗಮ ಸಂಗಮದಂತಿರುವ ಈ ವಚನಗಳಿಗೆ, ಸರ್ವತ್ರ ಸ್ವಾಗತದೊರೆಯಲೆಂದು ಶುಭ ಹಾರೈಸುತ್ತೇನೆ.

ನನಗೆ ಹಿಡಿಸಲಾರದಷ್ಟು ಹಿಗ್ಗು. ತನ್ನ ಹೆಸರನ್ನು ಸುಲಿಗೆಗಾಗಿ ಬಳಸಿಕೊಳ್ಳುತ್ತಿರುವ ಸನ್ಯಾಸಿ ಸಾಹಿತಿ ಮತ್ತು ರಾಜಕಾರಣಿಗಳಿಂದ, ಬಸವಣ್ಣ ಈಗ ನಿಮ್ಮಂಥ ನಿಜನಿಷ್ಠರ ಕೈಸೇರುತ್ತಲಿದ್ದಾರೆ. ಅವರನ್ನು ಈ ಆಷಾಢಭೂತಿಗಳಿಂದ ಬಿಡಿಸಿಕೊಂಡು ಶ್ರೀ ಸಾಮಾನ್ಯರಿಗೆ ಮುಟ್ಟಿಸುತ್ತಿರುವ ನಿಮ್ಮ ಈ ಮಣಿಹಕ್ಕೆ ಎಲ್ಲ ಯಶಸ್ಸನ್ನು ಕೋರುತ್ತ, ನಿಮ್ಮ ನಿರ್ಭೀತ, ನ್ಯಾಯನಿಷ್ಠುರ ಮತ್ತು ಪುರೋಗಾಮಿ ವಿಚಾರಧಾರೆಗಾಗಿ ನಿಮ್ಮನ್ನು ಮನಃಪೂರ್ವಕ ಅಭಿನಂದಿಸುತ್ತೇನೆ.

**-ಡಾ|| ಸಿದ್ದಯ್ಯ ಪುರಾಣಿಕ (ಕಾವ್ಯಾನಂದ)** ಆಧುನಿಕ ವಚನಕಾರರು,ಬೆಂಗಳೂರು. (ಕುಮಾರ ಕಕ್ಕಯ್ಯನ ವಚನಗಳು (೧೯೯೩) ಅನಿಸಿಕೆಗಳು ಪು- ೩೧೩)

೧೩

"ಬಾಲಕರಿಂದ ವಯೋವೃದ್ಧರವರೆಗೆ, ಸಂಸಾರಿಗಳಿಂದ ಸನ್ಯಾಸಿಗಳವರೆಗೆ, ದೀನ ದಲಿತರಿಂದ ಕುಲಜ ಅಗ್ರಜರವರೆಗೆ ಮತ್ತು ಪ್ರಜೆಗಳಿಂದ ಪ್ರಭುಗಳ ವರೆಗೆ ಎಲ್ಲರೂ ಓದಿ ಸವಿಯಬಹುದಾದ ೧೨೩೫ ವಚನಗಳುಳ್ಳ 'ಕುಮಾರ ಕಕ್ಕಯ್ಯನ ವಚನಗಳು' ಈ ಪುಸ್ತಕವನ್ನು ಸರ್ವರೂ ಓದಿ, ತಮ್ಮ ಜಿವನವನ್ನು ಸಾರ್ಥಕ ಗೊಳಿಸಿಕೊಳ್ಳಲೆಂದೇ ನನ್ನ ಆಸೆ".

**–ಸನ್ಮಾನ್ಯ ಶ್ರೀ ಡಾ॥ ಬಿ.ಡಿ.ಜತ್ತಿ ಮಾಜಿ ಉಪರಾಷ್ಟ್ರಪತಿಗಳು** ಮತ್ತು ಅಧ್ಯಕ್ಷರು ಬಸವ ಸಮಿತಿ ಬೆಂಗಳೂರು. (ಕುಮಾರ ಕಕ್ಕಯ್ಯನ ವಚನಗಳು (೧೯೯೩) ಅನಿಸಿಕೆಗಳು ಪುಟ– ೩೧೪)

೧೪

"ಅನುಭವ ಪ್ರಮಾಣಿಕತೆಯಿಂದ ಮತ್ತು ವೈಚಾರಿಕ ನಿರ್ಭೀತಿಯಿಂದ ಮೂಡಿ ಬಂದಿರುವ ನಿಮ್ಮ ವಚನಗಳು ಮನ ಸೆಳೆಯುತ್ತವೆ"
**–ಡಾ॥ಎಚ್.ತಿಪ್ಪೇರುದ್ರಸ್ವಾಮಿಗಳು, ಖ್ಯಾತ ಶರಣಸಾಹಿತಿಗಳು** ಹಾಗೂ ಅಧ್ಯಕ್ಷರು ಶರಣಸಾಹಿತ್ಯ ಪರಿಷತ್ತು ಮೈಸೂರು ಕುಮಾರ ಕಕ್ಕಯ್ಯನ ವಚನಗಳು (೧೯೯೩) ಪುಟ ೩೧೪)

೧೫

"ವಚನ ಮಾಧ್ಯಮದ ಮೂಲಕ, ಪ್ರಗತಿಪರ ವಿಚಾರಗಳನ್ನು ಕುಮಾರ ಕಕ್ಕಯ್ಯ ಪೋಳರು ಪ್ರಚುರ ಪಡಿಸುತ್ತ ಬಂದಿರುವುದು ಸ್ತುತ್ಯ ಸಂಗತಿ. ಬಹುಸಂಖ್ಯಾತ ಜನರ ವಿಚಾರಸ್ವಾತಂತ್ರ್ಯವನ್ನು ಅಪಹರಿಸಿ, ಶತ ಶತಮಾನಗಳಿಂದ ಅವರನ್ನು ಧರ್ಮ, ದೇವರು, ಆತ್ಮ, ಮುಕ್ತಿ ಹಾಗೂ ಜೀವನ ಸಿದ್ಧಾಂತಗಳು ಬಗ್ಗೆ ಪರಾವಲಂಬಿಗಳನ್ನಾಗಿ ಮಾಡಿದ ಪುರೋಹಿತಶಾಹಿಯ ವಿರುದ್ಧ ಸಿಡಿದೆದ್ದ, ಬುದ್ಧ ಬಸವ ಮತ್ತು ಭೀಮರು ತೋರಿದ ಬೆಳಕಿನಲಿ, ನಿಮ್ಮ ಬರವಣಿಗೆ ಸಾಗಿರುವುದು ನನಗೆ ಬಹಳೇ ಸಂತೋಷವನ್ನುಂಟು ಮಾಡಿದೆ.
**– ಶ್ರೀ ಅನ್ನದಾನಯ್ಯ ಪುರಾಣಿಕ ವಕೀಲರು ಹಾಗೂ** ಆಧುನಿಕ ವಚನಾಕಾರರು, ಬೆಂಗಳೂರು (ಕುಮಾರ ಕಕ್ಕಯ್ಯನ ವಚನಗಳು ಅನಿಸಿಕೆ–ಪುಟ ೩೧೪)

೧೬

"ಯಾವನು ಹೊಸ ವಿಚಾರಗಳನ್ನು ಹೇಳುವನೋ ಅವನೇ ಬರಹಗಾರ' ಎಂಬ ನಿಮ್ಮ ವಚನದ ಸಾಲು, ನಿಮ್ಮ ಎಲ್ಲ ಬಂಹಗಳಿಗೂ ಅನ್ವಯಿಸುವಂತಿದೆ. ಸ್ವತಂತ್ರ ವಿಚಾರ ಹಾಗೂ ಜೀನನಾನುಭವಗಳಿಂದ, ಸರಳಶೈಲಿಯಲ್ಲಿ ಮೂಡಿಬಂದಿರುವ ನಿಮ್ಮ 'ಕುಮಾರ ಕಕ್ಕಯ್ಯನ ವಚನಗಳು, ನಿಮ್ಮ ಅನುಭವದ ಅಮೌಲ್ಯ ಭಂಡಾರ ಓದುಗರಿಲ್ಲಿ ಪ್ರಗತಿಪರ' ವಿಚಾರಗಳನ್ನು ಬಿಂಬಿಸುವಲ್ಲಿ, ಇವುಗಳ ಪಾತ್ರ ಬಹಳ ದೊಡ್ಡದೆಂದು ನಾನು ಭಾವಿಸಿದ್ದೇನೆ. ವಚನಗಳ ರಚನೆಯಲ್ಲಿ ನಿಮ್ಮದೇ ಆದ ರೀತಿಯೊಂದನ್ನು ಪಡೆದುಕೊಂಡಿರುವುದು ಸ್ಪಷ್ಟವಾಗಿದೆ. ಈ ವಿಶಿಷ್ಟ ಸಾಧನೆಗಾಗಿ ನಿಮ್ಮನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ."
**–ಡಾ॥ ಚೆನ್ನವೀರ ಕಣವಿ ಪ್ರಸಿದ್ಧ ಕವಿಗಳು,ಧಾರವಾಡ** (ಕುಮಾರ ಕಕ್ಕಯ್ಯನ ವಚನಗಳು–ಅನಿಸಿಕೆ ಪುಟ (೩೧೫)

೧೭

"೨೦ನೇ ಶತಮಾನದ ಬದುಕಿನ ವೈವಿಧ್ಯಮಯ ಅನುಭವವನ್ನು ನಿವೇದಿಸುವ ಅನಿವಾರ್ಯತೆಯನ್ನು 'ಕುಮಾರ ಕಕ್ಕಯ್ಯನ ವಚನಗಳು' ತಿಳಿಸುತ್ತವೆ. ಸರಳತೆ,

ನೇರತನ, ಮತ್ತು ವಚನತತ್ವಗಳಿಂದ ತಮ್ಮ ವೈಶಿಷ್ಟವನ್ನು ಮೆರೆದಿವೆ. ವಚನ ಸರಸ್ವತಿ ಗುಪ್ತವಾಗಿದ್ದವಳು ಪುನಃ ಈಗ ಈ ೨೦ ನೆಯ ಶತಮಾನದಲ್ಲಿ ಕಂಗಳಿಗೆ ಮನೋಹರತೆಯನ್ನೀಯಲು, ಮನಸ್ಸಿಗೆ ಶಾಂತಿಯನ್ನುಂಟು ಮಾಡಲು ಮತ್ತು ವಿಚಾರಕ್ಕೆ ವಜ್ರಸಾಣಿಯಾಗಲು ವ್ಯಕ್ತವಾಗಿದ್ದಾಳೆ. ತಮ್ಮವೇ ಆದ ಅಭಿವ್ಯಕ್ತಿಯುಳ್ಳ ಕುಮಾರ ಕಕ್ಕಯ್ಯನ ವಚನಗಳು ಕನ್ನಡ ಸಾಹಿತ್ಯ ಚರಿತ್ರೆಯ ಸಂಪದವನ್ನು ಹೆಚ್ಚಿಸಿವೆ" **–ಡಾ॥ ವ್ಹಿ.ಎಸ್.ಕಂಬಿ. ಹಿರಿಯ ಸಾಹಿತಿಗಳು ಧಾರವಾಡ** (ಕುಮಾರ ಕಕ್ಕಯ್ಯನ ವಚನಗಳು ಅನಿಸಿಕೆ ಪು-೩೪೫)

೧೮

"ಕುಮಾರ ಕಕ್ಕಯ್ಯನ ವಚನಗಳು ವಿಚಾರಪೂರಿತವಾಗಿವೆ. ನಮಗಂತೂ ತಮ್ಮ ಕೃತಿಗಳು ತುಂಬ ಆಸಕ್ತಿದಾಯಕ ಹಾಗೂ ಬೋಧಪ್ರದವಾಗಿವೆ.
**–ಶ್ರೀ ಬಿ.ವಿ.ಕಕ್ಕಿಲ್ಲಾಯ ಹೆಸರಾಂತ ಸಾಹಿತಿಗಳು** ಮಂಗಳೂರು ದಕ್ಷಿಣ-ಕನ್ನಡ ಜಿಲ್ಲೆ (ಕುಮಾರ ಕಕ್ಕಯ್ಯನ ವಚನಗಳು ಅನಿಸಿಕೆ ಪುಟ-೩೧೫)

೧೯

"ಕುಮಾರ ಕಕ್ಕಯ್ಯನ ವಚನಗಳು' ಮಾನವಕುಲ ಇರುವವರೆಗೂ ಇರುವ ಕೃತಿಯು. ತೀಕ್ಷ್ಣವಾಗಿ ತಿವಿದು ಎಚ್ಚರಿಸುತ್ತ, ಮಾನವಕುಲ ಕಳಂಕರಹಿತವಾಗಲು, ಹೃದಯದಲಿ ಸುಪ್ರವಾಗಿರುವ ದಿವ್ಯಶಕ್ತಿ ಜಾಗ್ರುತವಾಗಿ, ವ್ಯಕ್ತಿತ್ವ ರೂಪಗೊಳ್ಳಲು ಸಹಕಾರಿಯಾಗಿದೆ.

ವಚನ ಪರಂಪರೆಗೆ ಒಂದು ವೈಚಾರಿಕತೆಯ ಹೊಸ ಹೊಳಪನ್ನು ನೀಡಿದ್ದೀರಿ, ಇತಿಹಾಸವನ್ನು ನಿರ್ಮಿಸಿದ್ದೀರಿ, ಇದು ನಿಮ್ಮ ತಪಸ್ಸಿನ ಫಲ, ಅಂತಃಕರಣದ ಕಳಕಳಿ ಪದಪದಗಳಲ್ಲಿ ಪುಟಿದಿದೆ. ದಾರಿ ತಪ್ಪದಂತೆ ಮತಿಗೆ ಅಂಕುಶವಾಗಿ, ಮಾನವಪಥದಲ್ಲಿ ಮುನ್ನಡೆಸುತ್ತದೆ.

ಈ ನಿಮ್ಮ ಕೃತಿಯನ್ನು ಓದಿ ನಾನಂತೂ ಆನಂದಿಸಿದ್ದೇನೆ. ಬೇಸರವಾದಾಗ, ಬೇಕೆಂದಾಗ, ಕೃತಿ ತೆರೆದು. ಎಲ್ಲಿ ಬೇಕಲ್ಲಿ ಕಣ್ಣಾಡಿಸಿದರೂ, ಅಲ್ಲಿ ಬೆಳಕು ಚಲ್ಲುತ್ತದೆ, ಆನಂದ ಚಿಮ್ಮುತ್ತದೆ. ನಿಮ್ಮನ್ನು ಪಡೆದ ಕನ್ನಡನಾಡು ಧನ್ಯ."
**–ಶ್ರೀ ಜ.ಹೋ.ನಾರಾಯಣಸ್ವಾಮಿ ವಕೀಲರು,ಸಾಹಿತಿಗಳು** ಸದಸ್ಯರು ಕರ್ನಾಟಕ ಸಾಹಿತ್ಯ ಅಕಾಡೆಮಿ,ಹಾಸನ (ಕುಮಾರ ಕ್ಕಯ್ಯನ ವಚನಗಳು ಅನಿಸಿಕೆ ಪು-೩೧೬)

೨೦

"ಸರ್ವಜ್ಞನ ತ್ರಿಪದಿಗಳಲ್ಲಿ ಸಮಾಜದ ಲೋಪದೋಷಗಳನ್ನು ತೋರಿಸಿದರೆ, ನೀವು (ಕುಮಾರ ಕಕ್ಕಯ್ಯನವರು) ಆಧುನಿಕ ಸರ್ವಜ್ಞನ ಸ್ವರೂಪದಲ್ಲಿ ನಿಮ್ಮ ವಚನಗಳ ಮೂಲಕ, ಎಲ್ಲವನ್ನು ಮತ್ತು ಎಲ್ಲರನ್ನೂ ಬಯಲಿಗೆಳೆದು, ಸಮಾಜದ ಅಭ್ಯದಯಕ್ಕೆ ಮತ್ತು ವ್ಯಕ್ತಿ ವಿಕಾಸಕ್ಕೆ ಮಹದುಪಕಾರ ಮಾಡಿರುವಿರಿ. ನಿಮ್ಮ ವಚನಗಳೆಲ್ಲವೂ ಮಾನವನ ಬದುಕಿನ ಉದ್ಧಾರದ ಅಂಗಗಳಾಗಿವೆ. ನೀವು ಪ್ರಗತಿಪರ

ವಿಚಾರವಾದಿ ಮತ್ತು ಮಾನವ ಧರ್ಮವಾದಿ ಎಂಬುದನ್ನು ನಿಮ್ಮ ವಚನಗಳು ಜನಮನಗಣಕ್ಕೆ ಎತ್ತಿ ತೋರಿಸುವ ಪ್ರತ್ಯಕ್ಷ ಉದಾಹರಣೆಗಳಾಗಿವೆ, ಸಕಲರಿಗೆ ಮತ್ತು ಸಮಾಜಕ್ಕೆ ಲೇಸನ್ನೇ ಬಯಸುತ್ತಿರುವ ನಿಮಗೆ ನಮ್ಮ ಧನ್ಯವಾದಗಳು.
**–ಶ್ರೀ ಬಿ.ಎಸ್.ಕಲ್ಯಾಣಿ ಸಂಪಾದಕರು :ಶರಣ ಪತ್ರಿಕೆ ಅಥಣಿ** (ಕುಮಾರ ಕಕ್ಕಯ್ಯನ ವಚನಗಳು ಅನಿಸಿಕೆ ಪುಟ ೩೧೬)

೨೧

" The drama ' This is my society (Kannada) depicts the success of 'Asur'. The so called gentlemen in a society, always prevail over unfortunate and down-trodden group of society. The means and things he employs to foster his selfish motives are sarcasically exposed, and there lies the art of the author which makes the drama different from other dramas.

The author has taken great care not to harm feelings of any community or caste. The charecters move about freely and naturally. The dramatic incidents are made to appear more real.

The dialogues have been enriched by the poetic language in the mouths of ordinary charecters. The songs are appealing and fit in the story. The author deserves all the praise for this articale of its own kind."

- **K.H. Bilagi** B.A.LLB. Pleader, Jamakhandi [-ಇದು ನನ್ನ ಸಮಾಜ ನಾಟಕ [Forward Page - iv]

೨೨

"ಚಾತುರ್ವರ್ಣ ಧರ್ಮದರ್ಶನ ಓದುವಾಗ, ಪ್ರಸಿದ್ಧ ನಾಟಕಕಾರರಾದ ಜಾರ್ಜ ಬರ್ನಾಡ್ ಶಾ ಅವರ 'ಎಡ್ವಂಚರ್ಸ ಆಫ್ ದ ಬ್ಲ್ಯಾಕ ಗರ್ಲ ಇನ್ ಸರ್ಚ ಆಫ್ ಗಾಡ' ಡಾ॥ ಶಿವರಾಮ ಕಾರಂತರ ನಾರದನ ಗರ್ವಭಂಗ, ಗರ್ಭಗುಡಿ; ಮತ್ತು ಶ್ರೀರಂಗರ ಹರಿಜನ್ವಾರ ನೆನಪಿಗೆ ಬರುತ್ತವೆ.

ವಿಚಾರವಾದಿಯಾದ ಶ್ರೀ ಕುಮಾರ ಕಕ್ಕಯ್ಯ ಪೋಳ ಅವರು, ಧರ್ಮ, ಧಾರ್ಮಿಕ ಗುರುಗಳು, ದೇವರು, ಆತ್ಮ ಇತ್ಯಾದಿ ವಿಷಯಗಳ ಬಗ್ಗೆ ತಮ್ಮ ಪ್ರಾಮಾಣಿಕ ಅನಿಸಿಕೆಗಳನ್ನು ಧೈರ್ಯದಿಂದ, ತರ್ಕಬದ್ಧವಾಗಿ ಬರೆದಿದ್ದಾರೆ. ಧರ್ಮದ ಹೆಸರಿನಲ್ಲಿ ಬೂಟಾಟಿಕೆ ನಡೆದ ಈ ಕಾಲದಲ್ಲಿ, ಕುಮಾರ ಕಕ್ಕಯ್ಯನಂಥವರು ಹೆಚ್ಚಾಗಿ ಬೇಕು. ಸಾರ್ವಜನಿಕ ಜೀವನವನ್ನು ಕಲುಷಿತಗೊಳಿಸುತ್ತಿರುವ ಧರ್ಮದ ಸೋಗುಗಾರರನ್ನು ಬಯಲಿಗೆಳೆಯುವ ಮಹತ್ಕಾರ್ಯಕ್ಕೆ ಕೈ ಹಾಕಿದ್ದಾರೆ. ನನ್ನ ಅಂತಃಕರಣದ ಅಭಿನಂದನೆಗಳು"

[– **ಡಾ|| ಎಚ್. ಟಿ. ಸಾಸನೂರ,** ವಿಜಾಪುರ – ಚಾತುರ್ವರ್ಣ ಧರ್ಮದರ್ಶನ – ಗ್ರಂಥ ಅಭಿಪ್ರಾಯಗಳು ಪುಟ – ೧೭೨]

೨೩

"ಚಾತುರ್ವರ್ಣ ಧರ್ಮದರ್ಶನ ಇದೊಂದು ಅಧ್ಯಯನ ಪೂರ್ಣ ಕೃತಿಯೆಂಬುದರಲ್ಲಿ ಸಂದೇಹವಿಲ್ಲ. ನಮ್ಮ ಹಿಂದು ಧರ್ಮದ ಉದ್ಗ್ರಂಥಗಳನ್ನು ಅಧ್ಯಯನ ಮಾಡಿ ಅದರ ಭೀಕರ ಅಮಾನವೀಯ ಅಂಶಗಳನ್ನು ತಾವು ಬೆಳಕಿಗೆ ತಂದಿರುವದಂತೂ ತುಂಬಾ ಶ್ಲಾಘನೀಯ ಅಂಶ. ತಾವು ಕಷ್ಟಪಟ್ಟು ಮಾಡಿರುವ ಕೆಲಸಕ್ಕೆ ಎಷ್ಟು ಅಭಿನಂದಿಸಿದರೂ ಸಾಲದು"

[– **ಕೆ.ಪಿ ಪೂರ್ಣಚಂದ್ರ ತೇಜಸ್ವಿ,** ಮೂಡಿಗೆರೆ – ಚಾತುರ್ವರ್ಣ ಧರ್ಮದರ್ಶನ ಗ್ರಂಥದ ಕೊನೆಯಲ್ಲಿ ಅಭಿಪ್ರಾಯಗಳು ಪು – ೧೭೨]

೨೪

"ಚಾತುರ್ವರ್ಣ ಧರ್ಮ ದರ್ಶನ ಕೃತಿಯು ಕೈಗೆ ಸಿಕ್ಕ ತಕ್ಷಣವೇ ಆಕರ್ಷಿಸಿ ಓದಿಸಿಕೊಂಡು ಹೋಯಿತು ಇದೊಂದು ಅಧ್ಯಯನಪೂರ್ಣವಾದ ಕೃತಿಯೆಂಬುದರಲ್ಲಿ ಸಂದೇಹವಿಲ್ಲ. ಈಗಿನ ಸಾಂಸ್ಕೃತಿಕ ಸಂದರ್ಭದಲ್ಲಿ ಇಂತಹ ಪುಸ್ತಕದ ಅವಶ್ಯಕತೆ ತುಂಬಾ ಇತ್ತು. ಅದರ ಕೊರತೆಯನ್ನು ನೀಗಿಸುವಲ್ಲಿ ನಿಮ್ಮ ಕೃತಿಯ ಪಾತ್ರ ಹಿರಿದು. ಈ ಕೃತಿಯಲ್ಲಿ ಬಳಸಿದ ಭಾಷೆ ಚಾಟಿಯ ಏಟಿನಂತಿದೆ. ದಲಿತರ ಶೋಷಣೆ ಕೇವಲ ಬ್ರಾಹ್ಮಣರೇ ಮಾಡುತ್ತಾರೆಂಬ ನಂಬಿಕೆ ನಮ್ಮಲ್ಲಿ ಬೇರೂರಿದೆ. ಆದರೆ ಇವರನ್ನು ಹೊರತುಪಡಿಸಿ ಇನ್ನುಳಿದವರೂ ಇದ್ದಾರೆ ಎಂಬುದನ್ನು ಎತ್ತಿ ತೋರಿಸಲು ನೀವು ಮಾಡಿದ ಪ್ರಯತ್ನ ಮೆಚ್ಚುವಂತಹದು"

– **ಡಾ|| ಅರವಿಂದ ಮಾಲಗತ್ತಿ** ಮಂಗಳಗಂಗೋತ್ರಿ, [ಚಾತುರ್ವರ್ಣ ಧರ್ಮದರ್ಶನ ಗ್ರಂಥದ ಅಭಿಪ್ರಾಯಗಳು ಪುಟ – ೧೭೨–೧೭೩]

೨೫

"ಅರ್ಥಪೂರ್ಣ ಮುಖಪುಟದಿಂದಲೇ ಚಾತುರ್ವರ್ಣ ಧರ್ಮ ದರ್ಶನ ಪುಸ್ತಕದ ಆಕರ್ಷಣೆ ಪ್ರಾರಂಭವಾಗುತ್ತದೆ. ಅಧ್ಯಾಯಗಳ ಕ್ರಮಬದ್ಧ ವಿಂಗಡಣೆಯು ವಿಷಯ ನಿರೂಪಣೆಗೆ ಒಂದು ಸರಿಯಾದ ನೀಲನಕ್ಷೆಯಂತೆ ಕೆಲಸ ಮಾಡಿದೆ. ಶತಶತಮಾನಗಳ ಸಿಟ್ಟನ್ನು ಶಿಸ್ತಿಗೆ ಒಳಪಡಿಸಿದ ಪ್ರಯತ್ನ ಈ ಪುಸ್ತಕದುದ್ದಕ್ಕೂ ಕಾಣುತ್ತದೆ. ಬಸವೇಶ್ವರರ, ಅಂಬೇಡ್ಕರರ ವಿಚಾರಧಾರೆಗಳ ಸಂಗಮವಾಗಿ ಮುಂದುವರೆದ ಈ ಪುಸ್ತಕದ ಭಾಷೆಯಲ್ಲಿ ಇನ್ನಷ್ಟು ಸಂಯಮಬೇಕಿತ್ತು. ಸಮಾಜದ ಕಣ್ಣು ತೆರೆಯಿಸುವ ಈ ಗ್ರಂಥದ ಬರವಣಿಗೆಗಾಗಿ ಧನ್ಯವಾದಗಳು"

– **ಡಾ|| ಎಂ. ಎಂ. ಕಲಬುರ್ಗಿ** ಖ್ಯಾತ ಸಂಶೋಧಕರು ಧಾರವಾಡ, [ಚಾತುರ್ವರ್ಣ ಧರ್ಮ ದರ್ಶನ ಗ್ರಂಥ ಕುರಿತು ಅಭೀಪ್ರಾಯಗಳು ಪು – ೧೭೩]

೨೬

"ಚಾತುರ್ವರ್ಣ ಧರ್ಮದರ್ಶನ ಕೃತಿಯನ್ನು ಓದಿ ಬಹಳ ಆನಂದವಾಯಿತು. ತುಂಬಾ ತಿಳಿಯಾದ ಭಾಷೆಯಲ್ಲಿ ಓದುಗರಿಗೆ ಮನವರಿಕೆಯಾಗುವಂತೆ ಬರೆದು ಶೋಷಿತ ಜನಾಂಗಕ್ಕೆ ದೊಡ್ಡ ಉಪಕಾರ ಮಾಡಿದ್ದೀರಿ. ಇಲ್ಲಿ ನಿಮ್ಮ ಪವಿತ್ರ ಕರ್ತವ್ಯವನ್ನು ಪೂರೈಸಿದ್ದೀರಿ. ವಿನಯಪೂರ್ವಕವಾಗಿ ನೀವು ವಿದ್ವಾಂಸರಲ್ಲವೆಂದು ಮುನ್ನುಡಿಯಲ್ಲಿ ನೀವು ಹೇಳಿಕೊಂಡಿದ್ದರೂ ನೀವು ಉತ್ತಮ ವಿದ್ವಾಂಸರೆಂದೂ ಒಳ್ಳೆಯ ಆಲೋಚಕರೆಂದೂ ನಿಮ್ಮ ಕೃತಿ ತಾನೇ ಶ್ರುತಪಡಿಸುತ್ತದೆ.

ಹಿಂದೂ ಸಮಾಜದ ಕೊಳಕಿನ ಹೊಂಡ ಯಾವುದು, ಅದು ಏಕೆ ಗಬ್ಬು ನಾರುತ್ತದೆ ಎಂಬುದನ್ನು ತೋರಿರುವ ನಿಮ್ಮ ವೈಚಾರಿಕ ಸ್ಪಷ್ಟನೆ ಶ್ಲಾಘನೀಯವಾಗಿದೆ. ನಿಮ್ಮನ್ನು ಓದುತ್ತಿದ್ದರೆ ನನಗೆ ಡಾ|| ಬಾಬಾ ಸಾಹೇಬ ಅಂಬೇಡ್ಕರರನ್ನು ಓದುತ್ತಿರುವಂತೆ ಅನುಭವವಾಯಿತು.

– **ಪ್ರೊ ಕೆ.ಎಸ್. ಭಗವಾನ** ಮೈಸೂರು – [ಚಾತುರ್ವರ್ಣ ಧರ್ಮದರ್ಶನ ಗ್ರಂಥದ ಅಭಿಪ್ರಾಯಗಳು ಪುಟ – ೧೭೪]

೨೭

"ಚಾತುರ್ವರ್ಣ ಧರ್ಮದರ್ಶನ" ಎಂಬ ಈ ಕೃತಿಯು ವರ್ಣ ವ್ಯವಸ್ಥೆ ಮತ್ತು ಜಾತಿ ಪದ್ಧತಿಯ ಅನಾರೋಗ್ಯಕಾರಿ ಅಂಶಗಳನ್ನು ವಿಶ್ಲೇಷಿಸಿ ಮಾನವೀಯತೆಯ ಪರವಾಗಿ ತನ್ನ ನಿಲವುಗಳನ್ನು ಸ್ಪಷ್ಟಪಡಿಸಿದೆ.

– **ಡಾ|| ಕಾಳೇಗೌಡ ನಾಗವಾರ** ಮೈಸೂರು – [ಚಾತುರ್ವರ್ಣ ಧರ್ಮ ದರ್ಶನ ಗ್ರಂಥದ ಕುರಿತು ಅಭಿಪ್ರಾಯಗಳು ಪುಟ – ೧೭೪.]

೨೮

"ನಿಮ್ಮ ಪುಸ್ತಕದ ವಸ್ತು ಹಾಗೂ ವಿಷಯ ನಿರೂಪಣಾ ತುಂಬಾ ಚೆನ್ನಾಗಿದೆ. ಧರ್ಮಾಂಧತೆ, ಮತೀಯತೆ ಕೇವಲ ಭಾರತಕ್ಕೆ ಅಥವಾ ನಮ್ಮ ಸಮಾಜಕ್ಕಷ್ಟೇ ಸೀಮಿತವಲ್ಲ. ಬೇರೆ ಬೇರೆ ಸಮಾಜಗಳಲ್ಲಿ ಧರ್ಮದ ಹೆಸರಿನಲ್ಲಿ ಅನೇಕ ಅನಾಚಾರಗಳು ಹೇರಳವಾಗಿ ನಡೆದುಕೊಂಡು ಬಂದಿವೆ. ಮೂಢನಂಬಿಕೆ, ಧರ್ಮಾಂಧತೆಯನ್ನು ಸುಲಭವಾಗಿ ಅಳಿಸಲು ಸಾಧ್ಯವಿಲ್ಲ. ಜನಸಾಮಾನ್ಯರು ಧರ್ಮಕ್ಕಲ್ಲದೆ ವಿಚಾರವಾದಕ್ಕೆ ಮಾರು ಹೋಗುವದಿಲ್ಲ. ರಾಮಾಯಣ ಮಹಾಭಾರತದಂತಹ ನೀತಿಗೆಟ್ಟ ನಿರೂಪಣೆಗಳಿಗೆ ತೆಕ್ಕೆ ಬೀಳುವ ದಲಿತರು ಸೇರಿದಂತೆ, ಈ ಜನರನ್ನು ಸುಧಾರಿಸುವುದು ಮತ್ತು ನಮ್ಮಲ್ಲಿ ಬದಲಾವಣೆ ತರುವುದಕ್ಕೆ ಶತಮಾನಗಳೇ ಬೇಕು. ರಾಜಕಾರಣಿಗಳ ಗಡಿಬಿಡಿಯಿಂದ ಪರಿಸ್ಥಿತಿ ಬಿಗಡಾಯಿಸಿದರೂ ಆಶ್ಚರ್ಯವಿಲ್ಲ ಸಾಮಾಜಿಕ ಸಮಾನತೆ ದೂರದ ಆಸೆ"

– **ಪ್ರೊ. ಸಿ ಪಾರ್ವತಮ್ಮ** , ಮೈಸೂರು–[ಚಾತುರ್ವರ್ಣ ಧರ್ಮ ದರ್ಶನ ಗ್ರಂಥ ಕುರಿತು ಅಭಿಪ್ರಾಯಗಳು ಪು ೧೭೪]

೨೯

"ಅನೇಕ ಶತಮಾನಗಳಿಂದ ವರ್ಣ ವ್ಯವಸ್ಥೆಯನ್ನು ತುಂಬಾ ವ್ಯವಸ್ಥಿತವಾಗಿ ಪೋಷಿಸಿಕೊಂಡು ಬರಲಾಗುತ್ತಿದೆ. ವರ್ಣಾಶ್ರಮ ಧರ್ಮದ ವ್ಯವಸ್ಥೆಯಲ್ಲಿ ನಾವೆಲ್ಲ ವಿಭಜನೆಗೆ ಒಳಗಾಗಿದ್ದೇವೆ. ನಮ್ಮ ರಾಷ್ಟ್ರದ ಸಂವಿಧಾನದಲ್ಲಿ ಪ್ರತಿಯೊಬ್ಬರಿಗೂ ಬದುಕಲು ಸಮಾನವಾದ ಅವಕಾಶಗಳಿವೆ. ಆದರೆ ನಮ್ಮ ಧಾರ್ಮಿಕ ವ್ಯವಸ್ಥೆಯಲ್ಲಿ ಈ ವರ್ಣಾಶ್ರಮ ವ್ಯವಸ್ಥೆ ನಮ್ಮ ದೇಶಕ್ಕೆ ಅಂಟಿದ ಕ್ಯಾನ್ಸರ್.

ವರ್ಣಾಶ್ರಮ ಪದ್ಧತಿಯ ನಮ್ಮ ಎಲ್ಲ ಅಸಮಾನತೆಗಳಿಗೆ ಮೂಲ ಕಾರಣವಾಗಿದೆ. ಸ್ಪೃಶ್ಯ-ಅಸ್ಪೃಶ್ಯ ಭಾವನೆಗೆ ಇಂಬು ನೀಡಿದೆ. ಒಂದು ಕಾಲದಲ್ಲಿ ಮಾಡಿದ ಧರ್ಮದ ನಿಯಮಗಳು ಮತ್ತೊಂದು ಕಾಲದಲ್ಲಿ ಅಪ್ರಸ್ತುತವೆನಿಸತ್ತವೆ. ಇದನ್ನರಿತು ಇಡೀ ವ್ಯವಸ್ಥೆಯನ್ನು ಪರಿವರ್ತಿಸಬೇಕಾಗಿದೆ. ಆ ಕೆಲಸ ತಡವಾಗಿಯಾದರೂ ಆರಂಭವಾಗಬೇಕಾಗಿದೆ. ವರ್ಣಾಶ್ರಮಧರ್ಮದ ಕಲ್ಪನೆಯು ಸಮಾಜವನ್ನು ಹೇಗೆ ವಿಭಜಿಸುತ್ತದೆ.? ಕೀಳರಿಮೆ ಮತ್ತು ಮೇಲರಿಮೆಗಳಿಗೆ ಕಾರಣವೇನು? ಇವುಗಳಿಂದ ಹೇಗೆ ಪಾರಾಗಬಹುದು? ಇಂತಹ ಹಲವಾರು ಪ್ರಶ್ನೆಗಳಿಗೆ 'ಚಾತುರ್ವರ್ಣ ಧರ್ಮ ದರ್ಶನ' ಪುಸ್ತಕದಲ್ಲಿ ತುಂಬಾ ಸೂಕ್ತವಾದ ವಿಚಾರಗಳು ಲಭ್ಯವಾಗುತ್ತವೆ. ಇಲ್ಲಿಯ ವಿಚಾರಗಳು ವೈಚಾರಿಕ, ವೈಜ್ಞಾನಿಕ ಹಾಗೂ ವಾಸ್ತವಿಕವಾಗಿವೆ. ಒಂದು ವ್ಯವಸ್ಥೆಯು ಶೋಷಣೆಯ ಕೂಪಕ್ಕೆ ತಳ್ಳಲ್ಪಟ್ಟು ಎಂತಹ ಯಾತನೆಯನ್ನು ಅನುಭವಿಸುತ್ತದೆ ಎಂಬುದನ್ನು ಇಲ್ಲಿ ತೆರೆದು ತೋರಲಾಗಿದೆ. ಈ ಕೃತಿಯನ್ನು ಕೊಟ್ಟವರು (ರಚಿಸಿದವರು) ಶರಣರಾದ ಕುಮಾರ ಕಕ್ಕಯ್ಯ ಪೋಳ ಇವರು. ಈ ಕೃತಿಯ ರಚನೆಗೆ ಬೇಕಾದ ವಿಚಾರವನ್ನು ಸಂಗ್ರಹಿಸಿ ವಿವೇಚಿಸಲು ಕೃತಿಕರ್ತರು ಬಹಳ ಪರಿಶ್ರಮಿಸಿದ್ದಾರೆ. ಇಲ್ಲಿಯ ವಿಚಾರಗಳು ಅಷ್ಟೇ ತಾರ್ಕಿಕವಾಗಿವೆ. ಇಡೀ ಸಮಾಜ ವ್ಯವಸ್ಥೆಯನ್ನು ಈ ಪುಸ್ತಕ ದಿಗ್ದರ್ಶಿಸುತ್ತದೆ."

– **ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು** ಚಿತ್ರದುರ್ಗ– [ಚಾತುರ್ವರ್ಣ ಧರ್ಮ ದರ್ಶನ ಗ್ರಂಥದ 'ಪುಸ್ತಕ ಕುರಿತು' ಪುಟ VIII]

೩೦

"ಕುಮಾರ ಕಕ್ಕಯ್ಯ ಪೋಳ ಅವರು ಬಸವಧರ್ಮದ ದೊಡ್ಡ ಸಂಪತ್ತು. ಅವರ ಸಾಹಿತ್ಯದ ಕಣ ಕಣದಲ್ಲಿ ಶಬ್ದ ಶಬ್ದಗಳಲ್ಲಿ ಬಸವಧರ್ಮ ತುಂಬಿ ತುಳುಕುತ್ತಿದೆ. ಬಸವತತ್ವದ ಉಕ್ಕು ಬಂದಿದೆ. ಅಷ್ಟೊಂದು ಅಧ್ಯಯನಪೂರ್ವಕ ವೈಚಾರಿಕವಾದ ಸರಳ ಸಹಜ ತತ್ವನಿಷ್ಠ ನಿರೂಪಣೆಯಿಂದ ಕೂಡಿದೆ. ಓದಲಿಕ್ಕೆ ಪರಿಶ್ರಮ ಪಡಬೇಕಾಗಿಲ್ಲ, ಅವರ ಸಾಹಿತ್ಯವೇ ಓದಿಸಿಕೊಂಡು ಹೋಗಿರುತ್ತದೆ ಎಂದು ಹೇಳಿದರೆ ಹೆಚ್ಚು ಅರ್ಥಪೂರ್ಣವಾಗುತ್ತದೆ.

ಬಸವಧರ್ಮ ಯಾರ ಸೊತ್ತು ? ಇದು ನನಗೆ ಮೆಚ್ಚುಗೆಯಾದ ಗ್ರಂಥ. ಓದುವಾಗ ನನಗೆ ಕಣ್ಣೀರು ಬಂದಿದೆ. ದುಃಖ ಉಕ್ಕಿ ಬಂದಿದೆ. ಯಾರೇ ಆಗಲಿ ಈ ಗ್ರಂಥ ಓದಿದ ನಂತರ ಬಸವತತ್ವದ ಅರಿವು ಮೂಡುತ್ತದೆ. ಜಾತೀಯತೆ ಬಗ್ಗೆ

ತಿರಸ್ಕಾರ ಮೂಡುತ್ತದೆ, ಬಸವನಿಷ್ಠೆ ಗಟ್ಟಿಗೊಳ್ಳುತ್ತದೆ. ಪೋಳ ಅವರ ಸಾಹಿತ್ಯ ಬಸವತತ್ವ ನಿಷ್ಠೆಯ ಸಾಹಿತ್ಯ"
**– ಶ್ರೀ ಮ.ಘ.ಚ. ಬಸವಲಿಂಗ ಪಟ್ಟದೇವರು ಹಿರೇಮಠ ಸಂಸ್ಥಾನ ಭಾಲ್ಕಿ –** [ಬಸವಧರ್ಮ ಯಾರ ಸೊತ್ತು? ಗ್ರಂಥದ ಪುಟ – VII - VIII]

೩೧

"ಶರಣರಾದ ಕುಮಾರ ಕಕ್ಕಯ್ಯ ಪೋಳ ಅವರು, ಈ ಎಂಟುನೂರು ವರುಷಗಳಲ್ಲಿ ಯಾರೂ ಎತ್ತಿಕೊಳ್ಳದ 'ಬಸವಧರ್ಮ ಯಾರ ಸೊತ್ತು?' ಎಂಬ ಅತಿ ಮಹತ್ವದ ಪ್ರಶ್ನೆಯನ್ನು ಎತ್ತಿಕೊಂಡು ಈ ಹೊತ್ತಿಗೆಯನ್ನು ಹೊರತಂದದ್ದು ಬಹು ಸ್ತುತ್ಯವಾಗಿದೆ. ಇದು ಲಿಂಗಾಧಾರಿಗಳು ಕಣ್ಣುಜ್ಜಿಕೊಂಡು ಓದಿ ವಿಚಾರ ಮಾಡುವಂಥ ಅಮೋಘ ಹೊತ್ತಿಗೆ. ಇದು ಧರ್ಮಗುರುಗಳನ್ನು ಬಡಿದೆಬ್ಬಿಸುವ ಕ್ರಾಂತಿಕಾರಿ ಗ್ರಂಥ. ಬಸವಣ್ಣನವರ ಕನಸು ನನಸಾಗಲು ಬಸವಧರ್ಮ ವಿಶ್ವಧರ್ಮವಾಗಲು ಶರಣ ಕುಮಾರ ಕಕ್ಕಯ್ಯನವರ ಈ ಕೃತಿಯು ನಾಂದಿಯಾಗಿದೆ."
**– ಬಸವಶ್ರೀ ಸಿದ್ಧರಾಮೇಶ್ವರ ಶರಣರು ಬೆಲ್ದಾಳ** ಬೀದರ [ಬಸವಧರ್ಮ ಯಾರ ಸೊತ್ತು ? ಗ್ರಂಥದ ಮುನ್ನುಡಿ ಪುಟ ೧]

೩೨

"ಬಿಜಾಪುರ ಜಿಲ್ಲೆಯ ಸಾಧನೆಗಳ ಶ್ರೇಷ್ಠತೆಯ ಪಟ್ಟಿ ಮಾಡುತ್ತಾ ಹೋಗುವ ಸಂದರ್ಭದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಅದರಲ್ಲೂ ವೈಚಾರಿಕ ಕ್ಷೇತ್ರ, ಆಧುನಿಕ ವಚನಕಾರರಲ್ಲಿ ಒಬ್ಬರಾಗಿ ಹೆಸರು ಮಾಡಿದ ಮೊದಲ ತಲೆಮಾರಿನ ದಲಿತ ಲೇಖಕ ಕುಮಾರ ಕಕ್ಕಯ್ಯ ಪೋಳ (ಬಿ.ಎಸ್. ಪೋಳ.) ಅವರದು ವಿಶಿಷ್ಟ ವ್ಯಕ್ತಿತ್ವ. ಎಪ್ಪತ್ತರ ದಶಕದ ಬೂಸಾ ಪ್ರಕರಣ, ದಲಿತ – ಬಂಡಾಯದ ಗಾಳಿ ಬೀಸುವ ಮೊದಲೇ ಶೋಷಿತರ ಚಿಂತನೆಯ ನೆಲೆಯಲ್ಲಿ ಅಂಬೇಡ್ಕರ ಅವರ ವಿಚಾರಧಾರೆಗಳಿಗೆ ಪ್ರಭಾವಿತರಾಗಿ ಸಾಹಿತ್ಯ ಕೃಷಿಗೆ ತೊಡಗಿದವರು. ವೃತ್ತಿಯಿಂದ ಅಧಿಕಾರಿಯಾಗಿ, ಪ್ರವೃತ್ತಿಯಿಂದ ಸಾಹಿತಿಗಳಾಗಿ, ವಿಚಾರವಾದಿಗಳಾಗಿ ಮನುಷ್ಯ ಪರವಾದ ಚಿಂತನೆಗೈದರು. ಪಂಚಮರ ಮಹಿಳೆಯರ ಶೋಷಣೆಗೆ ಕಾರಣಗಳನ್ನು ಹುಡುಕುತ್ತಾ ತಳಬುಡವನ್ನು, ಟೊಳ್ಳು ಸಂಸ್ಕೃತಿಯನ್ನು ತಮ್ಮ ಚಿಂತನೆಗಳ ಮೂಲಕ ಒರೆಗಲ್ಲಿಗೆ ಹಚ್ಚಿದರು"
**–ಡಾ॥ ಎಚ್. ಟಿ. ಪೋತೆ** ರೀಡರ್ ಕನ್ನಡ ವಿಭಾಗ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ. [ದಲಿತ ಸಾಹಿತಿ ಕುಮಾರ ಕಕ್ಕಯ್ಯ ಪೋಳ ಗ್ರಂಥ ಪುಟ ೨]

೩೩

"ಬಸವಾದಿ ಶರಣರ ಕಲ್ಯಾಣ ಕ್ರಾಂತಿಯ ತರುವಾಯ ೭೭೦ ವರುಷಗಳ ನಂತರ ಬಸವಭೂಮಿಯಲ್ಲಿ ಶರಣಕ್ರಾಂತಿಯ ಕಿಡಿಯಾಗಿ ಉದಿಸಿದ ಗಣಾಚಾರದ ಧೀರ, ಕ್ರಾಂತಿಕಾರಿ ಶರಣ ಕುಮಾರ ಕಕ್ಕಯ್ಯ ಪೋಳ ........ ದಲಿತ ಜನಾಂಗದಲ್ಲಿ ಜನಿಸಿ, ಕುಲಜರ ದೌರ್ಜನ್ಯ ಕಂಡು ಆಸ್ತಿಕನಾಗಿದ್ದ ಬಾಲಕ ನಾಸ್ತಿಕನಾಗಿ, ಕ್ರಾಂತಿಕಾರಿ

ಹೋರಾಟಗಾರನಾಗಿ, ಬಸವತತ್ವ ಅರಿತು ವೈಚಾರಿಕ ಆಸ್ತಿಕನಾಗಿ ಬಸಧರ್ಮದ ಮಹತಿಯನ್ನು ಅರಿತರು. ಬಸವರ್ಧದಿಂದಲೇ ದಲಿತೋದ್ಧಾರ-ಮಾನವಕುಲದ ಕಲ್ಯಾಣವೆಂಬುದನ್ನು ಮನಗಂಡು ವಚನಗಳ ಕ್ರಾಂತಿಯ ಹರಿಕಾರರಾದರು.

ಕುಮಾರ ಕಕ್ಕಯ್ಯನ ವಚನಗಳಲ್ಲಿ ಜೀವನಾನುಭವ ಗಟ್ಟಿಗೊಂಡಿದೆ. ಒಂದೊಂದು ವಚನವೂ ಕ್ರಾಂತಿಯ ಕಿಡಿಗಳು, ಜನಮಾನಸದಲ್ಲಿ ಅಗ್ನಿಜ್ವಾಲೆ ಸ್ಫೋಟಿಸಿ ಸಹಸ್ರಾರು ವರುಷಗಳ ಮೌಢ್ಯವನ್ನು ದಹಿಸುವಂತಹವಾಗಿವೆ."
**-ಪ್ರೊ. ಸಿದ್ದಣ್ಣ ಲಂಗೋಟಿ ಶರಣಸಾಹಿತಿಗಳು** ಗೌ ॥ ಸಂಪಾದಕರು, ಬಸವಬೆಳಗು ಪತ್ರಿಕೆ ರಾಮದುರ್ಗ ಜಿ॥ ಬೆಳಗಾವಿ. [ಗ್ರಂಥ ಕುಮಾರ ಕಕ್ಕಯ್ಯ ಪೋಳ [ಪುಟ - ೩೮]

ಈ ರೀತಿಯಾಗಿ ನಮ್ಮ ನಾಡಿನ ಖ್ಯಾತ ವಿದ್ವಾಂಸರು, ಪೂಜ್ಯರು, ಶರಣಸಾಹಿತಿಗಳು, ಪತ್ರಕರ್ತರು ಕುಮಾರ ಕಕ್ಕಯ್ಯನವರ ಸಾಹಿತ್ಯ ಹಾಗೂ ವಚನಗಳಿಗೆ ಮೌಲ್ಯಯುತವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಅಭಿಪ್ರಾಯಗಳಿಂದ ಕುಮಾರ ಕಕ್ಕಯ್ಯ ಪೋಳ ಅವರ ವ್ಯಕ್ತಿತ್ವ ಹಾಗೂ ಅವರ ಸಾಹಿತ್ಯದ ಹಿರಿಮೆ - ಗರಿಮೆಗಳು ವೇದ್ಯವಾಗುತ್ತವೆ.

# ಅಧ್ಯಾಯ–೭

# ಸಮಾರೋಪ

'ಕುಮಾರ ಕಕ್ಕಯ್ಯನ ವಚನಗಳು–ಒಂದು ಅಧ್ಯಯನ' ಕುರಿತು ಇಲ್ಲಿಯವರೆಗೆ ಅಧ್ಯಯನ–ಚಿಂತನೆ–ಮೌಲ್ಯಮಾಪನ ಮಾಡಲಾಗಿದೆ. 'ವಚನ' ಎಂಬ ಶಬ್ದದಲ್ಲಿ ವ–ಎಂಬುದು ವಚಿಸು, ಚ–ಎಂಬುದು ಚರಿಸು, ನ–ಎಂಬುದು ನಯನಿಸು ಎಂಬರ್ಥದಲ್ಲಿ ಅರಿವು–ಆಚಾರ–ಅನುಭಾವದ ತ್ರಿವೇಣಿ ಸಂಗಮವನ್ನೇ ದರ್ಶಿಸುತ್ತದೆ.

ಕನ್ನಡ ಸಾಹಿತ್ಯವು ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ, ಆಧುನಿಕ ಕನ್ನಡ ಎಂಬ ಐದು ಹಂತಗಳಲ್ಲಿ ಸಾಗಿಬಂದಿದೆ. ವಚನಗಳು ಈ ಐದು ಪ್ರಕಾರದ ಹಂತಗಳಲ್ಲಿ ನಡುವಿನ ಹಂತದಲ್ಲಿವೆ. ತಮ್ಮ ಪೂರ್ವದ ಎರಡು ಹಂತಗಳಲ್ಲಿಯ ಕನ್ನಡಸಾಹಿತ್ಯದ ಬೆಳವಣಿಗೆಯನ್ನು ಗಮನಿಸಿ, ಪಂಡಿತ–ವಿದ್ವಾಂಸರ ಪಾಂಡಿತ್ಯ ಪ್ರದರ್ಶನಕ್ಕೆ ಸೀಮಿತವಾಗಿದ್ದ ಸಂಸ್ಕೃತ ಭೂಯಿಷ್ಟವಾಗಿದ್ದ ಆ ಚಂಪೂಶೈಲಿಯ ಮಾರ್ಗಸಾಹಿತ್ಯದಿಂದ ಹೊರಬಂದು, ಜನಮಾನಸದ ಆಡುನುಡಿಯಲ್ಲಿ ಪಂಡಿತ–ಪಾಮರರಿಬ್ಬರಿಗೂ ತಿಳಿಯುವಂತೆ ಸ್ವಾನುಭಾವದಿಂದ ದೇಸಿ ಸಾಹಿತ್ಯದ ಸೃಷ್ಟಿ ಮಾಡಿದವರು ಬಸವಾದಿ ಶರಣರು. ಅವರ ವಚನಗಳು ಕನ್ನಡ ಸಾಹಿತ್ಯದ ಒಂದು ಪ್ರಕಾರ ಮಾತ್ರವಾಗಿರದೇ ಸಮಗ್ರ ಕನ್ನಡಿಗರ ಜೀವನದರ್ಶನವಾದವು. ಕನ್ನಡ ನಾಡು–ನುಡಿಯ ಹೃದಯವೆನಿಸಿದವು.

ಭಾರತದಲ್ಲಿ ಸಾವಿರಾರು ವರುಷಗಳಿಂದ ಸಾಗಿಬಂದಿದ್ದ ಸನಾತನ ಧರ್ಮ–ಸಮಾಜ–ಸಂಸ್ಕೃತಿಯು ಕಾಲಾನಂತರದಲ್ಲಿ ಸ್ವಾರ್ಥಿ ಪುರೋಹಿತ, ಕರ್ಮಠ ವೈದಿಕರ ಕೈಯಲ್ಲಿ ಸಿಲುಕಿ ವರ್ಣಾಶ್ರಮ ಧರ್ಮ–ಸಮಾಜ ಪದ್ಧತಿ ಬೆಳೆದು ಬಂದು, ಮುಂದೆ ಅದು ವರ್ಣಭೇದ, ವರ್ಗಭೇದ, ಲಿಂಗಭೇದ, ಆಶ್ರಮಭೇದ, ಜಾತಿಭೇದಗಳ ಹುಟ್ಟಿಗೆ ಕಾರಣವಾಯಿತು. ಇದರ ವಿಷ ಫಲವಾಗಿ ಉಚ್ಚ–ನೀಚ, ಕುಲಜ–ಅಂತ್ಯಜ, ಸ್ಪೃಶ್ಯ–ಅಸ್ಪೃಶ್ಯ, ಶ್ರೇಷ್ಠ–ಕನಿಷ್ಠ ಎಂಬ ಮಹಾಕಂದಕಗಳೇ ಉಂಟಾದವು.

ಈ ಚಾತುರ್ವರ್ಣ ಪದ್ಧತಿ ಒಪ್ಪಿಕೊಂಡು ತಲೆಬಾಗಿದವರು ಗುಲಾಮರಾದರು, ಶೂದ್ರರಾದರು, ದಸ್ಯುಗಳಾದರು. ತಲೆಬಾಗದೇ ಸ್ವಾಭಿಮಾನದಿಂದ ಪ್ರತಿಭಟಿಸಿದವರು ಚಾತುರ್ವರ್ಣ ಧರ್ಮ–ಸಮಾಜ ಪದ್ಧತಿಯಿಂದ ಬಹಿಷ್ಕೃತರಾದರು. ಈ ರೀತಿ ಹೊರಗುಳಿದವರೇ ಹೊರಕೇರಿಗಳವರೆನಿಸಿಕೊಂಡರು. ಅವರನ್ನೇ ಅಸ್ಪೃಶ್ಯರು. ಪಂಚಮರು, ಇತ್ತಿತ್ತಲಾಗಿ ದಲಿತರು ಎಂದು ಕರೆಯುತ್ತ ಬರಲಾಗಿದೆ. ಇವರೆಲ್ಲ ಆದಿದ್ರಾವಿಡರೆನಿಸಿಕೊಂಡು ಯಾವುದೇ ರೀತಿಯ ವಿದ್ಯೆ, ಸಂಸ್ಕಾರ, ಸೌಲಭ್ಯಗಳಿಲ್ಲದೇ ಎಲ್ಲ ರಂಗಗಳಲ್ಲಿಯೂ ವಂಚಿತರಾದರು.

ಇಂತಹ ದೀನ–ದಲಿತರ ದಯನೀಯ ಸ್ಥಿತಿ ಕಂಡು,ಅವರಿಗೆ ವಿದ್ಯೆ–ಸಂಸ್ಕಾರವಿತ್ತು 'ಅನುಭವ ಮಂಟಪ' ವ್ಯವಸ್ಥೆಯ ಮೂಲಕ ಮೇಲೆತ್ತಿದವರು

ಮಹಾ ಮಾನವತಾವಾದಿ ಬಸವಣ್ಣನವರು. ಅವರ ನೇತೃತ್ವದಲ್ಲಿ ನಡೆದ ಸಮಾಜೋ–ಧಾರ್ಮಿಕ ಚಳುವಳಿಯು ೧೨ ನೇ ಶತಮಾನದಲ್ಲಿ ಅದ್ಭುತವಾದ ಬದಲಾವಣೆ ಉಂಟು ಮಾಡಿ, ವಿನೂತನವಾದ ಶರಣ ಧರ್ಮ (ಲಿಂಗಾಯತಧರ್ಮ), ಶರಣ ಸಮಾಜ, ಶರಣಸಾಹಿತ್ಯ, ಶರಣಸಂಸ್ಕೃತಿ ಉದಯವಾಗಲು ಕಾರಣವಾಯಿತು. ಶತಶತಮಾನಗಳಿಂದ ಜೀವನದ ಎಲ್ಲ ಪ್ರಕಾರಗಳ ಸ್ವಾತಂತ್ರ್ಯದಿಂದ ವಂಚಿತರಾಗಿದ್ದ ದೀನ–ದಲಿತ–ಅಸ್ಪೃಶ್ಯರಿಗೆ ಧ್ವನಿ ಬಂದಿತು, ಶಕ್ತಿ ಬಂದಿತು, ಕ್ರಾಂತಿಕಾರಿಗಳಾಗಿ ಹೊರ ಹೊಮ್ಮಿದರು. ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಹೊಲೆಯರ ಶಿವನಾಗಮಯ್ಯ,ಸಮಗಾರ ಹರಳಯ್ಯ, ಮಾದಾರ ಧೂಳಯ್ಯ, ಅಂಬಿಗರ ಚೌಡಯ್ಯ, ಮೇದಾರ ಕೇತಯ್ಯ, ಮಡಿವಾಳ ಮಾಚಯ್ಯ, ಆಯ್ದಕ್ಕಿ ಮಾರಯ್ಯ, ಉರಿಲಿಂಗಿಪೆದ್ದಿ, ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ, ಬಡಿಗೇರ ಬಸವಪ್ಪ, ಹಾವಿನಹಾಳ ಕಲ್ಲಯ್ಯ, ನಟುವರ ಪ್ರಭುದೇವ, ಕುರುಬ ಗೊಲ್ಲಾಳ, ಅಮುಗೆ ದೇವಯ್ಯ......ಹೀಗೆ ಅನೇಕ ಶರಣರು, ಹಾಗೂ ಎಲ್ಲ ಕಾಯಕಗಳ ಶರಣೆಯರಾದ ಲಿಂಗಮ್ಮ, ಮುಕ್ತಾಯಕ್ಕ, ದಾನಮ್ಮ, ನೀಲಮ್ಮ, ಗಂಗಮ್ಮ, ಸಂಕವ್ವೆ, ಪಿಟ್ಟವ್ವೆ, ದುಗ್ಗಳೆ, ರಾಯಮ್ಮ, ಬೊಂತಾದೇವಿ, ಸತ್ಯಕ್ಕ, ಕಾಳವ್ವೆ, ಮಹಾದೇವಿಯಕ್ಕ, ಮುಂತಾದ ವಚನಕಾರ್ತಿಯರು ೭೭೦ ಅಮರಗಣಗಳೆನಿಸಿದರು, ವಚನಕಾರರಾದರು.

ಅನುಭವ ಮಂಟಪದ ಈ ಎಲ್ಲ ಶರಣ–ಶರಣೆಯರ ಅನುಭವಗಳ ಚಿಂತನ–ಮಂಥನದಿಂದ ಉದಿಸಿಬಂದ ವಿನೂತನವಾದ ರಚನೆಗಳೇ ವಚನಗಳು. ಈ ವಚನ–ಸಂವಿಧಾನವು ಜಾತಿರಹಿತ–ಧರ್ಮಸಹಿತವಾದ, ಎಲ್ಲ ರೀತಿಯ ಶೋಷಣೆ ರಹಿತವಾದ, ಸಮತೆ–ಸ್ವಾತಂತ್ರ್ಯ ಬಂಧುತ್ವದ ತಳಹದಿಯ ಮೇಲೆ ಹೊಸ ಸಮಾಜವನ್ನು ರೂಪಿಸಿತು.

೧೨ ನೆಯ ಶತಮಾನದಲ್ಲಿ ಜರುಗಿದ ಕಲ್ಯಾಣ ಕ್ರಾಂತಿಯ ತರುವಾಯ, ಶರಣರ ವಚನಧರ್ಮ–ಸಮಾಜವು ಮತ್ತೆ ಪುರೋಹಿತಶಾಹಿಗೆ ಬಲಿಯಾಯಿತು. ೨೦ ನೆಯ ಶತಮಾನದಲ್ಲಿ ವಚನ ಸಂಶೋಧನ ಪಿತಾಮಹ ಡಾ॥ ಫ.ಗು. ಹಳಕಟ್ಟಿಯವರ ಕಠಿಣ ಪರಿಶ್ರಮದಿಂದ ಮರೆಯಾಗಿ ಹೋಗಿದ್ದ ಅಪಾರವಾದ ವಚನಸಾಹಿತ್ಯದಲ್ಲಿ ಅಲ್ಪ–ಸ್ವಲ್ಪ ಬೆಳಕಿಗೆ ಬಂದಿತು. ಅದರ ಪರಿಣಾಮದ ಫಲವಾಗಿ ಹೊಸಗನ್ನಡ–ಆಧುನಿಕ ಕನ್ನಡದ ಎಲ್ಲಾ ಸಾಹಿತ್ಯ ಪ್ರಕಾರಗಳಾದ ನವೋದಯ ನವ್ಯ, ಬಂಡಾಯ, ದಲಿತ ಸಾಹಿತ್ಯದ ಅದ್ಭುತ ಪ್ರಭಾವ–ಪರಿಣಾಮ ಉಂಟಾಯಿತು.

೨೦ ನೇ ಶತಮಾನದಲ್ಲಿ ವೈದಿಕ ಪುರೋಹಿತ ಶಾಹಿಯೊಂದಿಗೆ ವೀರಶೈವ ಪುರೋಹಿತಶಾಹಿಯೂ ಕೈಕೂಡಿಸಿ, ಮತ್ತೆ ವರ್ಣವ್ಯವಸ್ಥೆ ಹಾಗೂ ಜಾತಿಪದ್ಧತಿಗಳನ್ನು ಗಟ್ಟಿಗೊಳಿಸತೊಡಗಿತು. ೨೦ ನೇ ಶತಮಾನದ ಪ್ರಾರಂಭದ ಮೂರನೇ ದಶಕದಲ್ಲಿ ದಲಿತ ಜನಾಂಗದಲ್ಲಿ ಜನಿಸಿದ ಭೀಮರಾವ ಪೋಳ ಅವರು ಕ್ರಾಂತಿಕಾರಿಗಳಾಗಿ ಸಾಹಿತ್ಯರಚನೆಗೆ ತೊಡಗಿದರು. ಸಂಪ್ರದಾಯವಾದೀ ಕರ್ಮಠರ, ಮೂಲಭೂತವಾದಿ ಪೂರೋಹಿತಶಾಹಿಯ ವಿರುದ್ಧ ತಮ್ಮ ಹರಿತವಾದ ಲೇಖನಿಯ ಮೂಲಕ ಧ್ವನಿ ಎತ್ತಿದರು.

ಬುದ್ಧ, ಬಸವಣ್ಣ, ಗಾಂಧಿ, ಲೋಹಿಯಾ, ಅಂಬೇಡ್ಕರ, ಮಾರ್ಕ್ಸ್, ಜ್ಯೋತಿಬಾ ಫುಲೆ ಅವರನ್ನು ಅಧ್ಯಯನಮಾಡಿದ ಶ್ರೀ ಬಿ.ಎಸ್. ಪೋಳ (ಚಾಂದಕವಠೆ) ಅವರು ಕೊನೆಗೆ ಬಸವಧರ್ಮ ಸಂಸ್ಕಾರ ಹೊಂದಿ, ದಲಿತರ ಸರ್ವಾಂಗೀಣ ಉದ್ಧಾರವಾಗಬೇಕಾದರೆ ಬಸವತತ್ವ-ವಿಚಾರಧಾರೆಯಿಂದಲೇ ಸಾಧ್ಯವೆಂದು ಮನಗಂಡರು. ನಾಟಕ, ಕಥೆ, ಕಾದಂಬರಿ, ಪ್ರಬಂಧ ಸಾಹಿತ್ಯ ರಚಿಸಿದರು, ಕೊನೆಗೆ ಜನಮಾನಸದಲ್ಲಿ ಅರಿವು ಮೂಡಿಸಿ, ಅವರ ಅಂತಃಪ್ರಜ್ಞೆ ಜಾಗೃತಗೊಳಿಸಬೇಕಾದರೆ 'ವಚನ' ರಚನೆಯೇ ಪ್ರಬಲ ಅಸ್ತ್ರವೆಂದು ನಿರ್ಧರಿಸಿ, ಸ್ವಾನುಭಾವದಿಂದ ಕ್ರಾಂತಿಕಾರಿ ವಚನಗಳ ಬರವಣಿಗೆ ಪ್ರಾರಂಭಿಸಿದರು. ಎಲ್ಲ ಜನಾಂಗಗಳಲ್ಲಿಯ ಸಮಾನ ಮನಸ್ಕರನ್ನು ಸಂಘಟಿಸಿದರು, ಬಸವತತ್ವ ಸಂಘಟನೆಗಳವರಲ್ಲಿಗೆ ಹೋಗಿ. ನಿಜವಾದ ಬಸವತತ್ವಗಳನ್ನು ಅರುಹಿ, ಅವರನೆಲ್ಲ ಜಾಗೃತಗೊಳಿಸಿದರು.

ಬಸವಣ್ಣನವರು ರೂಪಿಸಿದ ಬಸವ ಧರ್ಮವು ದಲಿತರ, ಶೋಷಿತರ, ದೀನರ, ದುರ್ಬಲರ, ಅಸ್ಪೃಶ್ಯರ, ಕೃಷಿಕರ, ಕೂಲಿಕಾರರ, ಕಾರ್ಮಿಕರ, ಸ್ತ್ರೀಯರ, ಅಷ್ಟೇ ಏಕೆ ಪ್ರಪಂಚದ ಮಾನವೀಯತೆಯುಳ್ಳವರೆಲ್ಲರ ಸೊತ್ತು ಎಂದು ಆಧಾರಸಹಿತವಾಗಿ ಬರೆದರು. 'ಕುಮಾರ ಕಕ್ಕಯ್ಯ' ಎಂಬುದು ಅವರ ಕಾವ್ಯನಾಮವೂ ಆಯಿತು. ವಚನಾಂಕಿತವೂ ಆಯಿತು. ಇದೇ ಹೆಸರಿನಲ್ಲಿ ಸಹಸ್ರಾರು ವಚನಗಳನ್ನು ಬರೆದರು. ಅವುಗಳನ್ನು ಸಮಾಜೋ-ಧಾರ್ಮಿಕ, ಸಾಹಿತ್ಯಿಕ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಕುಮಾರ ಕಕ್ಕಯ್ಯನ ವಚನಗಳು ಎಂಬ ಸಮಗ್ರ ವಚನ ಸಂಪುಟವು ಪ್ರಕಟವಾಗಿ ನಾಡಿನ ಸಮಸ್ತ ಜನತೆಯ ಗಮನ ಸೆಳೆಯಿತು. ಅದರಲ್ಲಿ ಒಟ್ಟು ೧೪೭೩ ವಚನಗಳು ಪ್ರಕಟವಾಗಿವೆ.

ಶ್ರೀ ಬಿ.ಲಿಂಗಣ್ಣ ಎಂಬ ಸಂಶೋಧಕರು ಡಾ॥ ಎಚ್.ಟಿ.ಪೋತೆ ಅವರ ಮಾರ್ಗದರ್ಶನಲ್ಲಿ ಕ್ರಿ.ಶ.೨೦೦೨ ರಲ್ಲಿ ಗುಲಬರ್ಗಾ ವಿಶ್ವವಿದಾಲಯಕ್ಕೆ ಒಂದು ಮಹಾಪ್ರಬಂಧವನ್ನು 'ಕುಮಾರ ಕಕ್ಕಯ್ಯ ಪೋಳ ಬದುಕು-ಬರಹ' ಎಂದು ಬರೆದು, ಸಾದರಪಡಿಸಿದ್ದರು. ಆದರೆ ಅವರ ಸಮಗ್ರ ವಚನಗಳ ಅಧ್ಯಯನದ ಕೊರತೆಯನ್ನು ಮನಗಂಡು ನಾನು ಈ ದಿಸೆಯಲ್ಲಿ ಸಂಶೋಧನೆಗೆ ತೊಡಗಿ ಮಹಾಪ್ರಬಂಧ ರಚಿಸಲು ನಿರ್ಧರಿಸಿದ ಪ್ರಕಾರ, ಕಾರ್ಯಪ್ರವೃತ್ತಳಾದೆ.

ಈಗಾಗಲೇ ಮೊದಲನೆಯ ಅಧ್ಯಾಯದಲ್ಲಿ-ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಗುರುತಿಸಿಕೊಂಡು ಕುಮಾರ ಕಕ್ಕಯ್ಯನವರ ಸಮಗ್ರ ಸಾಹಿತ್ಯ ಅಧ್ಯಯನ ಮಾಡಿದೆ. ಅವರ ಪ್ರಕಟಿತ ವಚನಗಳು, ಅಪ್ರಕಟಿತ ಹಸ್ತ ಪ್ರತಿಗಳನ್ನು ಸಂಗ್ರಹಿಸಿ ಪರಿಶೀಲಿಸಿದೆ. ಕುಮಾರ ಕಕ್ಕಯ್ಯನವರ ಕುಂಟುಬ ಪರಿವಾರದವರನ್ನು ಸಂಪರ್ಕಿಸಿ, ಭೆಟ್ಟಿಯಾಗಿ ಹೆಚ್ಚಿನ ವಿವರ ಸಂಗ್ರಹಿಸಿ, ಚಿಂತನೆ-ಸಂಶೋಧನೆಗೆ ತೊಡಗಿಸಿಕೊಂಡು ಅಧ್ಯಯನ ಪ್ರಾರಂಭಿಸಿದೆ.

ಅಧ್ಯಾಯ-ಎರಡರಲ್ಲಿ ಅವರ ಜನನ, ಬಾಲ್ಯ, ಶಿಕ್ಷಣ, ನೌಕರಿ, ಕೌಟುಂಬಿಕ ಜೀವನ, ಮಕ್ಕಳು-ಮೊಮ್ಮಕ್ಕಳು, ಗೃಹಸ್ಥ ಜೀವನಾದರ್ಶ, ಬಸವತತ್ವ ಆಚರಿಸುತ್ತಲೇ ಮಹಾಬಯಲಿನಲ್ಲಿ ಬಯಲಾದುದು: ಶ್ರೀಯುತರ ಪ್ರಕಟಿತ ಎಲ್ಲ ಸಾಹಿತ್ಯ ಕೃತಿಗಳು,

ಬಿಡಿ ಬಿಡಿ ಲೇಖನಗಳು, ಕವಿತೆಗಳು, ಚುಟುಕುಗಳ ಅಧ್ಯಯನ, ಶ್ರೀಯುತರು ಮಾಡಿದ ಸಮಾಜೋ–ಧಾರ್ಮಿಕ ಸಾಧನೆ, ಸಂಘ–ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದು, ಹಲವಾರು ಪ್ರಗತಿಪರ ಸಂಸ್ಥೆಗಳಲ್ಲಿ ಸದಸ್ಯರಾಗಿ, ಅಧ್ಯಕ್ಷರಾಗಿ ಮಾರ್ಗದರ್ಶಕರಾಗಿ ಅಹರ್ನಿಶ ಸೇವೆ ಸಲ್ಲಿಸಿದ್ದನ್ನು, ಅನೇಕ ರಾಜ್ಯಮಟ್ಟದ ರಾಷ್ಟ್ರಮಟ್ಟದ ಸಮ್ಮೇಳನ, ಗೋಷ್ಠಿಗಳಲ್ಲಿ ಅಧ್ಯಕ್ಷರಾಗಿ, ಅತಿಥಿಗಳಾಗಿ ನೀಡಿದ ಪ್ರಶಸ್ತಿಗಳು ಇತ್ಯಾದಿ ಕುರಿತು ಸಂಶೋಧನಾತ್ಮಕ ಅಧ್ಯಯನ ನಡೆಸಿ ವಿವರವಾಗಿ ಗುರುತಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಕುಮಾರ ಕಕ್ಕಯ್ಯನವರ ಸಮಗ್ರ ವಚನಗಳನ್ನು ಓದಿ ವಿಸ್ತೃತ ಅಧ್ಯಯನ–ವಿವೇಚನೆ–ಮೌಲ್ಯಮಾಪನ ಮಾಡುವ ಉದ್ದೇಶದಿಂದ ಆರು ಉಪ ಶೀರ್ಷಿಕೆಗಳಲ್ಲಿ ವಿಭಜಿಸಿದೆ.

ಮೊದಲನೆಯ ಉಪಶೀರ್ಷಿಕೆ 'ಕುಮಾರ ಕಕ್ಕಯ್ಯನ ವಚನಗಳಲ್ಲಿ ಸಾಮಾಜಿಕ ವಿಚಾರಗಳು' ಎಂಬುದರ ಅಡಿಯಲ್ಲಿ ಭಾರತೀಯ ಸಮಾಜದ ಸ್ವರೂಪ ದರ್ಶನ, ಚಾತುರ್ವರ್ಣ ಸಮಾಜ ಪದ್ಧತಿ, ಬಹುಸಂಖ್ಯಾತರಾಗಿರುವ ಶೂದ್ರರ–ಶೂದ್ರಾತಿಶೂದ್ರ ದಲಿತರ ಶೋಷಣೆ, ಸಮಾನತೆಗಾಗಿ ನಡೆದ ದಲಿತರ ಹೋರಾಟ–ಸಂಘರ್ಷ, 'ಇಲಿ ಹೋರಾಡುವುದು ಬೆಕ್ಕಿಗೆ ದ್ರೋಹ ಬಗೆಯಲಿಕ್ಕೆಂದಲ್ಲ ತನ್ನ ಪ್ರಾಣ ಉಳಿಸಿಕೊಳ್ಳಲಿಕ್ಕೆ, ಅಂತ್ಯಜ ಹೋರಾಡುವುದು ಕುಲಜನಿಗೆ ದ್ರೋಹ ಬಗೆಯಲಿಕ್ಕೆಂದಲ್ಲ ತನ್ನ ಜೀವ ಉಳಿಸಿಕೊಳ್ಳಲಿಕ್ಕೆಂದ ಕುಮಾರ ಕಕ್ಕಯ್ಯ' ಎಂಬ ವಚನದ ಆಶಯ ಚಿಂತನ, ವಿವೇಚನೆ, ಮಹಿಳಾ ಸಮಾನತೆಗಾಗಿ, ಲಿಂಗಭೇದ ನಿವಾರಣೆಗಾಗಿ ನಡೆದ ಹೋರಾಟ, ಜಾತ್ಯಾತೀತ–ಜಾತಿರಹಿತ ಸಮಾಜ ನಿರ್ಮಾಣದ ಬಗೆಗಿನ ಅವರ ವಚನಗಳಲ್ಲಿಯ ವಿಚಾರಗಳ ಮೌಲ್ಯಮಾಪನ ಮಾಡಿ ವಿಶ್ಲೇಷಣೆ ಮಾಡಲಾಗಿದೆ.

ಎರಡನೆಯ ಉಪಶೀರ್ಷಿಕೆಯು 'ಕುಮಾರ ಕಕ್ಕಯ್ಯನ ವಚನಗಳಲ್ಲಿ ಧಾರ್ಮಿಕ ವಿಚಾರಗಳು' ಇದರಡಿಯಲ್ಲಿ ಭಾರತದ ಸನಾತನ ವರ್ಣಾಶ್ರಮಧರ್ಮ ಅದನ್ನು ಪ್ರತಿಭಟಿಸಿ, ನಿರಾಕರಣಗೈದು ಮೂಡಿಬಂದ ಸರ್ವಸಮಾನತೆಯ ಬಸವಧರ್ಮ ಕುರಿತು ಅಧ್ಯಯನ: ಧರ್ಮ–ಧರ್ಮಗುರುಗಳು, ಮಠಗಳು–ಮಠಾಧೀಶರಿಂದ ಶೋಷಣೆ: ಗುರು–ವಿರಕ್ತ, ಭಕ್ತ–ಜಂಗಮ, ಭಕ್ತ–ಮಾಹೇಶ ಎಂಬ ಪ್ರಭೇದಗಳ ಅಧ್ಯಯನ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಮೂಢನಂಬಿಕೆ, ಕಂದಾಚಾರಗಳು, ದೇವರು–ದೇವಾಲಯ–ಪೂಜಾರಿ–ಪುರೋಹಿತರು ನಡೆಸಿರುವ ಸುಲಿಗೆ, ಕರ್ಮಸಿದ್ಧಾಂತ–ಪುನರ್‌ಜನ್ಮ ಸಿದ್ಧಾಂತಗಳ ಮೂಲಕ ಸಾಗಿ ಬಂದಿರುವ ನಿರಂತರ ಶೋಷಣೆ, ಧಾರ್ಮಿಕ ಮತಾಂತರದ ಬಗೆಗೆ ಮೂಲಭೂತವಾದಿಗಳು ಹುಟ್ಟು ಹಾಕಿರುವ ಗೊಂದಲ–ಗಲಭೆಗಳು ಇತ್ಯಾದಿ ವಿವರವಾಗಿ ಅಧ್ಯಯನ ನಡೆಸಿ ವಿಶ್ಲೇಷಿಸಲಾಗಿದೆ.

ಮೂರನೆಯ ಉಪಶೀರ್ಷಿಕೆ–;ಕುಮಾರ ಕಕ್ಕಯ್ಯನ ವಚನಗಳಲ್ಲಿ ರಾಜಕೀಯ ವಿಚಾರಗಳು' ಕುರಿತು ಅಧ್ಯಯನ ಮಾಡಲಾಗಿದೆ. ಇಂದಿನ ರಾಜಕೀಯ ವ್ಯವಸ್ಥೆ, ಪ್ರಜಾಪ್ರಭುತ್ವ, ರಾಜಕಾರಣಿಗಳು, ಲಂಚ–ವಂಚನೆ ಭ್ರಷ್ಟಾಚಾರ, ಅಧಿಕಾರದಾಹ–

ಧೂರ್ತತನ-ಪ್ರಜೆಗಳ ಶೋಷಣೆ, ಗ್ರಾಮೀಣಾಭಿವೃದ್ಧಿಯ ಹೆಸರಿನಲ್ಲಿ ರಾಜಕಾರಣಿಗಳು ನಡೆಸಿರುವ ಕ್ಷುಲ್ಲಕ ರಾಜಕೀಯ, ಮುಂತಾದವುಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಇಂದು ದೇಶ ಆರ್ಥಿಕ ಸ್ವಾವಲಂಬನೆಯಾಗಿ, ಕಲ್ಯಾಣ ರಾಜ್ಯ(Welfare State) ನಿರ್ಮಾಣಕ್ಕೆ ಕುಮಾರ ಕಕ್ಕಯ್ಯನವರು ವಚನಗಳ ಮುಖಾಂತರ ಸೂಚಿಸಿರುವ ಶರಣರ ಕಾಯಕ-ದಾಸೋಹ ಸಿದ್ಧಾಂತಗಳ ಚಿಂತನೆ ನಡೆಸಲಾಗಿದೆ.

ನಾಲ್ಕನೆಯ ಉಪಶೀರ್ಷಿಕೆ 'ಕುಮಾರ ಕಕ್ಕಯ್ಯನ ವಚನಗಳಲ್ಲಿ ಶೈಕ್ಷಣಿಕ ವಿಚಾರಗಳು' ಎಂಬುದರ ಅಡಿಯಲ್ಲಿ ಶಿಕ್ಷಣದ ಸ್ವರೂಪ ಮತ್ತು ಮಹತ್ವ, ಶಿಕ್ಷಣ ಹಾಗೂ ವಿದ್ಯಾರ್ಥಿಗಳು, ಪಾಲಕರು-ಶಾಲೆಗಳು-ಶಿಕ್ಷಣ ಸಂಘಸಂಸ್ಥೆಗಳು, ಶಿಕ್ಷಣರಂಗದಲ್ಲಿ ನೈತಿಕತೆ, ರಾಷ್ಟ್ರನಿರ್ಮಾಣ ಇತ್ಯಾದಿ ವಿಚಾರಗಳ ಬಗ್ಗೆ ಆದ್ಯಯನ ನಡೆಸಲಾಗಿದೆ.

ಐದನೆಯ ಉಪಶೀರ್ಷಿಕೆ 'ಕುಮಾರ ಕಕ್ಕಯ್ಯನ ವಚನಗಳಲ್ಲಿ ವೈಚಾರಿಕ ವಿಚಾರಗಳು' ಇದರ ಅಡಿಯಲ್ಲಿ ಇಂದು ವ್ಯಕ್ತಿ-ಸಮಾಜದಲ್ಲಿ ಇರುವ ಕರ್ಮಠ ಸಂಪ್ರದಾಯಗಳ ಬಗ್ಗೆ, ಅಂಧಾನುಕರಣೆ-ಮೂಢ ನಂಬಿಕೆಗಳ ಬಗ್ಗೆ ಚಿಂತನಗೈಯಲಾಗಿದೆ. ಮನುಷ್ಯನು ಜೀವ ಪ್ರಪಂಚದಲ್ಲಿಯೇ ಅತಿಶ್ರೇಷ್ಠ ಜೀವಿಯೆನಿಸಿಕೊಂಡಿದ್ದಾನೆ. ಇದಕ್ಕೆ ಕಾರಣವೆಂದರೆ ಆತನಲ್ಲಿರುವ ವಿಚಾರ ಶಕ್ತಿ. ಇಂದು ಜ್ಞಾನ ಬೆಳೆದಿದೆ, ವಿಜ್ಞಾನ ಬೆಳೆದಿದೆ, ಆದರೆ ಇವುಗಳನ್ನು ಮಾನವ ಕಲ್ಯಾಣ ಜಗತ್ತ ಕಲ್ಯಾಣಕ್ಕಾಗಿ ಸದ್‌ಬಳಕೆ ಮಾಡಿಕೊಳ್ಳಬೇಕೆಂಬ ಸುಜ್ಞಾನದ ಕೊರತೆ ಕಂಡು ಬರುತ್ತದೆ. ಅದನ್ನು ಶರಣರ ಸಂಗದಲ್ಲಿ ಅನುಭಾವದ ಮೂಲಕ ಸಾಧಿಸಿಕೊಂಡು, ಮಾನವೀಯತೆ ವಿಶ್ವಬಂಧುತ್ವ ವಿಶಕಲ್ಯಾಣದೆಡೆಗೆ ಸಾಗಬೇಕಿದೆ. ಈ ದಿಸೆಯಲ್ಲಿ ಕುಮಾರ ಕಕ್ಕಯ್ಯನವರ ವಚನಗಳಲ್ಲಿಯ ಆಶಯವನ್ನು ಗುರುತಿಸಿ, ಆಧ್ಯಯನ ನಡೆಸಲಾಗಿದೆ.

ಆರನೆಯ ಉಪಶೀರ್ಷಿಕೆಯ ಅಡಿಯಲ್ಲಿ-'ಕುಮಾರ ಕಕ್ಕಯ್ಯನ ವಚನಗಳಲ್ಲಿ ವ್ಯಕ್ತವಾಗಿರುವ ಕೌಟುಂಬಿಕ ವಿಚಾರಗಳು' ಕುರಿತು ಚಿಂತನ ಮಾಡಲಾಗಿದೆ. ವ್ಯಕ್ತಿ-ಕುಟುಂಬ-ಸಂಸಾರ, ಸತಿ-ಪತಿ-ದಾಂಪತ್ಯದ ಬದುಕು, ತಂದೆ-ತಾಯಿ-ಮಕ್ಕಳು, ಅತ್ತೆ-ಸೊಸೆ-ನಾದಿನಿಯರು. ಬಂಧು-ಬಳಗ ಇವರ ಸಂಬಂಧಗಳು, ಸರಸ-ವಿರಸಗಳ ಬಗ್ಗೆ ಅವರ ವಚನಗಲ್ಲಿ ವ್ಯಕ್ತವಾಗಿರುವ ವಿಚಾರಗಳನ್ನು ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ-'ಕುಮಾರ ಕಕ್ಕಯ್ಯನ ವಚನಗಳಲ್ಲಿ ಜಾನಪದ ವಿಚಾರಗಳು' ಕುರಿತು ಅಧ್ಯಯನ ನಡೆಸಿದೆ. ನಮ್ಮ ನಾಡು, ನುಡಿ, ನಮ್ಮ ಜನಪದರು: ಸೃಷ್ಟಿ-ಪ್ರಕೃತಿ-ಪರಿಸರ, ಕೃಷಿ-ಕೃಷಿಕರು, ಕಸಬುದಾರರು-ಶ್ರಮಜೀವನದ ಕುರಿತು ಚಿಂತನ ಮಾಡಲಾಗಿದೆ. ಜಾನಪದ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಒಗಟ್ಟುಗಳು, ಗಾದೆಮಾತುಗಳು, ನೀತಿಯ ನುಡಿಗಳು ಕುಮಾರ ಕಕ್ಕಯ್ಯನವರ ವಚನಗಳಲ್ಲಿ ಅಭಿವ್ಯಕ್ತವಾಗಿರುವಂಥವುಗಳ ಬಗ್ಗೆ ವಿವರಿಸಿ, ವಿಶ್ಲೇಷಿಸಲಾಗಿದೆ.

ಅಧ್ಯಾಯ ಐದರಲ್ಲಿ–ಕುಮಾರ ಕಕ್ಕಯ್ಯನ ವಚನಗಳ ಭಾಷೆ–ಶೈಲಿ, ಛಂದಸ್ಸು–ಅಲಂಕಾರ, ಆಡುನುಡಿ, ದ್ವಿರುಕ್ತಿ, ಜೋಡುನುಡಿ, ನುಡಿಗಟ್ಟುಗಳ ಅಧ್ಯಯನ–ಸಂಶೋಧನೆ–ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ಆರರಲ್ಲಿ–'ಕುಮಾರ ಕಕ್ಕಯ್ಯನವರ ಮೇಲೆ ವಚನಕಾರರ ಪ್ರಭಾವ ಪ್ರೇರಣೆ' ಎಂಬ ಶೀರ್ಷಿಕೆಯ ಅಡಿಯಲ್ಲಿ –ಅವರ ವಚನಗಳ ರಚನೆಗೆ ಬಸವಾದಿ ಶರಣರ ಪ್ರಭಾವ ಕುರಿತು, ಶರಣರ ವಚನಗಳ ತುಲನಾತ್ಮಕ ಆಧ್ಯಯನ ನಡೆಸಿ ವಿವರಿಸಲಾಗಿದೆ. ಕುಮಾರ ಕಕ್ಕಯ್ಯನವರು ತಮ್ಮ ವಚನಗಳಲ್ಲಿ ಬಸವಾದಿ ಶರಣರ ಕುರಿತು ಹೇಳಿರುವ ವಿಚಾರಗಳು, ವ್ಯಕ್ತಪಡಿಸಿರುವ ಭಕ್ತಿ–ಗೌರವ–ಅಭಿಮಾನದ ಬಗ್ಗೆ ವಿಶ್ಲೇಷಿಸಲಾಗಿದೆ. ಇಪ್ಪತ್ತನೆಯ ಶತಮಾನದ ಆಧುನಿಕ ವಚನಕಾರರಾದ ಶರಣ ಹರ್ಡೇಕರ ಮಂಜಪ್ಪ, ಡಾ॥ ಸಿದ್ಧಯ್ಯ ಪುರಾಣಿಕ, ಶ್ರೀ ಮಹಾದೇವ ಬಣಕಾರ, ಶಿವಕವಿ ಸಂಗಮೇಶ ಹೊಸಮನಿ, ಶ್ರೀ ಬ.ಗಿ.ಯಲ್ಲಟ್ಟಿ ಶ್ರೀ ಎಸ್.ವ್ಹಿ ರಂಗಣ್ಣ, ಶ್ರೀ ಎಸ್.ವ್ಹಿ ಪರಮೇಶ್ವರ ಭಟ್ಟ ಮುಂತಾದವರ ವಚನಗಳ ಸಾಲಿನಲ್ಲಿ ಕುಮಾರ ಕಕ್ಕಯ್ಯನವರ ವಚನಗಳ ಸತ್ವವನ್ನು ವಿವರಿಸಿ ಅವರ ಸ್ಥಾನ–ಮಾನವನ್ನು ಕುರಿತು ಮೌಲ್ಯಮಾಪನ ಮಾಡಲಾಗಿದೆ. ಕುಮಾರ ಕಕ್ಕಯ್ಯನವರ ಸಾಹಿತ್ಯ ಹಾಗೂ ವಚನಗಳ ಕುರಿತು ಅವರ ಸಮಕಾಲೀನ ಹಿರಿಯ–ಕಿರಿಯ ವಿದ್ವಾಂಸರ, ಸಾಹಿತಿಗಳ ವಚನಕಾರರ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ.

ಹೀಗೆ, ಪ್ರಸ್ತುತ ಈ ಸಂಶೋಧನ ಮಹಾಪ್ರಬಂಧದಲ್ಲಿ ಕ್ರಾಂತಿಕಾರಿ ಆಧುನಿಕ ವಚನಕಾರ ಕುಮಾರ ಕಕ್ಕಯ್ಯನವರ ವಚನಗಳಲ್ಲಿ ನೇರ–ನಿಷ್ಠುರ, ಹೊಸ ಹೊಸ ಸತ್ಯ ಸಂಗತಿಗಳನ್ನು, ವಿಚಾರಗಳನ್ನು, ಅವರ ಅನುಭವಗಳನ್ನು, ಅವರು ಸಾಧಿಸಿದ ಅನುಭಾವದ ಎತ್ತರ–ಬಿತ್ತರಗಳನ್ನು ಹೊರ ಹೊಮ್ಮಿಸಲು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಸಿಂಧುವನ್ನು ಒಂದು ಬಿಂದುವಿನಲ್ಲಿ, ಕಡಲನ್ನು ಒಂದು ಕೊಡದಲ್ಲಿ ಹಿಡಿದು ತೋರುವ ಸಾಹಸಕ್ಕೆ ಯತ್ನಿಸಿದ್ದೇನೆ. ಕುಮಾರ ಕಕ್ಕಯ್ಯನವರು ತಮ್ಮ ಸದಸದ್ವಿವೇಕದಿಂದ ಒಪ್ಪಿಕೊಂಡು ಅಪ್ಪಿಕೊಂಡ ಬಸವಾದಿ ಶರಣರ ಅರಿವು–ಆಚಾರ–ಅನುಭಾವದ ವಚನ ಜ್ಯೋತಿಯ ಬೆಳಕಿನಲ್ಲಿ ಶ್ರೀಯುತರ ವಚನಗಳ ಚಿಂತನ–ಮಂಥನ, ವಿಶ್ಲೇಷಣೆ–ಮೌಲ್ಯ ಮಾಪನಮಾಡಿದ್ದೇನೆ. ಕುಮಾರ ಕಕ್ಕಯ್ಯನವರ ವಚನಗಳು ಕೇವಲ ಧಾರ್ಮಿಕ ಸಾಹಿತ್ಯವೆಂದು ಉದಾಸೀನ ಮಾಡದೇ, ಅವು ಜೀವನದ ಎಲ್ಲ ಹಂತಗಳಲ್ಲಿ ಮಾರ್ಗದರ್ಶನ ಮಾಡುವ, ವ್ಯಷ್ಟಿ–ಸಮಷ್ಟಿಯ ಉದ್ಧಾರದ, ವಿಶ್ವಬಂಧುತ್ವ–ವಿಶ್ವಮಾನವತೆಯ ಹರವನ್ನು ಹೊಂದಿವೆ ಎಂಬುದನ್ನು ಅರಿತುಕೊಳ್ಳಬಹುದಾಗಿದೆ.

ಸಾಹಿತ್ಯ ಕ್ಷೇತ್ರದಲ್ಲಿಯೂ ಸಮಾಜೋ–ಧಾರ್ಮಿಕ ಕ್ಷೇತ್ರಗಳಲ್ಲಿರುವಂತೆಯೇ ಮೇಲ್ಜಾತಿಯವರ, ಮೇಲ್ವರ್ಗದವರ ಅಟ್ಟಹಾಸ, ಗುಂಪಗಾರಿಕೆ ಪ್ರಾಬಲ್ಯವಿರುವಾಗ., ೮೦ ವರುಷಗಳ ಹಿಂದೆ ದಲಿತ ಜನಾಂಗದಲ್ಲಿ ಜನಿಸಿ, ಅದ್ಭುತ ಕ್ರಾಂತಿಕಾರಿ ಸಾಹಿತ್ಯ ರಚಿಸಿದರೂ ರಾಜ್ಯಮಟ್ಟದ, ರಾಷ್ಟ್ರಮಟ್ಟದ ಯವುದೇ ಉನ್ನತ ಸಾಹಿತ್ಯ ಪ್ರಶಸ್ತಿಗಳಾಗಲೀ, ಸಾಹಿತ್ಯ ಅಕಾಡೆಮಿ, ಪ್ರಾಧಿಕಾರಗಳ ಅಧ್ಯಕ್ಷ, ಸದಸ್ಯತ್ವಗಳಾಗಲೀ

ಲಭಿಸಲಿಲ್ಲ. ಯಾಕೆಂದರೆ ಇಂದಿನ ಸಾಹಿತಿಗಳು ಎಂಥವರೆಂಬುದನ್ನು ಕುಮಾರ ಕಕ್ಕಯ್ಯನವರೇ ತಮ್ಮ ವಚನದಲ್ಲಿ ವಿಡಂಬನೆ ಮಾಡಿದ್ದಾರೆ.

ಶಿಕ್ಷಣ ಅವರದು, ಸಂಸ್ಕೃತ ಅವರದು
ಸಾಹಿತ್ಯ ಅವರದು, ಸಲಕರಣೆ ಅವರದು.
ದೈನಿಕ ಮಾಸಿಕ ಅವರದು, ಪೀಠ ಪ್ರಶಸ್ತಿ ಅವರದು
ಕುಲಗೋತ್ರ ಅವರದು, ಜಾತಿ ಮತ ಅವರದು
ವೇದೋಪನಿಷತ್ತು ಶಾಸ್ತ್ರ ಆಗಮಗಳ ಕೃಷಿಮಾಡಿ
ಹತ್ತು ತಲೆ ಇಪ್ಪತ್ತು ಕೈ ಹನ್ನೊಂದು ಅವತಾರ ಅಹುದೆಂದು
ಬರೆದವರಷ್ಟೇ ಸಾಹಿತಿಗಳೆನಿಸುವರೆಂದ ಕುಮಾರ ಕಕ್ಕಯ್ಯ[೧]

ಇಂತಹ ಹೀನ ವ್ಯವಸ್ಥೆಯಲ್ಲಿ–ದಲಿತ ಸಾಹಿತಿಯನ್ನು ಗುರುತಿಸುವವರಾದರೂ ಯಾರು? ಈ ದೇಶದಲ್ಲಿ ಪೀಠ–ಪ್ರಶಸ್ತಿಗಳು ಸಿಗಬೇಕಾದರೆ 'ಅವನು ಅವರವನಾದರೂ ಆಗಿರಬೇಕು, ಇಲ್ಲವೆ ಅವರ ಕುರಿತಾದರೂ ಬರೆದಿರಬೇಕೆಂದು ಕುಮಾರ ಕಕ್ಕಯ್ಯ ಕಠೋರ ಸತ್ಯವನ್ನು ಬಿಚ್ಚಿಡುತ್ತಾರೆ. ದಲಿತ ಸಾಹಿತಿ ಡಾ॥ ಎಚ್.ಟಿ. ಪೋತೆ ಅವರು ಹೇಳುವಂತೆ –'ಹುಟ್ಟನ್ನು ಆಧರಿಸಿ ಸ್ಥಾನಮಾನಗಳು ನೀಡಲ್ಪಡುವ ಚಾತುರ್ವರ್ಣದ ಧರ್ಮದ ಕುಲುಮೆಯಲ್ಲಿ ಬೆಂದವರು, ಬಾಳಿನುದಕ್ಕೂ ಮಾನಸಿಕ, ಆರ್ಥಿಕ, ದೈಹಿಕ, ಸಾಮಾಜಿಕ ಹಾಗೂ ಧಾರ್ಮಿಕವಾಗಿ ಶೋಷಣೆಗೊಳಗಾದವರು. ಬಾಳಲ್ಲಿ ಅನಿಭವಿಸಿದ ನೋವುಗಳೇ ಮುಪ್ಪುರಿಗೊಂಡು ಜೀವನಾನುಭವದ ಕಿಡಿಗಳೇ ವಚನಗಳಾಗಿ ಪರಿವರ್ತನೆಗೊಂಡಿವೆ.[೨]

ಇಂತಹ ಅನುಭಾವಿ, ಕ್ರಾಂತಿಕಾರಿ,ವಿಚಾರವಾದಿ ವಚನಕಾರ ಕುಮಾರ ಕಕ್ಕಯ್ಯನವರ ವಚನಗಳ ಕುರಿತು ಅಧ್ಯಯನ ಮಾಡಿ, ಅವುಗಳ ಚಿಂತನ–ಸಂಶೋಧನೆ ನಡೆಸಿ ಮೌಲ್ಯಮಾಪನ ಮಾಡಲು ಯತ್ನಸಿದ್ದೇನೆ, ಅವರ ಇನ್ನಿತರ ಕೃತಿಗಳೂ ಸಹ ಒಂದೊಂದು ಪಿಎಚ್.ಡಿ. ಸಂಶೋಧನೆಯ ವಸ್ತುವಾಗುತ್ತವೆಯೆಂಬುದು ನನ್ನ ಅಧ್ಯಯನದ ಅನುಭವವಾಗಿದೆ. ಶ್ರೀಯುತರು ಭೌತಿಕ ಶರೀರಿಯಾಗಿ ಇಂದು ನಮ್ಮ ಮಧ್ಯದಲ್ಲಿಲ್ಲದಿದ್ದರೂ, ವಚನ ಶರೀರಿಯಾಗಿ ಬದುಕಿದ್ದಾರೆ.

ಲೋಭಾನದ ವಾಸನೆ ಹರಡುವದು ಸುಟ್ಟ ಬಳಿಕ
ರೇಶಿಮೆಯ ನೂಲು ಸಿಗುವದು ಹುಳ ಬೆಂದ ಬಳಿಕ
ಕಸ್ತೂರಿ ದೊರೆಯುವದು ಮೃಗದ ತಲೆಯೊಡೆದ ಬಳಿಕ
ಸೈನಿಕ ಸಂಸಾರ ಮಾಡುವದು ವಯಸ್ಸು ಹೋದ ಬಳಿಕ
ಸಾಹಿತಿ ಬಾಳುವುದು ಸತ್ತ ಬಳಿಕೆಂದ ಕುಮಾರ ಕಕ್ಕಯ್ಯ.[೩]

---

೧. ಕುಮಾರ ಕಕ್ಕಯ್ಯನ ವಚನಗಳು–ಪು–೨೮ ವ–೧೦೭

೨. ದಲಿತಸಾಹಿತಿ ಕುಮಾರ ಕಕ್ಕಯ್ಯ ಪೋಳ–ಡಾ॥ ಎಚ್.ಟಿ.ಪೋತೆ ಪು–೩೪

೩. ಕುಮಾರ ಕಕ್ಕಯ್ಯನ ವಚನಗಳು–ಪು–೩೩೦ ವ–೧೨೭೯

'ಕುಮಾರ ಕಕ್ಕಯ್ಯ ಪೋಳ ಸಾಮಾಜಿಕ ಜವಾಬ್ದಾರಿಯಿರುವ ಒಬ್ಬ ಲೇಖಕ. ತನ್ನ ಕೊನೆಯ ಘಳಿಗೆಯವರೆಗೂ ದಲಿತೋದ್ಧಾರದ ಬಸವಚಿಂತನೆಗೆ ತಮ್ಮನ್ನು ತಾವು ಅರ್ಪಿಸಿಕೊಂಡವರು.'(೪) ಎಂಬ ಡಾ॥ ಪೋತೆ ಅವರ ಮಾತುಗಳು ಸತ್ಯ ನುಡಿಗಳಾಗಿವೆ.

ಈ ನನ್ನ 'ಕುಮಾರ ಕಕ್ಕಯ್ಯನ ವಚನಗಳು–ಒಂದು ಅಧ್ಯಯನ' ಎಂಬ ಸಂಶೋಧನ ಮಹಾಪ್ರಬಂಧವು ಹೊಸ ಪೀಳಿಗೆಯ ಯುವಶಕ್ತಿಗಳಿಗೆ ಅವರ ಕೃತಿಗಳ ಕುರಿತಾದ, ವಿಚಾರಗಳ ಕುರಿತಾದ ಹೊಸ ಹೊಸ ಸಂಶೋಧನೆಗಳಿಗೆ ಪ್ರೇರಣೆಯಾದರೆ ನನ್ನ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

---

೪. ದಲಿತಸಾಹಿತಿ ಕುಮಾರ ಕಕ್ಕಯ್ಯ ಪೋಳ–ಡಾ॥ ಎಚ್.ಟಿ.ಪೋತೆ ಪು–೩೬

# ಅಧ್ಯಾಯ – ೮
# ಅನುಬಂಧಗಳು

೧. ಕುಮಾರ ಕಕ್ಕಯ್ಯನ ಕೈಬರಹ

೨. ಕುಮಾರ ಕಕ್ಕಯ್ಯನ ವಂಶ–ವೃಕ್ಷ

೩. ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ, ವಿಜಾಪುರ

೪. ಕುಮಾರ ಕಕ್ಕಯ್ಯನ ಸಾಹಿತ್ಯ ಕೃತಿಗಳು

೫. ಕುಮಾರ ಕಕ್ಕಯ್ಯನ ಬಿಡಿ ಲೇಖನಗಳು

೬. ಕುಮಾರ ಕಕ್ಕಯ್ಯ ಕುರಿತು ಪ್ರಕಟಿತ ಗ್ರಂಥಗಳು, ಲೇಖನಗಳು

೭. ಸಾಂದರ್ಭಿಕ ಗ್ರಂಥಗಳು

೮. ಸಮಾಜೋ–ಧಾರ್ಮಿಕ, ಸಾಹಿತ್ಯಿಕ ಪತ್ರಿಕೆಗಳು ಹಾಗೂ ದಿನ ಪತ್ರಿಕೆಗಳು

# ಅನುಬಂಧ – ೨

## ಕುಮಾರ ಕಕ್ಕಯ್ಯನ ವಂಶ–ವೃಕ್ಷ



# ಅನುಬಂಧ – ೩

# ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ ವಿಜಾಪುರ

[ Kumara Kakkayya Pol Foundation, Bijapur]

(೧೯೯೬)

ಲಿಂ. ಶರಣ ಕುಮಾರ ಕಕ್ಕಯ್ಯ ಪೋಳ ಅವರ ಅಂತಿಮ ಇಚ್ಛೆಯಂತೆ, ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳು ಚಿತ್ತರಗಿ – ಇಳಕಲ್ಲ ಅವರ ಅಪೇಕ್ಷೆಯಂತೆ, ಶರಣಸಾಹಿತಿಗಳಾದ ಪ್ರೊ.ಸಿದ್ಧಣ್ಣ ಲಂಗೋಟಿ (ಚಾಂದಕವಠೆ) ಅವರ ಮಾರ್ಗದರ್ಶನದಲ್ಲಿ 'ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ'ವನ್ನು ೧೯೯೬ ರಲ್ಲಿ ಪ್ರಾರಂಭಿಸಲಾಗಿದೆ.

ಈ ಪ್ರತಿಷ್ಠಾನದ ವತಿಯಿಂದ ಪ್ರತಿ ವರುಷ ಶಿವರಾತ್ರಿ ಸಂದರ್ಭದಲ್ಲಿ ಶರಣ ಡೋಹರ ಕಕ್ಕಯ್ಯನವರ ಜಯಂತ್ಯುತ್ಸವ ಆಚರಿಸುವುದರೊಂದಿಗೆ ಒಬ್ಬ ಶರಣ ಸಾಹಿತಿಗೆ ಹಾಗೂ ವಚನ ಸಂಗೀತಗಾರನಿಗೆ "ಕಕ್ಕಯ್ಯ ಪ್ರಶಸ್ತಿ' ಹಾಗೂ ೨೦೦೦=೦೦ ರೂ॥ಗಳ ಗೌರವಧನವನ್ನು ದಾಸೋಹಂಭಾವದಿಂದ ಅರ್ಪಿಸಲಾಗುತ್ತದೆ. ಕುಮಾರ ಕಕ್ಕಯ್ಯ ಪೋಳ ಅವರ ಗ್ರಂಥಗಳನ್ನು ಪ್ರಕಟಿಸಿ, ಪ್ರಸಾರ ಮಾಡಲಾಗುತ್ತದೆ.

**ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನದ ಪದಾಧಿಕಾರಿಗಳು:**

ಗೌ॥ ಅಧ್ಯಕ್ಷರು : ಶ್ರೀ ಮನಿಪ್ರ ಮಹಾಂತ ಶಿವಯೋಗಿಗಳು<br>
ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ<br>
ಇಳಕಲ್ಲ

ಅಧ್ಯಕ್ಷರು : ಡಾ॥ ಶಿವಶಂಕರ ಭೀಮರಾವ ಪೋಳ

ಕೋಶಾಧ್ಯಕ್ಷರು : ಡಾ॥ ಸುಶೀಲಾ ಪ್ರಕಾಶ ಗರಗ

ಕಾರ್ಯದರ್ಶಿ : ಶ್ರೀ ಶಿವಪುತ್ರ ಭೀಮರಾವ ಪೋಳ

ಸದಸ್ಯರು : ಶ್ರೀ ಶ್ರೀಕಾಂತ ಭೀಮರಾವ ಪೋಳ<br>
ಶ್ರೀ ಚಿದಾನಂದ ಭೀಮರಾವ ಪೋಳ<br>
ಶ್ರೀಮತಿ ಪ್ರಮಿಳಾ ನಾರಾಯಣ ಗಜಾಕೋಶ

ಮಾರ್ಗದರ್ಶಕರು: ಪ್ರೊ. ಸಿದ್ದಣ್ಣ ಲಂಗೋಟಿ (ಚಾಂದಕವಠೆ)<br>
ಗೌ॥ ಸಂಪಾದಕರು, ಬಸವ ಬೆಳಗು ಪತ್ರಿಕೆ *

# ಅನುಬಂಧ –೪
# ಕುಮಾರ ಕಕ್ಕಯ್ಯ ಪೋಳ – ಸಾಹಿತ್ಯ ಕೃತಿಗಳು

೧. ಧರ್ಮ ಕ್ರಾಂತಿ (ವೈಚಾರಿಕ ಗ್ರಂಥ)–೧೯೬೫
ಪ್ರ: ಶ್ರೀ ಭೀಮರಾವ ಎಸ್.ಪೋಳ, ಚಾಂದಕವಠೆ ತಾ॥ ಸಿಂದಗಿ

೨. ಇದು ನನ್ನ ಸಮಾಜ (ನಾಟಕ)–೧೯೬೬
ಪ್ರ: ಶ್ರೀ ಭೀಮರಾವ ಎಸ್.ಪೋಳ ಚಾಂದಕವಠೆ ತಾ॥ ಸಿಂದಗಿ

೩. ಸಮಾಜದ ತೊಡರಿಗೆ ಧರ್ಮದ ಕಗ್ಗಂಟು (ಕಥಾ ಸಂಕಲನ)–೧೯೬೯
ಪ್ರ: ಡಾ॥ ಅಂಬೇಡ್ಕರ ಸ್ಮಾರಕ ಸಮಿತಿ. ಬೆಂಗಳೂರು

೪. ನಿಯತಿ ಶಾಸನ (ಕಾದಂಬರಿ) – ೧೯೭೩
ಪ್ರ: ಶ್ರೀ ಅರವಿಂದ ಗ್ರಂಥಾಲಯ, ಚಡಚಣ ಜಿ॥ ವಿಜಾಪುರ

೫. ಗೀಜಗನ ಗೂಡು (ಕಾದಂಬರಿ) – ೧೯೭೫
ಪ್ರ: ಮಿತ್ರ ಭಾರತಿ ಪ್ರಕಾಶನ, ವಿಜಾಪುರ

೬. ಕುಮಾರ ಕಕ್ಕಯ್ಯನ ವಚನಗಳು–೧೯೭೯
ಪ್ರ: ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ವಿಜಾಪುರ

೭ ಮೂಕನ ಭಾಷಣ (ಪ್ರಬಂಧ ಸಂಕಲನ)–೧೯೭೯
ಪ್ರ: ಡಾ॥ ಅಂಬೇಡ್ಕರ ಸ್ಮಾರಕ ಸಮಿತಿ, ವಿಜಾಪುರ

೮. ಬಸವಧರ್ಮ ಯಾರ ಸೊತ್ತು? (ಪುರಾಣ ಪ್ರಬಂಧ)–೧೯೮೩
ಪ್ರ: ಕಲ್ಯಾಣನಾಡಿನ ಶರಣಪರಿಷತ್ತು, ಹುಮನಾಬಾದ

೯. ಬಸವಧರ್ಮ ದರ್ಶನ (ಚಿಂತನಪರ ಪ್ರಬಂಧ)–೧೯೮೫
ಪ್ರ: ಕಲ್ಯಾಣನಾಡಿನ ಶರಣಪರಿಷತ್ತು, ವಿಜಾಪುರ

೧೦. ಶರಣರ ಸಮಗ್ರಕ್ರಾಂತಿ (ವಚನ ಸಂಕಲನ)–೧೯೮೬
ಪ್ರ: ಚಿತ್ತರಗಿ ಶ್ರೀ ವಿಜಯ ಮಹಾತೇಶ್ವರ ಧರ್ಮಪ್ರಸಾರಕ
ಮಂಡಳ, ಇಳಕಲ್ಲ ಜಿ॥ ವಿಜಾಪುರ

೧೧. ಚಾತುರ್ವರ್ಣ ಧರ್ಮದರ್ಶನ (ಸಂಶೋಧನ ಪ್ರಬಂಧ)–೧೯೮೮
ಪ್ರ: ಕರ್ನಾಟಕ ಪಂಚಮ ಪ್ರಗತಿ ಸಂಘ, ವಿಜಾಪುರ

೧೨. ಧರ್ಮಗುರುಗಳ ಅವಾಂತರ ಅರ್ಥಾತ್
ಲಿಂಗಾಯತ ಧರ್ಮಸ್ಥಾಪಕರು ಯಾರು? (ಚಿಂತನ ಪ್ರಬಂಧ) –೧೯೮೮
ಪ್ರ: ಕಲ್ಯಾಣನಾಡಿನ ಶರಣ ಪರಿಷತ್ತು ವಿಜಾಪುರ.

೧೩. ಕುಮಾರ ಕಕ್ಕಯ್ಯನ ವಚನಗಳು –೧೯೯೦
ಪ್ರ: ಕಲ್ಯಾಣನಾಡಿನ ಶರಣ ಪರಿಷತ್ತು, ವಿಜಾಪುರ

೧೪. ಪ್ರಗತಿಪರವಿಚಾರವಾದಿ ಕುಮಾರ ಕಕ್ಕಯ್ಯನ ವಚನಗಳು –೧೯೯೩
ಪ್ರ: ಉಜ್ವಲ –ರಶ್ಮಿ ಪ್ರಕಾಶನ, ವಿಜಾಪುರ

೧೫. ಕುಮಾರ ಕಕ್ಕಯ್ಯನ ವಚನಗಳು – (ಸಮಗ್ರ ವಚನ ಸಂಪುಟ) – ೨೦೦೫
ಪ್ರ: ಚಿದಾನಂದ ಭೀಮರಾವ ಪೋಳ, ಕಕ್ಕಯ್ಯನಿವಾಸ, ವಿಜಾಪುರ –೩

# ಅನುಬಂಧ – ೫

# ಕುಮಾರ ಕಕ್ಕಯ್ಯನವರ ಬಿಡಿ ಲೇಖನಗಳು

**ಶಿವಾನುಭವ ಪತ್ರಿಕೆ, ಬಸವತತ್ವ ಪ್ರಸಾರ ಸಂಸ್ಥೆ, ಧಾರವಾಡ**

೧. ಸಿದ್ಧಾಂತ ಶಿಖಾಮಣಿ ಗೀತೆಯ ನಕಲಲ್ಲವೆ? ಸಂಪುಟ ೨ ಸಂಚಿಕೆ ೬, ೧೯೮೩
೨. ಬಸವಧರ್ಮ ಯರ ಸೊತ್ತು ಸಂ.೩ ಸಂ.೨. ೧೯೮೩
೩. ವೀರಶೈವರಿಗೊಂದು ಕಿವಿಮಾತು ಸಂ.೩ ಸಂ.೬, ೧೯೮೪.
೪. ಶರಣ ಕಕ್ಕಯ್ಯ ಸಂ.೮. ಸಂ.೧, ೧೯೮೮
೫. ಬಸವನ ಬಲಿದಾನ ಹುಸಿಹೋಗಬೇಕೆ? ಸಂ.೮ ಸಂ.೨, ೧೯೮೮
೬. ಗೊಡ್ಡಾಕಳ – ದಡ್ಡಮಗ –ಅಡ್ಡಪಲ್ಲಕ್ಕಿ ಸಂ.೮. ಸಂ.೨. ೧೯೮೮
೭. ಕೇವಲ ತಾಳಿಕಟ್ಟಿಕೊಂಡರೆ ಆಯಿತೆ? ಸಂ.೮. ಸಂ.೫, ೧೯೮೯
೮. ವೀರಶೈವ ಅರ್ಥಾತ್ ಲಿಂಗವಂತ ಧರ್ಮಸ್ಥಾಪಕ ಯಾರು? ಸಂ.೮. ಸಂ.೫–೬, ೧೯೮೯.

**'ಬಸವಬೆಳಗು' ಪತ್ರಿಕೆ, ಚಿತ್ತರಗಿ ಸಂಸ್ಥಾನಮಠ ಇಳಕಲ್ಲ**

೧. ಧರ್ಮ ಒಡೆಯುವ ಪ್ರಶ್ನೆಯೇ ಇಲ್ಲ ಸಂ.೨. ಸಂ.೪, ೧೯೮೮
೨. ಬಸವಣ್ಣ ಧರ್ಮಸ್ಥಾಪಕ ಅಲ್ಲೆನ್ನುವದೇಕೆ? ಸಂ.೨. ಸಂ.೪. ೧೯೮೮
೩. ಜಂಗಮರ ಪ್ರಶ್ನೆ –ವೀರಶೈವರಿಗೆ ಮನವಿ ಸಂ.೩. ಸಂ.೧ ೧೯೮೮
೪. ಕೇವಲ ತಾಳಿ ಕಟ್ಟಿಕೊಂಡರೆ ಆಯಿತೇ? ಸಂ.೩ ಸಂ.೩. ೧೯೮೯
೫. ಜನಗಣತಿಯಲ್ಲಿ ವೀರಶೈವ ಸಂ.೩. ಸಂ.೪. ೧೯೮೯
೬. ಚೆನ್ನಬಸವಣ್ಣ ಬಿಜ್ಜಳನ ಮಗನೆ? ಸಂ.೩. ಸಂ.೪. ೧೯೮೯
೭. ಡಾ॥ ಜಚನಿ ಅವರ ಪ್ರತಿಗಾಮಿತನ ಸಂ.೪. ಸಂ.೩. ೧೯೯೦

೮. ೧೯೯೧ ರ ಜನಗಣತಿ–ಲಿಂಗಾಯತ ಧರ್ಮಸಂ.೪. ಸಂ.೪. ೧೯೯೦
೯. ಯಾರ ಪಿತೂರಿಯಿಂದ ವೀರಶೈವ ಒಂದಾಗಿಲ್ಲ? ಸಂ.೬. ಸಂ.೪. ೧೯೯೨.
೧೦. ಲಿಂಗಾಯತಕ್ಕೆ ಪರಿಶಿಷ್ಟರ ಮತಾಂತರ ಸಂ.೭. ಸಂ.೨ ೧೯೯೩.
೧೧. ಪುನರ್ಜನ್ಮ ಸಿದ್ಧಾಂತ ಸಂ.೮. ಸಂ.೨. ೧೯೯೪.
೧೨. ಎಲ್ಲಿಂದ ಬಂತು ವೀರಶೈವ ? ಸಂ.೮. ಸಂ.೩. ೧೯೯೪
೧೩. ಮೂಜಗಂ ವರ್ತನೆ ಖಂಡನೀಯ ಸಂ.೮. ಸಂ.೪. ೧೯೯೪
೧೪. ವಚನ ಸಾಹಿತ್ಯದಲ್ಲಿ ದಲಿತ ಪ್ರಜ್ಞೆ ಸಂ.೯ ಸಂ.೨ ೧೯೯೫.
೧೫. ಮಹಾಚೈತ್ರ ಸಕ್ಕರೆ ಲೇಪಿತ ವಿಷಯಗುಳಿಗೆ ಸಂ.೯ ಸಂ.೨ ೧೯೯೫
೧೬. ಮಹಾಚೈತ್ರ–ತಪ್ಪಿದ ಜಂಗೀಜಖಾನ ದಾಳಿ ಸಂ. ೯. ಸಂ.೪ ೧೯೯೫

## ಅನುಬಂಧ – ೬

### (ಅ) ಕುಮಾರ ಕಕ್ಕಯ್ಯ ಪೋಳ – ಕುರಿತು ಗ್ರಂಥಗಳು

೧. ಕುಮಾರ ಕಕ್ಕಯ್ಯ ಪೋಳ – ಸಿದ್ದಣ್ಣ ಲಂಗೋಟಿ ೧೯೯೭.
ಪ್ರ : ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಡಂಬಳ –ಗದಗ

೨. ಕುಮಾರ ಕಕ್ಕಯ್ಯ ಪೋಳ (ಮಕ್ಕಳ ಮುತ್ತು) – ಸಿದ್ದಣ್ಣ ಲಂಗೋಟಿ ೨೦೦೨
ಪ್ರ : ಕಲ್ಯಾಣನಾಡಿನ ಶರಣ ಪರಿಷತ್ತು ಅನುಭವ ಮಂಟಪ ಬಸವಕಲ್ಯಾಣ ಜಿ॥ ಬೀದರ

೩. ದಲಿತ ಸಾಹಿತಿ ಕುಮಾರ ಕಕ್ಕಯ್ಯ ಪೋಳ – ಡಾ॥ ಎಚ್.ಟಿ.ಪೋತೆ ೨೦೦೮
ಪ್ರ : ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

### (ಆ) ಕುಮಾರ ಕಕ್ಕಯ್ಯ ಪೋಳ – ಕುರಿತು ಲೇಖನಗಳು.

೧. ನ್ಯಾಯ ನಿಷ್ಠುರಿ ಧೀರ ಶರಣ ಕುಮಾರ ಕಕ್ಕಯ್ಯ ಪೋಳ – ಬಸವಬೆಳಗು ಪತ್ರಿಕೆ ಪ್ರೊ. ಸಿದ್ದಣ್ಣ ಲಂಗೋಟಿ ಸಂ.೩. ಸಂ.೩ ೧೯೮೯

೨. ಗಣಾಚಾರದ ಧೀರ ಶರಣ ಕುಮಾರ ಕಕ್ಕಯ್ಯ ಪೋಳ – ಪ್ರೊ. ಸಿದ್ದಣ್ಣ ಲಂಗೋಟಿ ಬಸವಬೆಳಗು ಪತ್ರಿಕೆ ಸಂ.೧೦ ಸಂ.೩.೧೯೯೬

೩. ದಲಿತ ಸಾಹಿತಿ ಕುಮಾರ ಕಕ್ಕಯ್ಯ –ಡಾ॥ ಎಚ್. ಟಿ.ಪೋತೆ ಹೊಸತು ಪತ್ರಿಕೆ ಸೆಪ್ಟೆಂಬರ – ೨೦೦೨

೪. ವ್ಯವಸ್ಥೆಯನ್ನು ಒರೆಗಲ್ಲಿಗೆ ಹಚ್ಚಿದ ಪೋಳ – ಡಾ॥ ಎಚ್.ಟಿ.ಪೋತೆ ಸಂವಾದ ಪತ್ರಿಕೆ ೨೦೦೬

# ಅನುಬಂಧ–೭

## ಅ. ಸಾಂದರ್ಭಿಕ/ಸಹಾಯಕ ಗ್ರಂಥಗಳು

ಕರ್ನಾಟಕ ಸರಕಾರದ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರ
ವಚನ ಸಂಪುಟಗಳು(ದ್ವಿತೀಯ ಪರಿಷ್ಕೃತ ಮುದ್ರಣ ೨೦೦೧)

೧. ಬಸವಣ್ಣನವರ ವಚನಸಂಪುಟ–ಸಂ. ಡಾ॥ ಎಂ.ಎಂ. ಕಲಬುರ್ಗಿ
೨. ಅಲ್ಲಮ ಪ್ರಭುದೇವರ ವಚನ ಸಂಪುಟ–ಸಂ.ಡಾ॥ ಬಿ.ವ್ಹಿ.ಮಲ್ಲಾಪುರ
೩. ಚೆನ್ನಬಸವಣ್ಣನವರ ವಚನ ಸಂಪುಟ–ಸಂ.ಡಾ॥ ಬಿ.ವ್ಹಿ. ಮಲ್ಲಾಪುರ
೪. ಸಿದ್ಧರಾಮೇಶ್ವರ ವಚನ ಸಂಪುಟ–ಸಂ.ಡಾ॥ ಎಸ್. ವಿದ್ಯಾಶಂಕರ
೫. ಶಿವಶರಣೆಯರ ವಚನ ಸಂಪುಟ–ಸಂ. ಡಾ॥ ವೀರಣ್ಣ ರಾಜೂರ
೬. ಸಂಕೀರ್ಣ ವಚನ ಸಂಪುಟ : ಒಂದು ಸಂ. ಡಾ॥ ಎಂ.ಎಂ. ಕಲಬುರ್ಗಿ
೭. ಸಂಕೀರ್ಣ ವಚನ ಸಂಪುಟ : ಎರಡು ಸಂ ಡಾ॥ ಎಸ್.ವಿದ್ಯಾಶಂಕರ
೮. ಸಂಕೀರ್ಣ ವಚನ ಸಂಪುಟ : ಮೂರು ಸಂ. ಡಾ॥ ಬಿ.ಆರ್. ಹಿರೇಮಠ
೯. ಸಂಕೀರ್ಣ ವಚನ ಸಂಪುಟ : ನಾಲ್ಕು ಸಂ. ಡಾ॥ ಬಿ.ಆರ್.ಹಿರೇಮಠ
೧೦. ಸಂಕೀರ್ಣ ವಚನ ಸಂಪುಟ : ಐದು ಸಂ ಡಾ॥ ವೀರಣ್ಣ ರಾಜೂರ
೧೧. ಸಂಕೀರ್ಣ ವಚನ ಸಂಪುಟ : ಆರು ಸಂ. ಡಾ॥ ಎಸ್. ಶಿವಣ್ಣ
೧೨. ಸಂಕೀರ್ಣ ವಚನ ಸಂಪುಟ : ಏಳು ಸಂ. ಡಾ॥ ವೀರಣ್ಣ ರಾಜೂರ
೧೩. ಸಂಕೀರ್ಣ ವಚನ ಸಂಪುಟ : ಎಂಟು ಸಂ. ಡಾ॥ ವೀರಣ್ಣ ರಾಜೂರ
೧೪. ಸಂಕೀರ್ಣ ವಚನ ಸಂಪುಟ : ಒಂಬತ್ತು ಸಂ. ಡಾ॥ ವೀರಣ್ಣ ರಾಜೂರ
೧೫. ವಚನ ಪರಿಭಾಷಾ ಕೋಶ : ಸಂ. ಡಾ॥ ಎನ್.ಜಿ. ಮಹಾದೇವಪ್ಪ

## ಆ. ಸಾಂದರ್ಭಿಕ/ಸಹಾಯಕ ಗ್ರಂಥಗಳು

೧. ಅಂಗಡಿ ಎಸ್. ಎಸ್. ಡಾ॥ – ಕನ್ನಡ ವ್ಯಾಕರಣ ಪರಿಭಾಷೆ
ಪ್ರ : ವಿದ್ಯಾನಿಧಿ ಪ್ರಕಾಶನ ಗದಗ (೨೦೦೫)

೨. ಅಕ್ಕೂರಮಠ ಷಣ್ಮುಖಯ್ಯ – ವೈಚಾರಿಕ ಸಾಹಿತ್ಯ ದಿಗ್ದರ್ಶನ
ಪ್ರ : ದೇವಗಂಗೋತ್ರಿ ಬೆಂಗಳೂರು–೪ (೧೯೮೦)
೩. ಅಕ್ಕೂರಮಠ ಷಣ್ಮುಖಯ್ಯಾ – ಸಮಾಯೋಗ
ಪ್ರ : ನಿಜಗುಣರ ಜಂಗಮಮಠ ಬೆಂಗಳೂರು (೧೯೯೬)
೪. ಅಕ್ಕೂರಮಠ ಷಣ್ಮುಖಯ್ಯ – ವಚನ ಸಾಹಿತ್ಯ ವಿವೇಚನೆ
ಪ್ರ : ಜಗದ್ಗುರು ಅನ್ನದಾನೇಶ್ವರ ಮಠ ಮುಂಡರಗಿ (೧೯೯೩)
೫. ಅಕ್ಕುಲಯ್ಯ ದೀಕ್ಷಿತ ಜಿ.ಟಿ – ಇಷ್ಟಲಿಂಗ ವಿಜ್ಞಾನ
ಪ್ರ : ಪ್ರಬೋಧ ಪುಸ್ತಕಮಾಲೆ ಬೆಂಗಳೂರು (೧೯೮೬)
೬. ಅ.ನ.ಕೃ– ವಿಶ್ವಬಂಧು ಬಸವೇಶ್ವರ
ಪ್ರ : ಬಸವ ಸಮಿತಿ ಬೆಂಗಳೂರು (೧೯೯೭)
೭. ಅಭಿನವ ಬಾರಸಾಕಳೆ – ಮಹಾನುಭಾವಿ ಡೋಹರ ಕಕ್ಕಯ್ಯನವರು
ಪ್ರ : ಅಖಿಲ ಭಾರತೀಯ ವೀರಶೈವ ಡೋಹರ
ಸಮಾಜದ ಮಂಡಳ ಆನಂದವಾಡಿ ಬೆಳಗಾವಿ (೨೦೦೧)
೮. ಅರವಿಂದ ಮಾಲಗತ್ತಿ ಡಾ॥ – ದಲಿತ ಸಾಹಿತ್ಯ ನೆಲೆ–ಹಿನ್ನೆಲೆ
ಪ್ರ : ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರ
(೨೦೦೧)
೯. ಅರ್ಜುನ ಗೊಳಸಂಗಿ ಡಾ॥ – ದಲಿತಲೋಕದ ಶೋಧ
ಪ್ರ : ದಲಿತಸಾಹಿತ್ಯ ಪರಿಷತ್ತು ರಾಜ್ಯ ಘಟಕ ಗದಗ (೨೦೦೯)
೧೦. ಅರ್ಜುನ ಗೊಳಸಂಗಿ ಡಾ॥ – ದಲಿತರ ಬದುಕು
ಪ್ರ : ವಿಮೋಚನಾ ಪ್ರಕಾಶನ ಅಥಣಿ (೨೦೦೦)
೧೧. ಇಮ್ಮಡಿ ಶಿವಬಸವ ಸ್ವಾಮಿಗಳು ಡಾ॥ – ಸಿದ್ಧಾಂತ ಶಿಖಾಮಣಿ
ಹಾಗೂ ಶ್ರೀಕರ ಭಾಷ್ಯ ನಿಜದ ನಿಲವು
ಪ್ರ : ಸಂವಹನ ಪ್ರಕಾಶನ ಮೈಸೂರು (೨೦೦೩)
೧೨. ಈನಿಂಕಿ (ಈರಯ್ಯ ಕಿಲ್ಲೇದಾರ) – ದೇವರು ಮತ್ತು ದಲಿತರು
ಪ್ರ : ಕವಿತಾ ಪ್ರಕಾಶನ ಗುಡಿಕಟ್ಟಿ ಜಿ॥ ಬೆಳಗಾವಿ (೧೯೯೭)
೧೩. ಉತ್ತಂಗಿ ಚನ್ನಪ್ಪ – ಅನುಭವ ಮಂಟಪ ಐತಿಹಾಸಿಕತೆ
ಪ್ರ : ಶ್ರೀ ಮುರಾಘಾಮಠ ಧಾರವಾಡ (೧೯೭೬)
೧೪. ಉತ್ತಂಗಿ ಚನ್ನಪ್ಪ – ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ
ಪ್ರ : ಚನ್ನಪ್ಪ ಉತ್ತಂಗಿ ಮಿಶನ್ ಕಂಪೌಡ ಧಾರವಾಡ (೧೯೬೨)
೧೫. ಉತ್ತಂಗಿ ಚನ್ನಪ್ಪ – ಸರ್ವಜ್ಞ ವಚನಗಳು
ಪ್ರ : ಸಿ.ಡಿ ಉತ್ತಂಗಿ, ಮಿಷನ್ ಕಂಪೌಂಡ ಧಾರವಾಡ (೧೯೩೫)
೧೬. ಕಲಬುರ್ಗಿ ಎಂ.ಎಂ. ಡಾ॥ – ಶಿವಶರಣರ ಕಾಯಕ ಸಿದ್ಧಾಂತ

ಪ್ರ : ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ (೧೯೮೫)

೧೭. ಕಲಬುರ್ಗಿ ಎಂ.ಎಂ. ಡಾ॥ –ಬಸವ ಮಾರ್ಗ ಸಂಪುಟ–೧
ಪ್ರ. ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ (೧೯೮೦)

೧೮. ಕಲಬುರ್ಗಿ ಎಂ.ಎಂ. ಡಾ॥ – ಬಸವ ಮಾರ್ಗ ಸಂಪುಟ–೨
ಪ್ರ. ಬಸವೇಶ್ವರ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ(೧೯೮೧)

೧೯. ಕಲಬುರ್ಗಿ ಎಂ.ಎಂ. ಡಾ॥ – ಕೆಟ್ಟಿತ್ತು ಕಲ್ಯಾಣ
ಪ್ರ : ಸಹೃದಯ ಸಾಂಸ್ಕೃತಿಕ ಆಕಾಡೆಮಿ ಧಾರವಾಡ (೧೯೯೫)

೨೦. ಕಲಬುರ್ಗಿ ಎಂ.ಎಂ. ಡಾ॥ ಶಾಸನಗಳಲ್ಲಿ ಶಿವಶರಣರು
ಪ್ರ : ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಡಂಬಳ–ಗದಗ (೧೯೭೮)

೨೧. ಕಲಬುರ್ಗಿ ಎಂ.ಎಂ. ಡಾ॥ (ಪ್ರ.ಸಂ) – ಲಿಂಗಾಯತ
(ಉಪಪಂಗಡಗಳ ದಾಖಲೀಕರಣ)
ಪ್ರ : ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಎಜ್ಯುಕೇಶನ್ ಸೊಸಾಯಿಟಿ ಇಳಕಲ್ಲ (೨೦೦೯)

೨೨. ಕರ್ಕಿ ಡಿ.ಎಸ್. ಡಾ॥ – ಛಂದೋವಿಕಾಸ
ಪ್ರ : ಭಾರತ ಬುಕ್ ಡಿಪೋ ಮತ್ತು ಪ್ರಕಾಶನ ಧಾರವಾಡ (೧೯೭೩)

೨೩. ಕಮಲಾ ಹಂಪನಾ – ಅಕ್ಕಮಹಾದೇವಿ
ಪ್ರ : ಐ.ಬಿ.ಎಚ್. ಪ್ರಕಾಶನ ಗಾಂಧಿನಗರ ಬೆಂಗಳೂರು–೯ (೧೯೭೧)

೨೪. ಕಮಲಾ ಚಟ್ಟೋಪಾಧ್ಯಾಯ
ಅನು : ವೈದೇಹಿ – ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ
ಪ್ರ : ಅಕ್ಷರ ಪ್ರಕಾಶನ ಸಾಗರ (೧೯೮೪)

೨೫. ಕಕ್ಕಿಲ್ಲಾಯ ಬಿ.ವಿ. – ಭಾರತೀಯ ಚಿಂತನೆ–ಹಿಂದೂಧರ್ಮ–ಕಮ್ಯುನಿಸಂ
ಪ್ರ : ನವಕರ್ನಾಟಕ ಪ್ರಕಾಶನ, ಬೆಣಗಳೂರು (೧೯೮೯)

೨೬. ಕೃಷ್ಣಮೂರ್ತಿ ಮ.ಸು. – ಬಸವರಾಜ ಮಾರ್ಗ
ಪ್ರ : ಅನನ್ಯ ಪ್ರಕಾಶನ ಧಾರವಾಡ (೧೯೮೫)

೨೭. ಕಲ್ಯಾಣಮ್ಮ ಲಂಗೋಟಿ – ಬಸವಾದಿ ಶರಣರ ವಚನಾಂಕಿತಗಳು
ಪ್ರ : ಕನ್ನಡ ಜ್ಯೋತಿ ಪ್ರಕಾಸನ ಧಾರವಾಡ (೨೦೦೫)

೨೮. ಕುಳ್ಳಿ ಜಯವಂತ ಡಾ॥ ಬುದ್ಧ–ಬಸವ–ಗಾಂಧಿ
ಪ್ರ : ಸಿರಿಗನ್ನಡ ಪ್ರಕಾಶನ ಧಾರವಾಡ (೧೯೭೭)

೨೯. ಕುಲಕರ್ಣಿ ಡಿ.ನಾಗೇಶ ರಂಗೋ – ಯಾಜ್ಞವಲ್ಕ್ಯ ಸ್ಮೃತಿ
ಪ್ರ : ಸಮಾಜ ಪುಸ್ತಕಾಲಯ ಧಾರವಾಡ (೧೯೮೦)

೩೦. ಕುಮಾರ ಸ್ವಾಮಿಗಳು – ವೀರಶೈವ ದರ್ಶನ
ಪ್ರ : ನವಕಲ್ಯಾಣಮಠ, ಧಾರವಾಡ (೨೦೦೪)
೩೧. ಕುವೆಂಪು – ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ
ಪ್ರ : ಉದಯರವಿ ಪ್ರಕಾಶನ ಮೈಸೂರು (೧೯೯೮)
೩೨. ಕುಶಾಲಪ್ಪಗೌಡ ಕೆ.ಡಾ॥ – ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ
ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು(೧೯೮೬)
೩೩. ಗದ್ದಗಿಮಠ ಬಿ.ಎಸ್. ಡಾ॥ – ಕನ್ನಡ ಜಾನಪದ ಗೀತಗಳು
ಪ್ರ : ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ (೧೯೬೯)
೩೪. ಗಿರಡ್ಡಿ ಗೋವಿಂದರಾಜ ಡಾ॥ – ವಚನವಿನ್ಯಾಸ
ಪ್ರ : ಅಕ್ಷರ ಪ್ರಕಾಶನ ಹೆಗ್ಗೋಡು–ಸಾಗರ (೧೯೯೭)
೩೫. ಗಿರಿರಾಜ್ ಪಿ.ಎಂ. – ಬಸವರ ನೋಟ
ಪ್ರ :ಜಗದ್ಗುರು ಮುರುಘರಾಜೇಂದ್ರ ಗ್ರಂಥಮಾಲೆ ಚಿತ್ರದುರ್ಗ(೧೯೯೬)
೩೬. ಗುಂಜೆಟ್ಟಿ ಬಿ.ವಿ. (ಸಂ) – ವಚನ ಸಾಹಿತ್ಯ ದರ್ಶನ ಹಾಗೂ ಹೆಗಡೆ ಜಿ. ಎಂ. ಬಾಳಣ್ಣ ಸೀಗಿಹಳ್ಳಿ
ಪ್ರ : ಸೋಮೇಶ್ವರ ಪ್ರಕಾಶನ ಲಕ್ಷ್ಮೇಶ್ವರ (೨೦೦೧)
೩೭. ಗುರುಲಿಂಗ ಕಾಪಸೆ ಡಾ॥ – ಸಿದ್ಧರಾಮ
ಪ್ರ : ಶ್ರೀ ಬಸವೇಶ್ವರ ಪೀಠ, ಕ.ವಿ.ವಿ. ಧಾರವಾಡ (೨೦೦೬)
೩೮. ಚನ್ನಬಸವಪ್ಪ ಗೊ.ರು. – ವಚನ ಚಿಂತನ
ಪ್ರ : ಕನ್ನಡ ಸರ್ಪಭೂಷಣಮಠ ಬೆಂಗಳೂರು (೧೯೯೨)
೩೯. ಚನ್ನಬಸಪ ಗೊ.ರು. – ಕರ್ನಾಟಕ ಜನಪದ ಕಲೆಗಳು
ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು (೧೯೭೭)
೪೦. ಚರಂತಿಮಠ ಮಾಯಾದೇವಿ – ಬಸವಣ್ಣನವರು ಕ್ರಾಂತಿಕಾರರೇ?
ಪ್ರ : ಮಾಯಾಪ್ರಿಯ ಪ್ರಕಾಶನ, ರಾಯಚೂರು (೨೦೦೬)
೪೧. ಚಂದ್ರಶೇಖರ ಸಿ.ಆರ್. ಡಾ॥ ಪುನರ್ಜನ್ಮ ಎಷ್ಟು ನಿಜ?
ಪ್ರ : ಸಿದ್ಧಾಂತ ಪಬ್ಲಿಕೇಶನ್ಸ ಬೆಂಗಳೂರು–೧೦ (೧೯೯೫)
೪೨. ಚಂದ್ರಶೇಖರ ಪಾಟೀಲ (ಸಂ) – ಸಂಕ್ರಮಣ ಸಾಹಿತ್ಯ ಸಂಪುಟ–೨
ಪ್ರ : ಸಂಕ್ರಮಣ ಪ್ರಕಾಶನ, ಧಾರವಾಡ (೧೯೯೩)
೪೩. ಚಂದ್ರಶೇಖರಶಾಸ್ತ್ರಿ ಹೊಳಲು – ಬಸವತತ್ವ ರತ್ನಾಕರ
ಪ್ರ : ಹಿರೇಮಠ ಸಹೋದರರು ಹೊಳಲು ಜಿ॥ ಬಳ್ಳಾರಿ (೧೯೬೧)
೪೪ ಚಂದನಗೌಡರು ಹ. ದೇ – ಬಸವವಚನ ಪ್ರಭೆ
ಪ್ರ : ಬಸವತತ್ವ ಪ್ರಸಾರ ಸಂಸ್ಥೆ, ಧಾರವಾಡ (೧೯೮೩)
೪೫. ಚಕ್ರಕೋಡಿ ಈಶ್ವರಶಾಸ್ತ್ರಿ (ಅನು) – ಪರಾಶರ ಸ್ಮೃತಿ

ಪ್ರ : ಸಮಾಜ ಪುಸ್ತಕಾಲಯ ಧಾರವಾಡ (೧೯೮೬)
೪೬. ಚಕ್ರಕೋಡಿ ಈಶ್ವರಶಾಸ್ತ್ರಿ (ಅನು) – ಮನುಸ್ಮೃತಿ
ಪ್ರ : ಸಮಾಜ ಪುಸ್ತಕಾಲಯ ಧಾರವಾಡ (೧೯೮೨)
೪೭. ಚಿದಾನಂದ ಮೂರ್ತಿ ಎಂ. ಡಾ॥ – ಬಸವಣ್ಣನವರು
ಪ್ರ : ಸ್ವಪ್ನ ಬುಕ್ ಹೌಸ್ ಬೆಂಗಳೂರು–೯ (೨೦೦೩)
೪೮. ಚಿದಾನಂದ ಮೂರ್ತಿ ಎಂ. ಡಾ॥ – ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ
ಪ್ರ : ಸಾಹಿತಿಗಳ ಕಲಾವಿದರ ಬಳಗ ಬೆಂಗಳೂರು (೧೯೮೯)
೪೯. ಚಿದಾನಂದ ಮೂರ್ತಿ ಎಂ. ಡಾ॥ ವಚನಸಾಹಿತ್ಯ
ಪ್ರ : ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು (೧೯೭೫)
೫೦. ಚಿದಾನಂದ ಮೂರ್ತಿ ಎಂ.ಡಾ॥ – ಲಿಂಗಾಯತ ಅಧ್ಯಯನಗಳು
ಪ್ರ : ವಾಗ್ದೇವಿ ಪುಸ್ತಕಗಳು ಮೈಸೂರು–೧ (೧೯೮೬)
೫೧. ಚಿದಾನಂದ ಮೂರ್ತಿ ಎಂ.ಡಾ॥ – ಸಿರಿಗನ್ನಡ
ಪ್ರ : ಐ. ಬಿ.ಎಚ್. ಪ್ರಕಾಶನ ಬೆಂಗಳೂರು (೧೯೮೭)
೫೨. ಚಿಂದಾನಂದ ಮೂರ್ತಿ ಎ.ಡಾ॥ – ಸವಿಗನ್ನಡ
ಪ್ರ : ಐ.ಬಿ.ಎಚ್. ಪ್ರಕಾಶನ ಬೆಂಗಳೂರು (೧೯೮೮)
೫೩. ಚಿಲಮಿ ಆರ್.ಬಿ. – ಬ.ಗಿ. ಯಲ್ಲಟ್ಟಿ ಸಮಗ್ರ ಸಾಹಿತ್ಯ
ಪ್ರ : ವೀರಭದ್ರೇಶ್ವರ ಪ್ರಕಾಶನ ಹಾರೂಗೇರಿ (೨೦೦೭)
೫೪. ಚೆನ್ನಬಸವದೇವರು (ಅಥಣೀಶ) – ವಚನತರಂಗ
ಪ್ರ : ಶ್ರೀ ಗುರು ಚೆನ್ನಬಸವೇಶ್ವರ ಗ್ರಂಥಮಾಲೆ ಅಥಣಿ (೧೯೯೯)
೫೫. ಚೆನ್ನಕ್ಕ ಪಾವಟೆ ಡಾ॥ – ಸುಯಿಧಾನ
ಪ್ರ : ಜಗದ್ಗುರು ಅನ್ನದಾನೇಶ್ವರ ಸಂಸ್ಥಾನಮಠ ಮುಂಡರಗಿ (೧೯೯೭)
೫೬ ಚೆನ್ನಕ್ಕ ಪಾವಟೆ ಡಾ॥ – ಶರಣ ಸಂಸ್ಕೃತಿ : ಮುಖಾಮುಖಿ
ಪ್ರ : ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ ಇಳಕಲ್ಲ (೨೦೦೪)
೫೭ ಚೆನ್ನಕ್ಕ ಪಾವಟೆ ಡಾ॥ – ಸಂಸ್ಕೃತಿ–ಸಂಶೋಧನೆ
ಪ್ರ : ಚನ್ನಗಂಗಾ ಪ್ರಕಾಶನ ಧಾರವಾಡ–೮ (೧೯೯೫)
೫೮. ಚೆನ್ನಬಸಪ್ಪ ಕೋ – ದೀನಬಂಧು ಬಸವಣ್ಣ
ಪ್ರ : ಶ್ರೀ ಅರವಿಂದ ಪ್ರಕಾಶನ ಬೆಂಗಳೂರು–೮೬ (೧೯೮೫)
೫೯. ಜಗನ್ನಾಥ ಪಿ. ದೊಡಮನಿ – ಶರಣರ ಕುರಿತ ಕನ್ನಡ ಕಾದಂಬರಿಗಳು
ಪ್ರ : ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ ಇಳಕಲ್ಲ (೧೯೯೬)
೬೦. ಜಚನಿ ಡಾ॥ – ಬಸವಗೀತ

ಪ್ರ : ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ ಬೆಂಗಳೂರು (೧೯೬೮)

೬೧. ಜಚನಿ ಡಾ|| – ವಚನ ಮಂಜರಿ
ಪ್ರ : ಶ್ರೀಶೈಲಜಗದ್ಗುರು ನಡುಮಾಮಿಡಿ ಪುಸ್ತಕಭಂಡಾಠ ಬೆಂಗಳೂರು (೧೯೫೬)

೬೨. ಜಚನಿ ಡಾ|| – ವಚನವಲ್ಲರಿ
ಪ್ರ : ಭ್ರಮರಾಂಬಾ ಬಳಗ, ಅಕ್ಕಿಪೇಟೆ ಬೆಂಗಳೂರು (೧೯೬೩)

೬೩. ಜಚನಿ ಡಾ|| – ದುಡಿವಚನ
ಪ್ರ : ನವನೀತ ಪ್ರಕಾಶನ ತಾಂಬಾ (೧೯೭೩)

೬೪. ಜತ್ತಿ ಅರವಿಂದ – ವಚನಕಾರರು ಮತ್ತು ವ್ಯಕ್ತಿತ್ವ ವಿಕಸನ
ಪ್ರ : ಬಸವಸಮಿತಿ, ಬಸವೇಶ್ವರ ವೃತ್ತ ಬೆಂಗಳೂರು–೧ (೨೦೦೬)

೬೫. ಜಯದೇವಪ್ಪ ಜೈನಕೇರಿ – ವಚನಸಂಪದ
ಪ್ರ :ಶಾಂತಲಾ ಪ್ರಕಾಶನ ಶಿವಮೊಗ್ಗ (೨೦೦೭)

೬೬. ಜಯಶ್ರೀ ದಂಡೆ ಡಾ|| – ಶರಣರ ಆರ್ಥಿಕ ಚಿಂತನ
ಪ್ರ : ಸದ್ಭಾವಗೋಷಿ ಗದ್ದುಗೆಮಠ ಕಲಬುರ್ಗಿ (೧೯೯೮)

೬೭. ಜಯಶ್ರೀ ದಂಡೆ ಡಾ|| – ವಚನಗಳಲ್ಲಿ ಶೈವ ಹಾಗೂ ವೀರಶೈವ
ಪ್ರ : ಕವಿಮಾರ್ಗ ಪ್ರಕಾಶನ ಕಲಬುರ್ಗಿ (೧೯೯೪)

೬೮. ಜವರಯ್ಯ ಮ.ನ. – ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ
ಪ್ರ : ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು (೧೯೯೪)

೬೯. ಜ.ಹೊ. ನಾರಾಯಣಸ್ವಾಮಿ – ಬ್ರಾಹ್ಮಣ್ಯದ ತಂತ್ರಗಳು
ಪ್ರ : ಮಾನವ ಪ್ರಕಾಶನ ಹಾಸನ (೨೦೦೭)

೭೦. ಜ.ಹೊ. ನಾರಾಯಣಸ್ವಾಮಿ – ಬೆಳಕಿನದಾರಿ
ಪ್ರ : ಮಾನವ ಪ್ರಕಾಶನ ಹಾಸನ (೧೯೮೭)

೭೧. ಜ.ಹೊ. ನಾರಾಯಣಸ್ವಾಮಿ (ಸಂ) – ವಿವೇಕಾನಂದರ ಕ್ರಾಂತಿಕಾರಿ
ಪ್ರ. ಮಾನವ ಪ್ರಕಾಶನ, ಹಾಸನ ವಿಚಾರಗಳು (೨೦೦೬)

೭೨. ಜ.ಹೊ. ನಾರಾಯಣಸ್ವಾಮಿ – ಚೈತನ್ಯರೂಪಿ ಕುವೆಂಪು
ಪ್ರ : ಸಿ.ವಿ.ಜಿ. ಪಬ್ಲಿಕೇಶನ್ಸ್ ಬೆಂಗಳೂರು (೨೦೦೪)

೭೩. ಜಾನ್ ಪೀಟರ್ ಶೌಟನ್ (ಮೂಲ) – ಅನುಭಾವಿಗಳ ಕ್ರಾಂತಿ
ಅನು : ಟಿ.ಆರ್. ಚಂದ್ರಶೇಖರ
ಪ್ರ : ವೀರಶೈವ ಅಧ್ಯಯನ ಸಂಸ್ಥೆ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಡಂಬಳ–ಗದಗ (೧೯೯೯)

೭೪. ಜಾಧವ ರಾಮು – ಬಸವ ಪ್ರಹರ
ಪ್ರ : ಮಕ್ಕಳಮನೆ ಧಾರವಾಡ (೧೯೯೪)

೭೫. ಜೋಳದರಾಶಿ ದೊಡ್ಡನಗೌಡ – ರಾಮೇಶ ವಚನಗಳು
ಪ್ರ : ಶ್ರೀ ಮುರುಘಾಮಠ ಧಾರವಾಡ (೧೯೭೦)
೭೬. ಡಿ.ವಿ.ಜಿ – ದೇವರು
ಪ್ರ : ಕಾವ್ಯಾಲಯ ಪ್ರಕಾಶನ ಮೈಸೂರು (೧೯೭೩)
೭೭. ತಪಸ್ವಿಕುಮಾರ. ನಂ. ಡಾ॥ – ಕನ್ನಡ ಒಗಟುಗಳ ಸಮೀಕ್ಷೆ
ಪ್ರ : ಪ್ರಸಾರಾಂಗ ಮೈಸೂರು ವಿ.ವಿ. (೧೯೭೯)
೭೮. ತಿಮ್ಮಾಪೂರ ಎಚ್.ಆಯ್. ಡಾ॥ – ಪರಿಸರ ಸಾಹಿತ್ಯ ಸಂಪದ
೭೯. ತಿಪ್ಪೇರುದ್ರಸ್ವಾಮಿ. ಹೆಚ್. ಡಾ॥ – ವಚನಗಳಲ್ಲಿ ವೀರಶೈವ ಧರ್ಮ
ಪ್ರ : ಡಿ.ವಿ.ಕೆ ಮೂರ್ತಿ ಮೈಸೂರು (೧೯೮೨)
೮೦. ತಿಪ್ಪೇರುದ್ರ ಸ್ವಾಮಿ ಹೆಚ್.ಡಾ॥ – ಶರಣರ ಅನುಭಾವಸಾಹಿತ್ಯ
ಪ್ರ : ಡಿ.ವ್ಹಿ.ಕೆ. ಮೂರ್ತಿ ಮೈಸೂರು (೧೯೭೮)
೮೧. ತಿಪ್ಪೇರುದ್ರಸ್ವಾಮಿ ಹೆಚ್. ಡಾ॥ – ವಚನಸಾಹಿತ್ಯ ವೈಚಾರಿಕ ಅಧ್ಯಯನ
ಪ್ರ : ಕನ್ನಡ ಅಧ್ಯಯನಪೀಠ ಕ.ವಿ.ವಿ. ಧಾರವಾಡ (೧೯೭೭)
೮೨. ತೇಜಸ್ವಿನಿ ನಿರಂಜನ (ಸಂ) – ಸ್ತ್ರೀವಾದಿ ಸಾಹಿತ್ಯ ವಿಮರ್ಶೆ
ಪ್ರ: ನವಕರ್ನಾಟಕ ಪಬ್ಲಿಕೇಶನ್ಸ್ ಬೆಂಗಳೂರು. (೧೯೯೪)
೮೩. ಧರಣಿದೇವಿ ಮಾಲಗತ್ತಿ – ಸ್ತ್ರೀವಾದ ಮತ್ತು ಭಾರತೀಯತೆ
ಪ್ರ : ಚೇತನ ಬುಕ್ ಹೌಸ್, ಮೈಸೂರು (೧೯೯೮)
೮೪. ದಿವಾಕರ ರಂ.ರಾ – ವಚನಶಾಸ್ತ್ರ ರಹಸ್ಯವು
ಪ್ರ : ಜಗದ್ಗುರು ಗಂಗಾಧರ ಧರ್ಮಪ್ರಸಾರಕ ಮಂಡಳ ಹುಬ್ಬಳ್ಳಿ (೧೯೬೮)
೮೫. ದೇ.ಜವರೇಗೌಡರು (ದೇಜಗೌ) ಡಾ॥ – ಬಸವ ಸಂಹಿತೆ
ಪ್ರ :ಶರತ್ ಪ್ರಕಾಶನ ಮೈಸೂರು (೧೯೭೯)
೮೬. ದೇಜಗೌ – ವಚನಗಳಲ್ಲಿ ವೈಚಾರಿಕತೆ
ಪ್ರ : ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾಲಯ (೧೯೯೨)
೮೭. ದೇಜಗೌ – ಬಸವ ಬೆಳಗು
ಪ್ರ : ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು (೧೯೮೮)
೮೮. ದೇಜಗೌ – ಶರಣಪಥ
ಪ್ರ : ಜಗದ್ಗುರು ಮೂರುಸಾವಿರ ಮಠ ಹುಬ್ಬಳ್ಳಿ (೧೯೮೩)
೮೯. ದೇಜಗೌ – ಬಸವೇಶ್ವರ–ಕಾರ್ಲಮಾರ್ಕ್ಸ
ಪ್ರ : ಬಸವೇಶ್ವರಪೀಠ, ಕ.ವಿ.ವಿ. ಧಾರವಾಡ (೨೦೦೩)
೯೦. ದೇಜಗೌ ಬಸವೇಶ್ವರ–ಅಂಬೇಡ್ಕರ
ಪ್ರ : ಬಸವಧರ್ಮ ಪ್ರಸಾರಸಂಸ್ಥೆ ಹಿರೇಮಠ ಭಾಲ್ಕಿ (೧೯೯೨)
೯೧. ದೇಸಾಯಿ ವೀರಣ್ಣ – ೧೨ ನೇ ಶತಮಾನದಲ್ಲಿ ಹಿಂದುತ್ವದಿಂದ ಸಿಡಿದು ನಿಂತ ಲಿಂಗಾಯತ ಧರ್ಮ

ಪ್ರ : ವೀರಣ್ಣ ದೇಸಾಯಿ ಸಪ್ತಾಪುರ ಧಾರವಾಡ ( )
೯೨. ನಂದಿಮಠ ಎಸ್.ಸಿ. ಡಾ॥ – ವೀರಶೈವ ಧರ್ಮ ಕೈಪಿಡಿ
ಪ್ರ : ಶ್ರೀ ಬಸವೇಶ್ವರ ಪೀಠ, ಕ.ವಿ.ವಿ. ಧಾರವಾಡ (೧೯೯೬)
೯೩. ನರಸಿಂಹಾಚಾರ್ ಡಿ.ಎಲ್.ಡಾ॥ –ಕನ್ನಡ ನಿಘಂಟು
ಪ್ರ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು (೧೯೭೦)
೯೪. ನಾಯಕ ಜಿ.ಎಚ್. – ಸಮಕಾಲೀನ
ಪ್ರ : ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ (೧೯೭೩)
೯೫. ನಾರಾಯಣ ಪಿ.ವ್ಹಿ. ಡಾ॥ – ವಚನ ಪರಿಸರ
ಪ್ರ : ತಂಗಾಳಿ ಪ್ರಕಾಶನ ಬೆಂಗಳೂರ (೧೯೯೪)
೯೬. ನೀಲಮ್ಮ ಕತ್ನಳ್ಳಿ ಡಾ॥ – ಆಧುನಿಕ ವಚನಸಾಹಿತ್ಯ
ಪ್ರ : ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ (೧೯೯೮)
೯೭. ನಿಷ್ಠಿ ರುದ್ರಪ್ಪ – ಬಸವ ನಿಷ್ಠೆ
ಪ್ರ : ರಾಷ್ಟ್ರೀಯ ಬಸವದಳ ಬಳ್ಳಾರಿ (೨೦೦೯)
೯೮. ನಿಷ್ಠಿ ರುದ್ರಪ್ಪ – – ಬಸವಣ್ಣ ಕಾರ್ಲಮಾರ್ಕ್ಸ ಮಾನವೀಯ ಹೋರಾಟಗಳು
ಪ್ರ : ಬಸವ ಕೇಂದ್ರ ಬಳ್ಳಾರಿ. (೨೦೦೪)
೯೯. ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿಗಳು– ಆದರ್ಶ– ವಾಸ್ತವ
ಪ್ರ : ತರಳಬಾಳು ಜಗದ್ಗುರು ಬೃಹನ್ಮಠ ಸಿರಿಗೆರೆ (೧೯೯೫)
೧೦೦. ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿಗಳು – ಸಮಕಾಲೀನತೆ: ವಚನಸಾಹಿತ್ಯ
ಪ್ರ : ತರಳಬಾಳು ಪ್ರಕಾಶನ ಸಿರಿಗೆರೆ (೧೯೯೨)
೧೦೧. ಪರಮೇಶ್ವರ ಭಟ್ಟ ಎಸ್.ವಿ– ಉಂಬರ
ಪ್ರ : ಗೀತಾ ಬುಕ್ ಹೌಸ ಮೈಸೂರು (೧೯೮೦)
೧೦೨. ಪ್ರಭುಸ್ವಾಮಿಮಠ ಸಿ.ವ್ಹಿ. ಡಾ॥ ಬಸವಣ್ಣನವರ ವಚನಗಳ ಸಾಹಿತ್ಯಿಕ ಅಧ್ಯಯನ
ಪ್ರ : ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ (೧೯೯೬)
೧೦೩. ಪಾಟೀಲ ಎಸ್.ವ್ಹಿ – ಜಗಜ್ಯೋತಿ ಬಸವಣ್ಣ
ಪ್ರ : ಜಿ.ಎಸ್.ಪಾಟೀಲ ಪ್ರಕಾಶನ ಧಾರವಾಡ (೧೯೭೩)
೧೦೪. ಪಾಟೀಲ ಜಿ.ಎಂ. – ಅಮರ ಬಸವಣ್ಣ (ಐತಿಹಾಸಿಕ ಸಮೀಕ್ಷೆ) (೧೯೮೮)
ಪ್ರ : ಪಾಟೀಲ ಪ್ರಕಾಶನ ಕಲ್ಯಾಣ ನಗರ ಧಾರವಾಡ–೭
೧೦೫. ಪಾಟೀಲ ಶಾಂತೇಶ – ಶ್ರೀ ಬಸವೇಶ್ವರರು
ಪ್ರ : ಮೈಸೂರು ಸರಕಾರ ಬೆಂಗಳೂರು. (೧೯೬೭)
೧೦೬. ಪಾಟೀಲ ಪಿ.ಎಸ್.– ಬಸವಾದಿ ಪ್ರಮಥರ ಭಕ್ತಿಚಳುವಳಿಯ ಭೌತಿಕವಾದೀ ಅಧ್ಯಯನಗಳು.
ಪ್ರ : ಬಂಥನಾಳ ಶ್ರೀ ವೃಷಭ ವಿದ್ಯಾವರ್ಧಕ ಟ್ರಸ್ಟ ಲಚ್ಯಾಣ(೧೯೯೦)
೧೦೭. ಪಾಟೀಲ ಬಿ.ಎಸ್.–ಶರಣರು ತೋರಿದ ದಾರಿ ಮತ್ತು ಗುರಿ

ಪ್ರ : ಚಿತ್ತರಗಿ ಸಂಸ್ಥಾನಮಠ ಇಳಕಲ್ಲ. (೧೯೯೬)
೧೦೮. ಪಾಟೀಲ ಕೆ.ಎಫ್(ಸಂ)– ಕರ್ನಾಟಕ
ಪ್ರ : ಕರ್ನಾಟಕ ನಾಮಕರಣ ಮಹೋತ್ಸವ ಸಮಿತಿ ಬೆಂಗಳೂರು.(೧೯೭೩)
೧೦೯. ಪಾಟೀಲ ಕ.ಚ.(ಸಂ) – ಸಾಹಿತ್ಯಸಿರಿ – ೨೦೦೬.
ಪ್ರ : ತರಳಬಾಳು ಮಹೋತ್ಸವ ಸಮಿತಿ ಹಿರೇಕೆರೂರು (೨೦೦೬)
೧೧೦. ಪ್ರೀತಿ ಶುಭಚಂದ್ರ ಡಾ॥ – ಇಪ್ಪತ್ತನೇ ಶತಮಾನದ ವಚನಸಾಹಿತ್ಯ ಒಂದು ಅಧ್ಯಯನ
ಪ್ರ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು –೧೮. (೧೯೯೫)
೧೧೧. ಪುಟ್ಟಪ್ಪ ಕೆ.ವ್ಹಿ.(ಸಂ) – ಕನ್ನಡ ಕೈಪಿಡಿ ಸಂಪುಟ –೧
ಪ್ರ : ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ. (೧೯೭೧)
೧೧೨. ಪುರಷೋತ್ತಮ ಬಿಳಿಮಲೆ – ದಲಿತಬಂಡಾಯ ಸಾಹಿತ್ಯ
ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು (೧೯೯೦)
೧೧೩. ಪುರಾಣಿಕ ಸಿದ್ಧಯ್ಯ ಡಾ॥ – ಬಸವಣ್ಣನವರ ಜೀವನ ಹಾಗೂ ಸಂದೇಶ
ಪ್ರ : ಕನ್ನಡ ಅಧ್ಯಯನ ಪೀಠ ಕ.ವಿ.ವಿ.ಧಾರವಾಡ (೧೯೭೭)
೧೧೪. ಪುರಾಣಿಕ ಸಿದ್ಧಯ್ಯ ಡಾ॥ – ಶರಣ ಸರಣಿ
ಪ್ರ : ತರಳಬಾಳು ಬೃಹನ್ಮಠ ಸಿರಿಗೆರೆ (೧೯೯೨)
೧೧೫. ಪುರಾಣಿಕ ಸಿದ್ಧಯ್ಯ ಡಾ॥ (ಸಂ) – ಬಸವ ಮತ್ತು ವಿಚಾರವಾದ
ಪ್ರ : ಬಸವ ಸಮಿತಿ ಬೆಂಗಳೂರು. (೧೯೮೪)
೧೧೬. ಪುರಾಣಿಕ ಸಿದ್ಧಯ್ಯ ಡಾ॥ – ಬಸವ ಮತ್ತು ದಲಿಲೋದಯ
ಪ್ರ : ಬಸವ ಸಮಿತಿ, ಬೆಂಗಳೂರು. (೧೯೯೧)
೧೧೭. ಪುರಾಣಿಕ ಸಿದ್ಧಯ್ಯ ಡಾ॥ – ವಚನೋದ್ಯಾನ
ಪ್ರ : ಶ್ರೀಗಿರಿ ಪ್ರಕಾಶನ, ಬೆಂಗಳೂರು. (೧೯೭೭)
೧೧೮. ಪುರಾಣಿಕ ಸಿದ್ಧಯ್ಯ ಡಾ॥ – ವಚನ ನಂದನ
ಪ್ರ : ಶ್ರೀಗಿರಿ ಪ್ರಕಾಶನ. ಬೆಂಗಳೂರು. (೧೯೮೩)
೧೧೯. ಪುರಾಣಿಕ ಸಿದ್ಧಯ್ಯ ಡಾ॥ – ವಚನಾರಾಮ
ಪ್ರ : ಅನ್ನದಾನ ವಿಜಯ ವಿದ್ಯಾ ಪ್ರಸಾರಕ ಸಮಿತಿ ನರೇಗಲ್ಲ. (೧೯೯೨)
೧೨೦. ಪೂರಾರ ವ್ಹಿ.ಜಿ. ಡಾ॥ – ವಚನ ಸಾಹಿತ್ಯ ಪರಂಪರೆ
ಪ್ರ : ದುರದುಂಡೀಶ್ವರ ಮುರಗೋಡ. (೧೯೯೭)
೧೨೧. ಪೂಜಾರ ವ್ಹಿ.ಜಿ ಡಾ॥ – ಆಧುನಿಕ ವಚನ ಸಾಹಿತ್ಯ.
ಪ್ರ : ಜಗದ್ಗುರು ಮೂರು ಸಾವಿರಮಠ ಹುಬ್ಬಳ್ಳಿ (೧೯೯೮)
೧೨೨. ಪೋತೆ ಎಚ್.ಟಿ. ಡಾ॥ – ದಲಿತಸಾಹಿತಿ ಕುಮಾರ ಕಕ್ಕಯ್ಯ ಪೋಳ
ಪ್ರ : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. (೨೦೦೮)
೧೨೩. ಪೋತೆ ಎಚ್.ಟಿ. ಡಾ॥(ಸಂ) – ವಿಚಾರ ಸಾಹಿತ್ಯ.
ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು (೨೦೦೬)

೧೨೪. ಬಣಕಾರ ಮಹಾದೇವ – ಮಹಾದೇವ ಬಣಕಾರ ವಚನಗಳು (೧೯೭೯)
೧೨೫. ಬಸವನಾಳ ಶಿ.ಶಿ. – ವೀರಶೈವ ಹುಟ್ಟು ಬೆಳವಣಿಗೆ
ಪ್ರ : ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ. (೧೯೫೧)
೧೨೬. ಬಸವನಾಳ ಶಿ.ಶಿ – ಬಸವಣ್ಣನವರ ಷಟ್‌ಸ್ಥಲದ ವಚನಗಳು.
ಪ್ರ : ಮೈಸೂರು ಸರ್ಕಾರ ಬೆಂಗಳೂರು. (೧೯೬೮)
೧೨೭. ಬಸವಾ ಕೆ.ಡಿ. – ಭಾರತದ ಸಂವಿಧಾನ.
ಪ್ರ : ವಿದ್ಯಾವಾಹಿನಿ ಪ್ರಕಾಶನ ಹುಬ್ಬಳ್ಳಿ ( )
೧೨೮. ಬಸವರಾಜ ಸಬರದ ಡಾ॥ – ವಚನ ಚಳವಳಿ
ಪ್ರ : ಪಲ್ಲವಿ ಪ್ರಕಾಶನ ಗುಲಬರ್ಗಾ (೧೯೯೨)
೧೨೯. ಬಸವರಾಜ ಸಬರದ ಡಾ॥ – ಶರಣರ ಬಂಡಾಯದ ವಚನಗಳು.
ಪ್ರ : ಯುವ ಹಿರಿಯ ವಿದ್ಯಾರ್ಥಿ ಸಂಘ ಸಿರಿಗೆರೆ (೧೯೯೧)
೧೩೦. ಬಸವಲಿಂಗ ಪಟ್ಟದ್ದೇವರು – ಬಸವಚಿಂತನ
ಪ್ರ : ಬಸವಧರ್ಮ ಪ್ರಸಾರ ಸಂಸ್ಥೆ ಹಿರೇಮಠ ಸಂಸ್ಥಾನ ಭಾಲ್ಕಿ (೨೦೦೯)
೧೩೧. ಬರಗೂರು ರಾಮಚಂದ್ರಪ್ಪ – ಸಾಹಿತ್ಯ ಮತ್ತು ರಾಜಕಾರಣ
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. (೧೯೮೧)
೧೩೨. ಬಾಳನಗೌಡ ಪಾಟೀಲ (ಸಂ) – ಹೊನ್ನತೂಗಿದ ನೆಲ
ಪ್ರ : ವಿಜಾಪೂರ ಜಿಲ್ಲಾ ಜಾನಪದ ಕಲಾಮೇಳ ಬಸವನಬಾಗೇವಾಡಿ (೧೯೮೮)
೧೩೩. ಬಿದರಕುಂದಿ ಶ್ಯಾಮಸುಂದರ (ಸಂ) – ವಿಚಾರ ಸಾಹಿತ್ಯ ೧೯೯೮.
ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು. (೧೯೯೯)
೧೩೪. ಬೆಲ್ದಾಳ ಸಿದ್ಧರಾಮಶರಣರು ಹಾಗೂ ಡಿ.ಎಂ.ಧನ್ನೂರ – ಬಸವತತ್ವ ಪ್ರದೀಪಿಕೆ.
ಪ್ರ : ಬಸವ ತತ್ವ ಮಹಾವಿದ್ಯಾಲಯ ಶ್ರೀ ಮುರುಘಾಮಠ ಚಿತ್ರದುರ್ಗ. (೧೯೯೯)
೧೩೫. ಭಗವಾನ್ ಕೆ.ಎಸ್. – ಶಂಕರಾಚಾರ್ಯ ಮತ್ತು ಪ್ರತಿಗಾಮಿತನ.
ಪ್ರ : ಮಹಿಮ ಪ್ರಕಾಶನ, ಮೈಸೂರು. (೧೯೮೭)
೧೩೬. ಭಗವಾನ್.ಕೆ.ಎಸ್. (ಅನು) – ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ.
ಪ್ರ : ಮಹಿಮ ಪ್ರಕಾಶನ ಮೈಸೂರು. (೧೯೯೦)
೧೩೭. ಭಜಂತ್ರಿ ಬಿ.ಎಸ್. – ಜನಪದ ಒಡಪುಗಳು
ಪ್ರ : ಚೈತನ್ಯ ಪ್ರಕಾಶನ ಪಂಚಗಾಂವ (೧೯೯೫)
೧೩೮. ಭೂಸನೂರಮಠ ಸಂ.ಶಿ;ಡಾ॥ ಎಸ್.ಜಿ.ಘಿವಾರಿ(ಸಂ)–ಸಿದ್ಧಾಂತಶಿಖಾಮಣಿ.

ಪ್ರ : ಶ್ರೀಮದ್ ವೀರಶೈವ ಶಿವಯೋಗ ಮಂದಿರ, ಬದಾಮಿ (೧೯೯೨)

೧೩೯. ಭೂಸನೂರಮಠ ಸಂ.ಶಿ. (ಸಂ) ವಚನ ಸಾಹಿತ್ಯ ಸಂಗ್ರಹ.
ಪ್ರ : ಮೈಸೂರು ಸರ್ಕಾರ ಬೆಂಗಳೂರು. (೧೯೬೫)

೧೪೦. ಭೂಸನೂರಮಠ ಸಂ.ಶಿ. (ಸಂ) – ಶೂನ್ಯ ಸಂಪಾದನೆ.
ಪ್ರ : ರಾವೂರು ಸಿದ್ಧಲಿಂಗೇಶ್ವರಮಠ, ಕಲಬುರ್ಗಿ. (೧೯೫೮)

೧೪೧. ಮಂಜಪ್ಪ ಹರ್ಡೇಕರ – ಜನಸೇವಕನ ವಚನಗಳು.
(ಸಂ. ಮಾಣಿಕರಾವ ಧನಶ್ರೀ) ಎಸ್. ಕಾಶಿನಾಥರಡ್ಡಿ.
ಪ್ರ : ಬಸವ ತೀರ್ಥ ಪ್ರಕಾಶನ ವಾಂಜಿರಾ – ಹುಮನಾಬಾದ (೧೯೮೨)

೧೪೨. ಮಂಜುನಾಥ ಸಿ.ಯುಡಾ॥ (ಸಂ) – ವಚನಕಾರರು
ವ್ಯಕ್ತಿ ಹಾಗೂ ಅಭಿವ್ಯಕ್ತಿ.
ಪ್ರ : ಶ್ರೀ ಸರ್ಪಭೂಷಣ ಮಠ, ಬೆಂಗಳೂರು (೧೯೯೪)

೧೪೩. ಮಣ್ಣೂರು ಗುರಪ್ಪ – ಶರಣರ ತಾತ್ವಿಕ ಚಿಂತನೆಗಳು.
ಪ್ರ : ಶ್ರೀ ಬಸವೇಶ್ವರ ಪೀಠ ಕ.ವಿ.ವಿ.ಧಾರವಾಡ (೨೦೦೭)

೧೪೪. ಮರುಳಯ್ಯ ಸಾ.ಶಿ.ಡಾ॥–ಇಪ್ಪತ್ತನೇ ಶತಮಾನದ ಭಾರತೀಯ
ಅನುಭಾವಿಗಳು ಮತ್ತು ಬಸವಣ್ಣ.
ಪ್ರ : ಶ್ರೀ ಬಸವೇಶ್ವರಪೀಠ ಕ.ವಿ.ವಿ. ಧಾರವಾಡ (೨೦೦೩)

೧೪೫. ಮರುಳಯ್ಯ ಸಾ.ಶಿ. ಹಾಗೂ ಇತರರು – ಕನ್ನಡ ಭಾಷಾ ಪ್ರವೇಶ.
ಪ್ರ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು (೨೦೦೫)

೧೪೬. ಮರುಳಸಿದ್ಧಯ್ಯ ಡಾ॥(ಸಂ)– ಭಕ್ತಿಪಂಥದಲ್ಲಿ ಸಮಾಜಕಾರ್ಯದ ಬೇರುಗಳು.
ಪ್ರ : ಶ್ರೀ ಸರ್ಪಭೂಷಣ ಶಿವಯೋಗಿಶ್ವರ ಮಠ ಬೆಂಗಳೂರು. (೧೯೯೫)

೧೪೭. ಮಟ್ಟಿ ಸುಲೋಚನಾ ಸಂಗನಬಸವ – ಬಾಳಬುತ್ತಿ.
ಪ್ರ : ಅವ್ವ – ಅಪ್ಪ ಪ್ರಕಾಶನ ಧಾರವಾಡ. (೨೦೦೪)

೧೪೮. ಮಹಾದೇವಪ್ಪ ಎನ್.ಜಿ ಡಾ॥ – ವಚನಗಳಲ್ಲಿ ತತ್ವ ಮೀಮಾಂಸೆ
ಪ್ರ : ಲಿಂಗಾಯತ ಅಧ್ಯಯನ ಅಕಾಡೆಮಿ ಬೆಳಗಾವಿ. (೨೦೦೪)

೧೪೯. ಮಹಾದೇವಪ್ಪ ಎನ್.ಜಿ. ಡಾ॥ – ಲಿಂಗಾಯತರು ಹಿಂದೂಗಳಲ್ಲ
ಪ್ರ : ಲಿಂಗಾಯತ ಅಧ್ಯಯನ ಅಕಾಡೆಮಿ ಬೆಳಗಾವಿ. (೨೦೦೫)

೧೫೦. ಮಹಾದೇವಯ್ಯ ಟಿ.ಆರ್. – ಶರಣ ತತ್ವ ಚಿಂತನ.
ಪ್ರ : ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು.(೧೯೯೮)

೧೫೧. ಮಹಾದೇವಯ್ಯ ಟಿ.ಆರ್.(ಸಂ) – ಉಪನ್ಯಾಸ ಸಂಚಯ.
ಪ್ರ : ಶ್ರೀ ಸರ್ಪಭೂಷಣಮಠ ಬೆಂಗಳೂರು. (೧೯೯೧)

೧೫೨. ಮಲ್ಲಿಕಾರ್ಜುನ ಹಾದಿಮನಿ – ಅಂಬಿಗರ ಕುಮಾರ ಚೌಡಯ್ಯನ ವಚನಗಳು.
ಪ್ರ : ನಿರ್ಮಲ ಪ್ರಕಾಶನ ಕೂಡಲಸಂಗಮ. (೧೯೯೬)

೧೫೩. ಮಾಳವಾಡ ಸ.ಸ. (ಸಂ) – ವೀರಶೈವ ದರ್ಶನ.
ಪ್ರ : ಶರಣ ಪ್ರಕಾಶನ, ಧಾರವಾಡ. (೧೯೮೦)

೧೫೪. ಮುಗಳವಳ್ಳಿ ಕೇಶವ ಧರಣಿ – ಪಂಚಾಂಗ ಹತ್ತಿ ಉರಿದಾವ.
ಪ್ರ : ಶರಣ ಪ್ರಕಾಶನ, ಹಾಸನ. (೧೯೮೮)
೧೫೫. ಮೂರ್ತಿರಾವ ಎ.ಎನ್. – ದೇವರು.
ಪ್ರ : ಡಿ.ವಿ.ಕೆ ಮೂರ್ತಿ ಮೈಸೂರು. (೧೯೯೪)
೧೫೬. ಮೈಸೂರು ಸರ್ಕಾರ – ಕನ್ನಡ ವ್ಯಾಕರಣ.
ಪ್ರ : ಮೈಸೂರು ಸರಕಾರ ಪಠ್ಯ ಪುಸ್ತಕಗಳ ಇಲಾಖೆ ಬೆಂಗಳೂರು (೧೯೭೦)
೧೫೭. ಯಲ್ಲಟ್ಟಿ ಬ.ಗಿ – ಬಿಂಬ ವಚನಗಳು.
ಪ್ರ : ಸ್ನೇಹ ಸಂಪದ ಬನಹಟ್ಟಿ (೧೯೯೨)
೧೫೮. ರಂಜಾನ ದರ್ಗಾ – ಸಾಹಿತ್ಯ ಮತ್ತು ಸಮಾಜ.
ಪ್ರ : ಭಾರತೀ ಪ್ರಕಾಶನ ಮೈಸೂರು. (೧೯೮೨)
೧೫೯. ರಂಗಣ್ಣ ಎಸ್.ವಿ – ರಂಗಬಿನ್ನಪ
ಪ್ರ : ಕಾವ್ಯಾಲಯ ಮೈಸೂರು. (೧೯೬೩)
೧೬೦. ರಂಗನಾಥ ಶರ್ಮಾ ಎನ್. – ಹೊಸಗನ್ನಡ ವ್ಯಾಕರಣ.
ಪ್ರ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. (೧೯೬೩).
೧೬೧. ರಾಜಶೇಖರ ಜಮದಂಡಿ ಡಾ॥ – ವಚನ ಪರಿಮಳ
ಪ್ರ : ಬಸವ ಪ್ರಕಾಶನ ಹೊಸಪೇಟೆ ಜಿ॥ ಬಳ್ಳಾರಿ.
೧೬೨. ರಾಜಶೇಖರಯ್ಯಾ ಎ.ಎಂ. ಡಾ॥ (ಸಂ) ಡಾ॥ ಬಾಬಾಸಾಹೇಬ ಅಂಬೇಡ್ಕರ ಬರಹಗಳು ಮತ್ತು ಭಾಷಣಗಳು ಸಂಪುಟ–೧ (೧೯೯೦)
ಡಾ॥ಸಿದ್ದಲಿಂಗಯ್ಯ. ಸಂಪುಟ–೨ ಭಾಗ ೧ (೧೯೯೩)
ಶ್ರೀ ದೇವನೂರ ಮಹಾದೇವ. ಸಂಪುಟ–೨ ಭಾಗ ೨ (೧೯೯೩)
ಸಂಪುಟ–೩ (೧೯೯೪)
ಸಂಪುಟ–೪ (೧೯೯೫)
ಪ್ರ : ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
೧೬೩. ರಾಜೂರ ವೀರಣ್ಣ ಡಾ॥ – ವಚನಾಧ್ಯಯನ.
ಪ್ರ : ಜಗದ್ಗುರು ಅನ್ನದಾನೀಶ್ವರ ಸಂಸ್ಥಾನಮಠ ಮುಂಡರಗಿ (೧೯೯೪)
೧೬೪. ರಾಜೂರ ವೀರಣ್ಣ ಹಾಗೂ ಬಿ.ಆರ್.ಹಿರೇಮಠ ಡಾ॥– ಆಧುನಿಕ ಕನ್ನಡ ಸಾಹಿತ್ಯ ರೂಪಗಳು.
ಪ್ರ : ಪ್ರಸಾರಾಂಗ, ಕ.ವಿ.ವಿ. ಧಾರವಾಡ. (೧೯೯೬)
೧೬೫. ರಾಜೇಂದ್ರ ಯರನಾಳ ಡಾ॥ – ಪೂರ್ಣಜ್ಞ ವಚನಗಳು – ಒಂದು ಅಧ್ಯಯನ.
ಪ್ರ : ಜಗದ್ಗುರು ಮೂರುಸಾವಿರಮಠ ಹುಬ್ಬಳ್ಳಿ. (೨೦೦೨)
೧೬೬. ವಾಗ್ದೇವಿ ಮಾತೆ – ಜಗದ ಕಣ್ಣಲ್ಲಿ ಶರಣರ ದೃಷ್ಟಿಯಲ್ಲಿ ಹೆಣ್ಣು.

ಪ್ರ : ಬಸವ ತತ್ವ ಅನುಭಾವ ಕೇಂದ್ರ ಬೆಳಗಾವಿ. (೧೯೮೯)
೧೬೭. ವಿಜಯಶ್ರೀ ಸಬರದ ಡಾ॥ಸಂ – ವಿಚಾರಸಾಹಿತ್ಯ –೧೯೯೯
ಪ್ರ : ಕರ್ನಾಟಕ ಸಾಹಿತ್ಯ ಅಕಾಡಮಿ ಬೆಂಗಳೂರು. (೨೦೦೦)
೧೬೮. ವಿರೂಪಾಕ್ಷಪ್ಪ ಬಿ. – ಶರಣತತ್ವ ವಿವೇಚನೆ ಭಾಗ –೨
ಪ್ರ : ಬಸವಸಮಿತಿ ಬೆಂಗಳೂರು. (೧೯೯೯)
೧೬೯. ವಿರೂಪಾಕ್ಷಪ್ಪ ಬಿ. – ಶರಣ ದೀಪಿಕೆ.
ಪ್ರ : ಬಸವ ಸಮಿತಿ ಬೆಂಗಳೂರು. (೨೦೦೪)
೧೭೦. ವಿವೇಕಾನಂದ ಸ್ವಾಮಿ – ವಿವೇಕಾನಂದರ ಕೃತಿ ಶ್ರೇಣಿ ಸಂಪುಟಗಳು ೧ ರಿಂದ ೯.
ಪ್ರ : ಶ್ರೀ ರಾಮಕೃಷ್ಣಾಶ್ರಮ ಮೈಸೂರು. (೧೯೫೦)
೧೭೧. ವಿವೇಕಾನಂದ ಸ್ವಾಮಿ – ಪತ್ರ ಮಾಲೆ.
ಪ್ರ : ಶ್ರೀ ರಾಮಕೃಷ್ಣಾಶ್ರಮ ಮೈಸೂರು. (೧೯೫೦)
೧೭೨. ವೀರಣ್ಣ ಸಿ. – ಕಾಯಕ ಜೀವಿಗಳ ಚಳುವಳಿ.
ಪ್ರ : ಬಂಡಾಯ ಸಾಹಿತ್ಯ ಸಂಘಟನಾಸಮಿತಿಬೆಂಗಳೂರು.(೧೯೮೦)
೧೭೩. ವೀರಭದ್ರಪ್ಪ ಬಿ.ವ್ಹಿ – ವೇದಾಂತ ರೆಜಿಮೆಂಟ್.
ಪ್ರ : ಪತ್ರಿಕೆ ಪ್ರಕಾಶನ ಬೆಂಗಳೂರು. (೧೯೯೩)
೧೭೪. ಶಂಕರಭಟ್ಟ ಡಿ.ಎನ್. – ಕನ್ನಡ ಪದಗಳ ಒಳರಚನೆ.
ಪ್ರ : ಭಾಷಾ ಪ್ರಕಾಶನ ಮೈಸೂರು. (೧೯೯೯)
೧೭೫. ಶಂಕರಾನಂದ ಉತ್ಲಾಸರ – ಜನಪದ ಒಡಮುಗಳು.
ಪ್ರ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. (೧೯೮೧)
೧೭೬. ಶಂಕರಾನಂದ ಸ್ವಾಮಿ : ಶ್ರೀ ಗೀತಾ ತಾತ್ಪರ್ಯ ಪ್ರದೀಪ.
ಪ್ರ : ಶ್ರೀ ಶಿವಾನಂದಾಶ್ರಮ ಅಜ್ಜಂಪುರ ( )
೧೭೭. ಶಾಂತರಸ ರಾಯಚೂರ ಹಾಗೂ ಇತರರು (ಸಂ) – ಕಾಯಕ ಪರಿಣಾಮಿ
ಪ್ರ :ಚೆನ್ನಬಸವಪಟ್ಟದ್ದೇವರ ಶತಮಾನೋತ್ಸವಸಮಿತಿ ಭಾಲ್ಕಿ. (೧೯೯೧)
೧೭೮. ಶಾಂತಾ ಇಮ್ರಾಪೂರ ಡಾ॥– ಸಾಹಿತ್ಯ ಸಂವೇದನೆ.
ಪ್ರ : ಚಿತ್ತಾರ, ನಿರ್ಮಲ ನಗರ ಧಾರವಾಡ (೨೦೦೭)
೧೭೯. ಶಿವರುದ್ರಪ್ಪ ಎ.ಎಲ್ ಡಾ॥ –ಶರಣಧರ್ಮದಲ್ಲಿ ವಿಶ್ವತತ್ವದ ಮೌಲ್ಯಗಳು
ಪ್ರ : ಪ್ರಸಾರಾಂಗ ಕ.ವಿ.ವಿ. ಧಾರವಾಡ. ( )
೧೮೦. ಶಿವಾನಂದ ಸ್ವಾಮಿಗಳು – ಹುಲಸೂರು ಶಿವಾನಂದ ಸ್ವಾಮಿಗಳ ವಚನಗಳು.
ಪ್ರ : ಬಸವಧರ್ಮ ಪ್ರಚಾರ ಕೇಂದ್ರ ಹುಲಸೂರ (೧೯೮೯)
೧೮೧. ಶ್ರೀನಿವಾಸ ಮೂರ್ತಿ ಎಂ.ಆರ್– ವಚನಧರ್ಮಸಾರ.
ಪ್ರ : ಪ್ರಸಾರಾಂಗ ಮೈಸೂರುವಿಶ್ವವಿದ್ಯಾನಿಲಯ ಮೈಸೂರು.(೧೯೬೮)
೧೮೨. ಶೇಷಗಿರಿರಾವ ಎಲ್.ಎಸ್.(ಸಂ) – ಕನ್ನಡ – ಕನ್ನಡಿಗ – ಕರ್ನಾಟಕ

ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು (೧೯೯೬)
೧೮೩. ಸತ್ಯಂಪೇಟೆ ಲಿಂಗಣ್ಣ – ಬಸವ ಚಳುವಳಿ.
ಪ್ರ : ಪ್ರಕೃತಿ ಪ್ರಕಾಶನ ಶಹಪೂರ (೧೯೮೬)
೧೮೪. ಸತ್ಯಂಪೇಟೆ ಗಂಗಮ್ಮ ಡಾ॥ – ಬಸವಣ್ಣನವರ ಕೊನೆಯ ದಿನಗಳು.
ಪ್ರ : ಅಗ್ನಿ ಅಂಕುರ ಪ್ರಕಾಶನ ಶಹಾಪೂರ. (೧೯೯೩)
೧೮೫. ಸತ್ಯಂಪೇಟೆ ವಿಶ್ವಾರಾಧ್ಯ – ಮಠದೊಳಗಣ ಬಾವುಗಗಳು.
ಪ್ರ : ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ ಶಹಾಪೂರ (೨೦೦೯)
೧೮೬. ಸನದಿ ಬಿ.ಎ – ಇಲ್ಲಿ ಸಲ್ಲುವರು.
ಪ್ರ : ಸಂಗಮ ಪ್ರಕಾಶನ ಮುಂಬಯಿ (೧೯೮೪)
೧೮೭. ಸರಜೂ ಕಾಟ್ಕರ – ಶರಣ ಬಂಡಾಯ.
ಪ್ರ : ಲೋಹಿಯಾ ಪ್ರಕಾಶನ ಬಳ್ಳಾರಿ. (೨೦೦೩)
೧೮೮. ಸರಜೂ ಕಾಟ್ಕರ – ಶರಣ ಸಂಸ್ಕೃತಿ.
ಪ್ರ : ಶ್ರೀ ಕಾರಂಜಿಮಠ ಪ್ರಕಾಶನ ಬೆಳಗಾವಿ (೨೦೦೯)
೧೮೯. ಸಂಗಮೇಶ ಹೊಸಮನಿ (ಶಿವಕವಿ) – ವಚನ ಪ್ರಸಾದ
ಪ್ರ : ಶಾಂತಿ ಪ್ರಕಾಶನ ರಾಮವಾಡಗಿ. (೧೯೯೭)
೧೯೦. ಸಿದ್ಧಲಿಂಗಯ್ಯ ಜಿ.ಎಸ್. – ವಚನ ಸಾಹಿತ್ಯ ಒಂದು ಇಣುಕು ನೋಟ.
ಪ್ರ : ಬಸವ ಸಮಿತಿ ಬೆಂಗಳೂರು. (೧೯೮೯)
೧೯೧. ಸಿದ್ದಣ್ಣ ಲಂಗೋಟಿ – ಕುಮಾರ ಕಕ್ಕಯ್ಯ ಪೋಳ.
ಪ್ರ : ಜ. ತೋಂಟದಾರ್ಯ ಮಠ ಡಂಬಳ – ಗದಗ (೧೯೯೭)
೧೯೨. ಸಿದ್ದಣ್ಣ ಲಂಗೋಟಿ – ಸಿಲಂ ವಚನಗಳು.
ಪ್ರ : ಜಗಜ್ಯೋತಿ ಬಸವೇಶ್ವರ ಅನುಭಾವ ಪೀಠ.ರಾಮದುರ್ಗ. (೨೦೦೪)
೧೯೩. ಸಿದ್ದಣ್ಣ ಲಂಗೋಟಿ – ಡಾ॥ ಸರ್ವಪಲ್ಲಿ ರಾಧಾಕೃಷ್ಣನ್‌ರು.
ಪ್ರ : ಜಗಜ್ಯೋತಿ ಬಸವೇಶ್ವರ ಅನುಭಾವ ಪೀಠ ರಾಮದುರ್ಗ. (೨೦೦೭)
೧೯೪. ಸಿದ್ದಣ್ಣ ಲಂಗೋಟಿ – ಲಿಂಗಾಯತ ಧರ್ಮ ಸಮಾಜ ತತ್ವಜ್ಞಾನ.
ಪ್ರ : ಜಗಜ್ಯೋತಿ ಬಸವೇಶ್ವರ ಅನುಭಾವ ಪೀಠ. ರಾಮದುರ್ಗ.(೨೦೦೦)
೧೯೫. ಸಿದ್ದಣ್ಣ ಲಂಗೋಟಿ – ಬಸವಣ್ಣ.
ಪ್ರ : ಬಸವ ಸಮಿತಿ ಬೆಂಗಳೂರು. (೨೦೦೭)
೧೯೬. ಸಿದ್ದಣ್ಣ ಲಂಗೋಟಿ (ಸಂ) – ಕನ್ನಡ ಕವಿ ಕಾವ್ಯ ಪರಂಪರೆ.
ಪ್ರ : ಕನ್ನಡ ಸಾಹಿತ್ಯ ಪರಿಷತ್ತು ತಾಲೂಕಾ ಘಟಕ ರಾಮದುರ್ಗ.(೨೦೦೪)
೧೯೭. ಸಿದ್ಧರಾಮಣ್ಣ ವಿ. – ಬಸವಾದಿ ಶರಣರ ವಚನಾಂಕಿತ ತತ್ವದರ್ಶನ.
ಪ್ರ : ಲಿಂಗಾಯತ ಧರ್ಮಕೇಂದ್ರ ಅನುಭವ ಮಂಟಪಬಸವಕಲ್ಯಾಣ.
೧೯೮. ಸಿದ್ದೇಶ್ವರ ಸ್ವಾಮಿಗಳು : ಅಲ್ಲಮ ಪ್ರಭುದೇವರ ವಚನ – ನಿರ್ವಚನ.
ಸಂಪುಟ ೧ (೧೯೯೮)
ಸಂಪುಟ ೨ (೨೦೦೧)

